# ಸಂಕ್ಷಿಪ್ತ ಆದಿಪುರಾಣ

## ಕೈದೀವಿಗೆ

ಡಾ. ಪಿ. ವಿ. ನಾರಾಯಣ



# ಸಂಕ್ಷಿಪ್ತ ಆದಿಪುರಾಣ

## ಕೈದೀವಿಗೆ

ಡಾ. ಪಿ.ವಿ. ನಾರಾಯಣ

ಪ್ರಕಾಶಕರು:

**ಹೇಮಂತ ಸಾಹಿತ್ಯ**

ನಂ.53/1, ಕಾಟನ್‌ಪೇಟೆ ಮುಖ್ಯರಸ್ತೆ,

ಬೆಂಗಳೂರು–560 053

ದೂರವಾಣಿ : 080–26702010

**SAMKSHIPTHA AADIPURANA (KAIDEEVIGE)** –by **Dr. P.V. Narayana,** 'Tangali', # 30, 2nd Cross, RBI Colony, Jayanagar 3rd Block East, Bengaluru - 560 011. Mob.: 99001 96517. *Published by:* **Hemantha Sahitya,** No. 53/1, Cottonpet Main Road, Bengaluru - 560 053. Phone: 080-26702010.

ಮೊದಲ ಮುದ್ರಣ : 2017



ಬಳಸಿದ ಕಾಗದ : 70 ಜಿಎಸ್ಎಂ ಮ್ಯಾಪ್‌ಲಿಥೊ

ಡೆಮಿ 1/8 ಪುಟಗಳು : iv + 316 = **320**

ಬೆಲೆ : **ರೂ. 200/-**

ಮುಖಪುಟ ವಿನ್ಯಾಸ : **ಮೋನಪ್ಪ**

ಅಕ್ಷರ ಜೋಡಣೆ : **ಹೇಮಂತ ಸಾಹಿತ್ಯ**
ಬೆಂಗಳೂರು

ಮುದ್ರಕರು: **ಪೂರ್ಣಿಮ** ಪ್ರಿಂಟರ್ಸ್
POORNIMA PRINTERS
ನಂ. 1/2, 7ನೇ ಅಡ್ಡರಸ್ತೆ, ಆಜಾದ್‌ನಗರ
ಚಾಮರಾಜಪೇಟೆ, ಬೆಂಗಳೂರು-560 018
ದೂ:080-32924462, ಮೊ:9341931668

# ಮುನ್ನುಡಿ

ವಿದ್ಯಾರ್ಥಿಗಳಿಗೆ ಕನ್ನಡ ಚಂಪೂ ಕಾವ್ಯಗಳ ಪರಿಚಯವನ್ನು ಒಳ್ಳೆಯ ಕಾವ್ಯಗಳ ಮೂಲಕವೇ ಮಾಡಿಸಬೇಕಲ್ಲವೇ? ಪಂಪನಿಗಿಂತ ಶ್ರೇಷ್ಠ ಕನ್ನಡ ಚಂಪೂ ಕವಿ ಎಲ್ಲಿದ್ದಾನೆ? ಹಾಗಾಗಿ ಹಳಗನ್ನಡ ಕಾವ್ಯಾಸಕ್ತರ ಮತ್ತು ವಿದ್ಯಾರ್ಥಿಗಳ ಉಪಯೋಗಕ್ಕೆಂದು ಪಂಪನ 'ಆದಿಪುರಾಣ' ಮತ್ತು 'ವಿಕ್ರಮಾರ್ಜುನ ವಿಜಯ'ಗಳನ್ನು ಸಂಗ್ರಹಿಸಿ ಸೂಕ್ತ ಟಿಪ್ಪಣಿಗಳ ಸಮೇತ ಸಿದ್ಧಗೊಳಿಸಿಕೊಡಲು ಸ್ವತಃ ನಿವೃತ್ತ ಕನ್ನಡ ಪ್ರಾಧ್ಯಾಪಕರಾದ ಪ್ರೊ। ಡಿ.ಕೆ. ಶ್ಯಾಮಸುಂದರರಾವ್ ಒಮ್ಮೆ ಹೇಳಿದರು. ನಾನು 'ಪಂಪ ಕಾವ್ಯಸಾರ' ಎಂಬ ಹೆಸರಿನಲ್ಲಿ ಈ ಕೆಲಸವನ್ನು ಪೂರೈಸಲು, ಅವರು ತಮ್ಮ 'ಕಾಮಧೇನು ಪುಸ್ತಕ ಭವನ'ದ ಮೂಲಕ ಅದನ್ನು ೨೦೧೩ರಲ್ಲಿ ಪ್ರಕಟಿಸಿದರು. ಈ ಮಧ್ಯೆ ನಾನು ಇಡೀ ಆದಿಪುರಾಣದ ಪ್ರತಿ ಪದ್ಯ ಹಾಗೂ ಗದ್ಯಭಾಗಗಳ ಪದವಿಭಜನೆ, ಅನ್ವಯಾನುಸಾರ ಅರ್ಥ, ಗದ್ಯಾನುಸರಣ ಮತ್ತು ವಿಶೇಷ ವಿಚಾರಗಳ ಚರ್ಚೆಯನ್ನೊಳಗೊಂಡ ಕಾರ್ಯವೊಂದನ್ನು ಸರ್ಕಾರದ ಸಂಸ್ಥೆಯೊಂದಕ್ಕೆ ಮಾಡಬೇಕಾಯಿತು. ಈಚೆಗೆ ವಿದ್ಯಾರ್ಥಿಗಳ ಅನುಕೂಲಕ್ಕೆಂದು ಅದನ್ನು ಬಳಸಿಕೊಂಡು, ನಾನೇ ಸಂಗ್ರಹಗೊಳಿಸಿದ್ದ 'ಸಂಕ್ಷಿಪ್ತ ಆದಿಪುರಾಣ'ದಲ್ಲಿನ ಭಾಗಕ್ಕೆ ಅದೇ ಮಾದರಿಯನ್ನು ಅನುಸರಿಸಿ **'ಸಂಕ್ಷಿಪ್ತ ಆದಿಪುರಾಣ ಕೈದೀವಿಗೆ'** ಎಂಬ ಹೆಸರಿನ ಪಠ್ಯವೊಂದನ್ನು ಸಿದ್ಧಪಡಿಸಿದೆ. ಇದನ್ನು ಕಂಡ ಹೇಮಂತ ಪ್ರಕಾಶನದ ಒಡೆಯರಾದ ಶ್ರೀ ವೆಂಕಟೇಶ್ ಅವರು ತಮ್ಮ ಪ್ರಕಾಶನದ ಮೂಲಕ ಇದನ್ನು ಪ್ರಕಟಿಸಲು ಮುಂದೆ ಬಂದರು. ನನಗೆ ನಿಜಕ್ಕೂ ಸಂತೋಷವಾಯಿತು; 'ಬಯಸದೆ ಬಂದ ಭಾಗ್ಯ' ಅನ್ನುತ್ತಾರಲ್ಲ, ಹಾಗನಿಸಿತು. ಮಾರನೆಯ ದಿನವೇ ನಾನು ಸ್ವತಃ ಕಂಪ್ಯೂಟೈಪ್ ಮಾಡಿದ್ದ ಪ್ರತಿಯನ್ನು ಅವರ ಪ್ರಕಾಶನದ ವಿಳಾಸಕ್ಕೆ ಇ-ಮೇಲ್ ಮಾಡಿದೆ. ಕೆಲವೇ ದಿನಗಳಲ್ಲಿ ಅದನ್ನು ಪುಟವಿನ್ಯಾಸ ಮಾಡಿಸಿ ಕರಡು ಓದಲು ನನಗೆ ಕೊಟ್ಟರು. ನನ್ನ ಅನಿಮಿತ್ತ ಗೆಳೆಯ ಡಾ। ಕೆ. ಆರ್. ಗಣೇಶ್ ಇದರ ಕರಡು ನೋಡುವ ಕೆಲಸವನ್ನು ಮಾಡಿಕೊಡಲು ಮುಂದೆ ಬಂದರು. ಅವರಂತಹ ಹಳಗನ್ನಡ ವಿದ್ವಾಂಸರು ಕೃತಿಯ ಕರಡು ನೋಡಿರುವುದು, ಅದೂ ಒಂದು ವಾರದ ಅವಧಿಯಲ್ಲಿಯೇ, ಇದಕ್ಕೆ ತಮ್ಮ ಒಪ್ಪಿಗೆಯ ಮುದ್ರೆಯನ್ನೊತ್ತಿದಂತಾಗಿದೆಯೆಂದು ಭಾವಿಸುತ್ತೇನೆ.

ಈ ಕೃತಿಯನ್ನು ಬಹುಬೇಗ ಸುಂದರವಾಗಿ ಹೊರತಂದಿರುವ ಮಾನ್ಯ ವೆಂಕಟೇಶ್ ಅವರಿಗೆ, ಡಾ। ಕೆ. ಆರ್. ಗಣೇಶ್ ಅವರಿಗೆ, ಮುಖಪುಟ ವಿನ್ಯಾಸಕಾರರಿಗೆ, ಅಚ್ಚುಕಟ್ಟಾಗಿ ಮುದ್ರಿಸಿರುವ ಮುದ್ರಕರಿಗೆ ನನ್ನ ಕೃತಜ್ಞತೆಗಳು. ಈ ಕೃತಿ ಆಸಕ್ತರಿಗೆ ಉಪಯುಕ್ತವಾದೀತೆಂದು ಭಾವಿಸುತ್ತೇನೆ.

ಬೆಂಗಳೂರು

ದಿನಾಂಕ : ೨೮-೦೧-೨೦೧೮ **ಡಾ। ಪಿ. ವಿ. ನಾರಾಯಣ**

## ಅನುಕ್ರಮಣಿಕೆ

# ಪ್ರಸ್ತಾವನೆ

## ೧

ಪಂಪನದು ಸಾಕಷ್ಟು ಶ್ರೀಮಂತವೂ ವಿದ್ವತ್ತಿನಿಂದ ಕೂಡಿದ್ದುದೂ ಆದ ಕೌಟುಂಬಿಕ ಹಿನ್ನೆಲೆ. ಅವನ ಪೂರ್ವಿಕರು ಇದ್ದದ್ದು ವೆಂಗಿಮಂಡಲವೆಂಬ ಪ್ರಾಂತದ ವೆಂಗಿಪಟು ಎಂಬ ಊರಲ್ಲಿ. ವೆಂಗಿಮಂಡಲವೆಂದರೆ ಆಗ ಕೃಷ್ಣೆ–ಗೋದೆಯರ ನಡುವೆ ಬಂಗಾಳ ಸಮುದ್ರದವರೆಗೂ ಹಬ್ಬಿದ್ದ ನಾಡು. ಆ ಊರಲ್ಲಿ ಹಿರಿಯ ವಿದ್ವಾಂಸನೂ ಅನೇಕ ಯಜ್ಞಯಾಗಾದಿಗಳನ್ನು ಮಾಡಿದವನೂ ಆದ ಮಾಧವ ಸೋಮಯಾಜಿ ಎಂಬ ಬ್ರಾಹ್ಮಣ ಇದ್ದ; ಅವನ ಮಗ ಅಭಿಮಾನ ಚಂದ್ರ. ಅವನಿಗೆ ವೇಮುಲವಾಡ (ಈಗಿನ ತೆಲಂಗಾಣ ರಾಜ್ಯದ ಕರೀಂನಗರ ಜಿಲ್ಲೆಯಲ್ಲಿದೆ) ಚಾಲುಕ್ಯ ರಾಜರ ಆಶ್ರಯ ದೊರೆಯಿತು. ಆದ್ದರಿಂದ ಅವನು ನಿಡುಂಗೊಂಡೆಯೆಂಬ ಗ್ರಾಮಕ್ಕೆ ಬಂದು ನೆಲಸಿದ. ಇವನ ಮಗ ವೇದವೇದಾಂಗಗಳಲ್ಲಿ ಮಹಾ ಪಂಡಿತನಾಗಿದ್ದ ಕೊಮರಯ್ಯ; ಇವನ ಮಗ ಭೀಮಪಯ್ಯ. ಭೀಮಪಯ್ಯನಿಗೆ ಬೆಳ್ವೊಲ ನಾಡಿನ ಅಣ್ಣಿಗೇರಿ (ಧಾರವಾಡ ಜಿಲ್ಲೆ) ಎಂಬ ಊರಿನ ಸಿಂಘಜೋಯಿಸನ ಮೊಮ್ಮಗಳಾದ ಅಬ್ಬಣಬ್ಬೆಯೊಡನೆ ಮದುವೆಯಾಯಿತು. ಇವನ ಇಬ್ಬರು ಮಕ್ಕಳು ಪಂಪ ಮತ್ತು ಜಿನವಲ್ಲಭರು. ಪಂಪನ ತಂದೆಯ ಕಡೆಯ ಹಿರಿಯರು ಕನ್ನಡ ನಾಡಿನಿಂದ ತೆಲುಗುನಾಡಿಗೆ ಹೋಗಿದ್ದಿರಬೇಕು; ಪಂಪಭಾರತದಲ್ಲಿನ ಬನವಾಸಿಯ ವರ್ಣನೆಯ ಹಿನ್ನೆಲೆಯನ್ನು ನೋಡಿದರೆ ಅದೇ ಪ್ರಾಯಶಃ ಅವರ ಹಿರಿಯರ ಮೂಲ ನೆಲೆಯಾಗಿದ್ದಿರಬಹುದಾದ ಸಾಧ್ಯತೆಯನ್ನು ತೋರಿಸುತ್ತದೆ. ಹೀಗೆ ಪಂಪ ಮೂಲ ಕನ್ನಡನಾಡಿನವನೇ; ಕೆಲಕಾಲ ಅವನು ವೇಮುಲವಾಡದಲ್ಲಿದ್ದಿರಬಹುದು. ಕುರ್ಕ್ಯಾಲ ಶಾಸನ ಇದನ್ನು ಸ್ಪಷ್ಟಪಡಿಸುತ್ತದೆ. ಹಾಗೆಂದ ಮಾತ್ರಕ್ಕೆ ಅವನ ಮನೆಮಾತು ತೆಲುಗಾಗಿದ್ದಿರಬಹುದು ಎಂದು ಊಹಿಸಬೇಕಾದ್ದಿಲ್ಲ. ಇದಕ್ಕೆ ಎರಡು ಕಾರಣಗಳು: ಒಂದು, ಅವನ ತಾಯ್ತಂದೆಯರ ಹಿರಿಯರ ಮೂಲನೆಲೆ ಕನ್ನಡನಾಡು; ಎರಡನೆಯದು, ಕುರ್ಕ್ಯಾಲದಲ್ಲಿರುವ ಜಿನವಲ್ಲಭನ ಶಾಸನವೇ ಆಗ ಆ ಪ್ರಾಂತವೂ ಕನ್ನಡಮಯವಾಗಿದ್ದಿರಬಹುದಾದುದನ್ನು ಸೂಚಿಸುತ್ತದೆ. ಅವನ ತಾಯಿನುಡಿ ತೆಲುಗಾಗಿದ್ದರೆ ಅವನು ತೆಲುಗಿನಲ್ಲಿಯೇ ಕಾವ್ಯರಚನೆ ಮಾಡುತ್ತಿದ್ದ; ಆಗ ಅವನು

ತೆಲುಗಿನ ಆದಿಕವಿ ಎನಿಸಿಕೊಳ್ಳುತ್ತಿದ್ದ. ಆದರೆ ಇವನ ಪಂಪಭಾರತವನ್ನು ಅನುಸರಿಸಿದ ನನ್ನಯಭಟ್ಟ ಈಗ ತೆಲುಗಿನ ಆದಿಕವಿ.

ಪಂಪನ ಕಾಲದ ಬಗ್ಗೆ ಯಾವ ಗೊಂದಲವೂ ಇಲ್ಲ. ಅವನು ಕ್ರಿಸ್ತಶಕ ಹತ್ತನೆಯ ಶತಮಾನದ ಮೊದಲಲ್ಲೇ ಹುಟ್ಟಿದವನು. ತನ್ನ ಆದಿಪುರಾಣದ ರಚನಾಕಾಲವನ್ನು ಅವನೇ ಶಕವರ್ಷ ೮೬೩ ನೇ ಪ್ಲವ ಸಂವತ್ಸರದ ಕಾರ್ತಿಕ ಶುದ್ಧ ಪಂಚಮಿ ಭಾನುವಾರವೆಂದು ವಿವರವಾಗಿ ಹೇಳಿಕೊಂಡಿದ್ದಾನೆ. ಅಂದರೆ ಈ ಕಾವ್ಯರಚನೆಯ ಕಾಲ ಕ್ರಿಶ. ೯೪೨. ತಾನು ದುಂದುಭಿ ಸಂವತ್ಸರದಲ್ಲಿ ಹುಟ್ಟಿದೆನೆಂದು ಹೇಳಿಕೊಂಡಿರುವುದರಿಂದ ಇದರ ರಚನಾಕಾಲದ ಹಿಂದಿನ ದುಂದುಭಿ ಸಂವತ್ಸರವು ಕ್ರಿಶ ೯೦೨–೦೩ ರಲ್ಲಿ. ಪಂಪ ತನ್ನ ಮೊದಲ ಕಾವ್ಯ ಆದಿಪುರಾಣವನ್ನು ರಚಿಸುವ ಹಿಂದೆಯೇ ಯಾವ ಕಾವ್ಯವನ್ನೂ ಪ್ರಾಯಶಃ ಬರೆದಿರಲಿಲ್ಲ; ಬರೆದಿದ್ದರೆ ಅವನೇ ಹೇಳಿಕೊಳ್ಳುತ್ತಿದ್ದ, ಅಥವಾ ಮುಂದಿನ ಕವಿಗಳಾದರೂ ಆ ಕುರಿತು ಉಲ್ಲೇಖಿಸುತ್ತಿದ್ದರು. ಆದಿಪುರಾಣದಂತಹ ಬೃಹತ್ತು–ಮಹತ್ತುಗಳ ಕಾವ್ಯರಚನೆಗೆ ಒಮ್ಮೆಲೇ ಪಂಪ ಕೈಹಾಕಿದನೇ; ಆ ಕಾಲದ ಬರವಣಿಗೆಯ ರೀತಿಯೇ ಹಾಗಿತ್ತೇ ಅಥವಾ ಅದಕ್ಕೂ ಮೊದಲು ಅಲ್ಲೊಂದು ಇಲ್ಲೊಂದು ಏನನ್ನಾದರೂ ಬರೆದು ಕೈಪಳಗಿಸಿಕೊಂಡಿದ್ದನೇ? ಮುಂದಿನ ಅನೇಕ ಪ್ರಸಿದ್ಧ ಕವಿಗಳು ಮಾಡಿದಂತೆ ಪಂಪ ಯಾವುದೇ ಶಾಸನವನ್ನೂ ರಚಿಸಿರಲಿಕ್ಕಿಲ್ಲ. ತನ್ನ ಕಾವ್ಯಕ್ಕೆ ಜಿನಸೇನರ 'ಪೂರ್ವಪುರಾಣ'ದ ಹಿನ್ನೆಲೆಯಿದ್ದುದರಿಂದ ಅವನು ಪ್ರತಿಯೊಂದಕ್ಕೂ ತಡಕಾಡಬೇಕಾಗಿರಲಿಲ್ಲ: ಕಥಾ ಚೌಕಟ್ಟು, ಪಂಚಕಲ್ಯಾಣಗಳ ನಿರೂಪಣೆ, ಆದಿದೇವನ ಬದುಕಿನ ವಿವರಗಳೆಲ್ಲ'ಪೂರ್ವಪುರಾಣ'ದಲ್ಲಿಯೇ ಕೈಗೆಟಕುವಂತಿದ್ದುವಲ್ಲ. ಹಾಗಾಗಿ ನಡುನಡುವೆ ತನ್ನ ನಲವತ್ತು ವರ್ಷಗಳ ಬದುಕಿನ ಅನುಭವ–ಕಾಣ್ಕೆಗಳನ್ನು ವಿವರಗಳ ರೂಪದಲ್ಲಿ ಸೇರಿಸಿರಬಹುದು. ಯಾಕೆಂದರೆ ಅವನ ಐಹಿಕ ಕಾಣ್ಕೆಗಳು ಅನೇಕ ಕಡೆ ಸ್ಪಷ್ಟವಾಗಿ ಇಣುಕುಹಾಕಿರುವುದನ್ನು'ಆದಿಪುರಾಣ'ದಲ್ಲಿ ಕಾಣಬಹುದು.

ಪಂಪ ಈ ಕಾವ್ಯವನ್ನು ಮೊದಲು ಬರೆದ. ಪ್ರಾಯಶಃ ಆಗ ಅವನು ಅರಿಕೇಸರಿಯ ಆಶ್ರಯವನ್ನಿನ್ನೂ ಪಡೆದಿರಲಿಲ್ಲ. (ಕೆಲವು ವಿದ್ವಾಂಸರು ಆದಿಪುರಾಣದ ರಚನಾಕಾಲದ ಹೊತ್ತಿಗಾಗಲೇ ಪಂಪ ಅರಿಕೇಸರಿಯನ್ನು ಆಶ್ರಯಿಸಿದ್ದನೆಂದು ಹೇಳುತ್ತಾರೆ).'ಆದಿಪುರಾಣ' ಬರೆದ ಪಂಪನ ಹೆಸರು ಕಿವಿಗೆ ಬಿದ್ದ ಮೇಲೆ ಅರಿಕೇಸರಿ ಅವನಿಗೆ 'ವಿಕ್ರಮಾರ್ಜುನ ವಿಜಯ' ಬರೆಯಲು ಕೇಳಿಕೊಂಡಿರಬೇಕು.'ಕೀರ್ತಿ ಜಗದೊಳ್ ನಿಲೆ ಪೇಟಿಸಿದಂ ಜಗಕ್ಕೆ ನಚ್ಚಿನ ಕವಿತಾಗುಣಾರ್ಣವನಿನೀ ಕೃತಿಬಂಧಮಂ ಗುಣಾರ್ಣವಂ' (ಪಂಪಭಾ, ೧೪. ೫೪). ಅಂದರೆ ಪಂಪಭಾರತ ರಚನೆಗೆ ಅರಿಕೇಸರಿಯೇ ಪ್ರೇರಕನಾದನೆನ್ನಬೇಕು. ಆ ಕಾವ್ಯವನ್ನು ಈಗಿನಂತೆ ಬರೆಯಲು ಪಂಪನಿಗೆ ಅವನ ಔದಾರ್ಯದ ಕೊಡುಗೆಗಳೂ ಗೆಳೆತನವೂ ನಚ್ಚಿಕೆಯೂ ಕಾರಣವಾಗಿದ್ದಿರಬೇಕು. ಮೊದಲ ಕಾವ್ಯದಲ್ಲಿಯೇ ಆದಿಪುರಾಣದಂತಹ ಧಾರ್ಮಿಕ ಕಾವ್ಯರಚನೆಯ ಮನೋಧರ್ಮವಿದ್ದಿರಬೇಕಾದರೆ, ಅವನು ಆನಂತರ ಲೌಕಿಕ

ಕಾವ್ಯ ಬರೆಯಲು ಪ್ರೇರಣೆ ಲೌಕಿಕ ಸವಲತ್ತುಗಳಿಂದಲೇ ಉಂಟಾಗಿರಬೇಕು. 'ನೆಗಳ್ತೆವೆತ್ತ ಸತ್ಕವಿಗಳ ಷೋಡಶಾವನಿಪರೋಳಿಯೊಳಂ ಕವಿತಾ ಗುಣಾರ್ಣವಂ ಕವಿತೆಯೊಳಗ್ಗಳಂ ಗುಣದೊಳಗ್ಗಳಮೆಲ್ಲಿಯುಮೀ ಗುಣಾರ್ಣವಂ' - ತಾನು ಕವಿಗಳ ಹೆಸರುಮಾತ್ರದವನಲ್ಲ, ಅರಿಕೇಸರಿ ನರಾಧಿಪ ಎಂಬ ಹೆಸರು ಮಾತ್ರ ಪಡೆದವನಲ್ಲ; ತಾನು 'ಕವಿತಾಗುಣಾರ್ಣವ' ಈತ 'ಗುಣಾರ್ಣವ'. ಅಂದರೆ ರಾಜಾಶ್ರಯಕ್ಕೆ ಬರುವ ಮುಂಚೆ ತನ್ನನ್ನು ಬಣ್ಣಿಸಿಕೊಂಡಿದ್ದಂತೆಯೇ ತನ್ನ ಆಶ್ರಯದಾತನನ್ನೂ ಪಂಪ ಕರೆದ. ಅಂದರೆ ಅರಿಕೇಸರಿಯ ಈ ವಿಶೇಷಣ ಕವಿ ಇತ್ತುದು; ಅದೂ ತನ್ನದರಂತೆಯೇ ಇರುವಂಥದು. ಎಂದರೆ ತನ್ನ ಗುಣಕ್ಕನುಗುಣ ನಾದವನು ಅರಿಕೇಸರಿ ಎಂಬ ಭಾವವಿಲ್ಲಿದೆ.

ಪಂಪನು ಆದಿಪುರಾಣವನ್ನು ಬರೆಯುವ ಕಾಲದ ಮನೋಭಾವ ಬೇರೆ; ವಿಕ್ರಮಾರ್ಜುನವಿಜಯವನ್ನು ಬರೆಯುವಾಗಿನ ಮನಃಸ್ಥಿತಿ ಬೇರೆ ಇದ್ದಂತೆ ಕಾಣುತ್ತದೆ. ಏರುಜವ್ವನದ ಒಂದೇ ಪೀಳಿಗೆಯ ಅನಂತರದ ನವಜೈನನಿಗೆ ಆ ಧರ್ಮದ ಬಗ್ಗೆ ಅಸೀಮ ಶ್ರದ್ಧೆ-ಭಕ್ತಿಗಳಿದ್ದಿರಬೇಕು. ಅದಕ್ಕಾಗಿಯೇ ಹೊಸ ಹುರುಪಿನಿಂದ ತನ್ನ ಧರ್ಮದ ತಾತ್ವಿಕ ಮತ್ತು ಆಚರಣಾತ್ಮಕ ವಿವರಗಳನ್ನೆಲ್ಲ ಅಭ್ಯಾಸ ಮಾಡಿ, ಜಿನಸೇನನ ಪುರಾಣದ ಹಿನ್ನೆಲೆಯಲ್ಲಿ ಆದಿಜಿನನ ಬಗ್ಗೆ ಬರೆಯಲು ಹೊರಟಾಗ, ಅವನದು ಸಹಜ ಕವಿಪ್ರತಿಭೆಯಾದುದರಿಂದ ಪುರಾಣವು ತನ್ನ ಮೈಯೊಳಗೆ ಕಾವ್ಯವನ್ನೂ ತುಂಬಿಕೊಂಡಿತು. ಅವನ ಹೊರಗಿನ ವಿವರವೆಲ್ಲ ಧಾರ್ಮಿಕವೇ, ಸಾಂಪ್ರದಾಯಿಕವೇ. ಆದರೆ ಹಲವಾರು ಕಡೆಗಳಲ್ಲಿ ವಾಸ್ತವಿಕವೂ ಮಾನವಸಹಜವೂ ಆದ ನೆಲೆಗಳಲ್ಲಿ ಅನುಭವಗಳನ್ನು ಎರಕಹೊಯ್ದು ಅದು ಒಮ್ಮೆಗೇ ಕಾವ್ಯಾಸಕ್ತರ ಮತ್ತು ಧಾರ್ಮಿಕ ಮನೋಭಾವದವರ ಮನಸ್ಸನ್ನು ಸೆರೆಹಿಡಿಯಲು ಸಹಾಯಕವಾಯಿತು. ಅಂದರೆ ಆದಿಪುರಾಣ ವಿಸ್ತಾರವಾದ ಓದಿನಿಂದ ಒದಗಿದ ವಿವರಗಳಿಂದ ಕೂಡಿದುದು. ಮುಂದೆ ವಿಕ್ರಮಾರ್ಜುನ ವಿಜಯ ಬರೆಯುವ ಹೊತ್ತಿಗೆ ಪಂಪನ ಮನಃಸ್ಥಿತಿ ಬೇರೆಯಾಗಿದ್ದಿರಬಹುದು. ಏರುಜವ್ವನದ ಹುರುಪು, ನೊರೆ ಅಡಗಿ ದ್ರವ ಉಳಿದ ಹಾಗೆ, ವಾಸ್ತವಪ್ರಜ್ಞೆ ಅವನನ್ನು ಆವರಿಸಿತು; ಪ್ರಾಯಃ ಇಮ್ಮಡಿಯ ವಾಸ್ತವತೆ: ಒಂದು, ಬದುಕು ಇರುವುದು ಇಚ್ಛೆಯ ಅನುಭವವನ್ನು ಪಡೆಯುವುದಕ್ಕಾಗಿ ಎಂಬ ಅರಿವು, ಎರಡು ಸಮಕಾಲೀನ ಸಾಮಾಜಿಕ ಇರುವಿಕೆಗಳು. ಹೀಗಾಗಿ ಅವನ ಮನಸ್ಸು ಸಂಪ್ರದಾಯವನ್ನು ಬಿಡದೆ ಪ್ರಾತಿಭ ಪಾತಳಿಯಲ್ಲಿ ವಾಸ್ತವತೆಗೆ ಹೆಚ್ಚು ಮನ್ನಣೆಯೀಯುವ ಹಾಗಾಯಿತು. ಅಂದರೆ ಒಟ್ಟಿಗೇ ಆದರ್ಶ-ವಾಸ್ತವಗಳು, ಇಹ-ಪರಗಳು, ಭೋಗ-ವಿರಾಗಗಳು, ಔದಾರ್ಯ-ಕೊಳಕುತನ, ತನ್ನ-ಎಲ್ಲರ ಎಂಬಂತಹ ಭಾವನೆಗಳು ಅವನ ಪ್ರಜ್ಞೆಯ ಎರಡು ಪಾತಳಿಗಳಲ್ಲಿ ಕೆಲಸ ಮಾಡಿದೆ. ಆದಿಪುರಾಣದಲ್ಲಿ ಆದಿದೇವನ ವೈಯಕ್ತಿಕ ಭೋಗ-ವೈರಾಗ್ಯಗಳು ಮಾತ್ರವಲ್ಲ, ಪಂಪನ ವೈಯಕ್ತಿಕ ಭೋಗೇಚ್ಛೆ ಮತ್ತು ಕಾಣದುದನ್ನು ಕಾಣುವ ತವಕ ಎರಡೂ ಸೇರಿಕೊಂಡಿವೆ; ವಿಕ್ರಮಾರ್ಜುನ ವಿಜಯದಲ್ಲಿ ಆದರ್ಶಕ್ಕಿಂತ ವಾಸ್ತವ ಅವನನ್ನು

ಹೆಚ್ಚು ಮುಟ್ಟಿದೆ. ಹಾಗಾಗಿಯೇ'ವ್ಯಾಸಮುನೀಂದ್ರ ರುಂದ್ರ ವಚನಾಮೃತ ವಾರ್ಧಿ'ಯನ್ನು ಅಂಗೈಯಲ್ಲಿ ತೆಗೆದುಕೊಂಡಿದ್ದರೂ ನಮ್ಮ ನಡುವಣ ಬದುಕಿನ ಸ್ವರೂಪ ಅವನನ್ನು ಕಾಡಿದೆ; ಅದೂ ಎರಡು ಬಗೆಯಲ್ಲಿ: ಒಂದು, ತನ್ನದರ ಬಗ್ಗೆ ಹೆಮ್ಮೆ ಆದರೂ ಕೆಳಗಿನವರ ಬಗ್ಗೆ ಅನುಕಂಪ, ಮತ್ತೊಂದು ವೈಭವದ ಆಕರ್ಷಣೆ ಜೊತೆಗೆ ಅದರ ಹಿಂದಿರುವ ಕ್ರೌರ್ಯ. ಆದಿಪುರಾಣದಲ್ಲಿ ದ್ವಂದ್ವ ಕಡಿಮೆ; ಯಾಕೆಂದರೆ ಒಂದೆಡೆ ಅದು ಆದಿದೇವನ ವ್ಯಕ್ತಿತ್ವ ಮಾಗಿದ ಕಥನ; ಮತ್ತೊಂದೆಡೆ ತನ್ನ ಹೆಮ್ಮೆಯ ಧರ್ಮದ ಬಗೆಗಿನ ಗತ್ತು. ಆದರೆ ವಿಕ್ರಮಾರ್ಜುನ ವಿಜಯದಲ್ಲಿ ಹೊರಗಿನ ಬೆರಗು ಒಳಗಿನ ಅಸಹನೆಯನ್ನು ಸೆರಗಿನಲ್ಲಿ ಕಟ್ಟಿಕೊಂಡಿದೆ. ಈ ಕಾರಣದಿಂದಲೇ ಅದು ಅವನು ರಾಜಾಸ್ಥಾನವನ್ನು ಸೇರಿದ ಮೇಲೆ ರಚಿತವಾಗಿರಬಹುದು. ಯಾಕೆಂದರೆ, ರಾಜನ ಬಗೆಗಿನ ವ್ಯಾಪಕ ಭಕ್ತಿ ಜಾಗೃತ ನೆಲೆಯಲ್ಲಿ ಪಂಪನನ್ನು ಆವರಿಸಿದ್ದರೂ, ಒಳಗಿನ ಮಾನವೀಯ ಪಾತಳಿಯ ಅನುಕಂಪ ಅವನಲ್ಲಿ ಸಾತ್ವಿಕ ಕ್ರೋಧವನ್ನೂ ಉಂಟುಮಾಡುವಂತಾಗುತ್ತದೆ.

ಪಂಪನು ತೀರ್ಥಂಕರ ಪುರಾಣದ ಧಾರ್ಮಿಕ ಕಟ್ಟುಪಾಡುಗಳನ್ನು ಎಲ್ಲಿಯೂ ಮೀರಿಲ್ಲ; ಬಹುತೇಕ ಅವುಗಳನ್ನು ಪೂರ್ವಪುರಾಣದ ನೆರಳಿನಲ್ಲಿಯೇ ನಿರ್ವಹಿಸಿದ್ದಾನೆ; ಅಲ್ಲಿ ಸ್ವಾತಂತ್ರ್ಯಕ್ಕೆ ಅವಕಾಶವಿಲ್ಲ. ಆದರೆ ಹಲವಾರು ಸಂದರ್ಭಗಳಲ್ಲಿ ಸ್ವಂತಿಕೆಯನ್ನು ತೋರುತ್ತಾನೆ. ವಿವರಗಳಲ್ಲಿ, ಭರತನ ಅಂತಃಪುರಸ್ತ್ರೀಯರ ವನವಿಹಾರ ಸಂದರ್ಭದಲ್ಲಿ, ಶ್ರೀಮತಿ–ವಜ್ರಜಂಘರ ಸಾವಿನ ಸಂದರ್ಭದಲ್ಲಿ, ಸೂಳೆಗೇರಿ ವರ್ಣನೆಯಲ್ಲಿ, ಭರತ–ಬಾಹುಬಲಿ ಯುದ್ಧದ ನಿರ್ವಹಣೆಯ ಹಲವಾರು ವಿವರಗಳು ಮುಂತಾದುವಲ್ಲಿ ಇದಕ್ಕೆ ನಿದರ್ಶನಗಳನ್ನು ಕಾಣಹುದು. ಎಲ್ಲಿ ಸ್ವಂತಿಕೆಯಿದೆಯೋ ಅದೇ ಆ ಕವಿಯ ಕಾವ್ಯ; ಉಳಿದದ್ದೆಲ್ಲ ಮೂಲಕವಿಯದು. ಆದರೆ ಇವುಗಳ ಮೂಲಕವಾಗಿ ಈ ಕವಿ ಪುರಾಣದ ಒಟ್ಟು ಧಾರೆಗೆ ಆನುಷಂಗಿಕವಾಗಿಯೆಂಬಂತೆ ಬದುಕಿನ ಬಗೆಗಿನ ತನ್ನ ಒಳಮನಸ್ಸಿನ ಅನಿಸಿಕೆಗಳನ್ನು ಪವಣಿಸುತ್ತಾನೆ, ಮೂಲ ಭಂಗಗೊಳ್ಳದಂತೆಯೇ ಒಟ್ಟು ಕಥಾನಕಕ್ಕೆ ತನ್ನದೇ ನೋಟವನ್ನು ಕಾಣುವಂತೆ ಮಾಡುತ್ತಾನೆ. ಪ್ರಾಯಶಃ ಇದೇ ಅವನ ಸ್ವಂತವಾದದ್ದು. ಎಲ್ಲ ಕಲಾಕೃತಿಗಳ ಸ್ವರೂಪವೂ ಇದೇ ತಾನೇ: ಮೂಲವಸ್ತುಗಳನ್ನು ಬಳಸುವ ತನ್ನ ಕ್ರಮದಲ್ಲಿ. ಬೆಲೆ ಬರುವುದು ಈ ಕಿರುಪ್ರಯತ್ನಕ್ಕೆ ತಾನೇ. ಎಷ್ಟೇ ಆಗಲಿ ಸಾಹಿತ್ಯ ಕೃತಿಯೊಂದು ಹಳೆಯದನ್ನು ಹೊಸತಾಗಿ ನಿರೂಪಿಸುವ ಬಗೆ ತಾನೇ? ಅಲ್ಲಿ ಪಂಪತನವನ್ನು ಕಾಣಬೇಕು, ಹಾಗೆ ಅವನಲ್ಲಿ ಇದನ್ನು ಅವನ ನಂತರದ ಕನ್ನಡ ಕವಿಗಳು ಕಂಡಿದ್ದಾರೆ. ಆದ್ದರಿಂದಲೇ 'ಪಸರಿಪ ಕನ್ನಡಕೊಡೆಯನೊರ್ವನೆ ಸತ್ಕವಿ ಪಂಪನಾವಗಂ' ಎಂಬ ಉದ್ಗಾರ ಹೊಮ್ಮಿದ್ದು. ಒಂದು ವರ್ಗಕ್ಕೆ ಸೇರಿರುವ ಒಂದು ಕಥನಕ್ರಮದಲ್ಲಿ ಸ್ವಂತಕ್ಕೂ ಸಮಕಾಲಕ್ಕೂ ಸಲ್ಲುವ ಸುಳುಹುಗಳನ್ನು ನೀಡಬಲ್ಲುದೇ ಒಳ್ಳೆಯ ಕಾವ್ಯ. ಅಂತಹ ಅಂಶಗಳನ್ನು ಈ ಪ್ರಸ್ತಾವನೆಯ ಮೂರನೆಯ ಒಂದು ಭಾಗ ವಿವರಿಸುತ್ತದೆ.

## ೨

ಪಂಪ ಈಗ್ಗೆ ಸುಮಾರು ಒಂದು ಸಾವಿರದ ಎಪ್ಪತ್ತು ವರ್ಷಗಳಷ್ಟು ಹಿಂದೆ ತನ್ನ ಕಾವ್ಯಗಳನ್ನು ಹೇಳಿದ. ಅವನನ್ನು ಎಲ್ಲ ಕಾಲದ ಕವಿಗಳು ಹೊಗಳಿದರು; ಚಂಪೂ ಕವಿಗಳಂತೂ ಅವನನ್ನು ಅನುಕರಿಸಲು ಹೆಣಗಿದರು. ಈಗಲೂ ಪಂಪನ ಕಾವ್ಯಗಳ ಹಿರಿಮೆಯ ಬಗ್ಗೆ ಆಧುನಿಕ ವಿಮರ್ಶಕರೂ ಮುಕ್ತಕಂಠದ ಮಾತುಗಳನ್ನಾಡುತ್ತಿದ್ದಾರೆ. ಹೀಗೆ ಪಂಪ ಯಾಕೆ ಎಲ್ಲ ಕಾಲದಲ್ಲಿಯೂ ಮಹತ್ವವನ್ನು ಗಳಿಸಿಕೊಂಡ? ಅಥವಾ, ಒಬ್ಬ ಪ್ರಾಚೀನ ಕವಿ ಇವತ್ತಿಗೂ ಮಹತ್ವದವನಾಗಿ ಕಾಣಲು ಏನು ಕಾರಣ? ಎಂದು ಆಲೋಚಿಸಬೇಕಾಗಿದೆ. ಪಂಪನನ್ನು ಸಾಮಾನ್ಯವಾಗಿ'ಕನ್ನಡದ ಆದಿಕವಿ' ಎಂದು ಕರೆಯುವ ರೂಢಿಯಿದೆ. ಆದರೆ ಅವನು ಕನ್ನಡದಲ್ಲಿ ಬರೆದ ಮೊದಲನೆಯ ಕವಿಯೇನಲ್ಲ ಎಂಬುದು ಎಲ್ಲರಿಗೂ ಗೊತ್ತಿರುವ ಅಂಶವೇ. ಅವನಿಗಿಂತ ಮುಂಚೆ ಅನೇಕ ಕವಿಗಳ, ಅದೂ ಮಹತ್ತರ ಕೆಲಸ ಮಾಡಿದವರು ಆಗಿಹೋದ, ವಿಷಯ ಪಂಪನಿಗಿಂತ ಸುಮಾರು ಒಂದು ಶತಮಾನದ ಹಿಂದೆ ರಚಿತವಾದ 'ಕವಿರಾಜ ಮಾರ್ಗ' ಸ್ಪಷ್ಟವಾಗಿ ಹೇಳುತ್ತದೆ. ಪಂಪನಿಗೆ ಈ'ಆದಿತನ'ವನ್ನು ನೀಡಲು ಕಾರಣವೇನು?

ಪಂಪನಿಗೆ ಮುಂಚೆಯೇ ಅನೇಕ ಕನ್ನಡ ಕವಿಗಳಿದ್ದುದು ಮಾತ್ರವಲ್ಲದೆ, ಅವರು ವಿವಿಧ ಬಗೆಯ ಕೃತಿಗಳನ್ನು ರಚಿಸಿದರು ಎಂದೂ'ಕವಿರಾಜಮಾರ್ಗ' ಹೇಳುತ್ತದೆ, ಹಾಗೂ ತನ್ನ ಹಿಂದಿನ ಮತ್ತು ತನ್ನ ಕಾಲದ ಅನೇಕ ಸಾಹಿತ್ಯ ಪ್ರಕಾರಗಳ ಹೆಸರನ್ನು ಹೇಳುತ್ತದೆ. ಅವುಗಳಲ್ಲಿ ಒಂದು 'ಗದ್ಯಕಥಾ'. 'ಮಿಗೆ ಕನ್ನಡಗಬ್ಬಂಗಳೊಳ್ ಅಗಣಿತಗುಣಗಣ ಗದ್ಯಪದ್ಯಸಮ್ಮಿಶ್ರಿತಮಂ ನಿಗದಿಸುವರ್ ಗದ್ಯಕಥಾಪ್ರಗೀತಿಯಿಂ ತಚ್ಚಿರಂತನಾಚಾರ್ಯರ್ಕಳ್' ಎಂಬ ಪದ್ಯವನ್ನು ಗಮನಿಸಿ. ಎಂದರೆ ಅಪರಿಮಿತ ಗುಣಗಳಿಂದ ಕೂಡಿದ ಗದ್ಯಪದ್ಯಗಳು ಸೇರಿದ ಕಾವ್ಯ ಪ್ರಕಾರವನ್ನು ಕವಿರಾಜಮಾರ್ಗಕಾರ'ಗದ್ಯಕಥಾ' ಎಂದು ಕರೆಯುತ್ತಿದ್ದಾನೆ. ಇದು ಈಗ ನಾವು 'ಚಂಪೂ' ಎಂದು ಕರೆಯುವ ಪ್ರಕಾರವೇ ಎಂದು ಹಲವು ವಿದ್ವಾಂಸರ ಅಭಿಪ್ರಾಯ. ಚಂಪೂ ಕನ್ನಡದಲ್ಲಿಯೇ ಜನ್ಮತಾಳಿದ ಕಾವ್ಯಪ್ರಕಾರ, ಅದು ಕನ್ನಡದಿಂದ ಸಂಸ್ಕೃತಕ್ಕೆ ಹೋಯಿತು ಎಂಬ ಒಂದು ವಾದವಿದ್ದರೆ, ಕನ್ನಡ ಸಂಸ್ಕೃತಕ್ಕೇ ಏನು ಕೊಟ್ಟೀತು ಎಂಬ ಭಾವನೆಯಿಂದಲೋ ಏನೋ ಸಂಸ್ಕೃತದಲ್ಲಿಯೇ ಅದರ ಜನನವಾಯಿತು ಎಂದು ಅನೇಕರು ವಾದಿಸುತ್ತಾರೆ. ಸಂಸ್ಕೃತದಲ್ಲಿರುವ ದಂಡಿಯ 'ಕಾವ್ಯಾದರ್ಶ' ಎಂಬ ಲಕ್ಷಣಗ್ರಂಥ 'ಕವಿರಾಜಮಾರ್ಗ'ಕ್ಕೆ ಮಾದರಿ ಎಂಬುದು ನಿಜ (ಅದರೊಡನೆ ಭಾಮಹನ 'ಕಾವ್ಯಾಲಂಕಾರ' ಕೂಡ). ಅಲ್ಲಿ 'ಗದ್ಯಪದ್ಯ ಮಯೀ ಕಾಚಿತ್ ಚಂಪೂರಿತ್ಯಭಿವಿದ್ಯತೇ' ಎಂಬ ಮಾತಿದೆ (ಗದ್ಯಪದ್ಯಮಯೀ ಕಾಚಿತ್ ಚಂಪೂರಿತ್ಯಬಿಧೀಯತೇ – ಎಂಬುದು ಅದಕ್ಕಿರುವ ಪಾಠಾಂತರ). ಈ ಮಾತು ಚಂಪೂ ಪ್ರಕಾರ 'ಕವಿರಾಜಮಾರ್ಗ'ಕ್ಕಿಂತ ಮುಂಚೆಯೇ ಸಂಸ್ಕೃತದಲ್ಲಿತ್ತು

ಎಂಬ ವಾದಕ್ಕೆ ಪುಷ್ಟಿ ಕೊಡುತ್ತದೆ. ಆದರೆ ಇದರಲ್ಲೊಂದು ತೊಡಕು ಇದೆ. ದಂಡಿಯನ್ನು ಬಹು ವಿಷಯಗಳಲ್ಲಿ ಅನುಸರಿಸುವ 'ಕವಿರಾಜಮಾರ್ಗ'ವು ಚಂಪೂ ಎಂಬ ಹೆಸರನ್ನೇ ಹೇಳುವುದಿಲ್ಲ. ಇದಕ್ಕೇನು ಕಾರಣ? ಜೊತೆಗೆ ಬಲದೇವ ಉಪಾಧ್ಯಾಯರು 'ಗದ್ಯಪದ್ಯಮಯೀ ಕಾಚಿತ್ ಚಂಪೂರಿತ್ಯಭಿಧೀಯತೇ' ಎಂಬ ಮಾತಿಗೆ ವ್ಯಾಖ್ಯಾನ ಮಾಡುತ್ತ, ಕಾಚಿತ್ ಮತ್ತು ಅಭಿಧೀಯತೇ ಎಂಬ ಶಬ್ದಗಳ ಕಾರಣದಿಂದಾಗಿ, ದಂಡಿಯ ಕಾಲಕ್ಕೆ ಚಂಪೂ ಇತ್ತು, ಆದರೆ ದಂಡಿ ಅದನ್ನು ಕಣ್ಣಾರೆ ಕಂಡಿರಲಿಲ್ಲ ಎಂದು ತೀರ್ಮಾನಿಸುತ್ತಾರೆ. ಹೀಗಾಗಿ. ಈ ವಾಕ್ಯವು ದಂಡಿಯ'ಕಾವ್ಯಾದರ್ಶ'ದ ಮೂಲದಲ್ಲಿತ್ತೇ ಎಂಬ ಸಂದೇಹ ಮೂಡುತ್ತದೆ. ದಂಡಿಯೇ ಗದ್ಯ, ಪದ್ಯ ಮತ್ತು ಮಿಶ್ರ ಎಂಬ ಮೂರು ಕಾವ್ಯಪ್ರಕಾರಗಳನ್ನು ಉಲ್ಲೇಖಿಸುತ್ತಾನೆ. ಮಿಶ್ರ ಎಂಬುದು ಚಂಪೂವನ್ನು ಸೂಚಿಸುತ್ತಿದೆಯೋ ಅಥವಾ ಬೇರೇನನ್ನಾದರೋ ಎಂಬ ಅನುಮಾನ ಉಂಟಾಗುತ್ತದೆ. ಏಕೆಂದರೆ, ಸಾಮಾನ್ಯವಾಗಿ ಹಿಂದೆಲ್ಲ ಕಾವ್ಯವನ್ನು 'ಶ್ರವ್ಯ ಕಾವ್ಯ' ಮತ್ತು 'ದೃಶ್ಯ ಕಾವ್ಯ' ಎಂಬ ವಿಂಗಡಣೆ ಮಾಡುವ ಪರಿಪಾಠವಿತ್ತು. 'ಶ್ರವ್ಯಕಾವ್ಯ'ದಲ್ಲಿ ಗದ್ಯ ಮತ್ತು ಎಂಬೆರಡು ಭೇದ. ದಂಡಿ ಹೇಳುವ ಮಿಶ್ರ ಇನ್ನೊಂದು ಕಾವ್ಯಪ್ರಕಾರವಾದ 'ದೃಶ್ಯ ಕಾವ್ಯ'ವನ್ನೇನಾದರೂ ಸೂಚಿಸುತ್ತದೆಯೇ? ಏಕೆಂದರೆ ಸಂಸ್ಕೃತ ದೃಶ್ಯಕಾವ್ಯ(ನಾಟಕ)ಗಳಲ್ಲಿ ಸಂಭಾಷಣೆಯಲ್ಲಿ ಗದ್ಯವೂ ಪದ್ಯವೂ ಇರುತ್ತಿತ್ತು. ಇದನ್ನೇ ಮಿಶ್ರ ಎಂದು ದಂಡಿ ಸೂಚಿಸುತ್ತಿದ್ದಿರಬಹುದು. ಸಂಸ್ಕೃತದಲ್ಲಿಯೂ ಚಂಪೂ ಬಂದ ಮೇಲೆ ಯಾರಾದರೂ 'ಕಾವ್ಯಾದರ್ಶ'ದಲ್ಲಿ ಈ ಮಾತನ್ನು ಸೇರಿಸಿರಬಹುದು; ಅಂದರೆ ಚಂಪೂವಿನ ಈ ವ್ಯಾಖ್ಯೆ ಪ್ರಕ್ಷೇಪವಿರಬಹುದು. ಅಲ್ಲದೆ ಮೊದಮೊದಲ ಸಂಸ್ಕೃತ ಚಂಪೂ ಕಾವ್ಯಗಳನ್ನು ರಚಿಸಿದವರು ಕನ್ನಡಿಗರು; ಸಂಸ್ಕೃತದಲ್ಲಿ ದೊರೆತಿರುವ ಅತ್ಯಂತ ಪ್ರಾಚೀನ ಚಂಪೂ ಕೃತಿಯಾದ ತ್ರಿವಿಕ್ರಮನ 'ನಲಚಂಪೂ' ಹತ್ತನೆಯ ಶತಮಾನದ್ದು; ಪಂಪನ ಕಾಲವೇ, ಸ್ವಲ್ಪ ಹಿಂಚು ಮುಂಚು.

ಈ ವಾದ ಸಾಕು. ನಮಗಿಲ್ಲಿ ಪ್ರಸ್ತುತವಾದುದೆಂದರೆ, 'ಕವಿರಾಜಮಾರ್ಗ' ಪೂರ್ವದಲ್ಲಿಯೇ ಚಂಪೂ ಕನ್ನಡದಲ್ಲಿ ನೆಲೆಯೂರಿತ್ತು ಮಾತ್ರವಲ್ಲ, ದೊಡ್ಡ ಕವಿಗಳು ಆ ಪ್ರಕಾರದಲ್ಲಿ ಕಾವ್ಯ ರಚಿಸಿದ್ದರು ಎಂಬ ಅಂಶ. ಅದು ಕಾಲಕಾಲಕ್ಕೆ ಹೆಚ್ಚೆಚ್ಚು ಪರಿಷ್ಕರಣಗೊಳ್ಳುತ್ತ ಅಂತಸ್ಸತ್ವವನ್ನು ಹೆಚ್ಚಿಸಿಕೊಳ್ಳುತ್ತ ಪಂಪನ ಕಾವ್ಯಗಳಲ್ಲಿ ತನ್ನ ಸಾಧನೆಯ ಶಿಖರವನ್ನು ತಲುಪಿತು. ಆನಂತರ ಆ ಕಾವ್ಯದ ಸತ್ವ ಇಳಿಮುಖವಾಯಿತು. ಅಂದರೆ ಪಂಪ ಚಂಪೂ ಪ್ರಕಾರದ ಪಕ್ವಫಲ. ಆ ಪಕ್ವತೆಗೆ ಕಾರಣ ತನ್ನೆರಡು ಕಾವ್ಯಗಳ ವಸ್ತು. ಭಾಷೆ. ಅಭಿವ್ಯಕ್ತಿವಿಧಾನ, ಪಾತ್ರಚಿತ್ರಣ, ತನ್ನ ಕಾಲದ ಸ್ಥಿತಿಗತಿಗಳನ್ನು ಒಳಗೊಳ್ಳುವ ಬಗೆ – ಇವೆಲ್ಲ ವಿಶಿಷ್ಟವಾದವು ಎಂಬುದು. ಪಂಪ ತನ್ನೆರಡೂ ಕಾವ್ಯಗಳಲ್ಲಿನ ವೈಶಿಷ್ಟಗಳನ್ನು ಒಟ್ಟಾರೆಯಾಗಿ'ದೇಸಿ' ಎಂದು ಬಣ್ಣಿಸಿಕೊಳ್ಳುತ್ತಾನೆ. ತನ್ನ ಮೊದಲ ರಚನೆಯಾದ'ಆದಿಪುರಾಣ'ದ ಕೊನೆಯಲ್ಲಿ 'ಸ್ವರ್ಗಾಪವರ್ಗಕ್ಕಮಾಸ್ಪದಮಪ್ಪ ಆದಿಪುರಾಣವಸ್ತುಕೃತಿಯಂ ಪೇೞ್ದಂ ಜೆಡಂಗಪ್ಪ

ಮಾರ್ಗದೊಳಂ ದೇಸಿಯೊಳಂ ಪೊದಳ್ದೆಸೆವಿಸಂ ಸಂಸಾರಸಾರೋದಯಂ' ಎಂದು ಹೇಳಿಕೊಂಡರೆ, 'ವಿಕ್ರಮಾರ್ಜುನವಿಜಯ' ಮೊದಲ ಆಶ್ವಾಸದಲ್ಲಿ. ಒಂದೆಡೆ 'ಬಗೆ ಪೊಸತಪ್ಪುದಾಗಿ ಮೃದುಬಂಧದೊಳೊಂದುವುದು ಒಂದಿ ದೇಸಿಯೊಳ್ ಪುಗುವುದು' ಎಂದೂ; ಮತ್ತೊಂದೆಡೆ, 'ವರ್ಣಕಂ ಕತೆಯೊಳೊಡಂಬಡಂ ಪಡೆಯೆ ಪೇಳ್ವೊಡೆ ಪಂಪನೆ ಪೇಳ್ಗುಂ ಎಂದು ಪಂಡಿತರೆ ತಗುಳ್ದು ಬಿಚ್ಚಳಿಸೆ ಪೇಟಲೊಡರ್ಚಿದನೀ ಪ್ರಬಂಧಮಂ' ಎಂದೂ ನುಡಿಯುತ್ತಾನೆ. ಅದೇ ಕಾವ್ಯದ ಕೊನೆಯ ಆಶ್ವಾಸದಲ್ಲಿ ಒಂದೆಡೆ, ತನ್ನ ಕಾವ್ಯವೈಶಿಷ್ಟ್ಯಗಳಲ್ಲಿ 'ಕೃತ ದೇಸಿ'ಯೂ ಸೇರುವುದನ್ನು ಉಲ್ಲೇಖಿಸುತ್ತಾನೆ; ಮತ್ತೊಂದೆಡೆ. 'ವ್ಯಾಸಮುನಿಪ್ರಣೂತಕೃತಿಯಂ ಸಲೆ ಪೇಟ್ದು ಪೊದಳ್ದ ಸತ್ಕವಿವ್ಯಾಸಸಮಾಗಮಾನ್ವಿತನುಂ ಆದಿಪುರಾಣಮನೆಯ್ದೆ ಪೇಟ್ದು ವಾಙ್ಶ್ರೀಸುಭಗಂ ಪುರಾಣಕವಿಯುಂ ಧರೆಗಾಗಿರೆ ಉಣ್ಮೆಪೊಣ್ಮುವೀ ದೇಸಿಗರಂತೆ ನಾಡೊವಜನಾದನೊ ಪೇಟ್ದು ಕವಿತಾಗುಣಾರ್ಣವಂ' ಎಂದೂ ಹೇಳೀಕೊಳ್ಳುತ್ತಾನೆ. ('ದೇಸಿಗಳುಂತೆ' ಎಂಬುದನ್ನು ವೆಂಕಟಾಚಲಶಾಸ್ತ್ರಿಗಳು 'ದೇಸಿಗರಂತೆ' ಎಂದು ಪರಿಷ್ಕರಿಸುತ್ತಾರೆ). ಹೀಗಾಗಿ ಪಂಪನಿಗೆ ತನ್ನ ಕಾವ್ಯವೈಶಿಷ್ಟವಾದ 'ದೇಸಿಯ' ಬಗ್ಗೆ ಅರಿವು ಮಾತ್ರವಲ್ಲದೆ ಅಪಾರ ಹೆಮ್ಮೆಯೂ ಇದೆ. ಮುಂದಿನ ಕವಿಗಳು ಪಂಪನ ವೈಶಿಷ್ಟವೆಂದು 'ದೇಸಿ'ಯನ್ನು ಉಲ್ಲೇಖಿಸುವುದನ್ನು ಗಮನಿಸಬೇಕು. ಹಾಗಾದರೆ 'ದೇಸಿ' ಎಂದರೇನು ಎಂಬ ಪ್ರಶ್ನೆ ಏಳುತ್ತದೆ. ಕನಿಷ್ಠ ಪಕ್ಷ, ತನ್ನ ವೈಶಿಷ್ಟ್ಯವೆಂದು ಹೆಮ್ಮೆಯಿಂದ ಬೀಗುವ ಪಂಪನ ಕಾವ್ಯಗಳ ದೇಸಿಯ ಸ್ವರೂಪವೇನು ಎಂಬುದನ್ನು ಅನ್ವೇಷಿಸಬೇಕಾಗಿದೆ.

ಸಾಮಾನ್ಯವಾಗಿ ಪಂಪನ ಎರಡು ಕಾವ್ಯಗಳಾದ 'ಆದಿಪುರಾಣ' ಮತ್ತು 'ವಿಕ್ರಮಾರ್ಜುನವಿಜಯ'ಗಳನ್ನು ಕ್ರಮವಾಗಿ 'ಧಾರ್ಮಿಕ' ಮತ್ತು 'ಲೌಕಿಕ' ಕಾವ್ಯಗಳೆಂದು ಗುರುತಿಸುವ ಪದ್ಧತಿಯಿದೆ; ಇದೇನೂ ತಪ್ಪಲ್ಲ. ಏಕೆಂದರೆ ಪಂಪನೇ ತನ್ನ 'ವಿಕ್ರಮಾರ್ಜುನವಿಜಯ'ದ ಕೊನೆಯಲ್ಲಿ 'ಬೆಳಗುವೆನಿಲ್ಲಿ ಲೌಕಿಕಮಂ ಅಲ್ಲಿ ಜಿನಾಗಮಮಂ' ಎಂದು ಹೇಳಿಕೊಂಡಿದ್ದಾನೆ. ಆದರೆ 'ಧಾರ್ಮಿಕ' ಹಾಗೂ 'ಲೌಕಿಕ' ಎಂಬುದನ್ನು ನಾವು ಹೇಗೆ ನಿರ್ವಚಿಸಬೇಕು ಎಂಬ ಪ್ರಶ್ನೆ ಏಳುತ್ತದೆ. ಧರ್ಮ ಎಂಬುದಕ್ಕೆ ನಿರ್ದಿಷ್ಟ ಅರ್ಥವಿದೆಯೇ, ಉಹ್ಞೂ, ಇಲ್ಲ. ಹಾಗೆಯೇ ಲೌಕಿಕ ಎಂಬುದಕ್ಕೂ. ಏಕೆಂದರೆ 'ಛಲದೊಳ್ ದುರ್ಯೋಧನಂ' ಎಂದು ಮೊದಲಾಗುವ, 'ವಿಕ್ರಮಾರ್ಜುನವಿಜಯ'ದ ಹದಿನಾಲ್ಕನೆಯ ಆಶ್ವಾಸದ ಅರುವತ್ತನಾಲ್ಕನೆಯ ಪದ್ಯದಲ್ಲಿ ವಿವಿಧ ಪಾತ್ರಗಳು ವಿಭಿನ್ನ ಗುಣಗಳಿಂದಾಗಿ ವಿಶಿಷ್ಟವಾಗುತ್ತಾರೆಂದು ಹೇಳಿದ ಮೇಲೆ, 'ಇವರ್ಗಳಿನ್ ಈ ಭಾರತಂ ಲೋಕಪೂಜ್ಯಂ' ಎನ್ನುತ್ತಾನೆ. ಹಾಗಾದರೆ, ಲೌಕಿಕ ಗುಣಗಳೂ ಪೂಜ್ಯವೇ ಎಂದಂತಾಯಿತು. ಹಾಗಾದರೆ, ಧಾರ್ಮಿಕ ಗುಣಗಳಿಗೂ ಲೌಕಿಕ ಗುಣಗಳಿಗೂ ಏನು ವ್ಯತ್ಯಾಸವೆಂದು ಕೇಳಬೇಕಾಗುತ್ತದೆ. ಕೊನೆಯ ಪಕ್ಷ, ಪಂಪನ ದೃಷ್ಟಿಯಲ್ಲಿ ಇವುಗಳ ಸ್ವರೂಪವೇನು ಎಂದು ವಿವೇಚಿಸಬೇಕು.

'ಆದಿಪುರಾಣ'ದ ಆರಂಭದ ಪದ್ಯಗಳಲ್ಲೊಂದರಲ್ಲಿ ಕವಿಯು ತನ್ನ ಈ ಪುರಾಣಕಾವ್ಯ ಎಲ್ಲರಿಗೂ ಹೇಗೆ ಪ್ರಿಯವಾಗುತ್ತದೆಂದು ಹೇಳಿಕೊಳ್ಳುವ ಮಾತುಗಳಿವೆ: 'ಇದುವೆ ಸುಕವಿಪ್ರಮೋದಪ್ರದಂ ಇದುವೆ ಸಮಸ್ತಭವ್ಯಲೋಕಪ್ರಮದಪ್ರದಂ ಎನೆ ನೆಗಟ್ಟ ಆದಿಪುರಾಣದೊಳ್ ಅಜಿವುದು ಕಾವ್ಯಧರ್ಮಮಂ ಧರ್ಮಮುಮಂ' ಎಂಬುದೇ ಆ ಮಾತುಗಳು. ಧರ್ಮ ಎಂಬುದಕ್ಕೆ ಪಂಪ ಏನು ಅರ್ಥ ಕೊಡುತ್ತಿದ್ದಾನೆಂಬುದನ್ನು ಹುಡುಕುವುದು ಕಷ್ಟವೇನಲ್ಲ. ಏಕೆಂದರೆ ಅವನ ಕೃತಿಯದು 'ಸ್ವರ್ಗಾಪವರ್ಗಕ್ಕೆ ಆಸ್ಪದಮಪ್ಪ' ವಸ್ತು, ಎಂದರೆ ಮೊದಲ ತೀರ್ಥಂಕರನ ಚರಿತೆ, 'ತ್ರಿದಶಸ್ತುತ್ಯಮಿದಾದಿದೇವಚರಿತಂ'; ಇದು 'ಸಮಸ್ತಭವ್ಯಲೋಕಪ್ರಮದಪ್ರದ'ವಾದುದು, ಮತ್ತು ಇದರ ರಚನೆಯೇ'ಕರ್ಣಾಮೃತಸ್ಯಂದಿಯಕ್ಕೆ ಭವ್ಯಾವಳಿಗೆ' ಎಂಬ ಉದ್ದೇಶವನ್ನು ಹೊಂದಿರುವಂಥದು. ಇಲ್ಲಿನ ವಸ್ತು ಮತ್ತು ಈ ವಸ್ತುವನ್ನು 'ಪುಣ್ಯಕರ'ವೆಂದು ಭಾವಿಸುವ ಶ್ರೋತೃವರ್ಗ ಇವುಗಳು, ಹಾಗೂ ಪಂಪನೂ ಜೈನನೇ ಆಗಿ ಕಾವ್ಯದ ಆರಂಭದಲ್ಲಿ ಜೈನ ಪರಿಕಲ್ಪನೆಗಳಿಗನುಗುಣವಾದ ಪ್ರಾರ್ಥನಾಪದ್ಯಗಳಿರುವುದರಿಂದ, ಇಲ್ಲಿನ 'ಧರ್ಮ' ಎಂಬ ಶಬ್ದಕ್ಕೆ 'ಜೈನಧರ್ಮ' ಎಂಬ ಪರಿಮಿತವಾದ ಮತ್ತು ನಿರ್ದಿಷ್ಟವಾದ ಅರ್ಥವಿರುವುದು ಸ್ಪಷ್ಟವಾಗುತ್ತದೆ. ಅಂದರೆ ತನ್ನ ಕೃತಿಯ ಒಂದು ಗುಂಪಿನ ಓದುಗವರ್ಗವು ಜೈನಮತಕ್ಕೆ ಸಂಬಂಧಿಸಿದವರು ಎಂಬುದು ಆಶಯ, ಅದರಲ್ಲಿ ಅನುಮಾನವಿಲ್ಲ. ಆದರೆ ಅದಕ್ಕೂ ಮೊದಲೇ ಬರುವ 'ಸುಕವಿಪ್ರಮೋದಪ್ರದಂ' ಎಂಬ ಮಾತೂ, 'ಅಜಿವುದು ಕಾವ್ಯಧರ್ಮಮಂ' ಎಂಬ ಮಾತೂ ಏನನ್ನು ಸೂಚಿಸುತ್ತವೆ? ಅಲ್ಲದೆ ತನ್ನ ಕಾವ್ಯ ಸಂತಸವನ್ನುಂಟುಮಾಡುವುದು ಮುಖ್ಯವಾಗಿ ಕಾವ್ಯಾಸಕ್ತರನ್ನು ಎಂಬ ಆಶಯವು ಧರ್ಮಕ್ಕೆ ಅವನು ನೀಡಿದ ಎರಡನೆಯ ಸ್ಥಾನದಿಂದ ವಿದಿತವಾಗುತ್ತದೆ ('ಸುಕವಿ' ಎಂದರೆ ಕವಿಗಳು ಎಂಬ ಅರ್ಥಕ್ಕಿಂತ ಒಳ್ಳೆಯ ಕಾವ್ಯಗಳಲ್ಲಿ ಆಸಕ್ತರಾದವರು ಎಂಬ ಅರ್ಥವೇ ಇಲ್ಲಿ ಸೂಕ್ತ). ಅಂಥವರಿಗಾಗಿ ಇಲ್ಲಿರುವುದು 'ಕಾವ್ಯಧರ್ಮ' ಎನ್ನುತ್ತಾನೆ ಕವಿ. ಈಗ ಇನ್ನೊಂದು ಪ್ರಶ್ನೆ ತಲೆದೋರುತ್ತದೆ: 'ಕಾವ್ಯಧರ್ಮ' ಎಂದರೇನು?

ಕಾವ್ಯ ಎಂದರೇನೆಂಬುದನ್ನು ಇದುವರೆಗೂ ಯಾರೂ ಖಚಿತವಾಗಿಯೂ, ಸರ್ವಸಮ್ಮತವಾಗಿಯೂ ಸೂತ್ರರೂಪದಲ್ಲಿ ಹೇಳಿಲ್ಲ. ಜಗತ್ತಿನೆಲ್ಲೆಡೆಯ ಕಾವಮೀಮಾಂಸೆ ಮತ್ತು ವಿಮರ್ಶೆಗಳು ಆದಿಯಿಂದ ಇಲ್ಲಿಯವರೆಗೂ ಅದರ ಬಗ್ಗೆ ಚರ್ಚಿಸುತ್ತಲೇ ಬಂದಿವೆ; ಆದರೆ ಏನನ್ನೂ ನಿರ್ದಿಷ್ಟವಾಗಿ ಹೇಳಲಾಗಿಲ್ಲ. ಏಕೆಂದರೆ ಹೇಳಲಾಗುವುದಿಲ್ಲ. ಏಕೆಂದರೆ ಕಾವ್ಯ (ಸಾಹಿತ್ಯ) ಎಂಬುದು ಅನಂತಮುಖಿಯಾದುದು, ಅಮೂರ್ತವಾದುದು. ಪಂಪನೇ 'ಆದಿಪುರಾಣ'ದಲ್ಲಿ 'ಇದು ನಿಚ್ಚಂ ಪೊಸತು ಅರ್ಣವಂಬೊಲ್ ಅತಿಗಂಭೀರಂ ಕವಿತ್ವಂ' ಎನ್ನುತ್ತಾನೆ. ಎಂದರೆ ಕವಿತ್ವವು ಹಿಡಿತಕ್ಕೆ ಸಿಕ್ಕುವಂತಹುದಲ್ಲ, ಆಗಸವನ್ನು ಹಿಡಿಯಲು ಸಾಧ್ಯವೇ? ಈ ಮಾತುಗಳಲ್ಲಿ ಪಂಪ ಯಾವ ಆಶಯವನ್ನು ಹೇಳುತ್ತಿದ್ದಾನೆಯೋ ತಿಳಿಯದು; ಅವನು ನಮಗಿಂತ ಒಂದು ಸಾವಿರ ವರ್ಷಕ್ಕೂ ಹಿಂದೆ ಇದ್ದವನು. ತನ್ನ ಮಾತುಗಳನ್ನು

ಅವನು ವಿವರಿಸಿಲ್ಲ. ಜೊತೆಗೆ ಇಂಥ ಮಾತುಗಳೂ 'ನಿಚ್ಚಂ ಪೊಸತು'. ಎಂದರೆ ಹೊಸ ಹೊಸ ಅರ್ಥಗಳನ್ನು ಸ್ಫುರಿಸುವಂತಹವು. ಕವಿತ್ವ ಎಂಬುದು ಸಮುದ್ರದ ಹಾಗೆ: ಹರಹು ಮತ್ತು ಆಳಗಳನ್ನು ಹೊಂದಿರುವಂಥದು. ಜೊತೆಗೆ ಸಮುದ್ರದ 'ನೀರು' ನಮ್ಮನ್ನೇ ಪ್ರತಿಬಿಂಬಿಸುವಂಥದು. ಹಾಗೆಯೇ ಕಾವ್ಯವೂ ಕಾಣುವವರ ಕಣ್ಣಿಗೆ ಸಾಧ್ಯವಾದಂತೆ ಕಾಣುವಂಥದೇ ಹೊರತು ಎಲ್ಲರಿಗೂ ಒಂದೇ ರೀತಿಯಲ್ಲಿ ಅಲ್ಲ. ಏಕೆಂದರೆ ಕವಿತ್ವಕ್ಕೆ 'ಅರ್ಥವಿಲ್ಲ, ಸ್ವಾರ್ಥವಿಲ್ಲ'; ಓದುಗ ಅದಕ್ಕೆ ಅರ್ಥ ನೀಡಬೇಕು, ಅಷ್ಟೆ. ಹಾಗೆ ನೀಡುವುದು ತನ್ನ ಅರ್ಥವನ್ನು ಮಾತ್ರ ಎಂಬುದನ್ನು ಮರೆಯಲಾಗದು. ಅಂದರೆ ಪಂಪನ ಕಾವ್ಯಕ್ಕಾಗಲೀ. ನಮ್ಮ ಚರ್ಚೆಯ ಆಧಾರವಾದ 'ಕಾವ್ಯಧರ್ಮ' ಎಂಬ ಮಾತಿಗಾಗಲೀ ನಾವೊಂದು ಅರ್ಥ ನೀಡಿ, ಅದಕ್ಕನುಗುಣವಾಗಿ ಕಾವ್ಯವನ್ನು ವಿವರಿಸಬೇಕು.

'ಕಾವ್ಯ ಎಂದರೇನು', ಯಾರೂ ಹೇಳಲಾರರು ಎಂಬುದನ್ನಾಗಲೇ ಒಪ್ಪಿಕೊಂಡು ಬಿಟ್ಟಿದ್ದೇವಲ್ಲ. ಆದ್ದರಿಂದ ಈಗ ಕಾವ್ಯವನ್ನು ನಾವೇ ನಮ್ಮ ಅನುಕೂಲಕ್ಕಾಗಿ ನಿರ್ವಚಿಸಿಕೊಳ್ಳಬೇಕು; ಬೇರೆಯವರು ಒಪ್ಪಲಿ ಬಿಡಲಿ, ಇದು ನಮಗೆ ಆವಶ್ಯಕ. ಇಲ್ಲದಿದ್ದರೆ ಮುಂದುವರಿಯಲಾಗುವುದಿಲ್ಲ. ಕಾವ್ಯ ಎಂದರೆ, ನನ್ನ ದೃಷ್ಟಿಯಲ್ಲಿ, ವೈಯಕ್ತಿಕ ಅನುಭವಗಳ ನೆಲೆಯಿಂದ ಮತ್ತು ಅವುಗಳ ಆಧಾರದ ಮೇಲೆ, ಬದುಕಿನ ಸ್ವರೂಪವನ್ನು ಕಂಡುಕೊಳ್ಳುವ ಅನ್ವೇಷಣಾ ಪ್ರಕ್ರಿಯೆಯನ್ನು ಭಾಷೆಯ ಮಾಧ್ಯಮದಿಂದ ಅಭಿವ್ಯಕ್ತಗೊಳಿಸುವ ಪ್ರತಿಭಾವಂತನ 'ಅಸಲು ಕಸಬು'. ಬದುಕು ಕಾವ್ಯಕ್ಕಿಂತ ದೊಡ್ಡದು; ಏಕೆಂದರೆ ಕಾವ್ಯವೇ ಬದುಕಿನ ಒಂದು ಸಣ್ಣ ಭಾಗ. ಕಾವ್ಯವೇ ಅಸಂಖ್ಯಮುಖಿಯಾದರೆ, ಇನ್ನು ಬದುಕು? ಇನ್ನೂ ವಿಸ್ತಾರವಾದುದು. ಹಾಗಾಗಿ ಕವಿಕರ್ಮವೂ ಅಸಂಖ್ಯ ಬಗೆಯದು. ಅಂದರೆ ಒಂದು ಕಾವ್ಯಕೃತಿ ಮೇಲೆ ಹೇಳಿದ ಪ್ರತಿಭಾವಂತನೊಬ್ಬನ ಯಾವುದೋ ಒಂದು ಕಾಣ್ಕೆಯ ಅಭಿವ್ಯಕ್ತಿ. ಇಂತಹ ಕಾವ್ಯದ ಧರ್ಮ ಯಾವುದು? ಕಾವ್ಯಧರ್ಮ ಎಂದರೆ ಕಾವ್ಯದ ಪರಿಣಾಮ ಎಂದು ಅರ್ಥವಿಸಬಹುದೇನೋ. ಎಂದರೆ ತನ್ನ'ಆದಿಪುರಾಣ' ಇಂತಹ ಕಾವ್ಯಕುತೂಹಲಿಗಳಾದ ಓದುಗರ ಮತ್ತು ಜಿನಧರ್ಮೀಯ ಓದುಗರ ಮೇಲೆ ವಿಭಿನ್ನ ಪರಿಣಾಮಗಳನ್ನು ಬೀರುತ್ತದೆ ಎಂಬ ಅರಿವು ಪಂಪನಿಗಿದೆ.

ಜೈನಧರ್ಮೀಯರಿಗೆ ಈ ಕಾವ್ಯವು ಉಂಟುಮಾಡುವ ಪರಿಣಾಮದ ಸ್ಥೂಲ ಸ್ವರೂಪವನ್ನು ಸ್ವಲ್ಪಮಟ್ಟಿಗೆ ಪರಿಭಾವಿಸಿಕೊಳ್ಳಬಹುದು: ಪುಣ್ಯ, ಶ್ರೇಯಸ್ಸು, ಸದ್ಗತಿ ಇಂತಹವುಗಳಿಗೆ ಇದರ ಓದು, ಮನನ, ಮತ್ತು ಅಲ್ಲಿನ ಧಾರ್ಮಿಕತೆಯ ಅನುಸರಣ ಕಾರಣವಾಗುತ್ತದೆ ಎನ್ನಬಹುದೇನೋ. ಆದರೆ ಕವಿ ಅದಕ್ಕಿಂತ ಹೆಚ್ಚಾಗಿ ಮತ್ತು ಮುಖ್ಯವೆಂದು ಬಗೆದು ನಿರೀಕ್ಷಿಸುವ 'ಸುಕವಿಜನ'ರ ಮೇಲೆ ಯಾವ ಪರಿಣಾಮ ಬೀರಬೇಕೆಂದು ನಿರೀಕ್ಷಿಸುತ್ತಾನೆ ಎಂಬುದನ್ನೀಗ ಸ್ವಲ್ಪ ವಿಶದಪಡಿಸಿಕೊಳ್ಳಬೇಕು. ಇಂಥ ಓದುಗರು ಜೈನರಾಗಿದ್ದೂ, ಧರ್ಮಮೇತರವಾದ 'ಕಾವ್ಯಧರ್ಮ'ವನ್ನು ನಿರೀಕ್ಷಿಸುವವರಾಗಬಹುದು. ಅಥವಾ ಜೈನೇತರ ಕಾವ್ಯಾಸಕ್ತರಾಗಿರಬಹುದು.

ತ ಮನೋಭಾವದ ಓದಿನ ಮಟ್ಟಿಗೆ ಅಪರಿಬ್ಬರಲ್ಲಿರುವುದು ಒಂದೇ ಬಗೆಯ ನಿರೀಕ್ಷೆ. ಇಲ್ಲಿ ಪುಣ್ಯ, ಸದ್ಗತಿ ಇವುಗಳ ನಿರೀಕ್ಷೆಯಿಲ್ಲ. ಇಂಥವರು ಏನನ್ನು ನಿರೀಕ್ಷಿಸಬಹುದು ಅಥವಾ ಇಂಥವರ ಮೇಲೆ ಕಾವ್ಯ ಏನು ಪರಿಣಾಮ ಬೀರಬಹುದು?

ಕಾವ್ಯಾಸಕ್ತನು ಕಾವ್ಯದಿಂದ ನಿರೀಕ್ಷಿಸುವುದು ಒಂದು ವಿಶಿಷ್ಟ ಅನುಭವದ ಪುನರ್ನಿರ್ಮಿತಿಯನ್ನು, ಮತ್ತು ಬದುಕಿನ ಒಂದಂಶದ ವಿಶಿಷ್ಟ ಕಾಣ್ಕೆಯೊಂದನ್ನು. ಇಲ್ಲಿರುವುದು ಆದಿಜಿನನ ಚರಿತ್ರೆ, ಅವನು ಒಬ್ಬ ಮನುಷ್ಯನೇ; ನಾವೂ ಮನುಷ್ಯರೇ. ಹಾಗಾಗಿ ನಮ್ಮಿಬ್ಬರಲ್ಲಿರುವ ಸಮಾನಾಂಶ ಮಾನವ ಬದುಕು. ಜೈನರು ದೇವರಲ್ಲಿ ನಂಬಿಕೆಯಿಡದವರು; ಹೀಗಾಗಿ ಅವರಿಗೆ ಸಾಕ್ಷಾತ್ಕರಿಸಿಕೊಳ್ಳಬೇಕಾದ ಅಥವಾ ಸಾಯುಜ್ಯ ಹೊಂದಬೇಕಾದ ಅಥವಾ ತನ್ನಲ್ಲಿರುವ ದೈವಾಂಶವನ್ನು ಕಂಡುಕೊಳ್ಳಬೇಕಾದ ತುರ್ತು ಇಲ್ಲ. ಆದರೆ ತೀರ್ಥಂಕರನು ಸಾಮಾನ್ಯ ವ್ಯಕ್ತಿಗಳಿಗಿಂತ ತುಂಬ ಮೇಲುಮಟ್ಟದ ಜೀವಿ, ಅವನು ಜೀವನವನ್ನು (ಬದುಕು ಎಂಬ ನೀರು) ಪವಿತ್ರ ತೀರ್ಥವನ್ನಾಗಿ ಪರಿವರ್ತಿಸಿಕೊಂಡವನು. ಅವನ ಬದುಕು ಹೀಗಾಗಿರುವುದು ಅವನ ವೈಯಕ್ತಿಕ ಸಾಧನೆಯಿಂದ, ಅವನ ಬದುಕಿನ ಪರಿಯು ಎಲ್ಲರಿಗೂ ಆದರ್ಶವಾದುದು, ಮತಧರ್ಮಗಳ ಪರಿಧಿಯನ್ನು ಮೀರಿ. ಪ್ರಾಯಶಃ ಆ ಪರಿಣಾಮವನ್ನು ತನ್ನ 'ಪುರಾಣಕಾವ್ಯ'ವು ಕಾವ್ಯಾಸಕ್ತರ ಮೇಲೆ ಮಾಡುತ್ತದೆ ಎಂಬುದು ಕವಿಯ ನಿರೀಕ್ಷೆಯಾಗಿರಬೇಕು.

ಪಂಪ 'ಲೌಕಿಕ' ಎಂದು ಕರೆದುಕೊಳ್ಳುವ 'ವಿಕ್ರಮಾರ್ಜುನವಿಜಯ'ದ ಬಗ್ಗೆ ಒಂದಷ್ಟು ಚರ್ಚಿಸೋಣ. ಇಲ್ಲಿ ಲೌಕಿಕತೆ ನಮ್ಮ ವ್ಯಾವಹಾರಿಕ ಬದುಕಿಗೆ ಸಂಬಂಧಿಸಿದ್ದೇ? ಅಲ್ಲ. ಏಕೆಂದರೆ ಇಲ್ಲಿ ತುಂಬಿರುವುದು ರಾಜರ ಕತೆ, ಅವರ ನಡುವಣ ಭಿನ್ನಾಭಿಪ್ರಾಯಗಳು, ಕುಟಿಲ ಕಾರಾಸ್ಥಾನಗಳು, ಯುದ್ಧಗಳ ವರ್ಣನೆ ಇಂತಹವು. ಇವು ಸಾಮಾನ್ಯನ ಬದುಕಿಗೆ ಹೊರತಾದುದು ತಾನೇ ಸೈನ್ಯದಲ್ಲಿ ಪಾಲ್ಗೊಳ್ಳದಿದ್ದರೆ. ಇಡೀ ಈ ಕಾವ್ಯವು ಉದ್ದಕ್ಕೂ ರಾಜತ್ವದ ವೈಭವೀಕರಣಕ್ಕೆ ಮೀಸಲಾಗಿದೆ ಎಂಬ ಭಾವನೆಯನ್ನು ಓದುಗನಲ್ಲಿ ಉಂಟುಮಾಡಿದರೆ ಆಶ್ಚರ್ಯವಿಲ್ಲ. ಕಾವ್ಯದ ಮೊದಲ ಪದ್ಯದಿಂದ ಕೊನೆಯದರವರೆಗೂ ಈ ಕಾರ್ಯ ನಡೆದಿರುವುದೂ ಸುಳ್ಳಲ್ಲ. (ಈ ಅಂಶವು ಇದೇ ಲೇಖಕನ 'ಪಂಪ ಮತ್ತು ರಾಜತ್ವ' ಎಂಬ ಲೇಖನದಲ್ಲಿ ವಿವರವಾಗಿ ಪ್ರಸ್ತಾಪಿತವಾಗಿದೆ). ಆದರೆ ಅದರ ಒಡಲಲ್ಲಿಯೇ ರಾಜತ್ವದ ವಿರುದ್ಧವಾದ ಆಕ್ರೋಶವೂ ಅಡಗಿದೆ, ಅದನ್ನು ಗುರುತಿಸಬೇಕು. ಈ ಆಕ್ರೋಶ ಯಾಕೆ?

ಪಂಪನ ಕಾಲದ ಕನ್ನಡ ನಾಡು, ನನ್ನ ದೃಷ್ಟಿಯಲ್ಲಿ, ಎರಡು ಬಗೆಯ ತೀವ್ರ ತಲ್ಲಣಗಳನ್ನು ಅನುಭವಿಸುತ್ತಲಿತ್ತು; ಹೇಳಿಕೊಳ್ಳಲಾಗದ ಸಂಕಟದ ಉರಿಯನ್ನು ಜನಪದವು ತನ್ನ ಮಡಿಲಲ್ಲಿ ಕಟ್ಟಿಕೊಂಡಿತ್ತು.'ಸೆರಗಿನ ಕೆಂಡ'. ಅವುಗಳೆಂದರೆ ಜಾತಿ ಮತ್ತು ಯುದ್ಧ – ಇವುಗಳು. ಜಾತಿ ಎಂಬುದು ಒಬ್ಬ ವ್ಯಕ್ತಿಯ ಬದುಕನ್ನು

ನಿರ್ಧರಿಸಿಬಿಡುವ ವ್ಯಾಪಕವೂ ಬಲಿಷ್ಠವೂ ಆದ ವ್ಯವಸ್ಥೆ. ವ್ಯಕ್ತಿಯೊಬ್ಬ ಯಾವ ಜಾತಿಯಲ್ಲಿ ಹುಟ್ಟಿದ್ದಾನೆ ಎಂಬುದರ ಮೇಲೆಯೇ ಆ ಕಾಲದ ವ್ಯಕ್ತಿ ಮುಂದೇನಾಗುತ್ತಾನೆ ಎಂಬುದು ನಿರ್ಧರಿತವಾಗುತ್ತಿತ್ತು. ಈಗಿಗಿಂತ ಆಗ ಜಾತಿವ್ಯವಸ್ಥೆ ತೀರ ನಿಷ್ಠುರವಾಗಿತ್ತು. ಕ್ರೂರವಾಗಿತ್ತು. ಹಾಗೆಯೇ ಯುದ್ಧ. ಯುದ್ಧ ನಡೆಯುತ್ತಿದ್ದುದು ಯಾರಿಗಾಗಿ. ರಾಜನ ಸಾಮ್ರಾಜ್ಯವಿಸ್ತರಣೆಗಾಗಿ ತಾನೇ? ಆದರೆ ಯುದ್ಧದಲ್ಲಿ ಪಾಲ್ಗೊಳ್ಳಬೇಕಾದವರು ಸಾಮಾನ್ಯರು, ದೃಢಕಾಯರಾದ ಯುವಕರು. ಯುದ್ಧದ ಗೆಲವು ದೊರೆಯುತ್ತಿದ್ದುದು ರಾಜನಿಗೆ. ಆದರೆ ಗೆದ್ದ ಮತ್ತು ಸೋತ ಎರಡೂ ಕಡೆಯ ಜನಗಳಿಗೆ ಸಿಕ್ಕುವುದು ಬವಣೆ. ಕಟ್ಟಿದ ಬದುಕನ್ನು ಕೆಡಹುವುದು. ಯುದ್ಧಪರಿಣಾಮದ ಬಗೆಗಿನ ಆತಂಕ. ಬಿಟ್ಟಿಯ ಕೆಲಸ. ಸಾವು–ನೋವು. ಆಸ್ತಿಪಾಸ್ತಿಯ ಹಾನಿ, ಮುಂದೆ ಏರಬಹುದಾದ ತೆರಿಗೆಯ ಭೀತಿ – ಇವುಗಳು. ಯಾವ ಕಾಲದಲ್ಲಿಯೂ ಯುದ್ಧ ಅದರ ಫಲಾನುಭವಿಗಳಾದ ಕೆಲವರಿಗೆ ಹೊರತಾಗಿ ಜನಗಳಿಗೆ ಬೇಕಾಗದು. ಜನ ಮೂಲತಃ ಯುದ್ಧವಿರೋಧಿಗಳೇ. ಆದರೆ ತನ್ನ ರಾಜ್ಯದ ಒಡೆಯ ಯುದ್ಧದಲ್ಲಿ ತೊಡಗಿರುವಾಗ ಯಾರಾದರೂ ಅದರ ವಿರುದ್ಧ ಮಾತನಾಡಿದರೆ, ಅದು ರಾಜದ್ರೋಹವಾಗುತ್ತಿತ್ತು, ಹಾಗೆ ಮಾತನಾಡಿದವರು ದಂಡನೆಗೆ ಈಡಾಗಬೇಕಾಗಿತ್ತು. ಹೀಗಾಗಿ ಯುದ್ಧಪರಿಸ್ಥಿತಿಯೆಂದರೆ 'ಅನ್ನಲಾಗದ ಅನುಭವಿಸಲಾಗದ' ಸಂಕಟ. ಯುದ್ಧಕ್ಕೆ ಕಾರಣವಾದ ರಾಜನ ವಿರುದ್ಧ ಎಲ್ಲ ಕಾಲದಲ್ಲಿಯೂ ಸಾಮಾನ್ಯ ಜನತೆ ಹೊಂದುವ ಭಾವನೆ ಆಕ್ರೋಶವೇ. ನಮ್ಮ ನಾಡಿನ ಹತ್ತನೆಯ ಶತಮಾನದ ಸುತ್ತುಮುತ್ತಲ ಪರಿಸ್ಥಿತಿಯನ್ನು ನೋಡಿದರೆ, ಪ್ರಾಯಶಃ ಆಗಿನ ಕಾಲದ ರಾಜರು ನಡೆಸಿದ ಯುದ್ಧಗಳು ಅಸಂಖ್ಯಾತ; ಆರನೆಯ ವಿಕ್ರಮಾರ್ಜುನನೆಂಬ ಚಾಲುಕ್ಯ ಚಕ್ರವರ್ತಿ ಐವತ್ತು ವರ್ಷ ಆಳಿದನಂತೆ, ಆವನ ಆಳ್ವಿಕೆಯ ಅವಧಿಯಲ್ಲಿ ಐವತ್ತು ಯುದ್ಧಗಳನ್ನು ಮಾಡಿದನಂತೆ, ಇವನ ಮೇಲೆ ದಂಡೆತ್ತಿ ಬಂದವರೊಡನೆ, ತಾನೇ ದಂಡೆತ್ತಿ ಹೋಗಿ ಆಕ್ರಮಣ ಮಾಡಿ ಇತರರೊಡನೆ. ಜನರ ಪಾಡು ಏನಾಗಬೇಕು!

ಪಂಪನ 'ವಿಕ್ರಮಾರ್ಜುನವಿಜಯ' ಕಾವ್ಯವು ತನ್ನ ಒಡಲಲ್ಲಿ ಹುದುಗಿಸಿಕೊಂಡಿರುವುದು ಈ ಎರಡು ತಲ್ಲಣಗಳನ್ನೇ. ಕರ್ಣನ ಪ್ರಸಂಗದ ಮೂಲಕ ಕವಿ ಧ್ವನಿಸುತ್ತಿರುವುದು ಒಂದು ಪಾತ್ರದ ದುರಂತವನ್ನು ಮಾತ್ರವಲ್ಲ, ಅದಕ್ಕೆ ಕಾರಣವಾದ ವ್ಯವಸ್ಥೆಯ ದುರಂತದ ಬಗ್ಗೆ. ಕರ್ಣನ ಸಾವಿನ ಸನ್ನಿವೇಶದಲ್ಲಿ ಬರುವ 'ನೆನೆಯದಿರಣ್ಣ ಭಾರತದೊಳಿಂ ಪೆಜರಾರುಮನ್ ಒಂದೆ ಚಿತ್ತದಿಂ ನೆನೆವೊಡೆ ಕರ್ಣನಂ ನೆನೆಯ' ಎಂಬ ಮಾತಿನ ಮೂಲಕ ತನ್ನ'ಸಮಸ್ತ ಭಾರತ' ಕಾವ್ಯದಲ್ಲಿನ ನೆನಪಿನಲ್ಲಿಡಬೇಕಾದ ಅಂಶವೆಂದರೆ ಜಾತಿದುರಂತದ ಪರಿಯನ್ನು ಎಂಬುದನ್ನು ಕವಿ ಸೂಚಿಸುತ್ತಿರುವಂತೆ; ತನ್ನ ಕಾವ್ಯವನ್ನು ಓದಿದ ಮೇಲೆ ಕರ್ಣನ ಸಾವಿಗೆ ಕಾರಣವಾದ ಜಾತಿವ್ಯವಸ್ಥೆಯ ದುರಂತದ ಬಗ್ಗೆ ಓದುಗ ಚಿಂತಿಸಬೇಕೆಂಬ ಆಶಯವೂ ಇರಬಹುದು.

ಮತ್ತೊಂದು ಅಂಶದ ಕಡೆಗೆ ನಮ್ಮ ಗಮನವನ್ನೀಗ ಹರಿಸಬಹುದು. ದ್ರೋಣನ ಸಾವಿನ ನಂತರ ಕರ್ಣನಿಗೆ ಪೀರಪಟ್ಟವನ್ನು ಕಟ್ಟುವ ತನ್ನ ನಿರ್ಧಾರವನ್ನು ದುರ್ಯೋಧನ ಹೇಳಿದಾಗ ಅಶ್ವತ್ಥಾಮನು 'ನಿಜದೊಳ್ ಭೂಪರೆಂಬರ ಪಿವೇಕಿಗಳಪ್ಪರ್' ಎಂದು ಉದ್ಗರಿಸುತ್ತಾನೆ. ಅಂತೆಯೇ, ಪೀರಪಟ್ಟ ಕಟ್ಟಿಸಿಕೊಂಡ ಮೇಲೆ ಕರ್ಣನು ಶರಶಯ್ಯೆಯ ಮೇಲೆ ಕುರುಕ್ಷೇತ್ರದ ಮತ್ತೊಂದು ಮೂಲೆಯಲ್ಲಿ ಮಲಗಿದ್ದ ಭೀಷ್ಮನ ಬಳಿ ಹೋಗಿ ಮುಂದೇನು ಮಾಡಬೇಕೆಂಬ ಬಗ್ಗೆ ಸಲಹೆ ಕೇಳುತ್ತಾನೆ. ಆಗ ಅವನು ಹೇಳುವುದೆಂದರೆ, 'ಎಮಗಿಂಬುಕಯ್ದೊಡಂ ಸುಯೋಧನನ ರಾಜ್ಯಮನೊಲ್ದೊಡಂ ಶಲ್ಯನನೆ ಸಾರಥಿಮಾಡಿ ಕಾದುವುದು' ಎಂದು. ಅದರಂತೆಯೇ ದುರ್ಯೋಧನನು ಕರ್ಣನಿಗೆ ಸಾರಥಿಯಾಗೆಂದು ಕೇಳುವ ಪ್ರಸಂಗ. ಕೀಳು ಕುಲದವನಿಗೆ ಸಾರಥಿಯಾಗೆಂದು ಕೇಳಿದಾಕ್ಷಣವೇ ಸಿಡಿಲಾದ ಶಲ್ಯನು ಆಡುವ ಮಾತುಗಳೆಂದರೆ, 'ಪೊದಳ್ದು ಪರ್ಪಿದಪಿವೇಕತೆಯಿಂ ನೃಪಚಿತ್ತವೃತ್ತಿ ಸಂಚಲಂ ಅದಜೆಂದವೋಲಗಿಸಿ ಬಾಳ್ವುದೆ ಕಷ್ಟಮಿಳಾಧಿನಾಥರಂ' ಮತ್ತು 'ಮದಾನ್ವಿತ ರಾಜಬೀಜಸಂಜನಿತಗುಣಂ ಮದಂ, ಮದಮನಾಳ್ದಪಿವೇಕತೆಯಿಂದಮಲ್ತೆ ತೊಟ್ತಿನ ಮೊಲೆವಾಲನುಂಡ ಗುಣಂ, ಆರ್ ಕಿಡಿಪರ್ ನರೇಂದ್ರರೊಳ್' ಎಂಬಿವು. ಅಶ್ವತ್ಥಾಮ ಮತ್ತು ಶಲ್ಯರ ಮಾತುಗಳು ಅವರ ವೈಯಕ್ತಿಕ ಅಭಿಪ್ರಾಯವನ್ನು ಸೂಚಿಸುತ್ತವೆ ಎಂದು ನನಗನ್ನಿಸುವುದಿಲ್ಲ, ಜನತೆಯು ರಾಜತ್ವದ ಬಗ್ಗೆ ಹೊಂದಿದ ಆಕ್ರೋಶ ಇಲ್ಲಿ ಹೊರಬಂದಿದೆ ಎನ್ನಿಸುತ್ತದೆ. ಈ ಎರಡೂ ಮಾತುಗಳು ಹೊಮ್ಮಿರುವುದು ಯುದ್ಧರಂಗದಲ್ಲಿ, ಯುದ್ಧದ ನಡುವೆ, ರಾಜನ ಎದುರಿಗೆ. ಯಾವಾಗಿನದೋ ಸಿಟ್ಟು ಇನ್ನಾವಾಗಲೋ ಸಿಡಿಯುವಂತೆ ಪಂಪಪ್ರತಿಭೆಯ ಆಳದಲ್ಲಿನ ರಾಜತ್ವವಿರೋಧಿ (ಯುದ್ಧಪಿರೋಧಿ) ಧೋರಣೆ ಈ ಸನ್ನಿವೇಶಗಳಲ್ಲಿ ಹೊಮ್ಮಿದೆ.

ಕವಿಗೆ, ಎರಡು ನೆಲೆಯ ವ್ಯಕ್ತಿತ್ವಗಳು (ಎಲ್ಲರದೂ): ವೈಯಕ್ತಿಕ ನೆಲೆ ಮತ್ತು ಪ್ರಾತಿಭ ನೆಲೆ. ಸಂಗತಿಯೊಂದರ ನಿಜಸ್ವರೂಪವನ್ನು ವ್ಯಕ್ತ್ಯತೀತ ನೆಲೆಯಲ್ಲಿ ಕಂಡುಕೊಳ್ಳುವ ಗುಣವೇ ಪ್ರತಿಭೆ ಎನ್ನುವುದಾದರೆ, ಕವಿ ವೈಯಕ್ತಿಕ ನೆಲೆಯಲ್ಲಿ ನಡೆದುಕೊಳ್ಳುವುದಕ್ಕಿಂತ ಅವನ ಈ ವ್ಯಕ್ತ್ಯತೀತ ನೆಲೆಯಲ್ಲಿನ ಕಾಣ್ಕೆ ಭಿನ್ನವಾದುದಾಗಿರುತ್ತದೆ ಎನ್ನಬಹುದು. ಹೀಗಾಗಿ ವ್ಯಕ್ತಿಯಾಗಿ ಪಂಪನಿಗೆ ರಾಜತ್ವದ ಬಗ್ಗೆ ಅಕ್ಕರೆಯಿರಬಹುದಾದರೂ, ಅವನ ಪ್ರಾತಿಭ ದೃಷ್ಟಿಗೆ ಅದರ ಕ್ರೌರ್ಯ ಸ್ಪಷ್ಟವಾಗುತ್ತದೆ. ಸಮರ್ಥ ಕವಿಯೊಬ್ಬನ ಕೃತಿಯು ಕವಿಕಾಲದ ಸುತ್ತಲ ವಾಸ್ತವವನ್ನು ಕಟ್ಟಿಕೊಡುತ್ತಲೇ ಅದು ಇರಬೇಕಾದ ಬಗೆಯನ್ನೂ ಒಳಗೊಳ್ಳುತ್ತದೆ; ಇದನ್ನೇ ಸದ್ಯ ಮತ್ತು ಶಾಶ್ವತ ಎಂಬ ಮಾತುಗಳ ಮೂಲಕ ಕೆಲವರು ಸೂಚಿಸುವುದು. ಕಣ್ಣಿಗೆ ಕಾಣುವುದರ ಪಿವರಗಳ ಮೂಲಕ ಅದು ಬದಲುಗೊಳ್ಳಬೇಕಾದ ರೀತಿಯನ್ನು ಉತ್ತಮ ಕಾವ್ಯ ಧ್ವನಿಸುತ್ತದೆ.

ಪಂಪನ ಮತ್ತು ಅವನಂತಹ ಕಪಿಗಳ ವೈಶಿಷ್ಟ್ಯ ಇರುವುದು ಇಲ್ಲಿಯೇ. ವ್ಯಾಸನ ಕತೆಯನ್ನಾರಿಸಿಕೊಂಡರೂ ಮಹಾಭಾರತವನ್ನವನು ಮೂಲದಲ್ಲಿದ್ದಂತೆಯೇ

ಸ್ವೀಕರಿಸಲಿಲ್ಲ. ಸನ್ನಿವೇಶ ಪಾತ್ರಸ್ವರೂಪಗಳಂತಹ ಅಂಶಗಳಲ್ಲಿ ವ್ಯತ್ಯಾಸಗಳನ್ನು ಮಾತ್ರವೇ ಮಾಡಿಕೊಳ್ಳದೆ, ತನ್ನ ಕಾವ್ಯಗಳಲ್ಲಿ ತನ್ನ ಕಾಲದ ತಲ್ಲಣಗಳನ್ನೂ ಒಳಗೊಂಡು ನಿಜವಾದ ಜನಮಾನಸದ ಆಳದಲ್ಲಿನ ಅನಿಸಿಕೆಯನ್ನು ಹುದುಗಿಸಿದ್ದಾನೆ. ಇದನ್ನೇ ಕೆಲವರು ಪಂಪನ'ಸಮಸ್ತಭಾರತ'ದ ಪರಿಕಲ್ಪನೆ ಎಂದು ಹೇಳುತ್ತಾರೆ, ಇರಬಹುದು. ಆದರೆ ನಾನು ಇದನ್ನೇ 'ದೇಸಿ' ಎನ್ನುತ್ತೇನೆ, ಆದರೆ ಇಷ್ಟು ಮಾತ್ರವೇ ಅಲ್ಲ. ಭಾಷೆ, ಸಂಸ್ಕೃತ ಮಾದರಿಯ ಕಾವ್ಯವಸ್ತು ಮತ್ತು ಆಕಾರಗಳ ನಡುವೆ ಕನ್ನಡದ ಸತ್ವವನ್ನು ಪ್ರಕಟಿಸುವ ಬಗೆ, ಮಾತಿನ ಬಳಕೆಯ ಪರಿ, ಕನ್ನಡದ್ದಲ್ಲದ ಅಕ್ಷರ ಛಂದಸ್ಸಿಗೆ ಅಚ್ಚಗನ್ನಡವನ್ನು ಒಗ್ಗಿಸುವ ಬಗೆ, ಕನಕಸ್ವಾಮಿಯ ಪ್ರಸಂಗದಂತಹ ಸನ್ನಿವೇಶಗಳಲ್ಲಿ ಸೇರಿಸಿರುವ ಜಾನಪದ ಸಂಸ್ಕೃತಿ ವಿವರಗಳು ಮತ್ತು, ಎಲ್ಲಕ್ಕಿಂತ ಮಿಗಿಲಾಗಿ, ತನ್ನ ಕಾಲದ ಜನರ ತಲ್ಲಣಗಳು ತವಕಗಳು, ಭಾವನೆ–ನಂಬಿಕೆಗಳು, ನೋವು ನಲಿವುಗಳು, ಆಸೆ ಆಕಾಂಕ್ಷೆಗಳು ಇವೆಲ್ಲ ಒಗ್ಗೂಡಿ 'ದೇಸಿ'ಯಾಗುತ್ತದೆ ಎಂದು ನನ್ನ ಭಾವನೆ. 'ಆದಿಪುರಾಣ'ದಲ್ಲಿ ಒಂದು ಮತಧರ್ಮದವರ ಆರಾಧ್ಯ ವ್ಯಕ್ತಿತ್ವದ ಚಿತ್ರಣವನ್ನು ಜೈನೀಯ ಪರಿಭಾಷೆಯ ಮೂಲಕವೂ ಅದರ ಚೌಕಟ್ಟಿನ ಪರಿಧಿಯಲ್ಲಿಯೂ ಮಾಡುತ್ತಲೇ, ಜೀವನ ಪಾವನವಾಗುವುದು ಹೇಗೆ, ನೀರು ತೀರ್ಥವಾಗುವುದು ಹೇಗೆ, ವ್ಯಕ್ತಿಯ ಬದುಕಿನ ಸಾರ್ಥಕತೆ ಎಲ್ಲಿ ಎಂಬುದರ ಬಗ್ಗೆ ಧ್ಯಾನಿಸಿದ್ದರೆ (ಆ ಕಾರಣದಿಂದಲೇ ಅದು ಧಾರ್ಮಿಕ, ಏಕೆಂದರೆ ಧಾರ್ಮಿಕತೆ ಎಂಬುದು ವೈಯಕ್ತಿಕ ಸಾರ್ಥಕತೆಯ ತುರ್ತೇ ವಿನಾ ಸಾಮೂಹಿಕ ಕ್ರಿಯೆಯಲ್ಲ), 'ವಿಕ್ರಮಾರ್ಜುನವಿಜಯ'ವು ತನ್ನ ಕಾಲದ ಸಾಮಾಜಿಕ ನಂಬಿಕೆಗಳು, ವಾಸ್ತವಗಳು ಇವುಗಳ ಸ್ವರೂಪದ ವಿವರಗಳ ನಡುವೆಯೇ ಒಡಲಾಳದ ಸಂವೇದನೆಯನ್ನು ಒಳಗೊಳ್ಳುತ್ತದೆ. ಮಾನವನ ಬದುಕೆಂದರೆ ಎರಡು ನೆಲೆಯದು: ಆಂತರಿಕ ಬದುಕು, ಮತ್ತು ಸಾಮಾಜಿಕ ಬದುಕು; ವ್ಯಕ್ತಿಯ ಆಶೋತ್ತರಗಳು ಮತ್ತು ಸಾಮಾಜಿಕ ಹೊಣೆಗಾರಿಕೆಗಳು. ಪಂಪನ ಈ ಎರಡು ಕಾವ್ಯಗಳು ಮಾನವ ಬದುಕಿನ ಎರಡು ಮುಖ್ಯ ನೆಲೆಗಳನ್ನು ಕುರಿತ ಪ್ರಾತಿಭ ಕಾಣ್ಕೆಯ ಫಲ. ಎಲ್ಲ ಕಾಲದ ಮಾನವ ಬದುಕಿನ ಪರಿಯೂ ಇದೇ ಆದುದರಿಂದ, ಆಯಾ ಕಾಲಕ್ಕೆ ಅನುಗುಣವಾಗಿ ಓದುಗರಿಗೆ ಇಂತಹ ಕಾವ್ಯಗಳು ಓದುಗರಲ್ಲಿ ಅರಳುತ್ತ, ಪ್ರಸ್ತುತವಾಗುತ್ತವೆ. ಹೀಗಾಗಿಯೇ ಈ ಕಾವ್ಯಗಳು ಒಂದು ಸಾವಿರದ ಎಪ್ಪತ್ತು ವರ್ಷಗಳ ತಮ್ಮ ಇರುವಿಕೆಯಲ್ಲಿ ಎಲ್ಲ ಕಾಲದ ಕಾವ್ಯಾಸಕ್ತರ ಹೃದಯವನ್ನು ಗೆಲ್ಲಲು ಸಾಧ್ಯವಾಗಿದೆ.

[ಅಂದರೆ, ಪಂಪನ ಕಾವ್ಯಗಳ ಶ್ರೇಷ್ಠತೆಯಿರುವುದು ಅದರ ಹೂರಣದಲ್ಲಿ. ಕನ್ನಡಿಗರ ಬದುಕಿನ ಸಂವೇದನೆ ಎಲ್ಲಕಾಲಕ್ಕೂ ಒಂದೇ, ತನ್ನದೇ ವಿಶಿಷ್ಟ ರೂಪದ್ದು. ಇದೇ 'ಕನ್ನಡತನ', ಅಂದರೆ ಕನ್ನಡಿಗರು ಬದುಕನ್ನು ಗ್ರಹಿಸಿಕೊಳ್ಳುವ ಕ್ರಮ. ಪ್ರಾಯಶಃ ಅದೇ ದೇಸಿ. ಪಂಪ ತನ್ನ ಕಾವ್ಯದ ವೈಶಿಷ್ಟ್ಯವೆಂದರೆ 'ದೇಸಿ' ಎಂದು ಹೇಳಿಕೊಳ್ಳುವವುದರ ಹಿಂದೆ ಈ ಮನೋಭಾವವಿರಬಹುದು. ಇದನ್ನು ಮುಂದಿನ ಕವಿಗಳೂ ಮೆಚ್ಚಿಕೊಂಡಿದ್ದಾರೆ; 'ಪಂಪನ ದೇಸಿ' ಎನ್ನುವುದು ಒಂದು

ನುಡಿಗಟ್ಟಾಗಿಬಿಟ್ಟಿದೆ. ಅಷ್ಟು ಮಾತ್ರವಲ್ಲ, ಪಂಪ ಯಾವುದೇ ಅಭಿವ್ಯಕ್ತಿವಿಧಾನದಲ್ಲಿ ಅಂತರ್ವಾಹಿನಿ ಯಾಗಿರಬೇಕಾದುದು ದೇಸಿಯೇ ಎಂಬ ಅಭಿಪ್ರಾಯದವಾಗಿ ಕಾಣುತ್ತಾನೆ. ಆದ್ದರಿಂದಲೇ 'ಬಗೆ ಪೊಸತಪ್ಪುದಾಗಿ ದೇಸಿಯೊಳ್ ಪುಗುವುದು, ಪೊಕ್ಕ ಮಾರ್ಗದೊಳೆ ತಳ್ವುದು' ಎನ್ನುವುದು. ಇಲ್ಲಿ 'ಬಗೆ ಪೊಸತಪ್ಪುದಾಗಿ' ಎಂಬ ಮಾತು 'ಆದಿಪುರಾಣ'ದ 'ಇದು ನಿಚ್ಚಂ ಪೊಸತು ಅರ್ಣವಂಬೊಳ್ ಅತಿ ಗಂಭೀರಂ ಕಪಿತ್ವಂ' ಎಂಬ ವಾಕ್ಯವನ್ನು ನೆನಪಿಸುತ್ತದೆ. ಹೊಸತಾಗುವುದೆಂದರೆ ಅಪರಿಮಿತ ದೃಷ್ಟಿಕೋನಗಳಿಗೆ ಅನ್ವಯಿಸಬಹುದಾದುದು, ಪ್ರತಿ ಓದುಗನಿಗೂ ಪ್ರತಿ ಪೀಳಿಗೆಗೂ ಪ್ರಸ್ತುತವಾಗಿ ಕಾಣುವುದು ಎಂದರ್ಥ. ಕನ್ನಡ ಕಾವ್ಯ ಹೀಗಾಗಬೇಕಾದರೆ ಅದರ ಒಡಲಲ್ಲಿ 'ದೇಸಿ' ಅಥವಾ 'ಕನ್ನಡತನ' ಹುದುಗಿರಬೇಕು. ಇದು ಎಲ್ಲ ಕಾಲದ ಎಲ್ಲ ಬಗೆಯ ಕನ್ನಡ ಸಾಹಿತ್ಯದ ಮಾಗದರ್ಶಿ ಅಂಶ. ಇದನ್ನು ಮುಂದಿನ ಕನ್ನಡ ಕಾವ್ಯ ಪರಂಪರೆ ಒಪ್ಪಿದೆ. ಅದಕ್ಕಾಗಿಯೇ ಪಂಪ ಸಾವಿರ ವರ್ಷದ ಸರದಾರನಾಗಿದ್ದಾನೆ. ನಾಗರಾಜನೆಂಬ ಒಬ್ಬ ಹಿಂದಿನ ಕವಿಯಂತೂ 'ಪಸರಿಪ ಕನ್ನಡಕ್ಕೊಡೆಯನೊರ್ವನೆ ಸತ್ಕವಿ ಪಂಪನಾವಗಂ' ಎಂದು ಉದ್ಗರಿಸಿದ್ದಾನೆ. ಇವತ್ತೂ ಕನ್ನಡ ಸಾಹಿತ್ಯ ಜನಸಂವೇದನೆಗೆ ಮಿಡಿಯುವುದನ್ನು ತನ್ನ ಆದರ್ಶವಾಗಿ ಸ್ವೀಕರಿಸಿದೆ. ಆ ಕಾರಣಕ್ಕಾಗಿ ಪಂಪ 'ಆದಿಕವಿ'ಯಾಗಿದ್ದಾನೆ, ಅವನ ಕಾವ್ಯಗಳು ಇಂತಹವಲ್ಲದ ರಚನೆಗಳನ್ನು 'ಇಕ್ಕಿ ಮೆಟ್ಟಿವೆ'.]

## ೩

ಬದುಕಿನ ಸಾಫಲ್ಯದ ಬಗ್ಗೆ, ಜೀವನ ಸಾರ್ಥಕತೆಯ ಬಗ್ಗೆ ನಾವು ಮಾತನಾಡುತ್ತೇವೆ. ಪ್ರಾಕೃತಿಕ ಜೈವಿಕ ಕ್ರಿಯೆಯಾದ ಸಂತಾನಾಭಿವೃದ್ಧಿಯಲ್ಲದೆ ನಮ್ಮ, ಅಂದರೆ ಮಾನವನ ಬದುಕಿನ ಗುರಿಯೇನು ಅಥವಾ ಅದಕ್ಕೊಂದು ಗುರಿ ಇದೆಯೇ? ಗುರಿ ಎಂಬುದು ಇರುವುದು ನಿಶ್ಚಿತವಾದರೆ ಅದರ ಸ್ವರೂಪವೇನು? ಅಂಥ ಗುರಿ ಮಾನವನ ಬಾಳಿಗೆ ಮಾತ್ರ ಅನ್ವಯಿಸುವಂಥದೇ ಅಥವಾ ಮಿಕ್ಕ ಜೀವಜಾತಿಗಳಿಗೂ ಗುರಿ ಎಂಬುದಿದೆಯೇ – ಇಂಥ ಪ್ರಶ್ನೆಗಳ ಮಾಲೆಯು ಅನಾದಿ ಕಾಲದಿಂದಲೂ ಮಾನವನನ್ನು ಕಾಡುತ್ತಲೇ ಬಂದಿದೆ. ಇತರ ಪ್ರಾಣಿಗಳ ಬಗ್ಗೆ ನಾವೇನೂ ಹೇಳಲಾರೆವು, ಆ ಬಗ್ಗೆ ಹೇಳುವುದಾದರೆ ಆಯಾ ಪ್ರಾಣಿಗಳೇ ಹೇಳಬೇಕು. ಹೀಗಾಗಿ ನಾವು ಮಾನವ ಕುಲದ ಗುರಿಯ ಬಗ್ಗೆ ಮಾತ್ರ ಆಲೋಚನೆ ಮಾಡಬಹುದೇನೋ? ಆಲೋಚನೆ ಎಂದೆ, ಇರುವುದೆಲ್ಲ ನಮ್ಮ 'ದೃಷ್ಟಿ'ಯಲ್ಲಿ ಇರುವುವು, ನಮ್ಮ ಅನಿಸಿಕೆಯ ಹೊರತಾಗಿ ಅದು ಇದೆಯೋ ಇಲ್ಲವೋ ಪತ್ತೆ ಹಚ್ಚುವುದು ಹೇಗೆ. ಆಲೋಚನೆ ಇಲ್ಲದಿದ್ದರೆ ಇರುವಿಕೆಯೂ ಇಲ್ಲ. 'Cogito, ergo sum' ಅಂದರೆ ನಾನು ಯೋಚಿಸುತ್ತೇನೆ, ಆದ್ದರಿಂದ, ನಾನು ಇದ್ದೇನೆ ಎಂದು ಡೆಕಾರ್ಟ್ ಹೇಳಿದನಂತೆ. ಎಲ್ಲ ಇರುವಿಕೆಯೂ ನಮ್ಮ ಆಲೋಚನೆಯಿಂದ

ಹುಟ್ಟಿದಂಥವೇ ಎನ್ನಬಹುದೇನೋ. ಆದ್ದರಿಂದ ಮಾನವ ಬದುಕಿನ ಗುರಿಯೂ ನಮ್ಮ ಆಲೋಚನೆಯ ಫಲವೇ. ಅಲ್ಲದೆ ಎಲ್ಲರೂ ಒಂದೇ ಬಗೆಯಲ್ಲಿ ಈ ಗುರಿಯನ್ನು ನಿರ್ದೇಶಿಸುವುದಿಲ್ಲ, ಅಥವಾ ಎಲ್ಲ ಮಾನವರ ಆದರ್ಶವೂ ಒಂದೇ ರೂಪದ್ದಲ್ಲ, ಏಕೆಂದರೆ ಇಡೀ ಮಾನವ ಕುಲದ ಆದರ್ಶ ಇಂಥದು ಎಂದು ಎಲ್ಲರ ಪರವಾಗಿ ಯಾರೋ ಒಬ್ಬ ಹೇಗೆ ನಿರ್ಧರಿಸಬಲ್ಲ? ಹಾಗೆಂದು ಎಷ್ಟು ಜನರಿದ್ದಾರೆಯೋ ಅಷ್ಟೊಂದು ಗುರಿಗಳಿರುವಂತೆ ನಮಗೆ ಕಾಣುವುದಿಲ್ಲ. ಯಾಕೆಂದರೆ ಎಲ್ಲರೂ ಆಲೋಚಿಸುವುದಿಲ್ಲವಲ್ಲ, ಅಥವಾ ಈ ಕುರಿತು ಆಲೋಚನೆ ಮಾಡಲಾರರೇನೋ. ಹಾಗಾಗಿ ಯಾವನೋ ಆಳವಾಗಿ ಚಿಂತಿಸಿ ಒಂದು ನಿರ್ಧಾರಕ್ಕೆ ಬಂದು 'ಇದು ಮಾನವನ ಗುರಿ' ಎಂದು ಹೇಳಿ ಅದನ್ನು ಇತರರ ಬಳಿ ವಿವರಿಸಿದಾಗ ಅನೇಕರು ಅದರ ತಾರ್ಕಿಕತೆಯಿಂದಲೋ, ರೋಚಕತೆಯಿಂದಲೋ, ಅದು ನೀಡಬಹುದಾದ ಭರವಸೆಯಿಂದಲೋ ಪ್ರಭಾವಿತರಾಗಿ 'ಹೌದು. ಇದು ನಮ್ಮ ಆದರ್ಶ, ಇದನ್ನು ಸಾಧಿಸುವುದು ನಮ್ಮ ಬಾಳಿನ ಗುರಿ' ಎಂದು ಒಪ್ಪಬಹುದು. ಇಂಥ ಪ್ರಭಾವಶಾಲಿಗಳಾದ ಅನೇಕ ಚಿಂತಕರು ಬಂದು ಹೋಗಿರುವುದರಿಂದ ವಿವಿಧ ಬಣದವರಿಗೆ ವಿಭಿನ್ನ ಗುರಿಗಳು ಇರುವಂತೆ ನಂಬುತ್ತೇವೆ. ಜೀವನದ ಆತ್ಯಂತಿಕ ಗುರಿ ಯಾವುದು, ನಾವು ತಲುಪಬೇಕಾದ ಬಿಂದು ಯಾವುದು ಎಂದರೆ ಒಬ್ಬರು, ಮೋಕ್ಷ ಎನ್ನಬಹುದು, ಮತ್ತೊಬ್ಬರು, ನಿರ್ವಾಣ ಎನ್ನಬಹುದು, ಮಗುದೊಬ್ಬರು ಪ್ರಪತ್ತಿ ಎನ್ನಬಹುದು, ಇನ್ನೂ ಒಬ್ಬರು ಸಾಮರಸ್ಯ ಎನ್ನಬಹುದು. ಇಂಥ ಗುರಿಗಳನ್ನು ನಾವು ತಲುಪಬೇಕಾಗಿರುವುದು ಇಲ್ಲಿ ಬದುಕಿರುವಾಗಲೋ ಅಥವಾ ತೀರಿದ ಬಳಿಕವೋ ಎಂಬುದೂ ನಮ್ಮ ಮುಂದೆ ಏಳುವ ಪ್ರಶ್ನೆ. ಇಲ್ಲಿಯೇ ಇದನ್ನು ಸಾಧಿಸಬಹುದಾದರೆ, ಅದನ್ನು ತಲುಪಿದ್ದೇವೆ ಎಂದು ತೀರ್ಪು ಕೊಡುವವರು ಯಾರು? ಅಥವಾ ತೀರಿದ ಮೇಲೆ ಅದನ್ನು ತಲುಪಬಹುದೇ ಹೊರತು ಇರುವಾಗಲಲ್ಲ, ಬದುಕಿರುವಾಗ ಆ ಗುರಿ ತಲುಪಲು ಸಾಧನೆ ಮಾಡಬೇಕು ಎಂದು ಹೇಳಿದರೆ, ಅದನ್ನು ಒಬ್ಬ ಅಥವಾ ಒಂದು ಚೇತನ ತಲುಪಿದೆಯೋ ಇಲ್ಲವೋ ಎಂದು ನಿರ್ಧರಿಸುವುದು ಹೇಗೆ? ಆ ಬಗ್ಗೆ ಖಚಿತವಾಗಿ ನಮಗೆ ತಿಳಿವಳಿಕೆಯನ್ನು ಯಾರು ಕೊಡಬೇಕು? ಬರೀ ಪ್ರಶ್ನೆಗಳು, ಪ್ರಾಯಶಃ ಬದುಕಿನ ಬಹು ಪ್ರಮುಖವಾದ ವಿಷಯಗಳಿಗೆ ಸಂಬಂಧಿಸಿದಂತೆ ಪ್ರಶ್ನೆಗಳು ಮಾತ್ರ ಸಾಧ್ಯ, ಉತ್ತರ ನಮ್ಮ ಆಲೋಚನೆಗೆ ತಕ್ಕಂತೆ.

ಭಕ್ತಿ ಅಥವಾ ನಂಬಿಕೆಯೇ ಇವೆಲ್ಲ ಪ್ರಶ್ನೆಗಳನ್ನು ನಿವಾರಿಸಿಕೊಳ್ಳಲು ಭಾವುಕರು ಕಂಡುಕೊಂಡ ಮಾರ್ಗ. ಅದೇ ಎಲ್ಲ 'ಸಾಧನೆ'ಯ ನೆಲೆಗಟ್ಟು, ಅದಿಲ್ಲದಿದ್ದಲ್ಲಿ ಈ ಪರಿಯ ಗುರಿ ಎಂಬುದು ಇರಲು ಸಾಧ್ಯವಿಲ್ಲ. ಮಾನವನ ಬಾಳಿಗೆ ಗುರಿಯೊಂದಿದೆಯೆಂದು ಹೇಳುವವರೆಲ್ಲರಲ್ಲಿಯೂ ಆಯಾ ಗುರಿಯ ಬಗೆಗಿನ ನಂಬಿಕೆ ಸಮಾನ: ಆದರೆ ಬಾಳಿನ ಗುರಿ ಯಾವುದು ಎಂಬ ಬಗೆಗಿನ ತಿಳಿವಳಿಕೆಯ ವಿಭಿನ್ನತೆಯ ಕಾರಣದಿಂದ ಬೇರೆ ಬೇರೆ ಪಂಥಗಳವರು ಬೇರೆ ಬೇರೆ ಬಗೆಯಾಗಿ ಬದುಕಿನ ಗುರಿಯನ್ನು ಗುರುತಿಸುತ್ತಾರೆ.

ಈ ತಾತ್ವಿಕತೆಯ ಹಿನ್ನೆಲೆಯಲ್ಲಿ ನಾನು ಪಂಪನ 'ಆದಿಪುರಾಣ'ದ ಬಗ್ಗೆ ಪ್ರಸ್ತಾಪಿಸುತ್ತೇನೆ. ಪಂಪನ ಕಾಲ ಕ್ರಿ.ಶ. ಹತ್ತನೆಯ ಶತಮಾನ; ಕನಿಷ್ಠ ಪಕ್ಷ, ಕನ್ನಡ ನಾಡಿನ ಮಟ್ಟಿಗೆ, ನಂಬಿಕೆಗಳ ಪಲ್ಲಟದ ಕಾಲವೇನೋ. ಅದರಿಂದಾಗಿಯೇ ಪಂಪನ ತಂದೆ ಭೀಮಪಯ್ಯ ಬ್ರಾಹ್ಮಣನಾಗಿದ್ದವನು ಜೈನ ಮತಾವಲಂಬಿಯಾದ. ಪಂಪ ತನ್ನ ಸುಮಾರು ಮೂವತ್ತೊಂಬತ್ತು–ನಲವತ್ತರ ಪ್ರಾಯದಲ್ಲಿ ಮೊದಲ ಕಾವ್ಯವಾದ 'ಆದಿಪುರಾಣ'ವನ್ನು ಬರೆದ. ಅವನು ಆರಿಸಿಕೊಂಡದ್ದು ಇಪ್ಪತ್ತನಾಲ್ಕು ಮಂದಿ ತೀರ್ಥಂಕರರಲ್ಲಿ ಮೊದಲನೆಯವನಾದ ಆದಿದೇವ ಅಥವಾ ವೃಷಭನಾಥನ ಕಥಾನಕವನ್ನು. ಜೈನರಲ್ಲಿ ದೇವರ ಬಗ್ಗೆ ಶ್ರದ್ಧೆಯಿಲ್ಲ, ಸಾಧನೆಯಿಂದ ಆದರ್ಶವನ್ನು ತಲುಪಿದ ತೀರ್ಥಂಕರರು ಅವರಿಗೆ ಪೂಜ್ಯರು. ತೀರ್ಥಂಕರ ಎಂದರೆ ಬದುಕನ್ನು ಪವಿತ್ರ ತೀರ್ಥವನ್ನಾಗಿ ಮಾಡಿಕೊಂಡವನು. ದೇಹ ಮತ್ತು ಮನಸ್ಸುಗಳನ್ನು ಶುಭ್ರಗೊಳಿಸಿ ಬಾಳನ್ನು ಉನ್ನತಿಗೇರಿಸಿಕೊಂಡವನು. ಅಂತಹವನ ಬಗ್ಗೆ ತನ್ನ ಕಾವ್ಯವಿದ್ದರೂ ಪಂಪ ಮೂಲತಃ ಒಬ್ಬ ಕವಿ, ಹೀಗಾಗಿ ಅವನು ಈ ಕಾವ್ಯವನ್ನು ರಚಿಸಿದ್ದು ಇಬ್ಬಗೆಯ ಗುರಿಗಳ ಸಾಧನೆಗಾಗಿ. ಅವನೇ ಹೇಳಿಕೊಳ್ಳುತ್ತಾನೆ

**ಇದುವೆ ಸುಕವಿಪ್ರಮೋದ**
**ಪ್ರದಂ ಇದುವೆ ಸಮಸ್ತ ಭವ್ಯಲೋಪ್ರಮುದ**
**ಪ್ರದಂ ಎನೆ ನೆಗಟ್ದಿ ಆದಿಪುರಾ**
**ಣದೊಳ್ ಅಜಿವುದು ಕಾವ್ಯಧರ್ಮಮಂ ಧರ್ಮಮುಮಂ**

ಎಂದು. ತನ್ನ ರಚನೆಯು ಕವಿಹೃದಯದ ಜನರಿಗೂ ಭವ್ಯಜನ ಅಂದರೆ ಜೈನರಿಗೂ ಸಂತೋಷ ತರುತ್ತದೆ ಎಂಬುವುದು ಅವನ ವಿಶ್ವಾಸ. ಪಂಪನದೇ ಆಯ್ಕೆಯೆಂದರೆ, ತನ್ನ ಕಾವ್ಯವು ಹವಿಹೃದಯದವರಿಗೆ ಸಂತೋಷವುಂಟುಮಾಡವುದು ಮೊದಲ ಗುರಿ, ಜೈನರಿಗೆ ಸಂತೋಷಕರವಾಗಬೇಕಾದುದಕ್ಕೆ ಎರಡನೆಯ ಸ್ಥಾನ. ಏಕೆಂದರೆ ತನ್ನ ಕಾವ್ಯದಲ್ಲಿ ಓದುಗರು ಅರಿಯಬೇಕಾದುದು ಕಾವ್ಯಧರ್ಮವನ್ನು, ಜೊತೆಗೆ ಧರ್ಮವನ್ನೂ. ಆದರೆ ಈ ಎರಡರ ನಡುವಣ ವ್ಯತ್ಯಾಸವೇನು ಎಂಬುದನ್ನು ಕವಿ ಸ್ಪಷ್ಟಪಡಿಸುವುದಿಲ್ಲ. ಆದರೆ ನಾವು ಅದನ್ನು ಅರ್ಥವಿಸಬೇಕಾಗುತ್ತದೆ; ಇಲ್ಲದಿದ್ದರೆ ಕವಿಯ ಆಶಯವನ್ನು ತಿಳಿಯಲು ಸಾಧ್ಯವಿಲ್ಲ. ತೀರ್ಥಂಕರನ ಚರಿತೆಯನ್ನು ಜೈನಮತದ ಚೌಕಟ್ಟು ಮತ್ತು ಪರಿಭಾಷೆಯ ಹಿನ್ನೆಲೆಯಲ್ಲಿ ನಿರೂಪಿಸಿದ್ದರೂ, ಅದು ಮತಧರ್ಮಾತೀತವಾಗಿ ಎಲ್ಲ ಕವಿಮನೋಭಾವದವರಿಗೆ ಸಂತೋಷ ತರಬೇಕು ಎಂಬುದು ಕವಿಯ ಆಶಯ. ಹಾಗಾದರೆ ಕಾವ್ಯಧರ್ಮ ಎಂದರೇನು? ಇದೂ ವ್ಯಾಖ್ಯಾನಕ್ಕೆ ಬಿಟ್ಟ ವಿಚಾರ. ಹಾಗಾಗಿ ಅದಕ್ಕೆ ನನ್ನದೇ ಅರ್ಥವನ್ನು ನೀಡಿ ಮುಂದುವರಿಯಬೇಕು. ನನ್ನ ಪ್ರಕಾರ, ಬದುಕಿನ ನಿಗೂಢಗಳನ್ನು ವೈಯಕ್ತಿಕ ಅನುಭವದ ಮೂಲಕ ಶೋಧಿಸುವುದೇ ಕಾವ್ಯದ ಕೆಲಸ. ಹಾಗಾಗಿ ಬದುಕು ಒಂದೆಡೆ ಜೈನಮತದ ಪಾರಂಪರಿಕ ಕಲ್ಪನೆಯ ಪ್ರಕಾರ ಹೇಗೆ ಸಾರ್ಥಕವಾಗುತ್ತದೆ ಎಂಬುದನ್ನು ಹೇಳುವುದರ ಜೊತೆಗೆ, ಎಲ್ಲ ಮಾನವರಿಗೂ ಅನ್ವಯಿಸುವಂತೆ

ಬದುಕಿನ ಸಾರ್ಥಕ್ಯದ ಸ್ವರೂಪವೇನು ಎಂಬುದನ್ನು ತನ್ನ ತಿಳಿವಳಿಕೆ ಮತ್ತು ಅನುಭವಗಳ ಹಿನ್ನೆಲೆಯಲ್ಲಿ ಶೋಧಿಸುವುದು ಈ ರಚನೆಯ ಹಿಂದಿರುವ ಕವಿಯ ಮೂಲ ಆಶಯ.

'ಆದಿಪುರಾಣ'ದಲ್ಲಿ ಮೂರು ಭಾಗಗಳಿವೆ: ನಡುವಿನದು ತೀರ್ಥಂಕರ ಜನ್ಮದ ಕಥಾನಕ; ಅದು ಜೈನಕಲ್ಪನೆಯಂತೆ ಗರ್ಭಾವತರಣ, ಜನನ, ಪರಿನಿಷ್ಕ್ರಮಣ, ಕೇವಲಜ್ಞಾನ ಮತ್ತು ಪರಿನಿರ್ವಾಣಗಳೆಂಬ ಐದು ಹಂತಗಳ ಮೂಲಕ (ಇದನ್ನು'ಪಂಚಕಲ್ಯಾಣ'ಗಳೆಂದು ಕರೆಯುತ್ತಾರೆ) ನಿರೂಪಿತವಾಗಿದ್ದರೆ; ಮೊದಲಿನ ಭಾಗ ಅವನ ಹಿಂದಿನ ಹತ್ತು ಜನ್ಮಗಳ ಅಥವಾ ಭವಾವಳಿಯ ಕತೆ; ಮೂರನೆಯದು, ಅವನ ಮುಂದಿನ ಪೀಳಿಗೆಯಾದ ಅವನ ಮಕ್ಕಳ ಕತೆ. ಈ ಮೂಲಕ ಇಡೀ ಕಥಾನಕಕ್ಕೆ ಒಂದು ಏಕಕೇಂದ್ರ ಲಭ್ಯವಾಗುತ್ತದೆ. ಎಲ್ಲವನ್ನೂ ಒಟ್ಟಾರೆ ಪರಿಭಾವಿಸಿದಾಗ, ಇಲ್ಲಿನ ಜನ್ಮಾಂತರದ ಕತೆಗಳು ಒಬ್ಬನೇ ವ್ಯಕ್ತಿಯ ಬೆಳವಣಿಗೆಯ ವಿವಿಧ ಹಂತಗಳನ್ನು ಸೂಚಿಸುತ್ತದೆ, ಅವನ ಮಕ್ಕಳ ಕತೆ ಅವನ ವ್ಯಕ್ತಿತ್ವದ ಮತ್ತೊಂದು ವಲಯದ ಅಭಿವ್ಯಕ್ತಿಯಾಗುತ್ತದೆ. ಹೀಗಾಗಿ ಇದು ವ್ಯಕ್ತಿತ್ವವಿಕಾಸದ ಕತೆ. ಋಷಭನಾಥನಿಗೆ ನೇರವಾಗಿ ಸಂಬಂಧಿಸಿದ ಮೊದಲೆರಡು ಭಾಗಗಳು ಭೋಗನಿರಸನವನ್ನೂ, ಅವನ ಮಕ್ಕಳಿಗೆ ಸಂಬಂಧಿಸಿದ ಮೂರನೆಯ ಭಾಗವು ಅಹಂಕಾರನಿರಸನವನ್ನೂ ಸೂಚಿಸುತ್ತದೆ ಎಂದು ವಿಮರ್ಶಕರು ಈಗಾಗಲೇ ಗುರುತಿಸಿದ್ದಾರೆ. ಅದು ಸರಿಯೇ. ವ್ಯಕ್ತಿಯ ವ್ಯಕ್ತಿತ್ವದ ವಿಕಸನ ಎಂದರೆ ಭೋಗ–ಅಹಂಕಾರಗಳನ್ನು ದೂರೀಕರಿಸುವುದೇ ಆಗಿದೆ. ಹಾಗೆ ಸಂಪೂರ್ಣವಾಗಿ ಮಾಡುವುದರ ಮೂಲಕವಾಗಿಯೇ ತೀರ್ಥಂಕರ ಚೇತನವು ತನ್ನ ಬದುಕನ್ನು ತೊಳೆದು ಪವಿತ್ರವನ್ನಾಗಿ ಮಾಡುತ್ತದೆ. ಕವಿಯ ಆಶಯವೂ ಇದೇ ಅಗಿದೆ: ತೀರ್ಥಂಕರನ ಬಾಳು ಎಂದರೆ ಕೇವಲ ಜೈನ ಪರಿಕಲ್ಪನೆಗೆ ಅನುಗುಣವಾಗಿರುವುದು ಮಾತ್ರವಲ್ಲದೆ, ಜೈನ ಆವರಣವನ್ನು ಕಳಚಿದರೆ ಋಷಭನಾಥನ ಬದುಕು ಒಟ್ಟಾರೆ ಮನುಷ್ಯನ ಬದುಕು ಸಾರ್ಥಕವಾಗುವುದರ ಪರಿಯನ್ನು ಸಂಕೇತಿಸುತ್ತದೆ ಎಂಬುದು. ಇದೇ ಪ್ರಾಯಶಃ ಪಂಪನ ಮನಸ್ಸಿನಲ್ಲಿದ್ದ ಕಾವ್ಯಧರ್ಮದ ಸ್ವರೂಪ.

ಜಯವರ್ಮನೆಂಬುವನು ಮಹಾಬಳ, ಲಲಿತಾಂಗ, ವಜ್ರಜಂ, ಆರ್ಯ, ಶ್ರೀಧರದೇವ, ಸುವಿಧಿ, ಅಚ್ಯುತೇಂದ್ರ, ವಜ್ರನಾಭಿ, ಅಹಮಿಂದ್ರ –ಈ ಜನ್ಮಗಳನ್ನು ಪೂರೈಸಿ ಹತ್ತನೆಯ ಜನ್ಮದಲ್ಲಿ ಆದಿನಾಥ ಹುಟ್ಟುತ್ತಾನೆ. ಇವರೆಲ್ಲ ರಾಜರು, ಚಕ್ರವರ್ತಿಗಳು, ಅಷ್ಟೇ ಅಲ್ಲ, ಅವರ ವಾಸ ವಿವಿಧ ದೇವಲೋಕಗಳಲ್ಲಿ, ಎಲ್ಲ ಬಗೆಯ ಭೋಗಸುಖಗಳನ್ನು ಯಥೇಚ್ಛವಾಗಿ ಸವಿಯುವವರು. ಜನ್ಮದಿಂದ ಜನ್ಮಕ್ಕೆ ಭೋಗಲಾಲಸೆಯ ತೀವ್ರತೆಯು ಕಡಿಮೆಗೊಳ್ಳುವ ಪ್ರಕ್ರಿಯೆಯ ಮೂಲಕ ಇದರ ಅಶಾಶ್ವತತೆಯನ್ನೂ, ಅಸಾರ್ಥಕತೆಯನ್ನೂ ಚಿತ್ರಿಸುವುದು ಇಲ್ಲಿನ ಪರಿ. ಹಾಗೆ ನೋಡಿದರೆ, ತೀರ್ಥಂಕರನ ಕಥೆಯು ಚಿತ್ರಣಗೊಳ್ಳುವ ಐದು ಹಂತಗಳು ಎಲ್ಲರ ಬದುಕಿನಲ್ಲೂ ಇರುವ ಹಂತಗಳೇ. ಜೀವ ಗರ್ಭದಲ್ಲಿ ಸೇರುವುದು,

ಹುಟ್ಟು, ಒಂದು ಸನ್ನಿವೇಶದಲ್ಲಿ ಬದುಕಿನ ನಶ್ವರತೆಯ ಬಗ್ಗೆ ಬರಬಹುದಾದ ತಿಳಿವು. ವ್ಯಕ್ತಿಯ ಅಸಹಾಯಕತೆಯ ಪರಿಜ್ಞಾನ ಮತ್ತು ಸಾವು – ಇವೆಲ್ಲ ಎಲ್ಲರಿಗೂ ಇದ್ದದ್ದೇ. ಏರುಂಜವ್ವನದಲ್ಲಿರುವ ಭೋಗಪ್ರಿಯತೆ ವಯಸ್ಸಾದಂತೆ ತಾನಾಗಿ ಕಡಿಮೆಯಾಗುವುದು, ಇಂದ್ರಿಯಗಳ ಪಟುತ್ವ ಮೊನಚನ್ನು ಕಳೆದುಕೊಳ್ಳುವುದು ಇವೆಲ್ಲ ಎಲ್ಲರ ಬದುಕಿನ ವಿವಿಧ ಮಜಲುಗಳೇ. ಆದರೆ ತೀರ್ಥಂಕರನ ಸತ್ವ ದೊಡ್ಡದು, ಮತ್ತು ಅರಿವಿನ ಹಿನ್ನೆಲೆಯಲ್ಲಿ ಅದನ್ನು ಸಾಧಿಸಲು ಪ್ರಯತ್ನಿಸುವುದು –ಇದರಿಂದಾಗಿ ಅದು ಭಿನ್ನವಾಗುತ್ತದೆ. ಹತ್ತು ಜನ್ಮಗಳಲ್ಲಿ ಭೋಗಲಾಲಸೆಯು, ದೊಡ್ಡ ವಿಚಾರಗಳು ಕಿವಿಯ ಮೇಲೆ ಬೀಳುವ ಮೂಲಕ ಉಂಟಾಗುವ, ತಿಳಿವಳಿಕೆಯ ಕಾರಣದಿಂದಾಗಿ ಕಡಿಮೆಯಾಗುತ್ತ ಹೋಗುವ ಮತ್ತು ಅದರ ಸ್ವರೂಪ ಬದಲಾವಣೆಗೊಳ್ಳುವ ಸೂಕ್ಷ್ಮತೆಗಳು ಪಂಪನ ನಿರೂಪಣೆಯ ಹೈಲೈಟ್‌ಗಳು.

ಇದನ್ನು ಭೋಗನಿರಸನದ ಪ್ರಕ್ರಿಯೆಯ ಮೂರು ಮಜಲುಗಳನ್ನು ಪರಿಶೀಲಿಸುವ ಮೂಲಕ ತಿಳಿಯಬಹುದು. ಮೊದಲನೆಯ ಹಂತ ಮಹಾಬಳನದು: ಅವನ ಭೋಗಾಪೇಕ್ಷೆಯ ತೀವ್ರತೆ ಎಷ್ಟೆಂದರೆ ವಯಸ್ಸಾದರೂ ಅವನ ಲಾಂಪಟ್ಯ ಕಡಿಮೆಯಾಗದ ಪ್ರಮಾಣದ್ದು. ಅವನ ಅಮಾತ್ಯರಲ್ಲೊಬ್ಬನಾದ ಸ್ವಯಂಬುದ್ಧ ಎನ್ನುವವನು ತನ್ನ ರಾಜ ಇಳಿವಯಸ್ಸಿನಲ್ಲಿಯೂ ಹೊಂದಿದ್ದ ಲಾಂಪಟ್ಯವನ್ನು ಕಂಡು ಈ ರೀತಿ ಕಳವಳ–ಅಚ್ಚರಿಗಳಿಗೊಳಗಾಗುತ್ತಾನೆ:

**ಮುಸು ಮುತ್ತಂತೆ ತೆರಳ್ದ ತನ್ನ ಮೊಗಂ ಕಂಡಳ್ಕನೋ ಕೂಡೆ ಜೋ**
**ಲ್ದು ಸಡಿಲ್ದಿರ್ದ ಒಡಲ ಅಳೈತನಮಂ ಕಾಣನೋ ಸಂತತ**
**ವ್ಯಸನೋದ್ರೇಕದ ಕುಂದಂ ಏನೋಣರನೋ ಶಕ್ತಿಕ್ಷಯಂ ಕಾಣನೋ**
**ಬಿಸುಡಂ ಮುನ್ನಿನ ತನ್ನ ಲಂಪಳಿಕೆಯಂ ಮತ್ತಂ ಜರಾಜರ್ಜರಂ**

(ಮುದಿತನದಿಂದ ಮುದ್ದೆಯಾಗಿ ಕಪಿಯದರಂತೆ ಕಾಣುವ ತನ್ನ ಮುಖವನ್ನು ಕಂಡೂ ಅಳುಕನಲ್ಲ! ಜೋತುಬಿದ್ದಿರುವ ತನ್ನ ಮೈಯ ಅಳ್ಳೆಗಳ ಟೊಳ್ಳುತನವನ್ನು ಗಮನಿಸದೆ ಇರುವನಲ್ಲ! ವ್ಯಸನೋದ್ರೇಕದಿಂದ ಆದ ಕುಂದನ್ನು ಅವನು ಕಾಣನೇ! ಶಕ್ತಿಯು ಕಡಿಮೆಯಾಗಿರುವುದನ್ನು ಅನುಭವಿಸನೇ! ಮುಪ್ಪಿನಿಂದ ತರತರಿಸುತ್ತಿದ್ದರೂ ಲಂಪಟತೆಯನ್ನು ಮಾತ್ರ ಬಿಡನಲ್ಲ!)

ಮಹಾಬಳನ ಈ ಸಾಮಾನ್ಯ ಭೋಗಾಪೇಕ್ಷೆಯು ಸ್ವಲ್ಪ ಉತ್ತಮಗೊಂಡು ಮುಂದಿನ ಲಲಿತಾಂಗನ ಜನ್ಮದಲ್ಲಿ ಮನಃಪ್ರಿಯೆಯಾದ ಸ್ವಯಂಪ್ರಭೆಯಲ್ಲಿನ ತೀವ್ರಾನುರಕ್ತಿಯಾಗಿ ಮಾರ್ಪಡುತ್ತದೆ. ದೀರ್ಘಕಾಲ ದೇವಲೋಕದಲ್ಲಿ ಅವಳೊಡನೆ ಲೈಂಗಿಕಸುಖವನ್ನು ಅನುಭವಿಸಿದ ಬಳಿಕ ಅವನಿಗೆ ಸ್ವರ್ಗಚ್ಯುತಿಯಾಗುವ ಕಾಲ ಸನ್ನಿಹಿತವಾಗುತ್ತದೆ. ಆಗ ಅವನು ತನ್ನ ಸುಖವು ಕೊನೆಗೊಳ್ಳುವುದಲ್ಲ ಎಂಬ ಅಳಲಿನಿಂದ ಈ ರೀತಿ ಪ್ರಲಾಪಿಸುತ್ತಾನೆ:

ಸಂತಸದ ಅಂತವನೆಯ್ದಿ ಸುರತಾಮೃತದೊಳ್ ತಣಿದು ಅಟ್ಟಿಂ ಜಗಿ
ಲ್ದಂತಿರೆ ಪತ್ತಿ ಮೆಯ್ಗಳ್ ಎರಡಾಮೊಡಂ ಏನಸುವೊಂದೇ ನೊಟಿಪ್ಪೊಡೆ

**ಎಂಬಂತಿರೆ ಕೂಡಿ ನಿನ್ನೊಡನೆ ಭೋಗಿಸಲೀಯದೆ ಕೆಮ್ಮನೆ ಎನ್ನಂ ಉಯ್ವ**
**ಅಂತಕನೆಂಬ ಬೂತನೆಲೆ ಮಾಣಿಸಲಾಗದೇ ಪೇಟಿಟ್ ಸ್ವಯಂಪ್ರಭೇ**

(ಸುರತಸುಖದಲ್ಲಿ ಸಂತೋಷದ ತುತ್ತತುದಿಯನ್ನು ಮುಟ್ಟಿ ನಮ್ಮ ಮನಸ್ಸುಗಳು ತಣಿದು, ದೇಹಗಳು ಎರಡಾದರೂ ಪ್ರಾಣ ಒಂದೇ ಎಂಬ ರೀತಿಯಲ್ಲಿ ಅವು ಒಂದರೊಡನೊಂದು ಬೆಸೆದುಕೊಂಡಿವೆ ಎಂಬಂತೆ ನಿನ್ನೊಡನೆ ಭೋಗಿಸಲು ಅವಕಾಶವೀಯದೆ ಯಮನೆಂಬ ಭೂತವು ನನ್ನನ್ನು ಎಳೆದೊಯ್ಯುತ್ತಿರುವಾಗ ನಿನಗೆ ಬಿಡಿಸಲಾಗದೆ ಸ್ವಯಂಪ್ರಭೇ!)

ಅವನಂತೆಯೇ ಅವನ ನಲ್ಲೆ ಸ್ವಯಂಪ್ರಭೆ ಅವನ ಬಗ್ಗೆ ಇಟ್ಟಿರುವ ಪ್ರೀತಿಯೂ. ಲಲಿತಾಂಗ–ಸ್ವಯಂಪ್ರಭೆಯರ ಅನುರಾಗ ಎಷ್ಟು ತೀವ್ರವೆಂದರೆ ಅದು ಮುಂದಿನ ಜನ್ಮದಲ್ಲಿಯೂ ಮುಂದುವರಿಯುತ್ತದೆ. ಬೇರೆ ಬೇರೆ ಕಡೆಗಳಲ್ಲಿ ಅವರು ವಜ್ರಜಂಘ ಮತ್ತು ಶ್ರೀಮತಿಯರಾಗಿ ಹುಟ್ಟುತ್ತಾರೆ. ಪ್ರಾಪ್ತವಯಸ್ಕರಾಗುತ್ತಾರೆ. ಆದರೆ ಅವರಿಬ್ಬರನ್ನೂ ಹಿಂದಿನ ಜನ್ಮದ ನೆನಪು ಕಾಡುತ್ತದೆ. ಶ್ರೀಮತಿ ತನ್ನ ಪೂರ್ವಜನ್ಮದ ನೆನಪಿನಿಂದಲೇ ವಜ್ರಜಂಘನ ಚಿತ್ರವನ್ನು ಬರೆಯುತ್ತಾಳೆ, ಅದರಿಂದಾಗಿ ಅವರಿಬ್ಬರೂ ಮತ್ತೆ ಒಂದಾಗುವಂತಾಗುತ್ತದೆ. ಆ ಬಳಿಕ ಅವರಿಬ್ಬರೂ ಗಾಢ ಪ್ರೇಮದಿಂದ ಕೆಲಕಾಲ ಬಾಳುತ್ತಾರೆ. ಒಂದು ರಾತ್ರಿ ಅವರ ಮಲಗುವ ಮನೆಯನ್ನು ಸಿದ್ಧಪಡಿಸಿದ ಸೇವಕನು ಕೃಷ್ಣಾಗುರುವಿನ ಧೂಪವನ್ನು ಕೆಂಡದಲ್ಲಿ ಹಾಕಿ ಗವಾಕ್ಷಿಯನ್ನು ತೆರೆಯುವುದನ್ನು ಮರೆತು ಹೋಗುತ್ತಾನೆ. ಗಂಡಹೆಂಡಿರಿಬ್ಬರೂ ಒಳಬಂದು ಅಪ್ಪಿಕೊಂಡು ಮಲಗುತ್ತಾರೆ. ಒಳಗೆ ಕೃಷ್ಣೋರಗನಂತೆ ಅಗರುವಿನ ಹೊಗೆ ಎಲ್ಲೆಡೆ ಆವರಿಸಿ ಅವರಿಬ್ಬರೂ ನಿದ್ರಾಪರವಶರಾಗಿರುವಾಗ ಉಸಿರುಕಟ್ಟಿ ಅಪ್ಪಿಕೊಂಡಿರುವಂತೆಯೇ ಸಾಯುತ್ತಾರೆ. ಆ ದೃಶ್ಯವನ್ನು ಕವಿ ಹೀಗೆ ವರ್ಣಿಸಿ ಉದ್ಗರಿಸುತ್ತಾನೆ:

**ಬಿಡದೆ ಪೊಗೆ ಸುತ್ತೆ ತೋಳಂ**
**ಸಡಿಲಿಸದಾ ಪ್ರಾಣವಲ್ಲಭರ್ ಪ್ರಾಣಮಂ ಅಂದು**
**ಒಡಗಳೆದರ್ ಓಪರ್ ಓಪರೊಳ್**
**ಒಡಸಾಯಲ್ ಪಡೆದರ್ ಇನ್ನವೇಂ ಸಯ್ಪು ಒಳವೇ**

(ದಟ್ಟವಾಗಿ ಅಗರುವಿನ ಹೊಗೆ ಅವರಿಸಿ ಆ ಪ್ರಾಣವಲ್ಲಭರು ಜೊತೆಗೆ ಅಪ್ಪುಗೆಯಲ್ಲಿಯೇ ಸತ್ತರು. ಅದಕ್ಕಿಂತ ಪುಣ್ಯವಿನ್ನೇನಿದೆ!)

ಮೊದಲು ಕೇವಲ ಲೈಂಗಿಕ ಅಪೇಕ್ಷೆಯಾಗಿದ್ದುದು ಜನ್ಮಾಂತರದಲ್ಲಿ ಕ್ರಮೇಣ ಅನುರಾಗವಾಗಿ ಗಾಢ ಪ್ರೇಮವಾಗಿ ಮಾರ್ಪಟ್ಟಿದೆ. ಹೀಗೆ ಭವಾವಳಿಯು ಮುಂದುವರಿದು ಹತ್ತನೆಯ ಜನ್ಮದಲ್ಲಿ ಈ ಚೇತನ ನಾಭಿರಾಜ–ಮರುತಾದೇವಿಯರ ಮಗ ಆದಿನಾಥ ಅಥವಾ ಋಷಭನಾಗಿ ಜನ್ಮ ತಳೆಯುತ್ತದೆ. ಇದು ಎಲ್ಲರಂತಹ ಮನುಷ್ಯ ಜನ್ಮವೇ, ಹೊರಗೆ ನೋಡಲು. ಆದರೆ ಒಳಗೆ ಪಕ್ವತೆಯನ್ನು ಪಡೆದಂತಹುದು. ಈ ಜನ್ಮದಲ್ಲಿಯೂ ಅವನು ಯಥಾಪ್ರಕಾರವೇ ಬೆಳೆಯುತ್ತಾನೆ. ಅವನಿಗೆ ಯೌವನೋದಯವಾಗುತ್ತದೆ, ಮಗನಿಗೆ ಮದುವೆ ಮಾಡುವ ಅಪೇಕ್ಷೆ ತಂದೆತಾಯಿಗಳಿಗೆ. ಅವನ್ನು ಕೂಡಿಸಿಕೊಂಡು ತಂದೆ ಹೀಗೆ ಕೇಳಿಕೊಳ್ಳುತ್ತಾನೆ:

**ಶಾಂತಾತ್ಮಾ ಮದುವೆ ನಿಲ್ ನೀಂ**
**ಇಂತೆನ್ನ ಗೃಹಸ್ಥಧರ್ಮದಿಂದಂ ನೀನೆಂ**
**ತಂತೆ ಸಲೆ ನೆಗಟ್ಟಿ ಜಗತೀ**
**ಸಂತತಿ ನಿಲೆ ನಿನ್ನ ಧರ್ಮಸಂತತಿ ನಿಲ್ಗುಂ**

(ಶಾಂತಾತ್ಮನೇ ಮದುವೆಯಾಗು. ನನ್ನ ಹಾಗೆ ನೀನೂ ಗೃಹಸ್ಥಧರ್ಮವನ್ನು ಅನುಸರಿಸಿದರೆ ಜಗತ್ತಿಗೂ ಸಂತತಿಯು ನಿಲ್ಲುತ್ತದೆ. ನಿನಗೂ ಧರ್ಮಸಂತತಿಯೂ ನಿಲ್ಲುತ್ತದೆ). ಅದಕ್ಕನುಗುಣವಾಗಿ ಆದಿನಾಥ ಮದುವೆಯಾಗುತ್ತಾನೆ. ಈಗ ಅವನಲ್ಲಿ ಭೋಗಾಪೇಕ್ಷೆಯೂ ಇಲ್ಲ, ಅನುರಾಗವೂ ಇಲ್ಲ, ಅವನು ಮದುವೆಯಾಗುವುದು ಗೃಹಸ್ಥಧರ್ಮಪಾಲನೆಗಾಗಿ ಮಾತ್ರ. ಮುಂದೆ ಅವನು ಅರಮನೆಯಲ್ಲಿ ನಡೆಯುವ ನೀಲಾಂಜನೆ ಎಂಬುವವಳ ನೃತ್ಯವನ್ನು ನೋಡುತ್ತಿರುವಾಗ, ಅವಳು ನರ್ತಿಸುತ್ತಲೇ ಬಿದ್ದು ಸಾಯುತ್ತಾಳೆ. ಇಂದ್ರ ರಸಭಂಗವಾಗದಿರಲೆಂದು ಯಾರಿಗೂ ತಿಳಿಯದಂತೆ ಅವಳಂತೆಯೇ ಮತ್ತೊಬ್ಬಳನ್ನು ಕ್ಷಣಾರ್ಧದಲ್ಲಿ ಸೃಷ್ಟಿಸಿ ನೃತ್ಯ ಮುಂದುವರಿಯುವಂತೆ ಮಾಡುತ್ತಾನೆ. ಈ ಬದಲು ಬೇರಾರಿಗೂ ತಿಳಿಯದಿದ್ದರೂ ಆದಿನಾಥನ ಸೂಕ್ಷ್ಮತೆಯಿಂದ ಅವನ ಅರಿವಿಗೆ ಬಂದು, ಅವನ ಪಕ್ವ ಜೀವದಲ್ಲಿ ಮಡುಗಟ್ಟಿದ್ದ ವೈರಾಗ್ಯಪರತೆಯು ಹೊರಬರಲು ನೆಪವಾಗುತ್ತದೆ. ಅವನು ದೀಕ್ಷೆ ವಹಿಸಿ ತಪಸ್ಸಿಗೆ ತೆರಳುತ್ತಾನೆ.

ಹೀಗೆ ಜನ್ಮಾಂತರಗಳ ಚಿತ್ರಣದ ಮೂಲಕ ಭೋಗನಿರಸನವನ್ನು ನಿರೂಪಿಸುವ ಕವಿಯು ಮುಂದೆ ಅವನ ಮಕ್ಕಳೇ ಆದ ಭರತ ಮತ್ತು ಬಾಹುಬಲಿಗಳು ರಾಜ್ಯಕ್ಕಾಗಿ ಹೋರಾಡುವ ಪ್ರಸಂಗವನ್ನು ಚಿತ್ರಿಸುವ ಮೂಲಕ ಅಹಂಕಾರದ ಎರಡು ಮಗ್ಗುಲುಗಳನ್ನು ನಮ್ಮ ಮುಂದಿಡುತ್ತಾನೆ. ಹಿರಿಯನೆಂಬ ಕಾರಣದಿಂದ ಚಕ್ರವರ್ತಿಯಾದ ಅಣ್ಣ ಭರತನ ದಬ್ಬಾಳಿಕೆಯನ್ನು ತಮ್ಮ ಬಾಹುಬಲಿ ಪ್ರತಿಭಟಿಸಿ ಅವನೊಡನೆ ಯುದ್ಧಕ್ಕೆ ನಿಲ್ಲುತ್ತಾನೆ. ತಿಳಿವಳಿಕಸ್ಥರು ಅವರಿಗೆ ಸಾಮಾನ್ಯ ಯುದ್ಧವನ್ನು ಬಿಟ್ಟು ಪರಸ್ಪರ ಬಲಪ್ರದರ್ಶನಕ್ಕೆ ಏರ್ಪಾಟು ಮಾಡುತ್ತಾರೆ. ದೃಷ್ಟಿಯುದ್ಧ, ಜಲಯುದ್ಧ ಮತ್ತು ಮುಷ್ಟಿಯುದ್ಧ – ಈ ಮೂರರಲ್ಲಿಯೂ ಹೆಚ್ಚು ಎತ್ತರವಾಗಿದ್ದ ತಮ್ಮ ಬಾಹುಬಲಿ ಅಣ್ಣನನ್ನು ಮಣಿಸುತ್ತಾನೆ. ತೀವ್ರ ಅವಮಾನ, ಆಕ್ರೋಶಗಳಿಂದ ಕೂಡಿದ ಭರತ ತಮ್ಮನನ್ನು ಕೊಲ್ಲಲು ಸಿದ್ಧನಾಗುತ್ತಾನೆ. ಇಡೀ ಬೆಳವಣಿಗೆಯು ಬಾಹುಬಲಿಯಲ್ಲಿ ಐಹಿಕತೆಯ ಬಗ್ಗೆ ತೀವ್ರ ಜಿಹಾಸೆ ತಳೆಯುವಂತೆ ಮಾಡುತ್ತದೆ. ತಾನು ಯುದ್ಧದಲ್ಲಿ ಗೆದ್ದ ರಾಜ್ಯವನ್ನು ಅಣ್ಣನಿಗೇ ಕೊಟ್ಟು ಹೇಳುವ ಮಾತುಗಳಿವು:

**ನೆಲಸುಗೆ ನಿನ್ನ ವಕ್ಷದೊಳೆ ನಿಶ್ಚಳಂ ಈ ಭಟಖಡ್ಗಮಂಡಲೋ**
**ತ್ಪಲವನ ವಿಭ್ರಮಭ್ರಮರಿಯಪ್ಪ ಮನೋಹರಿ ರಾಜ್ಯಲಕ್ಮ ಭೂ**
**ವಲಯಮಮಂ ಅಯ್ಯನಿತ್ತುದುಮಂ ಆಂ ನಿನಗಿತ್ತೆಂ ಇದೇವುದಣ್ಣ ನೀನ್**
**ಒಲಿದ ಲತಾಂಗಿಗಂ ಧರೆಗಂ ಅಟಿಸಿದಂದು ನೆಗಟ್ತೆ ಮಾಸದೇ**

(ಸೈನಿಕರ ಖಡ್ಗಸಮೂಹವೆಂಬ ಸರೋವರದಲ್ಲಿ ಸುಳಿದಾಡುವ ದುಂಬಿಯಂತಹ ರಾಜ್ಯಲಕ್ಮಿಯು ನಿನ್ನ ಎದೆಯಲ್ಲಿಯೇ ಶಾಶ್ವತವಾಗಿ ನೆಲಸಲಿ.

ಇದರಿಂದ ಏನಾದೀತು! ಅಲ್ಲದೆ, ಅಣ್ಣನಾದ ನೀನು ಒಲಿದ ಹೆಣ್ಣಿಗಾಗಲೀ ಮಣ್ಣಿಗಾಗಲೀ ಆಸೆಪಟ್ಟರೆ ನನಗೆ ಕೆಟ್ಟ ಹೆಸರು ಬಾರದೇ). ಆ ಬಳಿಕ ಅವನು ತಪಸ್ಸಿಗೆ ತೆರಳುತ್ತಾನೆ. ಭರತ ಚಕ್ರವರ್ತಿಯಾಗಿ ಮುಂದುವರಿದರೂ ಕ್ರಮೇಣ ಅವನೂ ಪಕ್ವಗೊಳ್ಳುತ್ತಾನೆ. ಈ ಅಣ್ಣತಮ್ಮದಿರ ಮೂಲಕ ಕವಿ ಅಹಂಕಾರದ ಎರಡು ಮಗ್ಗುಲುಗಳ ಪರಿಚಯ ಮಾಡಿಸುತ್ತಿದ್ದಾನೆ. ಇಬ್ಬರೂ ಒಬ್ಬನ ಮಕ್ಕಳು. ಭರತನ ಅಹಂಕಾರದ ಸ್ವರೂಪವು ಮಿಕ್ಕವರನ್ನೆಲ್ಲ ಗೆದ್ದು ತನ್ನ ಹಿರಿಮೆಯನ್ನು ಸ್ಥಾಪಿಸಬೇಕೇಂಬ ಬಗೆಯದಾದರೆ, ಬಾಹುಬಲಿಯದು ಯಾರಿಗೂ ಬಾಗೆನೆಂಬ ಸ್ವಾಭಿಮಾನಸ್ವರೂಪದ್ದು. ಒಂದು ಎಲ್ಲರ ಮೇಲೆ ತನ್ನ ಅಧಿಕಾರವನ್ನು ಸ್ಥಾಪಿಸುವ ಬಗೆಯದಾದರೆ, ಮತ್ತೊಂದು ತನ್ನತನವನ್ನು ಬಲಿಗೊಡದೆ ಎಲ್ಲರಿಗಿಂತ ತಾನು ಭಿನ್ನ ಎಂಬುದನ್ನು ತೋರಿಸುವುದು. ಎರಡೂ ಒಂದೇ ಭಾವನೆಯ ಮಗ್ಗಲುಗಳು. ಅಲ್ಲದೆ ಇವರಿಬ್ಬರೂ ಆದಿನಾಥನ ಮಕ್ಕಳು, ಅಂದರೆ ಅವನಿಂದಾದವರು, ಅಂದರೆ ಅವನತನದ ಹೊರರೂಪಗಳು. ಹೀಗೆ 'ಆದಿಪುರಾಣ'ವನ್ನು ಒಂದು ಚೇತನದ ಮಹಾಪಯಣ ಎಂದು ಪರಿಭಾವಿಸಿದರೆ, ಒಂದೆಡೆ ತನ್ನ ಸುಖದಲ್ಲಿ ಕೇಂದ್ರೀಕೃತವಾಗುವ ಭೋಗಾಕಾಂಕ್ಷೆ, ಮತ್ತೊಂದೆಡೆ ತನ್ನ ಹಿರಿಮೆಯ ಭಾವನೆಯ ಅಹಂಕಾರ – ಇವೆರಡೂ ಅದೇ ಚೇತನದ್ದೇ. ಪ್ರಾಯಶಃ ಆ ಕಾರಣಕ್ಕಾಗಿಯೇ ಕವಿ ಆದಿನಾಥ ಕೇವಲಜ್ಞಾನವನ್ನು ಪಡೆದು ಕೊನೆಗೆ ಪರಿನಿರ್ವಾಣ ಹೊಂದುವ ಸನ್ನಿವೇಶವನ್ನು ಭರತ–ಬಾಹುಬಲಿಗಳ ಯುದ್ಧದ ನಂತರವೇ ಚಿತ್ರಿಸುವುದು. ಭೋಗ–ಅಹಂಕಾರಗಳೂ ಬೇರೆ ಬೇರೆಯಲ್ಲ, ಒಂದೇ ಸ್ವಕೇಂದ್ರಿತ ಆಲೋಚನೆಯ ಎರಡು ಮಗ್ಗುಲಗಳು; ಎರಡರಲ್ಲಿಯೂ ತಾನೇ ಕೇಂದ್ರ, ಅನ್ಯವನ್ನು ಕಡೆಗಣಿಸಿ ತನ್ನ ಬಗ್ಗೆ ಮಾತ್ರ, ತನ್ನ ಸುಖವನ್ನು ಮಾತ್ರ, ತನ್ನ ಶ್ರೇಷ್ಠತೆಯನ್ನು ಮಾತ್ರ ಆಲೋಚಿಸುವ ಪರಿ. ತೀರ್ಥಂಕರತ್ವ ಪ್ರಾಪ್ತವಾಗಬೇಕಾದರೆ ಇವೆರಡೂ ಸಂಪೂರ್ಣವಾಗಿ ಇಲ್ಲವಾಗಬೇಕು.

ಪಂಪನ ವಿಷಯದಲ್ಲಿ ನಾವು ಒಂದಂಶವನ್ನು ಗಮನಿಸಬೇಕು, ಅಥವಾ ಇದು ಜೈನ ಮನೋಭಾವವೂ ಇದ್ದೀತು. ಅವನು ಭೋಗ, ಎಂದರೆ ಲೈಂಗಿಕತೆಯನ್ನು ಸಂಪೂರ್ಣವಾಗಿ ನಿರಾಕರಿಸುವುದಿಲ್ಲ. 'ಆದಿಪುರಾಣ'ವನ್ನು ಬರೆದಾಗ ಪಂಪನಿಗೆ ಮೂವತ್ತೊಂಬತ್ತು–ನಲವತ್ತು ವರ್ಷಗಳು, ಅಂದರೆ ಎಲ್ಲ ಚೈತನ್ಯಗಳೂ ತಮ್ಮ ಉಚ್ಛ್ರಾಯಸ್ಥಿತಿಯಲ್ಲಿರುವ ವಯಸ್ಸು. ಈ ಕಾವ್ಯದ ಆರಂಭದಲ್ಲಿ ಪಂಪ ತನ್ನ ರೂಪದ ಬಗ್ಗೆ, ರಸಿಕತೆಯ ಬಗ್ಗೆ ದೀರ್ಘವಾಗಿ ಹೇಳಿಕೊಳ್ಳುತ್ತಾನೆ. ಮುಂದೆ ಅವನು ಬರೆದ 'ವಿಕ್ರಮಾರ್ಜುನವಿಜಯ'ದಲ್ಲಿಯಂತೂ ಕಾವ್ಯದ ಆರಂಭದಲ್ಲಿನ ಪ್ರಾರ್ಥನೆಯಲ್ಲಿಯೂ, ಕೊನೆಯ ಫಲಶ್ರುತಿಯಲ್ಲಿಯೂ ಅವನು ಅಪೇಕ್ಷಿಸುವುದು ಮಿಕ್ಕೆಲ್ಲದರ ಜೊತೆಗೆ ಭೋಗವನ್ನೇ. ಕಾವ್ಯದ ಆರಂಭದಲ್ಲಿ ಅವನು ಪ್ರಾರ್ಥಿಸುವುದು ಐವರು ದೇವತೆಗಳನ್ನು, ಅವರಲ್ಲಿ ಒಬ್ಬನೆಂದರೆ ಸಹಜ ಮನೋಜನೋಜ, ಅವನನ್ನು ಕವಿ ಕೇಳಿಕೊಳ್ಳುವುದು 'ಸಹಜ ಮನೋಜನೋಜನೆಮಗೀಗೆ ವಿಚಿತ್ರ ರತೋತ್ಸವಂಗಳಂ' ಎಂದು. ಹಾಗೆಯೇ ಕಾವ್ಯದ ಕೊನೆಯ ಫಲಶ್ರುತಿಯ ಪದ್ಯದಲ್ಲಿ 'ಲೋಕಪೂಜ್ಯವಾದ'

ಭಾರತವನ್ನು ಓದಿದವರಿಗೆ, ಕೇಳಿದವರಿಗೆ, ಬರೆದವರಿಗೆ ಅವನ ಪ್ರಕಾರ ಸಿಕ್ಕುವ ಫಲಗಳೆಂದರೆ 'ಧೃತಿ ತುಷ್ಟಿ ಪುಷ್ಟಿ ವಿಭವಂ ಸೌಭಾಗ್ಯಂ ಇಷ್ಟಾಂಗನಾಸುರತಂ ಕಾಂತಿ ಅಗುಂತಿ ಶಾಂತಿ ವಿಭವಂ ಭದ್ರಂ ಶುಭಂ ಮಂಗಳಂ'. ಹಾಗಾಗಿ ಪಂಪನ ದೃಷ್ಟಿಕೋನ ಅನುಭವಿಸುವ ಮೊದಲೇ ಐಹಿಕತೆಯನ್ನು ನಿರಾಕರಿಸುವಂಥದಾಗಿರದೆ, ಅವುಗಳನ್ನು ಆರೋಗ್ಯಕರವಾಗಿ ಅನುಭವಿಸುತ್ತ ಕ್ರಮೇಣ ಅವುಗಳನ್ನೇ ಹಿರಿಯ ಆದರ್ಶಗಳಾಗಿ ಮಾರ್ಪಡಿಸಿಕೊಳ್ಳಬೇಕು, ಇಹವೇ ಪರವಾಗಿ ಅರಳಬೇಕು ಎಂಬುದು. ಇದೇ ಕವಿಯ ಕಾವ್ಯವು ಕಂಡುಕೊಂಡ 'ಕಾವ್ಯಧರ್ಮ' ಅನ್ನಿಸುತ್ತದೆ.

ಆಧುನಿಕ ಮನೋವಿಜ್ಞಾನದ ಕೆಲವು ಪರಿಕಲ್ಪನೆಗಳೂ ಇವಕ್ಕೆ ಸಂವಾದಿಯಾಗಿವೆ ಎಂದು ನನ್ನ ಭಾವನೆ. ನನ್ನ ಸೀಮಿತ ತಿಳಿವಳಿಕೆಯಲ್ಲಿ ವ್ಯಕ್ತಿತ್ವದ ಎರಡು ಪ್ರಮುಖ ಅಂಶಗಳು ಮೂಲಕಾಮ (libido) ಮತ್ತು ಅಹಂಕಾರ (ego) –ಇವುಗಳು. ಸಿಗ್ಮಂಡ್ ಫ್ರಾಯ್ಡ್ ಪ್ರಕಾರ ಆ ಮೂಲಕಾಮವು ಬದುಕಿನ ಮೂಲ ಶಕ್ತಿ. ಆದರೆ ಅವನೇ sublimation ಎಂಬ ಪರಿಕಲ್ಪನೆಯ ಮೂಲಕ ಅದು ಉದಾತ್ತಗೊಳ್ಳುವ ಪರಿಯನ್ನು ಪ್ರತಿಪಾದಿಸುತ್ತಾನೆ. ಯೂಂಗ್ ಲಿಬಿಡೊ ಎಂಬುದು ಮಾನವನ ಸೃಜನಶಕ್ತಿಯೆಂದು ಹೇಳುತ್ತಾನೆ. ಅದರಿಂದಲೇ ಕಲೆ, ಸಾಹಿತ್ಯ ಮುಂತಾದವು ಹೊಮ್ಮುವುದು. ಹೀಗಾಗಿ ಆಧುನಿಕ ಪರಿಭಾಷೆಯ ದೃಷ್ಟಿಯಿಂದಲೂ 'ಆದಿಪುರಾಣ'ವನ್ನು ಅರ್ಥವಿಸಿಕೊಳ್ಳುವುದು ಅನುಕೂಲ. ಮುಕ್ತಿ, ತೀರ್ಥಂಕರತ್ವ, ಪ್ರಪತ್ತಿ – ಇವನ್ನೆಲ್ಲ ಕಂಡವರಾರು? ಹಿಂದೆಯೇ ಹೇಳಿದಂತೆ ನಾವು ಹೊರಡುವ ಆಲೋಚನೆಯ ನೆಲೆಯೇ ನಮ್ಮ ನಿಲವಿನ ಸ್ವರೂಪವನ್ನು ನಿರ್ಧರಿಸುವುದು. ಬದುಕಿನ ಗುರಿಯನ್ನು ಬೇರೆ ಬೇರೆಯವರು ವಿಭಿನ್ನವಾಗಿ ಪರಿಭಾವಿಸಲು ಕಾರಣ ಅವರ ಆಲೋಚನೆಯ ವಿಭಿನ್ನ ನೆಲೆಗಳು. ಅವುಗಳಲ್ಲಿ ಯಾವುದು ಸಮರ್ಪಕವೋ ಯಾರಿಗೆ ಗೊತ್ತು? ಸ್ವಕೇಂದ್ರಿತವಾದ ಪ್ರಜ್ಞೆಯು ಸುತ್ತಲೂ ಹರಡಿಕೊಂಡಾಗ ಉಂಟಾಗುವ ಅನುಭವವೇ ಬೇರೆ. ತನ್ನ ಚೈತನ್ಯವನ್ನು ಸರ್ವಹಿತಕ್ಕಾಗಿ ಬಳಸಿದಾಗ ಉಂಟಾಗುವ ಕೃತಕೃತ್ಯ ಭಾವನೆಯೇ ಬೇರೆ. ಇಂಥ ಕೃತಕೃತ್ಯತೆಯನ್ನು ಅನುಭವಿಸುವ ಕ್ಷಣವು ಬದುಕಿನ ಸಾರ್ಥಕ ಕ್ಷಣ. ಬದುಕಿನುದ್ದಕ್ಕೂ ಇದೇ ಬಗೆಯಲ್ಲಿ ಮುನ್ನಡೆಯುವುದು ಪ್ರಾಯಶಃ ಬದುಕಿನ ಸಾರ್ಥಕ್ಯವೇನೋ.

*

# ಪೂರ್ವ ಭವಾವಳಿ: ಭೋಗನಿರಸನಂ

ಶ್ರೀದೇವೇಂದ್ರಮುನೀಂದ್ರವಂದಿತಗುಣವ್ರಾತಂ ಜಗತ್ಸ್ವಾಮಿ ಸಂ
ದಾದಿಬ್ರಹ್ಮನಗಾಧಬೋಧನಿಳಯಂ ದುರ್ವಾರಸಂಸಾರವಿ
ಚ್ಛೇದೋಪಾಯನಿಯುಕ್ತಸೂಕ್ತಿ ವೃಷಮಾರ್ಗಾಗ್ರೇಸರಂ ಪಾಪಹೃ
ತ್ಪಾದಾಬ್ಜಂ ದಯೆಗೆಯ್ವನಕ್ಕೆಮಗೆ ಮುಕ್ತಿಶ್ರೀಸುಖಾವಾಪ್ತಿಯಂ ೧

**ಪದವಿಭಾಗ–ಅನ್ವಯ–ಅರ್ಥ:** ಶ್ರೀ ದೇವೇಂದ್ರಮುನೀಂದ್ರ = ದೇವೇಂದ್ರರಿಂದಲೂ ಮುನೀಂದ್ರರಿಂದಲೂ, ವಂದಿತ = ವಂದಿತವಾದ, ಗುಣವ್ರಾತಂ = ಗುಣಸಮೂಹವುಳ್ಳವನೂ; ಅಗಾಧ = ಎಣೆಯಿಲ್ಲದ, ಬೋಧನಿಳಯಂ = ಜ್ಞಾನಕ್ಕೆ ನೆಲೆವನೆಯಾದವನೂ; ದುರ್ವಾರಸಂಸಾರ = ನಿವಾರಿಸಲು ಅಶಕ್ಯವೆನ್ನಿಸುವ ಸಂಸಾರವನ್ನು, ವಿಚ್ಛೇದ ಉಪಾಯ = ವಿನಾಶ ಮಾಡಲು, ನಿಯುಕ್ತ = ತಕ್ಕುದಾದ, ಸೂಕ್ತಿ = ತಿಳಿವಳಿಕೆಯುಳ್ಳವನೂ; ವೃಷಮಾರ್ಗ = ಧರ್ಮದ ಹಾದಿಯಲ್ಲಿ, ಅಗ್ರೇಸರಂ = ಮುಂದಿರುವವನೂ, ಪಾಪಹೃತ್ = ಪಾಪವನ್ನು ವಿನಾಶಗೊಳಿಸುವ, ಪಾದಾಬ್ಜಂ = ಪಾದಕಮಲಗಳುಳ್ಳವನೂ, ಜಗತ್‌ಸ್ವಾಮಿ = ಜಗತ್ತಿನ ಒಡೆಯನೂ, ಸಂದ = ಆದ, ಆದಿಬ್ರಹ್ಮನ್ = ಆದಿಬ್ರಹ್ಮನು (ಆದಿ ತೀರ್ಥಂಕರನು) ಎಮಗೆ = ನಮಗೆ, ಮುಕ್ತಿ ಶ್ರೀ ಸುಖ = ಮುಕ್ತಿ ಎಂಬ ಸಿರಿಯ ಸುಖದ, ಆವಾಪ್ತಿಯಂ = ಪ್ರಾಪ್ತಿಯನ್ನು, ದಯೆಗೆಯ್ವನ್ + ಅಕ್ಕೆ = ದಯಗೆಯ್ಯುವವನಾಗಲಿ.

**ಗದ್ಯಾನುಸರಣ:** ಎಲ್ಲ ಸ್ವರ್ಗಗಳ ಒಡೆಯರೂ ಮುನಿಶ್ರೇಷ್ಠರೂ ಗೌರವಿಸುವ ಗುಣಸಮೂಹವನ್ನುಳ್ಳವನೂ, ಎಲ್ಲ ತಿಳಿವಳಿಕೆಗೆ ನೆಲೆವನೆಯಂತಿರುವವನೂ, ನಿವಾರಿಸಲು ಅಸಾಧ್ಯವೆನ್ನಿಸುವ ಸಂಸಾರವನ್ನು ಸೀಳಲು ಬೇಕಾದ ಉಪಾಯವನ್ನು ಬಲ್ಲವನೂ, ಧರ್ಮಮಾರ್ಗಕ್ಕೆ ಮುಂದಾಳುವೂ, ಪಾಪಸಮೂಹವನ್ನು ವಿನಾಶಗೊಳಿಸಬಲ್ಲಂತಹ ಅಡಿದಾವರೆಗಳುಳ್ಳವನೂ. ಲೋಕದ ಒಡೆಯನೂ ಆದ ಆದಿತೀರ್ಥಂಕರನು (ವೃಷಭದೇವನು) ನಮಗೆ ಮುಕ್ತಿ ಎಂಬ ಸಂಪತ್ತಿನ ಲಾಭವನ್ನು ದಯಪಾಲಿಸಲಿ.

**ಪೆಱೆದೆಂಟುಂ ಕಿಲ್ಬಿಷಂಗಳ್ಕಿಡೆ ಕಿಡದ ಗುಣಂ ಪೊರ್ದೆ ಬಂದೆಂಟುಮಾದಂ**
**ತಣಿವಂ ಕೈಕೊಂಡಮೂರ್ತರ್ಚರತನುಸಮಾಕಾರರುದ್ಧೂತಲೇಪರ್**
**ಪ್ರಣುತರ್ನಿತ್ಯರ್ಜಗನ್ಮಂಗಳನಿಳಯರನಂತತ್ರಿಲೋಕೈಕಚೂಡಾ**
**ಮಣಿಗಳ್ಸಿದ್ಧರ್ ಸ್ವಕೀಯಪ್ರಭುತೆಯನೆಮಗಂ ಮಾಳ್ಕೆತಿಪ್ರೀತಿಯಿಂದಂ** ೨

**ಪದವಿಭಾಗ–ಅನ್ವಯ–ಅರ್ಥ:** ಪೆಣೆದ = ಆವರಿಸುವ, ಎಂಟುಂ ಕಿಲ್ಬಿಷಂಗಳ್ = ಎಂಟು ಕೊಳಕುಗಳು, ಕಡೆ = ನಾಶವಾಗುವಂತೆಯೂ; ಕಿಡದ = ನಾಶವಾಗದ, ಎಂಟುಂ = ಎಂಟು, ಗುಣಂ = ಗುಣಗಳು, ಬಂದು ಪೊರ್ದೆ = ಬಂದು ಸೇರುವಂತೆಯೂ; ಅದಂ = ಅತಿಶಯವಾದ, ತಣಿವಂ = ತೃಪ್ತಿಯನ್ನು, ಕೈಕೊಂಡ = ಪಡೆದ, ಮೂರ್ತರ್ = ಸಾಕಾರಗೊಳಿಸಿಕೊಡವರೂ; ಚರತನುಸಮ = ಕೊನೆಯ (ಮಾನುಷ) ಜನ್ಮದಂತಹ, ಆಕಾರರ್ = ಆಕೃತಿಯುಳ್ಳವರೂ; ಉದ್ಧೂತಲೇಪರ್ = (ಐಹಿಕತೆಯ) ಲೇಪನವನ್ನು ತೊಡೆದುಕೊಂಡವರೂ; ಪ್ರಣುತರ್ = ಸ್ತುತ್ಯರೂ; ನಿತ್ಯಜರ್ = ಶಾಶ್ವತರೂ; ಜಗತ್ ಮಂಗಳನಿಳಯರ್ = ಜಗತ್ತಿಗೆ ಮಂಗಳವನ್ನುಂಟುಮಾಡುವವರೂ; ಅನಂತರ್ = ಕೊನೆಯಿಲ್ಲದವರೂ; ತ್ರಿಲೋಕ ಏಕಚೂಡಾಮಣಿಗಳ್ = ಮೂರು ಲೋಕಗಳಲ್ಲಿಯೂ ಚೂಡಾಮಣಿಗಳಂತೆ ಶ್ರೇಷ್ಠರಾಗಿರುವವರೂ; (ಆದ) ಸಿದ್ಧರ್ = ಸಿದ್ಧರು; ಅತಿಪ್ರೀತಿಯಿಂದಂ = ಅಪಾರವಾದ ಪ್ರೀತಿಯಿಂದ ಕೂಡಿ; ಎಮ್ಮಗಂ = ನಮಗೆ; ಸ್ವಕೀಯಪ್ರಭುತೆಯಂ = ಸ್ವಪ್ರಭುತ್ವವನ್ನು (ತನಗೆ ತಾನೇ ಒಡೆಯನಾಗುವುದನ್ನು); ಮಾಳ್ಕೆ = ಉಂಟುಮಾಡಲಿ.

**ಗದ್ಯಾನುಸರಣ:** ಎಂಟು ಅವಗುಣಗಂನ್ನು ಕಳೆದುಕೊಂಡು (ಅವುಗಳ ಬದಲು) ಶಾಶ್ವತವಾಗಿ ಎಂಟು ಗುಣಗಳನ್ನು ಹೊಂದಿದವರೂ, ಅತಿಶಯ ತೃಪ್ತಿಯನ್ನು ಸಾಕಾರಗೊಳಿಸಿಕೊಂಡವರೂ, ಮುಕ್ತಿಯನ್ನು ಹೊಂದುವ ಅರ್ಹತೆಯುಳ್ಳವರೂ, ಐಹಿಕತೆಯ ಅಂಟನ್ನು ತೊಡೆದುಕೊಂಡವರೂ, ಸ್ತುತ್ಯರೂ ನಿತ್ಯರೂ ಮೂರು ಲೋಕಗಳಿಗೆ ಒಳಿತನ್ನು ಉಂಟುಮಾಡಬಲ್ಲವರೂ ಅನಂತರೂ ಮೂಲೋಕಗಳಿಗೂ ತಲೆವಣಿಯಂತೆ ಶೋಭಿಸುವವರೂ ಆದ ಸಿದ್ಧರು ನಮ್ಮ ಮೇಲೆ ಅತಿಶಯ ಪ್ರೀತಿಯನ್ನಿಟ್ಟು ತನಗೆ ತಾನೇ ಒಡೆಯನಾಗುವ ರೀತಿಯನ್ನು ತೋರಿಸಿಕೊಡಲಿ.

**ಮೂವತ್ತಾಱು ಗುಣಂಗಳ್ತಮಗಮರ್ದಿರೆ ಸಂದೈದುಮಾಚಾರದೊಳ್ಸ**
**ದ್ಭಾವಂ ಕೈಗಣ್ಮೆ ಶಿಷ್ಯಾಚರಣವಿಧಿಗಳಂ ತಿರ್ದಿ ಕಾರುಣ್ಯದಿಂದಂ**
**ಸಾವದ್ಯಂ ಸಾರದಂತಾಗಿರೆ ನಿಯಮಿಸುಚಾಚಾರ್ಯರಿನ್ನೆಮ್ಮನೇನೋ**
**ದಾವಂ ತಳ್ತಟ್ಟಿದಂತೋಸರಿಸಿ ಕಳೆಗೆ ಸಂಸಾರಕಾಂತಾರದಿಂದಂ** ೩

**ಪದವಿಭಾಗ–ಅನ್ವಯ–ಅರ್ಥ:** ತಮಗೆ = ತಮ್ಮನ್ನು, ಮೂವತ್ತಾಱು ಗುಣಂಗಳ್ = ಆಚಾರ್ಯರಿಗೆ ಆವಶ್ಯಕವಾದ ಮೂವತ್ತಾರು ಗುಣಗಳು [ದ್ವಾದಶ ತಪಸ್ಸು, ಷಡಾವಶ್ಯಕ, ದಶಧರ್ಮ, ಪಂಚಾಚಾರ, ತ್ರಿಗುಪ್ತಿ ಎಂಬ ಮೂಲೋತ್ತರ ಗುಣಗಳು], ತಳ್ತು = ವ್ಯಾಪಿಸಿ, ಅಮರ್ದಿರೆ = ಹೊಂದಿಕೊಂಡಿರಲು; ಸಂದ = ಪ್ರಖ್ಯಾತವಾದ, ಐದುಂ ಆಚಾರದೊಳ್ = ದರ್ಶನಾಚಾರ, ಜ್ಞಾನಾಚಾರ, ಚಾರಿತ್ರಾಚಾರ, ತಪಾಚಾರ ಮತ್ತು ವೀರ್ಯಾಚಾರಗಳಲ್ಲಿ, ಸದ್ಭಾವಂ = ಶ್ರದ್ಧೆಯು, ಕೈಗಣ್ಮೆ = ಉಂಟಾಗಲು; ಶಿಷ್ಯ ಆಚಾರ ವಿಧಿಗಳಂ = ಶಿಷ್ಯರ ನಡವಳಿಕೆಯ ಕ್ರಮವನ್ನು, ಕಾರುಣ್ಯದಿಂದಂ = ಕರುಣೆಯಿಂದ, ತಿರ್ದಿ = ನೇರ್ಪಡಿಸಿ, ಸಾವದ್ಯಂ = ಕಳಂಕವು, ಸಾರದಂತಾಗಿರೆ

= ಸಮೀಪಕ್ಕೆ ಬಾರದಂತೆ ನಿಯಮಿಸುವ = ಎಚ್ಚರವಹಿಸುವ; ಆಚಾರ್ಯರ್ = ಆಚಾರ್ಯರುಗಳು. ಇನ್ನು ಎಮ್ಮನ್ = ಮುಂದೆ ನಮ್ಮನ್ನು, ಏನೋದಾವಂ = ಪಾಪವೆಂಬ ಕಾಳ್ಗಿಚ್ಚು, ತಳ್ತು ಅಟ್ಟದಂತೆ = ವ್ಯಾಪಿಸಿ ಸುಡದಂತೆ. ಓಸರಿಸಿ = ದೂರಮಾಡಿ, ಸಂಸಾರಕಾಂತಾರದಿಂದಂ = ಐಹಿಕತೆಯೆಂಬ ಕಾಡಿನಿಂದ. ಕಳೆಗೆ = (ನಮ್ಮನ್ನು) ಕಾಪಾಡಲಿ.

**ಗದ್ಯಾನುಸರಣ:** ಆವಶ್ಯಕವಾದ ಮೂವತ್ತಾರು ಗುಣಗಳನ್ನು ಹೊಂದಿ, ಐದು ಆಚಾರಗಳನ್ನು ತಮ್ಮ ಜೀವನದ ಭಾಗವಾಗಿಸಿಕೊಂಡು ಶಿಷ್ಯರ ನಡವಳಿಕೆಯ ಕ್ರಮವನ್ನು ಕರುಣೆಯಿಂದ ನೇರ್ಪಡಿಸುತ್ತ, ಅವರ ಬಳಿ ದೋಷಗಳು ಸಾರದಂತೆ ಎಚ್ಚರವಹಿಸುವ ಆಚಾರ್ಯರುಗಳು ನಮ್ಮನ್ನು ಪಾಪವೆಂಬ ಕಾಳ್ಗಿಚ್ಚು ಆವರಿಸಿ ಸುಡದಂತೆ ಐಹಿಕತೆಯೆಂಬ ಕಾಡಿನಿಂದ ಹೊರತಂದು ಕಾಪಾಡಲಿ.

**ಹೇಯಂಗಳ್ ಖಳಕರ್ಮಬಂಧನಕರ ಕ್ರೋಧಾದಿಗಳ್ ಮತ್ತುಪಾ**
**ದೇಯಂಗಳ್ ದುರಿತೇಂಧನಾನಳಲಸದ್ರತ್ನತ್ರಯಂಗಳ್ ಸುಖೋ**
**ಪಾಯಂಗಳ್ಗಡಿವೆಂದು ಭವ್ಯಜನಮಂ ಕಣ್ಣೂಡಿ ಕಲ್ಪಿಪ್ಪುಪಾ**
**ಧ್ಯಾಯರ್ಜ್ಯೋತಿಸುಗೆಮ್ಮ ಚಿತ್ತಗೃಹದೊಳ್ರತ್ನತ್ರಯಜ್ಯೋತಿಯಂ** ೪

**ಪದವಿಭಾಗ-ಅನ್ವಯ-ಅರ್ಥ:** ಖಳ = ದುಷ್ಟ, ಕರ್ಮಬಂಧನಕರ = ಕರ್ಮಗಳಿಂದ ಬಂಧಿಸುವಂತಹ, ಕ್ರೋಧಾದಿಗಳ್ = ಕೋಧವೇ ಮುಂತಾದವು. ಹೇಯಂಗಳ್ = ಹೀನವಾದವು; ಮತ್ತು = ಅಲ್ಲದೆ, ದುರಿತ + ಇಂಧನ = ಪಾಪವನ್ನು ಸುಡುವ ಉರುವಲಾದ, ಲಸತ್ = ಹೊಳೆಯುವ, ರತ್ನತ್ರಯಂಗಳ್ = ಸಮ್ಯಕ್ ಜ್ಞಾನ, ಸಮ್ಯಕ್ ದರ್ಶನ ಮತ್ತು ಸಮ್ಯಕ್ ಚಾರಿತ್ರಗಳೆಂಬ ಮೂರು ರತ್ನಗಳು, ಉಪಾದೇಯಂಗಳ್ = ಸ್ವೀಕಾರಾರ್ಹವಾದವು; ಇವು, ಸುಖೋಪಾಯಂಗಳ್ = ಸುಖವನ್ನು ಸಾಧಿಸುವ ಉಪಾಯಗಳು, ಗಡ = ಅಲ್ಲವೇ, ಎಂದು; ಭವ್ಯಜನಮಂ = ಜೈನ ಭಾವುಕರಿಗೆ, ಕಣ್ಣೂಡಿ = ಕಣ್ಣಿಟ್ಟು (ಗಮನವಿರಿಸಿ), ಕಲ್ಪಿಪ್ಪ = ತಿಳಿಯಹೇಳುವ, ಉಪಾಧ್ಯಾಯರ್ = ಉಪಾಧ್ಯಾಯರುಗಳು; ಎಮ್ಮ ಚಿತ್ತಗೃಹದೊಳ್ = ನಮ್ಮ ಮನಸ್ಸು ಎಂಬ ಮನೆಯಲ್ಲಿ, ರತ್ನತ್ರಯಜ್ಯೋತಿಯಂ = ರತ್ನತ್ರಯದ ಬೆಳಕನ್ನು, ಜ್ಯೋತಿಸುಗೆ = ಬೆಳಗುವಂತೆ ಮಾಡಲಿ.

**ಗದ್ಯಾನುಸರಣ:** ದುಷ್ಟ ಕರ್ಮಗಳು ನಮ್ಮನ್ನು ಸುತ್ತುವರಿಯುವಂತೆ ಮಾಡುವ ಕ್ರೋಧವೇ ಮುಂತಾದ ಷಡ್ವರ್ಗಗಳು ಹೀನವಾದವು; ಅದೇ ಬೆಳಗುವ ರತ್ನತ್ರಯಗಳು ಪಾಪಗಳನ್ನು ಸುಡುವ ಉರುವಲಾಗಿ ನಮಗೆ ಸುಖವನ್ನುಂಟುಮಾಡುವಂಥವು ಎಂದು ಭಾವುಕರಿಗೆ ಪ್ರೀತಿಯಿಂದ ತಿಳಿಹೇಳುವ ಉಪಾಧ್ಯಾಯರುಗಳು ನಮ್ಮ ಮನವೆಂಬ ಮನೆಯಲ್ಲಿ ರತ್ನತ್ರಯದ ಬೆಳಕನ್ನು ಹೊತ್ತಿಸಲಿ.

ಬಗೆಯೊಳ್ಪೊಣ್ಮೆ ದಯಾರಸಂ ಚರಿತದೊಳ್ಕೈಗಣ್ಮೆ ಚಾರಿತ್ರಮಾ
ವಗಮಾವಶ್ಯಕದೊಳ್ತಗುಳ್ಗೆ ಪಲವುಂ ಶೀಲಂಗಳಂ ತಾಳ್ದಿ ದಂ

ದುಗಮೆಂದುಂ ತಮಗಾಗದಂತೆಸಗುವರ್ಸರ್ವೋತ್ತಮರ್ಸರ್ವಸಾ
ಧುಗಳೋರಂತೆ ಕಟಿಲ್ಚುಗೆಮ್ಮ ಮನದಿಂ ದುರ್ಮೋಹಸಂದೋಹಮಂ ೫

**ಪದವಿಭಾಗ–ಅನ್ವಯ–ಅರ್ಥ:** (ತಮ್ಮ) ಬಗೆಯೊಳ್ = ಮನಸ್ಸಿನಲ್ಲಿ (ಆಲೋಚನೆಯಲ್ಲಿ), ದಯಾರಸಂ = ದಯಾರಸವು, ಪೊಣ್ಮೆ = ಹೊಮ್ಮುತ್ತಿರಲು; (ತಮ್ಮ) ಚರಿತದೊಳ್ = ನಡವಳಿಕೆಯಲ್ಲಿ, ಆವಗಂ = ಸದಾ ಕಾಲವೂ, ಚಾರಿತ್ರಂ = ಸಮ್ಯಕ್ ಚಾರಿತ್ರವು, ಕೈಗಣ್ಮೆ = ಉಂಟಾಗಲು; ಆವಶ್ಯದೊಳ್ = ತಮ್ಮ ಆವಶ್ಯಕತೆಗಳಲ್ಲಿ, ತಗುಳ್ದು = ಸೇರಿ, ಪಲವುಂ ಶೀಲಂಗಳಂ = ಹಲವು ಶೀಲಗಳನ್ನು (ಮುನಿಗಳು ಆಚರಿಸುವ ದಿಗ್‌ವ್ರತ, ದೇಶವ್ರತ ಮತ್ತು ದಂಡವಿರತಿವ್ರತ ಎಂಬ ಮೂರು ಗುಣವ್ರತಗಳು ಹಾಗೂ ಸಾಮಯಿಕ, ಪ್ರೋಷಧೋಪವಾಸ, ಉಪಭೋಗಪರಿಭೋಗಾತಿಥಿಸಂಗ್ರಹ ಮತ್ತು ಪಶ್ಚಿಮ ಸಲ್ಲೇಖನ ಎಂಬ ನಾಲ್ಕು ಶಿಕ್ಷಾವ್ರತಗಳು – ಇವು ಸೇರಿ 'ಶೀಲಸಪ್ತಕ' ಎನಿಸಿಕೊಳ್ಳುತ್ತದೆ), ತಾಳ್ದಿ = ಹೊಂದಿ; ದಂದುಗಂ = ವ್ಯಥೆಯು, ಎಂದುಂ = ಯಾವತ್ತೂ, ತಮಗಾಗದಂತೆ = ತಮಗೆ ಉಂಟಾಗದ ರೀತಿಯಲ್ಲಿ, ಎಸಗುವರ್ = ಆಚರಿಸುತ್ತಾರೆಯೋ; (ಅಂತಹ) ಸರ್ವೋತ್ತಮರ್ = ಅತ್ಯಂತ ಶ್ರೇಷ್ಠರಾದ, ಸರ್ವಸಾಧುಗಳ್ = ಸಮಸ್ತ ಸಾಧುವೃಂದವು, ಎಮ್ಮ ಮನದಿಂ = ನಮ್ಮ ಮನಸ್ಸುಗಳಿಂದ, ದುರ್ಮೋಹ ಸಂದೋಹಮಂ = ಕೆಟ್ಟ ಆಸೆಗಳನ್ನು, ಕಟಿಲ್ಚುಗೆ = ತೊಲಗಿಸಲಿ.

**ಗದ್ಯಾನುಸರಣ:** ತಮ್ಮ ಮನಸ್ಸಿನಲ್ಲಿ ಸದಾ ಕರುಣೆಯನ್ನು ತುಂಬಿಕೊಂಡು, ತಮ್ಮ ನಡವಳಿಕೆಯನ್ನು ಅತ್ಯುಚ್ಚವಾದುದನ್ನಾಗಿ ಮಾಡಿಕೊಂಡು, ಷಡಾವಶ್ಯಕಗಳಿಂದ ಶೀಲಸಪ್ತಕವನ್ನು ಸಾಧಿಸಿಸಿಕೊಂಡು, ಎಂದೆಂದೂ ತಮ್ಮನ್ನು ವ್ಯಥೆಯು ಕಾಡಿಸದಂತೆ ನೋಡಿಕೊಳ್ಳುವ ಸಮಸ್ತ ಸಾಧುವೃಂದವು ನಮ್ಮ ಮನಸ್ಸಿನ ಕೆಟ್ಟ ಆಮಿಷಗಳನ್ನು ದೂರಮಾಡಲಿ.

[**ವಿಶೇಷ ವಿಚಾರ:** ಈ ಐದು ಪದ್ಯಗಳಲ್ಲಿ ಕವಿಯು, ಜೈನ ಕವಿಗಳ ಪರಿಪಾಟದಂತೆ, ಕಾವ್ಯಾರಂಭದಲ್ಲಿ ಪಂಚಪರಮೇಷ್ಠಿಗಳ ಪ್ರಾರ್ಥನೆಯನ್ನು ಮಾಡಿದ್ದಾನೆ. ಅರ್ಹಂತ, ಸಿದ್ಧರು, ಆಚಾರ್ಯರು, ಉಪಾಧ್ಯಾಯರು ಮತ್ತು ಸರ್ವ ಸಾಧುಗಳನ್ನು ಪಂಚಪರಮೇಷ್ಠಿಗಳೆನ್ನುತ್ತಾರೆ. ಇಂತಹ ಪ್ರಾರ್ಥನೆಯನ್ನು'ಪಂಚ ನಮಸ್ಕಾರ'ಗಳೆಂದು ಕರೆಯುವುದೂ ವಾಡಿಕೆ. ಮೂಲತಃ ಪ್ರಾಕೃತದ ಈ ವಾಕ್ಯಗಳು ಪಂಚನಮಸ್ಕಾರಗಳೆನ್ನಿಸಿಕೊಳ್ಳುತ್ತವೆ: ಣಮೋ ಅರಹಂತಾಣಂ, ಣಮೋ ಸಿದ್ಧಾಣಂ, ಣಮೋ ಆಯಾರಿಯಾಣಂ, ಣಮೋ ಉವಜ್ಝಾಯಾಣಮ, ಣಮೋ ಲೋಏ ಸಬ್ಬಸಾಹೂಣಂ].

ಪರಮಜಿನೇಂದ್ರವಾಣಿಯೆ ಸರಸ್ವತಿ ಬೇಱದು ಪೆಣ್ಣ ರೂಪಮಂ
ಧರಿಯಿಸಿ ನಿಂದುದಲ್ತದುವೆ ಭಾವಿಸಿಯೋದುವ ಕೇಳ್ವ ಪೂಜಿಪಾ
ದರಿಸುವ ಭವ್ಯಕೋಟಿಗೆ ನಿರಂತರಸೌಖ್ಯಮನೀವುದಾನದ
ಕೆಱೆವಪೆನಾ ಸರಸ್ವತಿಯೆ ಮಾಣಿಕ್ಕಿಮುಗಿಲ್ಲಿಯೆ ವಾಗ್ವಿಳಾಸಮಂ ೬

**ಪದವಿಭಾಗ-ಅನ್ವಯ-ಅರ್ಥ:** ಪರಮ = ಅತ್ಯಂತ ಶ್ರೇಷ್ಠನಾದ, ಜಿನೇಂದ್ರ = ಜಿನನ, ವಾಣಿಯೆ = (ಪಿವೇಕದ) ಮಾತುಗಳೇ, ಸರಸ್ವತಿ = ವಿದ್ಯೆಯಯ ಅಧಿದೇವತೆಯೇ (ಹೊರತು), ಅದು, ಜೇಜೆ = ಬೇರೆಯ, ಪೆಣ್ಣ ರೂಪಮಂ = ಹೆಣ್ಣಿನ ಆಕಾರವನ್ನು, ಧರಿಯಿಸಿ = ಪಡೆದು, ನಿಂದುದು ಅಲ್ತು = ಇರುವಂಥದಲ್ಲ; ಭಾಪಿಸಿ = ಮನನಮಾಡಿಕೊಂಡು. ಓದುವ = ಪಠಿಸುವ, ಕೇಳ್ವ = ಕೇಳುವ, ಪೂಜಿಪ = ಗೌರಪಿಸುವ. ಆದರಿಸುವ = ಪ್ರೀತಿಯಿಂದ ಕಾಣುವ, ಭವ್ಯಕೋಟಿಗೆ = ಅಸಂಖ್ಯ ಭಾವುಕರಿಗೆ, ಅದುವೆ = ಜಿನೇಂದ್ರನ ಮಾತುಗಳೇ, ನಿರಂತರಸೌಖ್ಯಮನ್ = ಕೊನೆಯಿಲ್ಲದ ಆನಂದವನ್ನು, ಈವುದು = ನೀಡುತ್ತದೆ; ಅದರ್ಕೆ = ಆ ಮಾತುಗಳ (ಉಪದೇಶ) ರೂಪದ ಸರಸ್ವತಿಗೆ, ಆನ್ = ನಾನು, ಎರೆದಪೆನ್ = ಬೇಡಿಕೊಳ್ಳುತ್ತೇನೆ; ಆ ಸರಸ್ವತಿಯೆ = ಅಂತಹ ಜಿನೇಂದ್ರನ ಮಾತು ಎಂಬ ಸರಸ್ವತಿಯೆ, ಎಮಗೆ = ನಮಗೆ, ಇಲ್ಲಿಯೆ = ಈಗ, ವಾಗ್ವಿಳಾಸಮಂ = ಮಾತಿನ ವೈಭವವನ್ನು, ಮಾೞ್ಕೆ = ಉಂಟುಮಾಡಲಿ.

**ಗದ್ಯಾನುಸರಣ:** ಅತ್ಯಂತ ಶ್ರೇಷ್ಠನಾದ ಜಿನೇಂದ್ರನ ಮಾತುಗಳು ಸರಸ್ವತಿಯೇ ಹೊರತು, ಅದು ಹೆಣ್ಣಿನ ಆಕಾರವುಳ್ಳ ದೇವತೆಯಲ್ಲ; ಅಂತಹ ಜಿನೇಂದ್ರನ ಮಾತುಗಳನ್ನು ಯಾರು ಓದಿ ಕೇಳಿ ಮನನಮಾಡಿಕೊಂಡು ಗೌರವಿಸುತ್ತಾರೆಯೋ ಅಂಥವರಿಗೆ ಕೊನೆಯಿಲ್ಲದ ಆನಂದವುಂಟಾಗುತ್ತದೆ. ಅಂತಹ ವಾಗ್ದೇವಿಗೆ ನಾನು ಎರಗುತ್ತೇನೆ; ಆ ದೇವತೆಯು ನಮಗೆ ಈಗ ವಾಕ್ಸಂಪತ್ತನ್ನು ನೀಡಲಿ

[**ವಿಶೇಷ ವಿಚಾರ:** ಸಾಂಪ್ರದಾಯಿಕವಾದ ಮೂರ್ತರೂಪದ ದೇವತಾ ಸ್ವರೂಪವನ್ನು ನಿರಾಕರಿಸುವ ಪಂಪನು ಜಿನನ ವಿವೇಕವಾಣಿಯನ್ನೇ ವಾಗ್ದೇವಿಯೆಂದು ಕರೆಯುತ್ತಿದ್ದಾನೆ. ಸರಸ್ವತಿ ಎಂಬ ಆಕಾರದ ದೇವತೆಯೂ ಅಮೂರ್ತವಾದ ಜ್ಞಾನದ ಪ್ರತಿಮೆ ತಾನೇ? ಹಾಗಾಗಿ ಸರಸ್ವತಿಯ ಪೂಜೆಯೆಂದರೆ ಬೊಂಬೆಯನ್ನು ಪೂಜಿಸುವುದಲ್ಲ, ವಿವೇಕವನ್ನು ಗೌರವಿಸುವುದು ಮತ್ತು ಅದನ್ನು ಮನನ ಮಾಡಿಕೊಳ್ಳುವುದು ಎಂಬುದು ಕವಿಯ ಆಶಯ.]

**ಗುರು ದೇವೇಂದ್ರಮುನೀಂದ್ರನಿಂದ್ರನಮಿತಂ ದೇವಂ ಕಥಾನಾಯಕಂ**
**ಪುರುದೇವಂ ಕಥೆಯುಂ ತದಾದಿಪುರುಷಪ್ರಸ್ತುತ್ಯಜನ್ಮಾಳಿಬಂ**
**ಧುರಮೆಂದಂದೆ ಮದೀಯವಾಗ್ವಿಭವವಿನ್ಯಾಸಂ ಬಲಂಬೆತ್ತುದಿ**
**ನ್ನಿರು ಬಲ್ಲಿತ್ತಱಿ ಕೋಡು ಕೂರಿತದನಂತಿಂತುಂತೆನಲ್ವರ್ಕುಮೇ** ೭

**ಪದವಿಭಾಗ-ಅನ್ವಯ-ಅರ್ಥ:** ತನ್ನ ಕಾವ್ಯದ ಗುರು = ಗುರುವು, ದೇವೇಂದ್ರಮುನೀಂದ್ರ = ದೇವೇಂದ್ರಮುನಿ; ಕಥಾನಾಯಕಂ = ಕಥೆಯ ಮುಖ್ಯಪಾತ್ರವು, ಇಂದ್ರನಮಿತಂ = ಇಂದ್ರನಿಂದಲೇ ಪೂಜೆಗೊಳ್ಳುವ, ಪುರುದೇವಂ = ಪುರುದೇವ; ಕಥೆಯುಂ = ಇಲ್ಲಿ ನಿರೂಪಣೆಗೊಳ್ಳುವ ಕಥೆಯೂ, ತದಾದಿಪುರುಷ = ಆ ಆದಿ ತೀರ್ಥಂಕರನ, ಪ್ರಸ್ತುತ್ಯ = ಶ್ರೇಷ್ಠವಾದ, ಜನ್ಮಾಳಿಬಂಧುರಂ = ಭವಾವಳಿಗಳಿಂದ ಸುಂದರವಾದುದು; (ಇವುಗಳಿಂದ) ಮದೀಯ = ನನ್ನ,

ವಾಗ್ವಿಭವವಿನ್ಯಾಸಂ = ಮಾತಿನ ವೈಭವದ ಪರಿಯು. ಬಲಂಜೆತ್ತುದು = ಗಟ್ಟಿಗೊಂಡಿತು. ಇನ್ನು = ಇನ್ನು. ಇರು ಬಲ್ಲಿತ್ತಜಿ ಕೋಡು ಬಲ್ಲಿತು = ಹೆಚ್ಚು ಬಲಿಷ್ಠರ ಕೊಂಬು ತುಂಬ ಚೂಪಾದುದು. ಎಂದಂದೆ = ಎಂದ ಮೇಲೆ. ಅಂತು ಇಂತು ಉಂತು ಎನಲ್ = (ಕಾವ್ಯವು) ಹಾಗೆ ಹೀಗೆ ಹೇಗೋ ಎಂದು. ಬರ್ಕುಮೆ = ಟೀಕೆ ಮಾಡಲು ಬರುವುದೇ?

**ಗದ್ಯಾನುಸರಣ:** ತನ್ನ ಗುರು ದೇವೇಂದ್ರಮುನಿ; ತನ್ನ ಕಾವ್ಯದ ಕಥಾನಾಯಕನೆಂದರೆ ಇಂದ್ರನಿಂದ ಪೂಜೆಗೊಳ್ಳುವ ಆದಿಪುರುಷನಾದ ಋಷಭದೇವ; ಕಾವ್ಯದ ಕಥಾವಸ್ತುವೂ ಆ ಆದಿತೀರ್ಥಂಕರನ ಭವಾವಳಿಗಳ ವಿವರಗಳಿಂದ ಕೂಡಿ ಸಂತಸದಾಯಕವಾದುದು. ಜೊತೆಗೆ ನನ್ನ ಮಾತಿನ ವೈಭವವು ಬಲಿಷ್ಠವಾದುದು. ಹೀಗಾಗಿ 'ಬಲ್ಲಿದರ ಕೊಂಬು ತುಂಬ ಹರಿತ' ಎಂಬ ಗಾದೆಯ ಮಾತಿನಂತೆ ನನ್ನ ಕಾವ್ಯವು ಹಾಗಿದೆ ಹೀಗಿದೆ ಎಂದು ಟೀಕಿಸಲು ಸಾಧ್ಯವೇ?

[**ವಿಶೇಷ ವಿಚಾರ:** 'ಬಲ್ಲಿತ್ತಜಿ ಕೋಡು ಬಲ್ಲಿತು' ಎಂಬುದು ಒಂದು ಗಾದೆಯ ಮಾತು. ಬಲಿಷ್ಠರು ಮಾಡುವುದೆಲ್ಲಕ್ಕೂ ವಿಶೇಷ ಶಕ್ತಿಯಿರುತ್ತದೆ. ಅದನ್ನು ಟೀಕಿಸಲಾಗದು ಎಂಬ ಭಾವ]

**ಇದು ನಿಚ್ಚಂ ಪೊಸತರ್ಣವಂಬೊಲತಿಗಂಭೀರಂ ಕವಿತ್ವಂ ಜಗ**
**ಕ್ಕದಜೆಂದಂ ಕವಿತಾಗುಣಾರ್ಣವನಿಳಾಲೋಕೈಕವಿಖ್ಯಾತನ**
**ಭ್ಯುದಯಪ್ರಾಪ್ತಿನಿಮಿತ್ತಮುತ್ತಮಯಶಂ ಸಂಸಾರದೊಳ್ಸಾರಮ**
**ಪ್ಪುದಜೆಂ ಧರ್ಮಮದಂ ನಿಮಿರ್ಚುವುದಜೆಂ ಸಂಸಾರಸಾರೋದಯಂ** ೮

**ಪದವಿಭಾಗ–ಅನ್ವಯ–ಅರ್ಥ :** ಇದು ಕವಿತ್ವಂ = ಈ ಕವಿತೆಯು ಅರ್ಣವಂಬೊಲ್ = ಸಮುದ್ರದ ಹಾಗೆ, ಪೊಸತು = ಹೊಸತಾದುದು, (ಹಾಗೂ) ಅತಿ ಗಂಭೀರಂ = ತುಂಬ ಆಳವಾದುದು; ಅದಜೆಂದಂ = ಆ ಕಾರಣಕ್ಕಾಗಿ, ಕವಿತಾಗುಣಾರ್ಣವಂ = ಕಾವ್ಯಗುಣದ ಸಮುದ್ರದಂತಿರುವ (ಮತ್ತು), ಇಳಾಲೋಕೈಕವಿಖ್ಯಾತಂ = ಜಗತ್ತಿನಲ್ಲಿಯೇ ಹೆಸರುವಾಸಿಯಾದ ಒಬ್ಬನೇ ಕವಿಯಾಗಿರುವ ತಾನು. ಧರ್ಮಂ = ಧರ್ಮವು, ಸಂಸಾರದೊಳ್ = ಇಡೀ ಬದುಕಿನಲ್ಲಿಯೇ, ಸಾರಂ = ಸಾರವತ್ತಾದುದು, ಅಪ್ಪುದಜೆಂ = ಆಗಿರುವುದರಿಂದಾಗಿ, ಅದಂ = ಆ ಧರ್ಮವನ್ನು ನಿಮಿರ್ಚುವುದಜೆಂ = (ಈ ಕಾವ್ಯವು) ಹರಡುವುದರಿಂದಾಗಿ, (ಕವಿಯು) ಸಂಸಾರಸಾರೋದಯಂ = ಸಂಸಾರದ ತಿರುಳನ್ನು ಹೆಚ್ಚಿಸುವಂಥವನು (ಆಗಿದ್ದಾನೆ).

**ಗದ್ಯಾನುಸರಣ:** ತನ್ನ ಈ ಕಾವ್ಯವು ಸಮುದ್ರದ ಹಾಗೆ ನಿತ್ಯನೂತನವಾದುದು ಮತ್ತು ತುಂಬ ಆಳವಾದ ಅರ್ಥವಂತಿಕೆಯನ್ನು ಪಡೆದಿರುವುದೂ ಆಗಿದೆ. ಇವರಿಂದಾಗಿ ತಾನು ಕವಿತಾಗುಣಾರ್ಣವ ಎನಿಸಿಕೊಂಡು ಜಗತ್ತಿನಲ್ಲಿ ಹೆಸರುವಾಸಿಯಾಗಿರುವ ಏಕೈಕ ಕವಿಯಾಗಿದ್ದೇನೆ. ಅಲ್ಲದೆ ಸಂಸಾರದ ತಿರುಳೆಂದರೆ ಧರ್ಮ. ಮತ್ತು ತನ್ನ ಈ ಕಾವ್ಯವು ಅಂತಹ ಧರ್ಮವನ್ನು ಹರಡುವುದರಿಂದ ತಾನು ಸಂಸಾರಸಾರವನ್ನು ಹೆಚ್ಚಿಸುವವನು ಎಂಬ ಹೆಗ್ಗಳಿಕೆಗೂ ಪಾತ್ರ.

[**ವಿಶೇಷ ವಿಚಾರ:** ಪಂಪ ತನ್ನನ್ನು 'ಲೋಕೈಕವಿಖ್ಯಾತಂ' ಎಂದು ಕರೆದುಕೊಂಡಿದ್ದಾನೆ. ಅಂದರೆ ಇಡೀ ಲೋಕದಲ್ಲಿ ತನ್ನ ಕೀರ್ತಿ ಹರಡಿದೆ ಎಂಬ ಭ್ರಮೆ ಅವನಿಗಿತ್ತೆ? ಯಾಕೆಂದರೆ ಕನ್ನಡವು ಸೀಮಿತ ಪ್ರದೇಶದ ಭಾಷೆ ಎಂಬುದು ಅವನಿಗೂ ತಿಳಿದಿತ್ತು. ಸಂಸ್ಕೃತ ಮತ್ತು ಪ್ರಾಕೃತಗಳ ಆಳವಾದ ಪಾಂಡಿತ್ಯ ಅವನದು. ಹಾಗಾಗಿ ಲೋಕ ಎಂದರೆ ಬರಿ ಜಗತ್ತು ಎಂದು ಅರ್ಥೈಸದೆ 'ಕನ್ನಡ ಜಗತ್ತು' ಎಂದು ಅರ್ಥವಿಸುವುದು ಸೂಕ್ತ. ಒಂದೊಂದು ಭಾಷೆಯದೂ ಪ್ರತ್ಯೇಕ ಜಗತ್ತೇ ತಾನೇ?]

**ಇದುವೆ ಸುಕವಿಪ್ರಮೋದಪ್ರದ**
**ಮಿದುವೆ ಸಮಸ್ತಭವ್ಯಲೋಕಪ್ರಮದ**
**ಪ್ರದಮೆನೆ ನೆಗಟ್ದಾದಿಪುರಾ**
**ಣದೊಳಱಿವುದು ಕಾವ್ಯಧರ್ಮಮಂ ಧರ್ಮಮುಮಂ** ೯

**ಪದವಿಭಾಗ–ಅನ್ವಯ–ಅರ್ಥ:** ಇದುವೆ = ಈ ಕಾವ್ಯವು, ಸುಕವಿ = ಒಳ್ಳೆಯ ಕಾವ್ಯಮನೋಭಾವವಿರುವವರಿಗೆ, ಪ್ರಮೋದಪ್ರದಂ = ಸಂತಸವುಂಟು ಮಾಡುವಂತಹುದು, ಇದುವೆ = ಈ ಕಾವ್ಯವು, ಸಮಸ್ತ = ಎಲ್ಲ, ಭವ್ಯಲೋಕ= ಭವ್ಯರುಗಳ ಸಮೂಹಕ್ಕೆ, ಪ್ರಮದಪ್ರದಂ = ಸಂತಸವುಂಟುಮಾಡುವಂತಹುದು, ಎನೆ = ಎನ್ನು ಹಾಗೆ, ನೆಗಟ್ದ = ಹೆಸರುಗೊಂಡ, ಆದಿಪುರಾಣದೊಳ್ = ಮೊದಲ ಜಿನನ ಬಗೆಗಿನ ಪುರಾಣದಲ್ಲಿ, ಕಾವ್ಯಧರ್ಮಮಂ = ಕಾವ್ಯಧರ್ಮವನ್ನು, (ಅಂತೆಯೇ) ಧರ್ಮಮುಮಂ = ಧರ್ಮವನ್ನೂ, ಅಱಿವುದು = ತಿಳಿಯಬೇಕು

**ಗದ್ಯಾನುಸರಣ:** ಆದಿಪುರಾಣವು ಎಲ್ಲ ಕವಿಹೃದಯದವರಿಗೆ ಸಂತಸದಾಯಕ ವಾದುದು ಹಾಗೆಯೇ ಭವ್ಯಜನರಿಗೂ ಆನಂದ ತರುವಂಥದು; ಹೀಗಾಗಿ ಈ ಕಾವ್ಯದಲ್ಲಿ ಕಾವ್ಯಧರ್ಮ ಮತ್ತು ಧರ್ಮ ಎರಡನ್ನೂ ಮನನಮಾಡಿಕೊಳ್ಳಬೇಕು.

[**ವಿಶೇಷ ವಿಚಾರ:** ಪಂಪನಿಗೆ ತಾನು ಕೇವಲ ಪುರಾಣಕಾರನಲ್ಲ ಎಂಬ ಅರಿವಿದೆ; ತನ್ನ ಬರಹವು ಸುಕವಿಗಳಿಗೆ ಸಂತಸವುಂಟುಮಾಡಬೇಕೆಂದು ಮೊದಲು ಹೇಳಿ ಆನಂತರ ಭವ್ಯಜನ (ಜೈನ ಭಾವುಕರು)ರಿಗೆ ಆನಂದ ತರಲಿ ಎನ್ನುತ್ತಿದ್ದಾನೆ; ಹಾಗೆಯೇ ತನ್ನ ಕಾವ್ಯದಲ್ಲಿ ಅರಿಯಬೇಕಾದುದರಲ್ಲಿ ಕಾವ್ಯಧರ್ಮಕ್ಕೆ ಮೊದಲ ಸ್ಥಾನ, ಆಮೇಲಿನದು ಧರ್ಮದ ಸ್ಥಾನ. ಪುಣ್ಯಪ್ರದವಾದುದೆಂಬ ನಂಬಿಕೆಯ ಜೈನರಿಗೆ ಇದು ಒಂದು ಬಗೆಯ ಸಂತಸ ತರುವುದು ಸರಿಯೇ, ಆದರೆ ಹಾಗಲ್ಲದ ಇತರರಿಗೆ ಅಂದರೆ ಕಾವ್ಯಪ್ರೇಮಿಗಳಿಗೂ ಇದು ಆನಂದವುಂಟುಮಾಡಬೇಕೆಂಬುದು ಅವನ ಅಪೇಕ್ಷೆ, ಹಾಗೆ ಮಾಡುತ್ತದೆನ್ನುವುದು ಅವನ ನಿರೀಕ್ಷೆ. ಅಂದರೆ ಇದು ಧಾರ್ಮಿಕ ಕಾವ್ಯವಾದರೂ ಧರ್ಮೇತರ ಪರಿಣಾಮವನ್ನುಂಟುಮಾಡಬೇಕೆಂದು ಅವನು ಬಯಸುತ್ತಾನೆ. ಅದನ್ನೇ ಕಾವ್ಯಧರ್ಮ ಎನ್ನುತ್ತಿರುವುದು. ಹಾಗಾದರೆ 'ಕಾವ್ಯಧರ್ಮ' ಎಂದರೆ ಏನರ್ಥ? ಇದನ್ನು ಯಾವ ಅರ್ಥದಲ್ಲಿ ಪಂಪ ಬಳಸುತ್ತಿರುವನೆಂಬುದನ್ನು ನಾವೇ ಊಹಿಸಿಕೊಳ್ಳಬೇಕು. ಕಾವ್ಯ ಮಾಡಬೇಕಾದ

ಪರಿಣಾಮವೇ ಕಾವ್ಯಧರ್ಮ. ಅಂತಹ ಪರಿಣಾಮದ ಸ್ವರೂಪವೇನು ಎಂಬ ಪ್ರಶ್ನೆ ಸಹಜ. ಇದು ನಿಜವಾಗಿ ಕಾವ್ಯಮೀಮಾಂಸೆಯ ವಿಷಯ. ಕಾವ್ಯದ ಪರಿಣಾಮವನ್ನು 'ಆನಂದಾಯ, ಕಾಂತಾತುಲ್ಯತಯಾ ಉಪದೇಶಾಯ' ಎಂದು ಹಿಂದಿನ ಕಾವ್ಯಮೀಮಾಂಸಕರು ಹೇಳಿದರು. ಆದರೆ ಕಾವ್ಯ ಮಾಡುವ ಪರಿಣಾಮ ಎಂತಹುದು? ಎಂಬುದನ್ನು ಖಚಿತವಾಗಿ ಯಾರೂ ಹೇಳಲಾರರು. ಹೀಗಾಗಿ ನಾವು ಪಂಪನ ಮಾತಿನ ಹಿನ್ನೆಲೆಯಲ್ಲಿ ಮತ್ತು ಪ್ರಸ್ತುತಕ್ಕೆ ತಗುವ ರೀತಿಯಲ್ಲಿ ಅದನ್ನು ಅರ್ಥೈಸಿಕೊಳ್ಳಬೇಕಾಗಿದೆ. ಕಾವ್ಯವು ಅನುಭವದ ಮಾತಿನ ರೂಪದ ಅಭಿವ್ಯಕ್ತಿ; ಹಾಗಾಗಿ ಅದರ ಪರಿಣಾಮವೂ ಅನುಭವವಿಸ್ತರಣೆಯೇ ತಾನೇ? ಅಂದರೆ ಇಲ್ಲಿ ಅಂತರ್ಗತವಾದ ಅನುಭವಸ್ವರೂಪವು ಎಂತಹುದೆಂದರೆ ಎಲ್ಲರಿಗೂ ಜೀವನಸೂಕ್ಷ್ಮಕ್ಕೆ ಸಂಬಂಧಿಸಿದ ಅನುಭವವನ್ನು ತಂದುಕೊಡುವುದು. ಆದಿಜಿನನ ಜೀವನ ವಿವರಗಳ ಬಣ್ಣನೆಯ ಈ ಕಥಾನಕದ ಮೂಲಕ ಒಟ್ಟಾರೆ ಮಾನವ ಬದುಕಿನ ಅನುಭವವು ಹೇಗೆ ವಿಕಾಸಗೊಳ್ಳಬೇಕು, ಜೀವ ಹೇಗೆ ಸಹಜ ಮಾಗುಪಿಕೆಗೆ ಒಳಗಾಗಬೇಕು ಎಂಬುದರ ವಿವೇಚನೆಯಿದೆ ಎಂದು ಕವಿ ಸೂಚಿಸುತ್ತಿರಬಹುದು.]

**ಪ್ರಾಣಿಹಿತಮಂ ವಿನೇಯ**
**ಪ್ರೀಣನಕರಮಂ ಜಗತ್ತ್ರಯಪ್ರಕಟಿತಕ**
**ಲ್ಯಾಣಮನೀ ನೆಗಟ್ದಾದಿಪು**
**ರಾಣಮನಪರಿಮಿತಭಕ್ತಿಯಿಂ ವಿರಚಿಸುವೆಂ** ೧೦

**ಪದವಿಭಾಗ–ಅನ್ವಯ–ಅರ್ಥ:** ಪ್ರಾಣಿಹಿತಮಂ = ಸಕಲ ಜೀವಿಗಳಿಗೆ ಹಿತವನ್ನುಂಟುಮಾಡುವ, ವಿನೇಯ = ವಿನಯವಂತರಿಗೆ, ಪ್ರೀಣನಕರಮಂ = ಸಂತಸದಾಯಕವಾದ, ಜಗತ್ತ್ರಯ = ಮೂರು ಲೋಕಗಳ, ಪ್ರಕಟಿತಕಲ್ಯಾಣಮನ್ = ಹಿತವನ್ನೇ ಬಯಸುವಂತಹದು, (ಎಂದು) ನೆಗಟ್ದ = ಪ್ರಖ್ಯಾತವಾದ, ಆದಿಪುರಾಣಮನ್ = (ಈ) ಆದಿಪುರಾಣಕಾವ್ಯವನ್ನು, ಭಕ್ತಿಯಿಂ = ಪೂಜ್ಯಭಾವನೆಯಿಂದ, ವಿರಚಿಸುವೆಂ = ಬರೆಯುತ್ತೇನೆ.

**ಗದ್ಯಾನುಸರಣ:** ಎಲ್ಲ ಜೀವರುಗಳ ಹಿತವನ್ನು ಬಯಸುವ, ವಿನಯವಂತರಿಗೆ ಸಂತೋಷ ತರುವ, ಮೂರು ಲೋಕಗಳ ಒಳಿತನ್ನೇ ಬಯಸುವ ಆದಿಪುರಾಣ ಕಾವ್ಯವನ್ನು ನಾನು ಭಕ್ತಿಯಿಂದ ರಚಿಸುತ್ತೇನೆ.

**ವ॥ ಲೋಕತ್ರಯಮಧ್ಯದೊಳ್ ಮಧ್ಯಮಲೋಕವೆಂಬ ತಿರ್ಯಗ್ಲೋಕದ ನಟ್ಟನಡುವೆ ಲವಣಜಲಧಿಪರಿವೃತಮಾಗಿ ಜಂಬೂದ್ವೀಪಂ ನೆಗಟ್ದುದು. ಆ ಜಂಬೂದ್ವೀಪದ ನಟ್ಟನಡುವೆ ನಿಂದ ಮಂದರದ ಪೂರ್ವಾಪರ ದಿಗ್ವಿಭಾಗಂಗಳೊಳ್ ವಿದೇಹಂಗಳಿರ್ದುವು. ಅಲ್ಲಿ ಪಶ್ಚಿಮ ವಿದೇಹಕ್ಕಳಂಕಾರಮಪ್ಪ ಸೀತೋದಾ ನದಿಯ ಬಡಗಣ ಗಂಧಿಳ ವಿಷಯದ ನಡುವೆ ವಿಜಯಾರ್ಧಪರ್ವತಮೊಪ್ಪುಗುಂ. ಅದರೊಳುತ್ತರಶ್ರೇಣಿಯೊಳಲಕಾಪುರಂ ಒಪ್ಪಿ ತೋಱುಗುಂ. ಅದನಾಳ್ವನ್ ಅತಿಬಳನೆಂಬಂ. ಆತನ ಮಹಾದೇವಿ ಮನೋಹರಿಯೆಂಬಳ್. ಆ ಮಹಾದೇವಿಗಂ ಆ ವಿಯಚ್ಚರಾಗ್ರಣಿಗಂ ಮಗಂ ಮಹಾಬಳಂ. ಮಹಾಬಳಕುಮಾರಂ ಯುವರಾಜ ಪದವಿಗೆ ಯೋಗ್ಯನಾಗೆ ಖೇಚರೇಂದ್ರಂ ಕಂಠಿಕೆಯಂ ಕಟ್ಟಿದಂ. ಅತಿಬಳಂ ರಾಜ್ಯಂಗೆಯ್ಯುತ್ತಿರ್ಪಿನಂ**

**ಪದವಿಭಾಗ-ಅನ್ವಯ-ಅರ್ಥ:** ಲೋಕತ್ರಯ ಮಧ್ಯದೊಳ್ = ಮೂರು ಲೋಕಗಳ ಮಧ್ಯದಲ್ಲಿರುವ, ಮಧ್ಯಮಲೋಕವೆಂಬ = ಮಧ್ಯಮಲೋಕ ಎಂನಿಸಿಕೊಂಡ, ತಿರ್ಯಕ್ ಲೋಕದ = ಪ್ರಾಣಿಗಳು ವಾಸಿಸುವ ಈ ಲೋಕದ, ನಟ್ಟ ನಡುವೆ = ಸರಿಯಾಗಿ ಮಧ್ಯದಲ್ಲಿ, ಲವಣಜಲಧಿ = ಉಪ್ಪುನೀರಿನ ಸಮುದ್ರದಿಂದ, ಪರಿವೃತಂ ಆಗಿ = ಸುತ್ತುವರಿಯಲ್ಪಟ್ಟು, ಜಂಬೂದ್ವೀಪಂ ನೆಗಟ್ಟುದು = ಜಂಬೂದ್ವೀಪವು ಶೋಭಿಸುತ್ತದೆ. ಆ ಜಂಬೂದ್ವೀಪದ ನಟ್ಟನಡುವೆ ನಿಂದ = ಆ ಜಂಬೂದ್ವೀಪದ ಮಧ್ಯಭಾಗದಲ್ಲಿ, ಮಂದರದ ಪೂರ್ವ ಅಪರ ದಿಗ್ವಿಭಾಗಂಗಳೊಳ್ = ಮಂದರಪರ್ವತದ ಮೂಡಣ ಮತ್ತು ಪಡುವಣ ದಿಸೆಗಳಲ್ಲಿ, ವಿದೇಹಂಗಳ್ ಇರ್ದುವು = ವಿದೇಹ ಎಂಬ ಹೆಸರಿನ ನಾಡುಗಳಿದ್ದುವು. ಅಲ್ಲಿ ಪಶ್ಚಿಮ ವಿದೇಹಕ್ಕೆ ಅಳಂಕಾರಮಪ್ಪ = ಅವುಗಳಲ್ಲಿ ಪಶ್ಚಿಮವಿದೇಹ ನಾಡಿಗೆ ಆಭರಣವೆನ್ನಿಸಿಕೊಂಡು ಹರಿಯುವ, ಸೀತೋದಾ ನದಿಯ ಬಡಗಣ ಗಂಧಿಳ ವಿಷಯದ ನಡುವೆ = ಸೀತೋದಾ ಎಂಬ ಹೆಸರಿನ ನದಿಯ ಉತ್ತರ ಗಂಧಿಳ ಎಂಬ ಪ್ರದೇಶದ ಮಧ್ಯಭಾಗದಲ್ಲಿ, ವಿಜಯಾರ್ಧಪರ್ವತಂ ಒಪ್ಪುಗುಂ = ವಿಜಯಾರ್ಧ ಎಂಬ ಹೆಸರಿನ ಬೆಟ್ಟವೊಂದಿದೆ. ಅವರೊಳ್ ಉತ್ತರಶ್ರೇಣಿಯೊಳ್ = ಆ ಪರ್ವತಪಂಕ್ತಿಗಳ ಉತ್ತರದ ಪರ್ವತಪಂಕ್ತಿಯಲ್ಲಿ, ಅಲಕಾಪುರಂ ಒಪ್ಪಿ ತೋಱುಗುಂ = ಅಲಕಾ ನಗರವು ಮೆರೆಯುತ್ತಿದೆ. ಅದನ್ ಆಳ್ವನ್ ಅತಿಬಳನೆಂಬಂ = ಅದನ್ನು ಆಳುತ್ತಿದ್ದವನು ಅತಿಬಳ ಎಂಬ ರಾಜ. ಆತನ ಮಹಾದೇವಿ ಮನೋಹರಿಯೆಂಬಳ್ = ಅವನ ಮಹಾರಾಣಿ ಮಹಾದೇವಿ ಎನ್ನುವವಳು. ಆ ಮಹಾದೇವಿಗಂ ಆ ವಿಯಚ್ಚರ ಅಗ್ರಣಿಗಂ ಮಗಂ ಮಹಾಬಳಂ = ಆ ಮಹಾದೇವಿ ಮತ್ತು ವಿಯಚ್ಚರ ಮಹಾರಾಜನಾದ ಅತಿಬಳನ ಮಗ ಮಹಾಬಳ. ಮಹಾಬಳಕುಮಾರಂ ಯುವರಾಜ ಪದವಿಗೆ ಯೋಗ್ಯನಾಗೆ = ಮಹಾಬಳನು ಯುವರಾಜನ ಹೊಣೆಯನ್ನು ಹೊರಲು ಸಮರ್ಥನಾದಾಗ, ಖೇಚರೇಂದ್ರಂ ಕಂಠಿಕೆಯಂ ಕಟ್ಟಿದಂ = ಅತಿಬಳನು ಮಗನಿಗೆ ಯುವರಾಜಪದವಿಯ ಕೊರಳ ಹಾರವನ್ನು ತೊಡಿಸಿದ. ಅತಿಬಳಂ ರಾಜ್ಯಂಗೆಯುತ್ತೆ ಇರ್ಪಿನಂ = ಹೀಗೆ ಅತಿಬನು ರಾಜ್ಯಭಾರ ಮಾಡುತ್ತಿರಲು,

**ಗದ್ಯಾನುಸರಣ:** ಮೂರು ಲೋಕಗಳ ಮಧ್ಯದಲ್ಲಿರುವ ಮಧ್ಯಮಲೋಕ ಎನ್ನಿಸಿಕೊಂಡ ಪ್ರಾಣಿಗಳು ವಾಸಿಸುವ ಈ ಲೋಕದ ಸರಿಯಾಗಿ ಮಧ್ಯದಲ್ಲಿ ಉಪ್ಪುನೀರಿನ ಸಮುದ್ರದಿಂದ ಸುತ್ತುವರಿಯಲ್ಪಟ್ಟು = ಜಂಬೂದ್ವೀಪವು ಶೋಭಿಸುತ್ತದೆ. ಆ ಜಂಬೂದ್ವೀಪದ ಮಧ್ಯಭಾಗದಲ್ಲಿ ಮಂದರಪರ್ವತದ ಮೂಡಣ ಮತ್ತು ಬಡಗಣ ದಿಸೆಗಳಲ್ಲಿ ವಿದೇಹ ಎಂಬ ಹೆಸರಿನ ನಾಡುಗಳಿದ್ದುವು. ಅವುಗಳಲ್ಲಿ ಪಶ್ಚಿಮವಿದೇಹ ನಾಡಿಗೆ ಆಭರಣವೆನ್ನಿಸಿಕೊಂಡು ಹರಿಯುವ ಸೀತೋದಾ ಎಂಬ ಹೆಸರಿನ ನದಿಯ ಪಶ್ಚಿಮ ಗಂಧಿಳ ಎಂಬ ಪ್ರದೇಶದ ಮಧ್ಯಭಾಗದಲ್ಲಿ ವಿಜಯಾರ್ಧ ಎಂಬ ಹೆಸರಿನ ಬೆಟ್ಟವೊಂದಿದೆ. ಆ ಪರ್ವತಪಂಕ್ತಿಗಳ ಉತ್ತರದ ಭಾಗದಲ್ಲಿ ಲಕಾ ನಗರವು

ಮೆರೆಯುತ್ತಿದೆ. ಅದನ್ನು ಆಳುತ್ತಿದ್ದವನು ಅತಿಬಳ ಎಂಬ ರಾಜ. ಅವನ ಮಹಾರಾಣಿ ಮಹಾದೇವಿ ಎನ್ನುವವಳು. ಆ ಮಹಾದೇವಿ ಮತ್ತು ವಿಯಚ್ಚರ ಮಹಾರಾಜನಾದ ಅತಿಬಳನ ಮಗ ಮಹಾಬಳ. ಮಹಾಬಳನು ಯುವರಾಜನ ಹೊಣೆಯನ್ನು ಹೊರಲು ಸಮರ್ಥನಾದಾಗ ಅತಿಬಳನು ಮಗನಿಗೆ ಯುವರಾಜಪದವಿಯ ಕೊರಳ ಹಾರವನ್ನು ತೊಡಿಸಿದ. ಹೀಗೆ ಅತಿಬನು ರಾಜ್ಯಭಾ ಮಾಡುತ್ತಿರಲು.

**ತೊಡರ್ದೀ ಪುತ್ರಕಳತ್ರಮೋಹದೊಳಿದೇಕಟ್ದಿರ್ದಪೈ ನಿನ್ನ ಮೆ**
**ಬ್ಬಿಡಿದೇಕಾರಣಮಂತಕಂ ಕಡುಪಿನಿಂ ಕಂಠಗ್ರಹಂಗೆಯ್ಯದಿಂ**
**ತಡೆಯಂ ಚೇತರಿಸೆಂದು ಬಂದು ಕಿವಿಯೊಳ್ಪೇಟ್ವಂತೆವೊಲ್ಕೆನ್ನೆಯಿಂ**
**ದೊಡೆದೋರೊಂದೊಗೆತಂದುವಂದು ನರೆಗಳ್ ವಿದ್ಯಾಧರಾಧೀಶನಾ ೧೧**

**ಪದವಿಭಾಗ–ಅನ್ವಯ–ಅರ್ಥ:** ತೊಡರ್ದ = ಆವರಿಸಿರುವ, ಈ ಪುತ್ರಕಳತ್ರ ಮೋಹದೊಳ್ = ಮಗಹೆಂಡತಿಯ ಮೋಹದೊಳ್ = ವ್ಯಾಮೋಹದಲ್ಲಿ, ಏಕೆ, ಅಟಿಳ್ದಿರ್ದಪೈ = ಮುಳುಗಿದ್ದೀಯೆ? ನಿನ್ನ, ಮೆಬ್ಬಿಡು = ಭ್ರಮೆಗೆ, ಏ ಕಾರಣಂ = ಏನು ಕಾರಣ? ಅಂತಕಂ = ಯಮನು, ಕಡುಪಿನಿಂ = ಬಲವಾಗಿ, ಕಂಠಗ್ರಹಂಗೆಯ್ಯದೆ = ಕತ್ತು ಹಿಸುಕಲು, ಇಂ ತಡೆಯಂ = ಇನ್ನು ತಡಮಾಡುವುದಿಲ್ಲ, ಚೇತರಿಸು = ಎಚ್ಚೆತ್ತುಕೋ, ಎಂದು, ಬಂದು, ಕಿವಿಯೊಳ್ = (ಅವನ) ಕಿವಿಯಲ್ಲಿ, ಪೇಟ್ವಂತೆವೊಲ್ = ಹೇಳುವ ಹಾಗೆ, ಅಂದು = ಆಗ, ನರೆಗಳ್ = ನರೆತ ಕೂದಲುಗಳು, ವಿದ್ಯಾಧರ ಅಧೀಶನಾ = ವಿದ್ಯಾಧರ ರಾಜನಾದ ಅತಿಬಲನ, ಕೆನ್ನೆಯಿಂದೊಡೆದು = ಕೆನ್ನೆಯಿಂದ ಮೂಡಿ, ಓರೊಂದು = ಒಂದೊಂದು, ಒಗೆತಂದುವು = ಕಾಣಿಸಿಕೊಂಡವು.

**ಗದ್ಯಾನುಸರಣ:** 'ಮಡದಿಮಕ್ಕಳ ಮೋಹದಲ್ಲಿ ಏಕೆ ಮುಳುಗಿದ್ದೀಯೆ, ನಿನ್ನ ಈ ಭ್ರಮೆಗೆ ಕಾರಣವೇನು, ಇನ್ನು ತಡಮಾಡದೆ ಯಮನು ಬಂದು ನಿನ್ನ ಕತ್ತು ಹಿಸುಕದಿರಲಾರ, ಎಚ್ಚರಗೊಳ್ಳು' ಎಂದು ಹತ್ತಿರ ಬಂದು ಕಿವಿಯಲ್ಲಿ ಹೇಳಿದ ಹಾಗೆ ಅತಿಬಲನ ಕೆನ್ನೆಯಿಂದ ಮೊದಲುಗೊಂಡು ಅಲ್ಲಲ್ಲಿ ನರೆತ ಕೂದಲುಗಳು ಕಾಣಿಸಿಕೊಂಡುವು.

**ವ॥ ಅಂತು ಬಂದ ಪಳಿತಂಗಳಂ ಕಂಡು ಅದುವೆ ಸಂಸಾರನಿರ್ವೇಗಕಾರಣಮಾಗೆ ಮಹಾಬಳಂಗೆ ಅಂಬರಶ್ರೀಯನಿತ್ತು ಗುಣಧರ ಕೇವಳಿಗಳ ಪಾದಮೂಲದೊಳ್ ತಪೋವೃತ್ತಿಯನಾತಂ. ಇತ್ತ ಮಹಾಬಳ ಖಚರಪತಿಯುಂ ಗಗನಚರ ರಾಜ್ಯಮಂ ನಾಲ್ವರುಂ ಅಮಾತ್ಯರ ಮೆಯ್ಯೊಳ್ ನಿಜೆಸಿ ನಿರಾಕುಳಸ್ವಾಂತನಾಗಿ ರಸವದ್ಗೇಯಂಗಳೊಳ್ ಮೂಡುತುಂ ಮುಬುಗುತ್ತುಂ ಖಚರೀಜನಾನನ ನವಾಂಭೋಜಂಗಳೊಳ್ ಕಂಪನೀಟಿಕ್ಕೊಳುತುಂ ನಂದನರಾಜಿಯೊಳ್ ನಲಿಯುತುಂ ಪೊಟ್ತುಗಳೆದಂ. ಸ್ವಯಂಬುದ್ಧನೆ ತನಗೆ ಪರಮ ವಿಶ್ವಾಸಭೂಮಿಯಾಗೆ ತತ್ವರ್ಯಾಲೋಚಿತ ವಿಷಯಸುಖಾನುಭವನಿರತನುಮಾಗಿ ಮೂವತ್ತಾಜು ಲಕ್ಕೆ ಪುರ್ಬಂ ರಾಜ್ಯಂಗೆಯ್ಯೆ ಸ್ವಯಂಬುದ್ಧಂ,**

ಪದವಿಭಾಗ–ಅನ್ವಯ–ಅರ್ಥ: ಅಂತು = ಹಾಗೆ. ಬಂದ = ಮೇಲೇರಿ ಬಂದ, ಪಳಿತಂಗಳಂ = ನರೆತ ಕೂದಲನ್ನು, ನೋಡಿ ಕಂಡು = ನೋಡಿಯೂ.

ಅದುವೆ = ಆ ನರೆಗೂದಲುಗಳೇ, ಸಂಸಾರನಿರ್ವೇಗ = ಐಹಿಕತೆಯ ಬಗ್ಗೆ ವೈರಾಗ್ಯಕ್ಕೆ, ಕಾರಣಂ ಆಗೆ = ಕಾರಣವಾಗಲು, ಮಹಾಬಳಂಗೆ ಅಂಬರಶ್ರೀಯನ್ = ಅಂಬರಚರಶ್ರೀಯನ್ = ಖೇಚರಸಂಪತ್ತನ್ನು, ಇತ್ತು = ನೀಡಿ, ಗುಣಧರ ಕೇವಳಿಗಳ ಪಾದಮೂಲದೊಳ್ ತಪೋವೃತ್ತಿಯನ್ ಆಂತಂ=ಗುಣಧರರು ಎಂಬ ಮುನಿವರ್ಯನ ಬಳಿ ದೀಕ್ಷೆಯನ್ನು ಪಡೆದ. ಇತ್ತ ಮಹಾಬಳ ಖಚರಪತಿಯುಂ ಗಗನಚರ ರಾಜ್ಯಮಂ = ಈ ಕಡೆ ಮಹಾಬಳ ರಾಜನು ಖೇಚರಸಾಮ್ರಾಜ್ಯವನ್ನು, ನಾಲ್ವರುಂ ಅಮಾತ್ಯರ ಮೆಯ್ಯೊಳ್ ನಿಜೆಸಿ = ನಾಲ್ವರು ಸಚಿವರ ಹೆಗಲ ಮೇಲೆ ಹೊರಿಸಿ, ನಿರಾಕುಳಸ್ವಾಂತನಾಗಿ = ಯೋಚನೆಯಿಲ್ಲದ ಮನಸ್ಸಿನಿಂದ, ರಸವತ್ ಗೇಯಂಗಳೊಳ್ ಮೂಡುತುಂ ಮುಬುಗುತ್ತುಂ = ಇಂಪಾದ ಸಂಗೀತ ಹಾಡುಗಳಲ್ಲಿ ಮುಳುಗಿ ಏಳುತ್ತಲೂ, ಖಚರೀಜನ ಆನನ ನವ ಅಂಭೋಜಂಗಳೊಳ್ ಕಂಪನ್ ಈಟಿಕ್ಕೊಳುತುಂ = ಖೇಚರಸ್ತ್ರೀಯರ ಮುಖಗಳೆಂಬ ಹೊಸ ತಾವರೆಯ ಹೂಗಳ ಮಕರಂದವನ್ನು ಹೀರುತ್ತಲೂ, ನಂದನರಾಜಿಯೊಳ್ ನಲಿಯುತುಂ = ಉದ್ಯಾನವನಗಳಲ್ಲಿ ಸುತ್ತಾಡುತ್ತಲೂ, ಪೊಟ್ತು ಕಳೆವಂ = ಕಾಲವನ್ನು ಕಳೆಯುತ್ತಿದ್ದ. ಸ್ವಯಂಬುದ್ಧನೆ ತನಗೆ ಪರಮ ವಿಶ್ವಾಸಭೂಮಿಯಾಗೆ = ಸ್ವಯಂಬುದ್ಧನೆಂಬ ಮಂತ್ರಿಯು ಅವನಿಗೆ ಪರಮ ಆಪ್ತನಾದ ಸಲಹೆಗಾರನಾಗಿರಲು, ತತ್ ಪರ್ಯಾಳೋಚಿತ ವಿಷಯಸುಖಾನುಭವನಿರತನುಂ ಆಗಿ = ಅವನೊಡನೆ ಚರ್ಚಿಸುತ್ತ ಆದರೆ ಇಂದ್ರಿಯಸುಖಗಳಲ್ಲಿ ಮುಳುಗಿ, ಮೂವತ್ತಾಱು ಲಕ್ಕೆ ಪುರ್ಬಂ ರಾಜ್ಯಂಗೆಯ್ಯೆ = ಮೂವತ್ತಾರು ಲಕ್ಷ ಪೂರ್ವಗಳಷ್ಟು ದೀರ್ಘ ಕಾಲ ರಾಜ್ಯಭಾರಮಾಡಿರಲು, ಸ್ವಯಂಬುದ್ಧಂ = [ಒಮ್ಮೆ] ಸ್ವಯಂಬುದ್ಧನು

**ಗದ್ಯಾನುಸರಣ:** ಹಾಗೆ ಬಂದ ನರೆತ ಕೂದಲನ್ನು ನೋಡಿದಾಗ ಆ ನರೆಗೂದಲುಗಳೇ ಐಹಿಕತೆಯ ಬಗ್ಗೆ ವೈರಾಗ್ಯಕ್ಕೆ ಕಾರಣವಾಗಲು, ಮಹಾಬಳನಿಗೆ ಖೇಚರಸಂಪತ್ತನ್ನು ನೀಡಿ, ಗುಣಧರರು ಎಂಬ ಮುನಿವರ್ಯನ ಬಳಿ ದೀಕ್ಷೆಯನ್ನು ಪಡೆದ. ಈ ಕಡೆ ಮಹಾಬಳ ರಾಜನು ಖೇಚರಸಾಮ್ರಾಜ್ಯವನ್ನು ನಾಲ್ವರು ಸಚಿವರ ಹೆಗಲ ಮೇಲೆ ಹೊರಿಸಿ, ಯೋಚನೆಯಿಲ್ಲದ ಮನಸ್ಸಿನಿಂದ, ಇಂಪಾದ ಸಂಗೀತ ಹಾಡುಗಳಲ್ಲಿ ಮುಳುಗಿ ಏಳುತ್ತಲೂ, ಖೇಚರಸ್ತ್ರೀಯರ ಮುಖಗಳೆಂಬ ಹೊಸ ತಾವರೆಯ ಹೂಗಳ ಮಕರಂದವನ್ನು ಹೀರುತ್ತಲೂ, ಉದ್ಯಾನವನಗಳಲ್ಲಿ ಸುತ್ತಾಡುತ್ತಲೂ, ಕಾಲವನ್ನು ಕಳೆಯುತ್ತಿದ್ದ. ಸ್ವಯಂಬುದ್ಧನೆಂಬ ಮಂತ್ರಿಯು ಅವನಿಗೆ ಪರಮ ಆಪ್ತನಾದ ಸಲಹೆಗಾರನಾಗಿರಲು, ಅವನೊಡನೆ ಚರ್ಚಿಸುತ್ತ ಆದರೆ ಇಂದ್ರಿಯಸುಖಗಳಲ್ಲಿ ಮುಳುಗಿ, ಮೂವತ್ತಾರು ಲಕ್ಷ ಪೂರ್ವಗಳಷ್ಟು ದೀರ್ಘ ಕಾಲ ರಾಜ್ಯಭಾರಮಾಡಿರಲು, [ಒಮ್ಮೆ] ಸ್ವಯಂಬುದ್ಧನು

**ಮುಸು ಮುತ್ತಂತೆ ತೆರಳ್ದ ತನ್ನ ಮೊಗಮಂ ಕಂಡಳ್ಕನೋ ಕೂಡೆ ಜೋ**
**ಲ್ದು ಸಡಿಲ್ದಿರ್ದೊಡಲಳ್ಳೆಜೊಳ್ಳೆತನಮಂ ಮೇಣ್ಕಾಣನೋ ಸಂತತ**
**ವ್ಯಸನೋದ್ರೇಕದ ಕುಂದನೇನೊಣರನೋ ಶಕ್ತಿಕ್ಷಯಂಗಾಣನೋ**
**ಬಿಸುಡಂ ಮುನ್ನಿನ ತನ್ನ ಲಂಪಳಿಕೆಯಂ ಮತ್ತಂ ಜರಾಜರ್ಜರಂ** ೧೨

**ಪದವಿಭಾಗ-ಅನ್ವಯ-ಅರ್ಥ:** ಮುಸು ಮುತ್ತಂತೆ = ಮುದಿ ಕಪಿಯಂತೆ. ತೆರಳ್ಚ = ಸುಕ್ಕುಗಟ್ಟಿದ, ತನ್ನ ಮೊಗಮಂ ಕಂಡು + ಅಳ್ಕನೋ = ತನ್ನ ಮುಖವನ್ನು (ಕನ್ನಡಿಯಲ್ಲಿ) ನೋಡಿಕೊಂಡರೂ ಅಳುಕುವುದಿಲ್ಲವೇ? ಕೂಡೆ ಜೋಲ್ದು ಸಡಿಲ್ದಿರ್ದ + ಒಡಲ = ಜೊತೆಗೆ ಜೋತುಬಿದ್ದ ದೇಹದ. ಮೇಣ್ ಅಳ್ಕೆಜೊಳ್ಳೆತನಮಂ = ಮತ್ತು ನಿಸ್ಸಾರತೆಯನ್ನು, ಕಾಣನೋ, ಸಂತತ ವ್ಯಸನೋದ್ರೇಕದ ಕುಂದನ್ = ಒಂದೇ ಸಮನೆ ವ್ಯಸನೋದ್ರೇಕದಲ್ಲಿದ್ದು (ದೇಹದಲ್ಲಿ ಉಂಟಾದ) ಅಸಾಮರ್ಥ್ಯವನ್ನು, ಏನ್ + ಒಣರನೋ = ಗಮನಿಸನೋ? ಶಕ್ತಿಕ್ಷಯಂ + ಕಾಣನೋ = ಶಕ್ತಿಯು ಕಡಿಮೆಯಾಗಿರುವುದನ್ನು ಅನುಭವಿಸುತ್ತಿಲ್ಲವೇ? (ಆದರೂ) ಮತ್ತಂ ಜರಾಜರ್ಜರಂ = ಮುಪ್ಪಿನಿಂದ ತೀವ್ರವಾಗಿ ಜರ್ಜರಿತನಾದ ಮಹಾಬಲನು, ಮುನ್ನಿನ ತನ್ನ ಲಂಪಳಿಕೆಯಂ = ತನ್ನ ಮೊದಲಿನ ಲಾಂಪಟ್ಯವನ್ನು, ಬಿಸುಡಂ = ಬಿಡನಲ್ಲ!

**ಗದ್ಯಾನುಸರಣ:** ಮುದಿ ಕಪಿಯಂತೆ ಸುಕ್ಕುಗಟ್ಟಿದ, ತನ್ನ ಮುಖವನ್ನು ಕನ್ನಡಿಯಲ್ಲಿ ನೋಡಿಕೊಂಡರೂ ಮಹಾಬಲನಿಗೆ ಹೆದರಿಕೆಯಾಗದೇ? ಜೊತೆಗೆ ಸಡಿಲಗೊಂಡ ದೇಹದ ನಿಸ್ಸಾರತೆಯು ಅವನ ಗಮನಕ್ಕೆ ಬಾರದೇ? ಒಂದೇ ಸಮನೆ ವ್ಯಸನೋದ್ರೇಕದಲ್ಲಿದ್ದುದರಿಂದ ದೇಹದಲ್ಲಿ ಉಂಟಾದ ನಿಶ್ಶಕ್ತಿಯನ್ನು ಅವನಿನ್ನೂ ಗಮನಿಸಿಲ್ಲವೇ? ತನ್ನ ಶಕ್ತಿಯು ಕಡಿಮೆಯಾಗಿರುವುದು ಅನುಭವಕ್ಕೆ ಬಂದಿಲ್ಲವೇ? ಮುಪ್ಪಿನಿಂದ ನಜ್ಜುಗುಜ್ಜಾಗಿದ್ದರೂ ಅವನು ತನ್ನ ಹಿಂದಿನ ಲಾಂಪಟ್ಯವನ್ನು ಬಿಡುತ್ತಿಲ್ಲವಲ್ಲ!

**ವ। ಎಂದು ಆತ್ಮಗತದೊಳೆ ಬಗೆಯುತ್ತುಂ ಬಂದು ಖಚರಪತಿಯನೆಯ್ದಿ**

**ಅರ್ಥ:** ಎಂದು + ಆತ್ಮಗತದೊಳೆ ಬಗೆಯುತ್ತುಂ ಖಚರಪತಿಯನ್ + ಎಯ್ದಿ = ಹೀಗೆ ಮನಸ್ಸಿನಲ್ಲಿಯೇ ಯೋಚಿಸಿದ ಸ್ವಯಂಬುದ್ಧನು ರಾಜನ ಬಳಿ ಬಂದು

**ನಿನಗೀ ಸಂಸೃತಿವಾರಿರಾಶಿತಟಮತ್ಯಾಸನ್ನಮಾಸನ್ನಭ**
**ವ್ಯನೆಯೆಂದೆಯ್ದೆ ಮುನೀಂದ್ರದಿವ್ಯಮತದಿಂ ನಿಶ್ಚೈಸಿದೆಂ ಮಾಣಲಿ**
**ನ್ನೆನಸುಂ ಬಾರದು ನಿನ್ನೊಳಾತ್ಮಹಿತಮಂ ನಿಶ್ಚೈಸು ಸನ್ಮಾರ್ಗಸೂ**
**ಚನೆಗೆಯ್ದೆ ಶರಣಂ ಜಿನೇಂದ್ರಚರಣಂ ವಿದ್ಯಾಧರಾಧೀಶ್ವರಾ** ೧೩

**ಪದವಿಭಾಗ-ಅನ್ವಯ-ಅರ್ಥ:** ವಿದ್ಯಾಧರಾಧೀಶ್ವರಾ = ವಿದ್ಯಾಧರರಾಜನೇ, ಈ ಸಂಸೃತಿ = ಈ ಸಂಸಾರವೆಂಬ ವಾರಿರಾಶಿತಟಂ = ಸಮುದ್ರದ ದಡವು, ನಿನಗೆ, ಅತಿ + ಆಸನ್ನಂ = ತುಂಬ ಹತ್ತಿರದಲ್ಲಿದೆ, ಆಸನ್ನಭವ್ಯನೆ = ನೀನು ಆಸನ್ನಭವ್ಯ, ಎಂದು = ಎಂಬುದನ್ನು, ಮುನೀಂದ್ರದಿವ್ಯಮತದಿಂ = ಮುನಿಗಳ ದೈವಿಕ ಅಭಿಪ್ರಾಯದಿಂದ, ನಿಶ್ಚೈಸಿದೆಂ = ನಿರ್ಧಾರಕ್ಕೆ ಬಂದಿದ್ದೇನೆ; ಸನ್ಮಾರ್ಗಸೂಚನೆಗೆ + ಎಯ್ದೆ = ಶ್ರೇಯಸ್ಸಿನ ದಾರಿಯಲ್ಲಿ ಹೋಗಲು, ಮಾಣಲ್ + ಇನ್ನೆನಸುಂ ಬಾರದು = ತಡಮಾಡುವುದು ಇನ್ನು ಸ್ವಲ್ಪವಾದರೂ ಸರಿಯಲ್ಲ;

ನಿನ್ನೊಳ್ = ನಿನ್ನಲ್ಲಿ ನೀನೇ, ಆತ್ಮಹಿತಮಂ ನಿಶ್ಚೈಸು = ನಿನ್ನ ಹಿತದ ಬಗ್ಗೆ ನಿರ್ಧರಿಸು; ಜಿನೇಂದ್ರಚರಣಂ = ಜಿನನ ಪಾದಗಳೇ, (ನಿನಗೆ) ಶರಣಂ = ಶರಣು.

**ಗದ್ಯಾನುಸರಣ:** ವಿದ್ಯಾಧರರಾಜನೇ, ಈ ಸಂಸಾರವೆಂಬ ಸಮುದ್ರದ ದಡವು ನಿನಗೆ ತುಂಬ ಹತ್ತಿರದಲ್ಲಿದೆ; ನೀನು ಆಸನ್ನಭವ್ಯ, ಎಂಬುದು ನನಗೆ ಮುನಿಗಳ ದೈವವಾಕ್ಕುಗಳಿಂದ ದೃಢವಾಗಿದೆ; ಶ್ರೇಯಸ್ಸಿನ ದಾರಿಯಲ್ಲಿ ಹೋಗಲು ಇನ್ನು ಸ್ವಲ್ಪವೂ ತಡಮಾಡುವುದು ಸರಿಯಲ್ಲ; ನಿನ್ನ ಆತ್ಮಹಿತದ ಬಗ್ಗೆ ನೀನೇ ನಿರ್ಧರಿಸು; ಇನ್ನು ಜಿನನ ಪಾದಗಳೇ ನಿನಗೆ ಶರಣು.

**ವ॥ ಎಂದು ಮುಟ್ಟೆನುಡಿದು ತನ್ನ ಕಂಡ ಕನಸುಗಳನನುಕ್ರಮಂದಪ್ಪದಱಿಪಿದ ಮಂತ್ರಿಮುಖ್ಯನ ನುಡಿಯೊಳಪಗತಕಲುಷಹೃದಯನಾಗಿ ಅತಿಬಳಕುಮಾರನಂ ರಾಜ್ಯಭಾರದೊಳ್ ನಿಱಿಸಿ, ಜಿನೇಂದ್ರಾರ್ಚನಪುರಸ್ಸರಂ ವಾಚನಾಗ್ರಹಣಸಮೇತಮಾರಾಧನೆಯಿನರ್ಚಿಸಿ ವೀರಸಂಸ್ಥಾನಾ ರೂಢನಾದಾಗಳ್, ಸ್ವಯಂಬುದ್ಧಂ ಮಹಾಬಳನಂ ಜಾತರೂಪಧರನಂ ಮಾಡಿ, ಚತುರ್ವಿಧಾಹಾರಶರೀರಪ್ರತ್ಯಾಖ್ಯಾನಮಂ ಕೊಟ್ಟು ತೊಱೆಯಿಸಿದಂ. ಮಹಾಬಳಖಚರೇಂದ್ರಂ ಪ್ರಾಯೋಪಗಮನವಿಧಿಯಿಂದಮಾತ್ಮೀಯಶರೀರಭಾರಮನಿೞಿಪಿ, ಈಶಾನಕಲ್ಪದೊಳ್ ಮಱಲುಂದಿದನೆಟ್ಟೞುವಂತೆ [ಲಲಿತಾಂಗಂ] ಪುಟ್ಟಿದಂ. ಅಕೃತ್ರಿಮ ಚೈತ್ಯಾಲಯಂಗಳನರ್ಚಿಸಿ ತಪ್ತತಪನೀಯಚ್ಛಾಯನುಂ ನಿದ್ರಾ ಆಲಸಕ್ಷನಿಮೇ[illegible] ಶೋಕ ವಿಷಾದವಿರಹಿತನುಂ ಏಕಪಾರಾವಾರೋಪಮಾಯುಷ್ಯನಾಗಿ ಸ್ವಯಂಪ್ರಭೆ ಕನಕಲತೆ ಕನಕಮಾಳೆ ವಿದ್ಯುಲ್ಲತೆಯೆಂಬ ನಾಲ್ವರ್ ಮನೋನಯನವಲ್ಲಭೆಯರೊಳ್ ಸ್ವಯಂಪ್ರಭಾಭಿಧಾನೆಯರ್ ಪಲಂಬರುಮತಿ ಕ್ರಾಂತೆಯರಾಗೆ ತತ್ಸಂತಾನದೊಳ್,**

**ಪದವಿಭಾಗ-ಅನ್ವಯ-ಅರ್ಥ:** ಎಂದು ಮುಟ್ಟೆನುಡಿದು = ಎಂದು ಮನಮುಟ್ಟುವಂತೆ ಹೇಳಿ, ತನ್ನ ಕಂಡ ಕನಸುಗಳನ್ = ತಾನು ಕಂಡ ಕನಸುಗಳನ್ನು, ಅನುಕ್ರಮಂ ತಪ್ಪದೆ = ಕಂಡ ಕ್ರಮದಲ್ಲಿಯೇ, ಅಱಿಪಿದ = ನಿರೂಪಿಸಿದ, ಮಂತ್ರಿಮುಖ್ಯನ = ಸ್ವಯಂಬುದ್ಧನ, ನುಡಿಯೊಳ್ = ಮಾತುಗಳಿಂದ, ಅಪಗತಕಲುಷಹೃದಯನಾಗಿ = ಕಳೆದುಕೊಂಡ ಹೃದಯಕಲ್ಮಷಗಳುಳ್ಳವನಾಗಿ, ಅತಿಬಳಕುಮಾರನಂ = ತನ್ನ ಮಗ ಅತಿಬಳ ಕುಮಾರನನ್ನು, ರಾಜ್ಯಭಾರದೊಳ್ ನಿಱಿಸಿ = ರಾಜ್ಯದ ಪಟ್ಟದಲ್ಲಿ ಕೂರಿಸಿ, ಜಿನೇಂದ್ರಾರ್ಚನಪುರಸ್ಸರಂ = ಜಿನನ ಪೂಜೆಯಿಂದ ಕೂಡಿದ ವೀರಸಂಸ್ಥಾನ + ಆರೂಢನಾದಾಗಳ್ = ವೀರಶಯ್ಯೆಯಲ್ಲಿ ಮಲಗಿರಲು, ಸ್ವಯಂಬುದ್ಧಂ ಮಹಾಬಳನಂ ಜಾತರೂಪಧರನಂ ಮಾಡಿ = ಸ್ವಯಂಬುದ್ಧನು ಮಹಾಬಲನಿಗೆ ದಿಗಂಬರತ್ವವನ್ನು ನೀಡಿ, ಚತುರ್ವಿಧಾಹಾರ ಶರೀರಪ್ರತ್ಯಾಖ್ಯಾನಮಂ ಕೊಟ್ಟು ತೊರೆಯಿಸಿದಂ = ಅನ್ನ, ಪಾನ, ಖಾದ್ಯ ಮತ್ತು ಲೇಹ್ಯಗಳೆಂಬ ನಾಲ್ಕೂ ಬಗೆಯ ಆಹಾರವನ್ನು ಬಿಡುವಂತೆ ಮಾಡಿದ. ಮಹಾಬಳಖಚರೇಂದ್ರಂ = ಮಹಾಬಲನು, ಪ್ರಾಯೋಪಗಮನವಿಧಿಯಿಂದಮ್ = ಪ್ರಾಯೋಪಗಮನವಿಧಿಯ ಮೂಲಕವಾಗಿ, ಆತ್ಮೀಯಶರೀರಭಾರಮನ್ + ಇೞಿಪಿ = ತನ್ನ ದೇಹದ ಭಾರವನ್ನು ಇಳಿಸಿ (ಎಂದರೆ ಮರಣಹೊಂದಿ).

ಈಶಾನಕಲ್ಪದೊಳ್ = ಈಶಾನಕಲ್ಪದಲ್ಲಿ, ಮಱಲುಂದಿವಸ್ ಎೞ್ಚುವಂತೆ [ಲಲಿತಾಂಗಂ] ಪುಟ್ಟಿದಂ = ಮೈಮರೆತು ಮಲಗಿದವನು ನಿದ್ದೆಯಿಂದ ಎಚ್ಚೆತ್ತವನ ಹಾಗೆ ಹುಟ್ಟಿದನು. ಅಕೃತ್ರಿಮ ಚೈತ್ಯಾಲಯಂಗಳನ್ ಅರ್ಚಿಸಿ = ಸಹಜವಾಗಿದ್ದ ಜಿನಾಲಯಗಳಲ್ಲಿ ಪೂಜೆಗೈದು, ತಪ್ತತಪನೀಯಚ್ಛಾಯನುಂ = ಕಾದ ಅಪರಂಜಿಯಂತಹ ಮೈಬಣ್ಣವುಳ್ಳವನೂ, ನಿದ್ರಾ ಆಲಸ ಅಕ್ಷಿನಿಮೇಷ ಜರಾ ಶೋಕ ವಿಷಾದವಿರಹಿತನುಂ = ನಿದ್ದೆ ಆಲಸ್ಯ ಕಣ್ಣು ಮಿಟುಕಿಸುವುದು ರೋಗ ದುಃಖ ಖಿನ್ನತೆಗಳಿಲ್ಲದವನಾಗಿ, ಏಕಪಾರಾವಾರ ಉಪಮಾ ಆಯುಷ್ಯನಾಗಿ = ಒಂದು ಸಾಗರದಷ್ಟು ಕಾಲದ ಆಯುಸ್ಸನ್ನು ಪಡೆದು, ಸ್ವಯಂಪ್ರಭೆ ಕನಕಲತೆ ಕನಕಮಾಳೆ ವಿದ್ಯುಲ್ಲತೆಯೆಂಬ ನಾಲ್ವರ್ = ಈ ಹೆಸರಿನ ನಾಲ್ವರು, ಮನೋನಯನ ವಲ್ಲಭೆಯರೊಳ್ = ಪ್ರೇಯಸಿಯರಲ್ಲಿ, ಸ್ವಯಂಪ್ರಭಾ ಅಭಿಧಾನೆಯರ್ ಪಲಂಬರುಂ ಅತಿಕ್ರಾಂತೆಯರಾಗೆ = ಸ್ವಯಂಪ್ರಭೆ ಎಂಬ ಹೆಸರಿನ ಹಲವರು ತೀರಿಕೊಳ್ಳಲು, ತತ್ ಸಂತಾನದೊಳ್ = ಆ ಸರಣಿಯಲ್ಲಿ,

**ಗದ್ಯಾನುಸರಣ:** ಎಂದು ಮನಮುಟ್ಟುವಂತೆ ಹೇಳಿ, ತಾನು ಕಂಡ ಕನಸುಗಳನ್ನು ಕಂಡ ಕ್ರಮದಲ್ಲಿಯೇ ನಿರೂಪಿಸಿದ ಸ್ವಯಂಬುದ್ಧನ ಮಾತುಗಳಿಂದ ತನ್ನ ಹೃದಯಕಲ್ಮಷಗಳನ್ನು ಕಳೆದುಕೊಂಡವನಾಗಿ, ತನ್ನ ಮಗ ಅತಿಬಳಕುಮಾರನನ್ನು ರಾಜ್ಯದ ಪಟ್ಟದಲ್ಲಿ ಕೂರಿಸಿ ತಾನು ಜಿನನ ಪೂಜೆಯಿಂದ ಕೂಡಿದ ವೀರಶಯ್ಯೆಯಲ್ಲಿ ಮಲಗಿದ; ಸ್ವಯಂಬುದ್ಧನು ಮಹಾಬಲನಿಗೆ ದಿಗಂಬರತ್ವವನ್ನು ನೀಡಿ, ಅನ್ನ, ಪಾನ, ಖಾದ್ಯ ಮತ್ತು ಲೇಹ್ಯಗಳೆಂಬ ನಾಲ್ಕು ಬಗೆಯ ಆಹಾರವನ್ನು ಬಿಡುವಂತೆ ಮಾಡಿದ. ಮಹಾಬಲನು ಪ್ರಾಯೋಪಗಮನವಿಧಿಯ ಮೂಲಕವಾಗಿ ತನ್ನ ದೇಹದ ಭಾರವನ್ನು ಇಳಿಸಿ (ಎಂದರೆ ಮರಣಹೊಂದಿ), ಮೈಮರೆತು ಮಲಗಿದವನು ನಿದ್ದೆಯಿಂದ ಎಚ್ಚೆತ್ತವನ ಹಾಗೆ ಈಶಾನಕಲ್ಪದಲ್ಲಿ ಹುಟ್ಟಿದನು. ಸಹಜವಾಗಿದ್ದ ಜಿನಾಲಯಗಳಲ್ಲಿ ಪೂಜೆಗೈದು, ಕಾದ ಅಪರಂಜಿಯಂತಹ ಮೈಬಣ್ಣವುಳ್ಳವನೂ, ನಿದ್ದೆ ಆಲಸ್ಯ ಕಣ್ಣು ಮಿಟುಕಿಸುವುದು ರೋಗ ದುಃಖ ಮತ್ತು ಖಿನ್ನತೆಗಳಿಲ್ಲದವನಾಗಿ, ಒಂದು ಸಾಗರದಷ್ಟು ಕಾಲದ ಆಯುಸ್ಸನ್ನು ಪಡೆದು, ಸ್ವಯಂಪ್ರಭೆ ಕನಕಲತೆ ಕನಕಮಾಳೆ ಎಂಬ ಹೆಸರಿನ ತನ್ನ ನಾಲ್ವರು ಪ್ರೇಯಸಿಯರಲ್ಲಿ, ಸ್ವಯಂಪ್ರಭೆ ಎಂಬ ಹೆಸರಿನ ಹಲವರು ತೀರಿಕೊಂಡರು. ಆ ಸರಣಿಯಲ್ಲಿ,

[**ವಿಶೇಷ ವಿಚಾರ:** ದೇವಲೋಕದಲ್ಲಿ ಸ್ತ್ರೀಯರ ಆಯಸ್ಸು ಪುರುಷರದಕ್ಕಿಂತ ತುಂಬ ಕಡಿಮೆ; ಹಾಗಾಗಿ ಲಲಿತಾಂಗನ ಜೀವಿತಾವಧಿಯಲ್ಲಿ ಹಲವರು ಗತಿಸಿಹೋಗುತ್ತಾರೆ; ಹೊಸಬರು ಹುಟ್ಟುತ್ತಾರೆ. ಪ್ರಾಯಶಃ ಈ ಸ್ವಯಂಪ್ರಭೆ ಆ ಹೆಸರಿನ ಸರಣಿಯಲ್ಲಿ ಹುಟ್ಟಿದ ಕೊನೆಯವಳು.]

**ಅಭಿನವಪಾರಿಜಾತಕುಸುಮಾಸವಮೊರ್ಮೊದಲುಣ್ಮೆ ದೇವದುಂ**
**ದುಭಿ ನಭದೊಳ್ ಪೊದಳ್ದೆಸೆಯೆ ಕಣ್ಗೆಸೆದಿರ್ಪ ನಿಜಾಂಗಸಂಗತ**
**ಪ್ರಭೆ ಸುರಲೋಕಮಂ ಬೆಳಗೆ ವಿಸ್ಮಯಮಪ್ಪಿನಮಾಗಳಾ ಸ್ವಯಂ**
**ಪ್ರಭೆ ಲಲಿತಾಂಗನಳ್ಕೆರ್ದೆಗೆ ತೊಟ್ಟನೆ ಬೇಂಟಮೆ ಪುಟ್ಟೆ ಪುಟ್ಟಿದಳ್** ೧೪

**ಪದವಿಭಾಗ–ಅನ್ವಯ–ಅರ್ಥ:** ಅಭಿನವ = ಹೊಸ, ಪಾರಿಜಾತಕುಸುಮ + ಆಸವಂ = ಪಾರಿಜಾತದ ಹೂವಿನ ಮಕರಂದವು, ಒರ್ಮೊದಲ್ + ಉಣ್ಮೆ = ಇದ್ದಕ್ಕಿದ್ದಂತೆ ತುಂಬಿಕೊಳ್ಳುವಂತೆ, ನಭದೊಳ್ = ಆಗಸದಲ್ಲಿ, ದೇವದುಂದುಭಿ = ದೇವವಾದ್ಯಗಳು, ಪೊದಳ್ದು + ಎಸೆಯೆ = ವ್ಯಾಪಿಸಿಕೊಳ್ಳಲು, ಕಣ್ಗೆ + ಎಸೆದಿರ್ಪ = ಕಂಗೊಳಿಸುವ, ನಿಜ + ಅಂಗಸಂಗತಪ್ರಭೆ = ತನ್ನ ದೇಹದ ಕಾಂತಿಯು, ಸುರಲೋಕಮಮಂ ಬೆಳಗೆ = ದೇವಲೋಕವನ್ನು ಬೆಳಗಿಸುವಂತೆ, ವಿಸ್ಮಯಮಪ್ಪಿನಂ = ಅಚ್ಚರಿಯುಂಟಾಗುವಂತೆ, ಲಲಿತಾಂಗನ + ಅಳ್ಕೆರ್ದೆಗೆ = ಲಲಿತಾಂಗನ ಕೋಮಲಹೃದಯದಲ್ಲಿ, ತೊಟ್ಟನೆ = ಇದ್ದಕ್ಕಿದ್ದಂತೆ, ಬೇಂಟಮೆ ಪುಟ್ಟೆ = ಪ್ರಣಯಭಾವವು ಹುಟ್ಟುವಂತೆ, ಆಗಳ್ ಆ ಸ್ವಯಂಪ್ರಭೆ = ಆಗ ಸ್ವಯಂಪ್ರಭೆಯು, ಪುಟ್ಟಿದಳ್ = ಹುಟ್ಟಿದಳು

**ಗದ್ಯಾನುಸರಣ:** ಹೊಸ ಪಾರಿಜಾತದ ಹೂವಿನಲ್ಲಿ ಇದ್ದಕ್ಕಿದ್ದಂತೆ ಮಕರಂದವು ತುಂಬಿಕೊಳ್ಳುವಂತೆ, ಆಗಸದಲ್ಲಿ ದೇವವಾದ್ಯಗಳ ಶಬ್ದವು ವ್ಯಾಪಿಸಿಕೊಳ್ಳಲು, ಕಂಗೊಳಿಸುವ ತನ್ನ ದೇಹಕಾಂತಿಯು ದೇವಲೋಕವನ್ನು ಅಚ್ಚರಿಯುಂಟುಮಾಡಿ ಬೆಳಗಿಸುವಂತೆ – ಲಲಿತಾಂಗನ ಕೋಮಲಹೃದಯದಲ್ಲಿ ಇದ್ದಕ್ಕಿದ್ದಂತೆ ಪ್ರಣಯಭಾವವನ್ನು ಹುಟ್ಟಿಸುವಂತೆ ಸ್ವಯಂಪ್ರಭೆಯು ಹುಟ್ಟಿದಳು.

[**ವಿಶೇಷ ವಿಚಾರ:** ದೇವಲೋಕದಲ್ಲಿ ಜನಿಸುವವರು ಹುಟ್ಟುವಾಗಲೇ ಯೌವನದಲ್ಲಿರುತ್ತಾರೆ]

**ನೆಗಟ್ದಮರಾಂಗನಾಜನದ ರೂಪುಗಳೆಲ್ಲಮದೀಕೆಯೊಂದು ದೇ**
**ಸೆಗೆ ನಿಮಿರ್ವೊಂದು ಪುರ್ವಿನ ನಯಕ್ಕಮಪುರ್ವೊಂದದಗುಂತಿಗೊಂದು ಭಂ**
**ಗಿಗೆ ನೆಗಟಿಳ್ದೊಂದು ಮೆಲ್ಪಿನ ತೊದಳ್ನುಡಿಗಪ್ಪೊಡಮೆಯ್ದೆ ವಾರವೇ**
**ನೊಗಸುಗಮೆಂದು ತಳ್ತಗಲನಾಕೆಯನಾ ಲಲಿತಾಂಗವಲ್ಲಭಂ** ೧೫

**ಪದವಿಭಾಗ–ಅನ್ವಯ–ಅರ್ಥ:** ನೆಗಟ್ದ + ಅಮರಾಂಗನಾಜನದ = ಪ್ರಸಿದ್ಧರಾದ ದೇವತಾಸ್ತ್ರೀಯರೆಲ್ಲರ, ರೂಪುಗಳೆಲ್ಲಂ = ಸೌಂದರ್ಯವೆಲ್ಲವೂ, ಅದು + ಈಕೆಯ + ಒಂದು ದೇಸೆಗೆ = ಇವಳೊಂದು ರೂಪಿಗೆ, ನಿಮಿರ್ವ + ಒಂದು ಪುರ್ವಿನ ನಯಕ್ಕಂ = ನೀಳವಾದ ಹುಬ್ಬಿನ ಚೆಲುವಿಗೆ, ಅರ್ವು + ಒಂದದು = ಹೆಚ್ಚಿನದಲ್ಲ; ಅಗುಂತಿಗೆ + ಒಂದು ಭಂಗಿಗೆ = ಅತಿಶಯವಾದ ಇವಳ ಭಂಗಿಗೂ, ನೆಗಟ್ದ + ಒಂದು ಮೆಲ್ಪಿನ ತೊದಳ್ನುಡಿಗೆ + ಅಪ್ಪೊಡಂ = ಇಂಪಾದ ಒಂದು ತೊದಲು ನುಡಿಗೂ, ಎಯ್ದೆ ವಾರವು = ಹತ್ತಿರವೂ ಬಾರವು; ಏನ್ + ಒಗಸುಗಂ + ಎಂದು = ಎಷ್ಟು ಅತಿಶಯವಾದವು ಎಂದು, ಆ ಲಲಿತಾಂಗವಲ್ಲಭಂ = ಲಲಿತಾಂಗನು, ಆಕೆಯನ್ = ಅವಳನ್ನು, ತಳ್ತು = ಸೇರಿ, ಅಗಲನ್ = ಬೇರೆಯಾಗಲಾರ

**ಗದ್ಯಾನುಸರಣ:** ಪ್ರಸಿದ್ಧರಾದ ದೇವತಾಸ್ತ್ರೀಯರೆಲ್ಲರ ಸೌಂದರ್ಯವೆಲ್ಲ ಇವಳೊಂದು ರೂಪಿಗೂ, ನೀಳವಾದ ಹುಬ್ಬಿನ ಚೆಲುವಿಗೂ ಹೆಚ್ಚಾಗಲಾರದು; ಅತಿಶಯವಾದ ಇವಳ ಭಂಗಿಗೂ, ಇವಳ ಇಂಪಾದ ಒಂದು ತೊದಲು ನುಡಿಗೂ

ಸಮನಾಗವು; ಇವಳ ಚೆಲುವು ಅಷ್ಟು ಅತಿಶಯವಾದುದು ಎಂದು ಲಲಿತಾಂಗನು ಅವಳನ್ನು ಬಿಟ್ಟಿರದಾದ.

ಅಣಿಮಾದ್ಯಷ್ಟಗುಣಪ್ರವೀಣವಿಭವಂ ದೇವಾಂಗನಾಸನ್ಮನಃ
ಪ್ರಣಯಪ್ರೀಣಿತಮಾನಸಂ ಸುರವಧೂಲೀಲಾವಧೂತಪ್ರತಿ
ಕ್ಷಣಚಂಚಚ್ಚಮರೀರುಹಂ ಪಟುನಟಪ್ರಾರಬ್ಧಸಂಗೀತಕಂ
ತಣಿದಂ ಸಂತತಮಿಂತು ದಿವ್ಯಸುಖದೊಳ್ ಸಂಸಾರಸಾರೋದಯಂ ೧೬

**ಪದವಿಭಾಗ-ಅನ್ವಯ-ಅರ್ಥ:** ಅಣಿಮಾದಿ + ಅಷ್ಟಗುಣ = ಅಣಿಮಾ ಮುಂತಾದ ಎಂಟು ಗುಣಗಳಲ್ಲಿ, ಪ್ರವೀಣವಿಭವಂ = ತನಗಿರುವ ಪ್ರಾವೀಣ್ಯದ ವೈಭವವುಳ್ಳವನೂ, ದೇವಾಂಗನಾಸನ್ಮನಃಪ್ರಣಯಪ್ರೀಣಿತಮಾನಸಂ = ದೇತಾಸ್ತ್ರೀಯರ ಪ್ರಣಯದಿಂದ ಸಂಪ್ರೀತನಾದ ಮನಸ್ಸುಳ್ಳವನೂ. ಸುರವಧೂ = ದೇವತಾ ಸ್ತ್ರೀಯರಿಂದ, ಲೀಲಾ + ಅವಧೂತಪ್ರತಿಕ್ಷಣಚಂಚತ್ + ಚಮರೀರುಹಂ = ಒನಪಿನಿಂದ ಸತತವಾಗಿ ಬೀಸಲ್ಪಟ್ಟ ಚಾಮರವುಳ್ಳವನೂ, ಪಟುನಟಪ್ರಾರಬ್ಧ ಸಂಗೀತಕಂ = ಸಮರ್ಥ ನಟರಿಂದ ಆರಂಭಿಸಲಾದ ಸಂಗೀತವನ್ನಾಲಿಸುವವನೂ, ಸಂಸಾರಸಾರೋದಯಂ = ಸಂಸಾರಸಾರದ ಏಳಿಗೆಯನ್ನು ಪಡೆದ ಲಲಿತಾಂಗನು, ಇಂತು = ಹೀಗೆ, ಸಂತತಂ = ನಿರಂತರವಾದ ದಿವ್ಯಸುಖದೊಳ್ = ದೇವಲೋಕದ ಸುಖದಲ್ಲಿ, ತಣಿದಂ = ಮುಳುಗಿಹೋದ

**ಗದ್ಯಾನುಸರಣ:** ಅವನು ಅಣಿಮಾ ಮುಂತಾದ ಎಂಟು ಗುಣಗಳಲ್ಲಿ ಪ್ರಾವೀಣ್ಯವನ್ನು ಪಡೆದ; ದೇವತಾಸ್ತ್ರೀಯರ ಪ್ರಣಯದಿಂದ ಸಂತುಷ್ಟಗೊಂಡ; ದೇವತಾಸ್ತ್ರೀಯರು ಒನಪಿನಿಂದ ಅವನಿಗೆ ಚಾಮರಗಳಿಂದ ಗಾಳಿ ಹಾಕುತ್ತಿದ್ದರು, ಸಮರ್ಥ ನಟರು ಇಂಪಾದ ಸಂಗೀತವನ್ನು ಕೇಳಿಸುತ್ತಿದ್ದರು; ಹೀಗೆ, ಸಂಸಾರಸಾರೋದಯನಾದ ಲಲಿತಾಂಗನು ದೇವಲೋಕದ ನಿರಂತರ ಸುಖದಲ್ಲಿ ಮುಳುಗಿಹೋದ.

[**ವಿಶೇಷ ವಿಚಾರ:** ಅಣಿಮಾದ್ಯಷ್ಟಗುಣ = ಯೋಗದಿಂದ ಸಿದ್ಧಿಸುವ ಅಣಿಮಾ, ಮಹಿಮಾ, ಲಘಿಮಾ, ಗರಿಮಾ, ಪ್ರಾಪ್ತಿ, ಪ್ರಾಕಾಮ್ಯ, ಈಶತ್ವ, ವಶಿತ್ವ ಎಂಬ ಸಾಮರ್ಥ್ಯಗಳು]

**ವ॥ ಅಂತಾತ್ಮಪುಣ್ಯೋಪಾರ್ಜಿತ ಅಮರಲೋಕಭೋಗಂ ಏಕಸಾಗರಪ್ರಮಿತಜೀವಿತಂ ಅಱುದಿಂಗಳುಟೆದುವೆಂಬಂದಿಂಗೆ,**

**ಪದವಿಭಾಗ-ಅನ್ವಯ-ಅರ್ಥ:** ಅಂತು = ಹಾಗೆ, ಆತ್ಮಪುಣ್ಯ + ಉಪಾರ್ಜಿತ = ತನ್ನ ಪುಣ್ಯದಿಂದ ಗಳಿಸಿದ್ದ, ಅಮರಲೋಕಭೋಗಂ = ದೇವಲೋಕದ ಸುಖವು, ಏಕಸಾಗರಪ್ರಮಿತಜೀವಿತಂ = ಒಂದು ಸಾಗರಪ್ರಮಾಣದ ಜೀವನದಲ್ಲಿ, ಅಱುದಿಂಗಳ್ + ಉಟೆದುವು = ಇನ್ನು ಆರು ತಿಂಗಳು ಮಾತ್ರ ಉಳಿದಿವೆ, ಎಂಬಂದಿಂಗೆ = ಎನ್ನುವ ಹೊತ್ತಿನಲ್ಲಿ,

**ಗದ್ಯಾನುಸರಣ:** ಹಾಗೆ ತನ್ನ ಪುಣ್ಯದಿಂದ ಗಳಿಸಿದ್ದ ಒಂದು ಸಾಗರಪ್ರಮಾಣದ ದೇವಲೋಕದ ಸುಖಜೀವನದಲ್ಲಿ ಇನ್ನು ಆರು ತಿಂಗಳು ಮಾತ್ರ ಉಳಿದಿವೆ ಎನ್ನುವ ಹೊತ್ತಿನಲ್ಲಿ,

**ಸೂಡಿದ ಪಾರಿಜಾತದ ನಮೇರುವ ಬಾಸಿಗಮೊಯ್ಯನೊಯ್ಯನಿ**
**ರ್ಪೋಡಿದುದಂದಿನಂಗರುಚಿ ಕಣ್ಗೆಳಿದಾಯ್ತು ವಿಭೂಷಣಂಗಳೊಳ್**
**ತೀಡುವ ರಶ್ಮಿಗಳ್ ಮಸುಳ್ದುವಾಗುಳಿಯಾಯ್ತಿನಿತುಬ್ಬೆಗಂ ಮೊಗಂ**
**ಬಾಡೆ ತಗುಳ್ದು ಸೂಚಿಸಿದುವಾ ದಿವಿಜಂಗವಸಾನಕಾಲಮಂ** ೧೭

**ಪದವಿಭಾಗ–ಅನ್ವಯ–ಅರ್ಥ:** ಸೂಡಿದ = ಧರಿಸಿದ್ದ, ಪಾರಿಜಾತದ ನಮೇರುವ ಬಾಸಿಗಂ = ಪಾರಿಜಾತ ಸುರಗಿ ಹೂಗಳ ಮಾಲೆಯು, ಒಯ್ಯನೊಯ್ಯನೆ = ನಿಧಾನವಾಗಿ, ಇರ್ಪೋಡಿದುದು = ಬಾಡಲು ತೊಡಗಿತು; ಅಂದಿನ + ಅಂಗರುಚಿ = ಆಗಿನ ದೇಹಕಾಂತಿಯು, ಕಣ್ಗೆ + ಇಳಿದಾಯ್ತು = ನೋಡಲು ಕ್ಷೀಣವಾಯ್ತು; ವಿಭೂಷಣಂಗಳೊಳ್ = ಆಭರಣಗಳಲ್ಲಿ, ತೀಡುವ = ತುಂಬಿದ್ದ, ರಶ್ಮಿಗಳ್ = ಕಿರಣಗಳು, ಮಸುಳ್ದುವು = ಕುಂದಿದುವು; ಆಗುಳಿಯಾಯ್ತು = ಆಕಳಿಕೆ ಆರಂಭವಾಯಿತು, ಮೊಗಂ ಬಾಡೆ = ಮುಖವು ಕಾಂತಿಹೀನವಾಗಿ, ಇನಿತು + ಉಬ್ಬೆಗಂ = ಒಂದಷ್ಟು ಕಳವಳವು, ತಗುಳ್ದು = ತಲೆದೋರಿ, ದಿವಿಜಂಗೆ = ಲಲಿತಾಂಗನಿಗೆ, ಅವಸಾನಕಾಲಮಂ = ಮರಣಕಾಲವನ್ನು, ಸೂಚಿಸಿದುವು

**ಗದ್ಯಾನುಸರಣ:** ಅವನು ಧರಿಸಿದ್ದ ಪಾರಿಜಾತ ಸುರಗಿ ಹೂಗಳ ಮಾಲೆಯು ನಿಧಾನವಾಗಿ ಬಾಡಲತೊಡಗಿತು; ದೇಹಕಾಂತಿಯು ಕ್ಷೀಣವಾಯ್ತು; ಆಭರಣಗಳಲ್ಲಿನ ಹೊಳಪು ಕುಂದಿತು; ಆಕಳಿಕೆ ಬರಲು ಆರಂಭವಾಯಿತು; ಮುಖವು ಕಾಂತಿಹೀನವಾಯಿತು; ಒಂದಷ್ಟು ಕಳವಳವು ತಲೆದೋರಿತು – ಇವು ಲಲಿತಾಂಗನಿಗೆ ಮರಣಕಾಲವನ್ನು ಸೂಚಿಸಿದುವು.

[**ವಿಶೇಷ ವಿಚಾರ:** ಇಲ್ಲಿ ನಕಾರಾತ್ಮಕವಾಗಿ ಸಂಭವಿಸಿದ ಎಲ್ಲಕ್ಕೂ ವಿರುದ್ಧವಾದ ಸ್ಥಿತಿಯು ಅಮರರದು ಎಂದು ಭಾವ. ಲಲಿತಾಂಗನು ತನ್ನ ಶರೀರಕಾಂತಿಯಂತೆ ಬಾಡದ ಮಾಲೆಯನ್ನು ಧರಿಸಿದ್ದನೆಂಬುದು 'ಪೂರ್ವಪುರಾಣ'ದ ವರ್ಣನೆ – 'ತನುಚ್ಛಾಯಾಮಿವಾಮ್ಲಾನಿಂ ದಧಾನಃ ಪ್ರಜಮುಜ್ಜ್ವಲಂ' (ಪೂಪು ೫–೨೮೧)]

**ವ॥ ನಾಕಲೋಕಚ್ಯುತಿಯನಾಗಳಱಿದು ಮನದೊಳಳ್ಕಿ ಬೆಳ್ಕನೆವೋಗಿ,**

**ಪದವಿಭಾಗ–ಅನ್ವಯ–ಅರ್ಥ:** ನಾಕಲೋಕಚ್ಯುತಿಯನ್ = ದೇವಲೋಕದಿಂದ ಕೆಳಗೆ ಬೀಳುವುದನ್ನು, ಆಗಳ್ + ಅಱಿದು = ಆಗ ತಿಳಿದು, ಮನದೊಳ್ + ಅಳ್ಕಿ ಬೆಳ್ಕನೆವೋಗಿ = ಮನಸ್ಸಿನ ಅಳುಕಿನಿಂದ ದಿಗ್ಭ್ರಾಂತನಾಗಿ

**ಗದ್ಯಾನುಸರಣ:** ತಾನು ದೇವಲೋಕದಿಂದ ಚ್ಯುತಿಗೊಳ್ಳುವುದನ್ನು ತಿಳಿದು, ಲಲಿತಾಂಗನು ದಿಗ್ಭ್ರಾಂತನಾದ

**ಸುರತರುನಂದನಂಗಳಿರ ರತ್ನಪಿನದ್ಧವಿಮಾನಕುಟ್ಟಿಮಾಂ**
**ತರಸುರತಾಲಯಂಗಳಿರ ಚಾರುವಿಲೋಲಕಟಾಕ್ಷಪಾತಸೌಂ**

ದರಪರಿವಾರದೇವಿಯರಿರಾ ಕಡುಕೆಯ್ದು ಕೃತಾಂತನಿಂತು ನಿ
ರ್ನೆರಮೆಳೆದುಯ್ಯೆ ಬಾರಿಸದೆ ಕೆಮ್ಮನುಪೇಕ್ಷಿಸಿ ನೋಡುತಿರ್ಪಿರೇ ೧೮

**ಪದವಿಭಾಗ–ಅನ್ವಯ–ಅರ್ಥ:** ಸುರತರುನಂದನಂಗಳಿರ = ಎಲೈ ದೇವವೃಕ್ಷ ಸಮೂಹವೇ, ವಿಮಾನಕುಟ್ಟಿಮ + ಅಂತರ = ಶ್ರೀಪ್ರಭವಿಮಾನದ ನೆಲಗಟ್ಟುಗಳಲ್ಲಿನ. ರತ್ನವಿನದ್ಧ = ರತ್ನಖಚಿತವಾದ, ಸುರತಾಲಯಂಗಳಿರ = ಸಂಭೋಗಕೋಣೆಗಳೇ, ಚಾರುವಿಲೋಲಕಟಾಕ್ಷಪಾತ = ಸುಂದರವೂ ಚಂಚಲವೂ ಆದ ಕುಡಿನೋಟಗಳನ್ನು ಜೆಲ್ಲುವ. ಸೌಂದರಪರಿವಾರದೇವಿಯರಿರಾ = ಚೆಲುವೆಯರಾದ ಪರಿವಾರದೇವತೆಗಳೇ, ಇಂತು ಕೃತಾಂತನ್ = ಹೀಗೆ ಯಮನು, ಕಡುಕೆಯ್ದು = ಬಲವಂತವಾಗಿ, ನಿರ್ನೆರಂ = ಕರುಣೆಯಿಲ್ಲದೆ, ಎಳೆದುಯ್ಯೆ = ಎಳೆದೊಯ್ಯುತ್ತಿದ್ದರೆ, ಬಾರಿಸದೆ = ತಡೆಯದೆ, ಕೆಮ್ಮನೇ = ಸುಮ್ಮನೆ, ಉಪೇಕ್ಷಿಸಿ ನೋಡುತಿರ್ಪಿರೇ = ಕಡೆಗಣಿಸಿ ನೋಡುತ್ತಿರುವಿರಲ್ಲ!

**ಗದ್ಯಾನುಸರಣ:** ಎಲೈ ದೇವವೃಕ್ಷಸಮೂಹವೇ, ಶ್ರೀಪ್ರಭವಿಮಾನದ ರತ್ನಖಚಿತ ನೆಲಗಟ್ಟುಗಳಲ್ಲಿನ ಸಂಭೋಗಕೋಣೆಗಳೇ, ಸುಂದರವೂ ಚಂಚಲವೂ ಆದ ಕುಡಿನೋಟಗಳನ್ನು ಚೆಲ್ಲುವ ಚೆಲುವೆಯರಾದ ಪರಿವಾರದೇವತೆಗಳೇ, ನನ್ನನ್ನು ಯಮನು ಹೀಗೆ ಬಲವಂತವಾಗಿ ಕರುಣೆಯಿಲ್ಲದೆ ಎಳೆದೊಯ್ಯುತ್ತಿದ್ದರೆ, ಅದನ್ನು ತಡೆಯದೆ ಕಡೆಗಣಿಸಿ ಸುಮ್ಮನೆ ನೋಡುತ್ತಿರುವಿರಲ್ಲ!

**ಸಂತಸದಂತಮನೆಯ್ದಿ ಸುರತಾಮೃತದೊಳ್ ತಣಿದಟ್ಟಿಜಿಂ ಜಗಿ**
**ಲ್ತಂತಿರೆ ಪತ್ತಿ ಮೆಯ್ಗಳೆರಡಾದೊಡಮೇನಸುವೊಂದೆ ನೋಟಿಪ್ಪೊಡಂ**
**ಬಂತಿರೆ ನಿನ್ನೊಡನೆ ಭೋಗಿಸಲೀಯದೆ ಕೆಮ್ಮನೆನ್ನನು**
**ಯ್ವಂತಕನೆಂಬ ಬೂತನೆಲೆ ಮಾಣಿಸಲಾಗದೆ ಪೇಟ್ ಸ್ವಯಂಪ್ರಭೇ** ೧೯

**ಪದವಿಭಾಗ–ಅನ್ವಯ–ಅರ್ಥ:** ಅಟ್ಟಿಜಿಂ = ಒಲುಮೆಯಿಂದ, ಜಗಿಲ್ತಂತಿರೆ ಪತ್ತಿ = ಅಂಟಿಕೊಂಡಂತೆ ಕೂಡಿ, ಸಂತಸದ + ಅಂತಮನ್ + ಎಯ್ದಿ = ಆನಂದದ ಪರಮಾವಧಿಯನ್ನು ತಲುಪಿ, ಸುರತಾಮೃತದೊಳ್ = ಸಂಭೋಗಸುಖದಲ್ಲಿ, ತಣಿದು = ತೃಪ್ತಿಹೊಂದಿ, ನೋಟಪ್ಪೊಡೆ = ನೋಡಿದವರಿಗೆ, ಮೆಯ್ಗಳ್ + ಎರಡಾದೊಡಂ + ಏನ್ + ಅಸುವೊಂದೆ = ದೇಹಗಳೆರಡಾದರೂ ತಾನೇ ಏನು, ಇವರ ಪ್ರಾಣ ಒಂದೇ, ಎಂಬಂತಿರೆ = ಎನಿಸುವ ಹಾಗೆ, ನಿನ್ನೊಡನೆ ಭೋಗಿಸಲೀಯದೆ = ನಿನ್ನ ಜೊತೆಯಲ್ಲಿ ಸುರತಕ್ಕೆ ಅವಕಾಶವೀಯದೆ, ಕೆಮ್ಮನೆ + ಎನ್ನನ್ + ಉಯ್ವ = ಸುಮ್ಮಸುಮ್ಮನೆ ನನ್ನನ್ನು ಎಳೆದೊಯ್ಯುವ, ಅಂತಕನೆಂಬ ಬೂತನ್ = ಯಮನೆಂಬ ಪಿಶಾಚಿಯನ್ನು, ಎಲೆ ಸ್ವಯಂಪ್ರಭೇ = ಎಲೈ, ಸ್ವಯಂಪ್ರಭೆಯೇ, ಮಾಣಿಸಲಾಗದೆ ಪೇಟ್ = ತಡೆಯಲಾರೆಯಾ?

**ಗದ್ಯಾನುಸರಣ:** ಒಲುಮೆಯಿಂದ ಅಂಟಿಕೊಂಡಂತೆ ಕೂಡಿ. ಸಂಭೋಗ ಸುಖದಲ್ಲಿ ಆನಂದದ ತುತ್ತತುದಿಯನ್ನು ತಲುಪಿ ತೃಪ್ತಿಹೊಂದಿ. ನೋಡಿದವರಿಗೆ ಇವರ ದೇಹಗಳೆರಡಾದರೂ ಪ್ರಾಣ ಒಂದೇ ಎನಿಸುವ ಹಾಗೆ ನಿನ್ನ ಜೊತೆಯಲ್ಲಿ

ಸುರತಕ್ಕೆ ಅವಕಾಶವೀಯದೆ, ಸುಮ್ಮಸುಮ್ಮನೆ ನನ್ನನ್ನು ಎಳೆದೊಯ್ಯುವ ಈ ಯಮನೆಂಬ ಪಿಶಾಚಿಯನ್ನು ಸ್ವಯಂಪ್ರಭೆಯೇ ನೀನಾದರೂ ತಡೆಯಲಾರೆಯಾ?

[**ವಿಶೇಷ ವಿಚಾರ:** ಭೋಗತೀವ್ರತೆಯ ಹಿನ್ನೆಯಲ್ಲಿನ ಕವಿಯು ಸಾವಿನ ಭಯವನ್ನು ಚಿತ್ರಿಸುವ ಪರಿ ಅನನ್ಯವಾಗಿದೆ; ಇದು ಕಲ್ಪವೊಂದರಲ್ಲಿನ ಅಮರನ ಅನುಭವವೆಂದು ಹೇಳಿದ್ದರೂ ಇದು ನಿಜವಾಗಿ ಸಾವಿನ ತಲ್ಲಣದ ಎಲ್ಲ ಮಾನವರ ಅನುಭವವಾಗಿದೆ. ಸಾವು ಬಂದಾಗ ಅಚೇತನವಸ್ತುಗಳು ತನಗಾಗಿ ಮರುಗುವಂತೆ ಕಾಣುವ ಹಾಗೂ ಯಾರೂ ಅದನ್ನು ತಡೆಯಲಾಗದ ಪರಿಸ್ಥಿತಿಯು ಸಾವಿನ ಮುಂದೆ ವ್ಯಕ್ತಿಗಳ ಅಸಹಾಯಕತೆಯನ್ನು ಮನಂಬುಗುವಂತೆ ಈ ಪದ್ಯ ಚಿತ್ರಿಸುತ್ತದೆ. ಆದರೆ ಈ ವರ್ಣನೆ ಪೂರ್ವಪುರಾಣದಲ್ಲಿ ಇಲ್ಲ!]

**ವ॥ ಎಂದು ಧೈರ್ಯಮಂ ಪತ್ತುವಿಟ್ಟು ಅತಿಪ್ರಲಾಪಂಗೆಯ್ವ ಲಲಿತಾಂಗದೇವನಂ ಸಾಮಾನಿಕದೇವರ್ ಎಯ್ದೆವಂದು, "ನೀಂ ಭವ್ಯನೈ ಮತ್ತಿನ ಮಿಥ್ಯಾಜ್ಞಾನಿವೋಲ್ ನೀಂ ತರಳತೆವೆರಸಿಂತೇಕೆ ವಿಭ್ರಾಂತನಪ್ಪೈ" ಎನೆ ಬಗೆಗೊಂಡು ಆಱುಮಾಸಂ ಜಿನೇಂದ್ರನನ್ ಒಸೆದರ್ಚಿಸುತ್ತುಂ, ನೋಡೆ ನೋಡೆ ಶರತ್ಸಮಯಸಮುದಿತಜಳಧರರೂಪದಿಂದದೃಶ್ಯರೂಪನಾಗಿ – ಉತ್ಪಳಖೇಟಮೆಂಬುದು ಪೊೞಲ್, ಅದನಾಳ್ವದಗ್ರಭೂಪತಿ ವಜ್ರಬಾಹುನೃಪನ್, ಆ ನೃಪನ ಕಾಂತೆ ವಸುಂಧರೆ; ಅವರ್ಗೆ ಅಗ್ರಸೂನು ವಜ್ರಜಂಘನೆನೆ ತಲ್ಲಲಿತಾಂಗನೆ ಬಂದು ಪುಟ್ಟಿದಂ. ರಾಜಕುಮಾರಂ ಯೌವನಪ್ರಾದುರ್ಭಾವಮಂ ಪ್ರಕಟಂಮಾಡೆ, ಅವನ್ ದೇವಲೋಕ ದೊಳಿನಿತಾನುಂ ಕಾಲಮನನುಭವಿಸಿದನುಭವಕ್ಕೆ ಮೊದಲಿಗೆಯೆನಿಸಿದಾ ಸ್ವಯಂಪ್ರಭೆಯಂ ನೆನೆನೆನೆದು [ಇರೆ],**

**ಅನ್ನೆಗಂ ಈಶಾನಕಲ್ಪದೊಳಾ ಶ್ರೀಪ್ರಭವಿಮಾನದೊಳ್, ನಿಜಪ್ರಾಣವಲ್ಲಭವಿಯೋಗ ಶೋಕವ್ಯಾಕುಳೆಯಾಗಿರ್ದ ಸ್ವಯಂಪ್ರಭದೇವಿಯ ಸಮೀಪಕ್ಕೆ ಮಹತ್ತರದೇವಿಯರ್ ಬಂದು, "ಇಂತು ಬಾಯಟಿವುದೆ? ಗಾಂಪು, ಬಗೆಗೊಂಡು ಜಿನಪತಿಯಂ ಪೂಜಿಸು ಪಡೆವೆಯಿನಿಯನಂ ಮಱುಭವದೊಳ್" ಎಂಬುದುಂ, ಅದನೆ ಮನದೆಗೊಂಡು ಗುರುಪಂಚಕಮಂ ನೆನೆಯುತ್ತುಂ, ನಿಶಾಂತತಾರಕಾಕಾರದಿಂದೆ ಅದೃಶ್ಯರೂಪಿಯಾಗಿ ಪೂರ್ವವಿದೇಹದ ಪುಂಡರೀಕಿಣಿಯೆಂಬ ಪೊೞಲನಾಳ್ವ ವಜ್ರದಂತಭೂಪತಿಗಂ ಲಕ್ಷ್ಮೀಮತಿಮಹಾದೇವಿಗಂ ಮಗಳಾಗಿ [ಪುಟ್ಟಿ]**

**ಪದವಿಭಾಗ–ಅನ್ವಯ–ಅರ್ಥ:** ಎಂದು ಧೈರ್ಯಮಂ ಪತ್ತುವಿಟ್ಟು = ಎಂದು ಧೈರ್ಯವನ್ನು ಕಳೆದುಕೊಂಡು, ಅತಿಪ್ರಲಾಪಂಗೆಯ್ವ = ದೊಡ್ಡದಾಗಿ ರೋದಿಸುತ್ತಿದ್ದ, ಲಲಿತಾಂಗದೇವನಂ = ಲಲಿತಾಂಗದೇವನನ್ನು, ಸಾಮಾನಿಕದೇವರ್ = ಸಾಮಾನಿಕ ದೇವರುಗಳು, ಎಯ್ದೆವಂದು = ಹತ್ತಿರ ಬಂದು, ನೀಂ ಭವ್ಯನೈ = ನೀನು ಭವ್ಯ, ಮತ್ತಿನ ಮಿಥ್ಯಾಜ್ಞಾನಿವೋಲ್ = ಉಳಿದ ಮಿಥ್ಯಾಜ್ಞಾನಿಯಂತೆ, ತರಳತೆವರಸಿ = ಚಪಲತೆಯಿಂದ ಕೂಡಿ, ನೀಂ ಇಂತೇಕೆ ವಿಭ್ರಾಂತನಪ್ಪೈ = ನೀನು ಹೀಗೇಕೆ ಭ್ರಾಂತಿಗೊಳಗಾಗುವೆ? ಎನೆ = ಎಂದು ಹೇಳಲು, ಬಗೆಗೊಂಡು = ಮನಸ್ಸಿಗೆ ತಂದುಕೊಂಡು, ನೋಡೆ ನೋಡೆ = ನೋಡುತ್ತಿರುವಂತೆಯೇ, ಶರತ್ಸಮಯಸಮುದಿತ = ಶರತ್ಕಾಲದಲ್ಲಿ ಹುಟ್ಟಿದ, ಜಳಧರರೂಪದಿಂದ = ಮೋಡದ ರೀತಿಯಿಂದ, ಅದೃಶ್ಯರೂಪನಾಗಿ = ಕಣ್ಮರೆಯಾಗಿ. ಉತ್ಪಳಖೇಟಮೆಂಬುದು ಪೊೞಲ್ =

ಉತ್ಪಳಖೇಟವೆಂಬುದು ಒಂದು ನಗರ; ಅದನ್ = ಆ ನಾಡನ್ನು, ಆಳ್ವ ಭೂಪತಿ = ಆಳುವವನು, ವಜ್ರಬಾಹುನೃಪನ್ = ವಜ್ರಬಾಹು ಎನ್ನುವ ರಾಜ; ಆ ನೃಪನ ಕಾಂತೆ = ಆ ರಾಜನ ಮಹಾರಾಣಿ ವಸುಂಧರೆ ಎಂಬ ಹೆಸರಿನವಳು; ಅಂತು + ಅವರ್ಗೆ + ಅಗ್ರಸೂನು = ಅಂತಹ ಅವರ ಹಿರಿಯ ಮಗ, ವಜ್ರಜಂಘನ್ + ಎನೆ = ವಜ್ರಜಂಘ ಎಂಬ ಹೆಸರಿನಿಂದ, ಪುಟ್ಟಿದಂ = ಪುಟ್ಟಿದ. ರಾಜಕುಮಾರಂ ಯೌವನಪ್ರಾದುರ್ಭಾವಮಂ ಪ್ರಕಟಂಮಾಡೆ = ರಾಜಕುಮಾರನು ಯೌವನಪ್ರಾದುರ್ಭಾವಮಂ = ಅವನ ಹರೆಯದ ಬರುವಿಕೆಯನ್ನು, ಪ್ರಕಟಂಮಾಡೆ = ತೋರಿಸಲು, ದೇವಲೋಕದೊಳ್ + ಇನಿತಾನುಂ ಕಾಲಂ = ದೇವಲೋಕದಲ್ಲಿ ಇಷ್ಟು ಕಾಲ, ಅನನುಭವಿಸಿದನುಭವಕ್ಕೆ = ಪಡೆದ ಅನುಭವಕ್ಕೆ, ಮೊದಲಿಗೆ + ಎನಿಸಿದ = ಆರಂಭಗಾರ್ತಿ ಎನಿಸಿದ್ದ, ಆ ಸ್ವಯಂಪ್ರಭಯಂ ನೆನೆನೆನೆದು = ಸ್ವಯಂಪ್ರಭೆಯನ್ನು ನೆನೆಸಿಕೊಳ್ಳುತ್ತಿರಲು,

ಅನ್ನೆಗಂ ಈಶಾನಕಲ್ಪದೊಳಾ ಶ್ರೀಪ್ರಭವಿಮಾನದೊಳ್ = ಆ ಹೊತ್ತಿನಲ್ಲಿ ಈಶಾನಕಲ್ಪದ ಶ್ರೀಪ್ರಭವಿಮಾನದಲ್ಲಿಯೇ ಇದ್ದ, ನಿಜಪ್ರಾಣವಲ್ಲಭವಿಯೋಗ ಶೋಕವ್ಯಾಕುಳೆಯಾಗಿರ್ದ = ತನ್ನ ಪ್ರಾಣಪ್ರಿಯ ವಿಯೋಗದ ಶೋಕದಿಂದ ಬೇಯುತ್ತಿದ್ದ, ಸ್ವಯಂಪ್ರಭಾದೇವಿಯ ಸಮೀಪಕ್ಕೆ ಮಹತ್ತರದೇವಿಯರ್ ಬಂದು = ಸ್ವಯಂಪ್ರಭೆಯ ಬಳಿಗೆ ಸಾಮಾನಿಕ ದೇವಿಯರು, ಬಂದು, "ಇಂತು ಬಾಯಟೆವುದೆ = (ಇದಕ್ಕಾಗಿ) ಗೋಳಾಡುವುದೇ? ಗಾಂಪು = ದಡ್ಡತನ! ಬಗೆಗೊಂಡು = ಮನಃಪೂರ್ವಕವಾಗಿ, ಜಿನಪತಿಯ ಪೂಜಿಸು = ಜಿನಪತಿಯನ್ನು ಧ್ಯಾನಿಸು; ಇನಿಯನಂ = ನಿನ್ನ ಪ್ರಿಯಕರನನ್ನು, ಮಱುಭವದೊಳ್ ಪಡೆವೆ = ಮುಂದಿನ ಜನ್ಮದಲ್ಲಿ ಹೊಂದುತ್ತೀಯೆ", ಎಂಬುದುಂ + ಅದನೆ ಮನದೆ + ಏಗೊಂಡು = ಎಂದು ಹೇಳಲು, ಸ್ವಯಂಪ್ರಭೆಯು ಅದನ್ನು ಒಪ್ಪಿ, ಗುರುಪಂಚಕಮಂ ನೆನೆಯುತ್ತುಂ = ಪಂಚನಮಸ್ಕಾರಗಳನ್ನು ಮಾಡುತ್ತ, ನಿಶಾಂತ = ಬೆಳಗುಜಾವದ, ತಾರಕಾಕಾರದಿಂದ = ನಕ್ಷತ್ರದ ಆಕಾರದಂತೆ, ಅದೃಶ್ಯರೂಪಿಯಾಗಿ = ಕಣ್ಮರೆಯಾಗಿ, ಪೂರ್ವವಿದೇಹದ ಪುಂಡರೀಕಿಣಿಯೆಂಬ, ಪೊೞಲನ್ + ಆಳ್ವ = ನಗರವನ್ನಾಳುವ, ವಜ್ರದಂತಭೂಪತಿಗಂ = ವಜ್ರದಂತರಾಜನಿಗೂ, ಲಕ್ಷ್ಮೀಮತಿಮಹಾದೇವಿಗಂ = ಲಕ್ಷ್ಮೀಮಹಾರಾಣಿಗೂ, ಮಗಳಾಗಿ ಪುಟ್ಟಿ[ದಳು].

**ಗದ್ಯಾನುಸರಣ:** ಎಂದು ಧೈರ್ಯವನ್ನು ಕಳೆದುಕೊಂಡು ದೊಡ್ಡದಾಗಿ ರೋದಿಸುತ್ತಿದ್ದ ಲಲಿತಾಂಗದೇವನ ಬಳಿ ಸಾಮಾನಿಕ ದೇವರುಗಳು ಬಂದು, "ನೀನು ಭವ್ಯ, ಉಳಿದ ಮಿಥ್ಯಾಜ್ಞಾನಿಯಂತೆ ಚಪಲತೆಯಿಂದ ಕೂಡಿ ಹೀಗೇಕೆ ಭ್ರಾಂತಿಗೊಳಗಾಗುವೆ?" ಎಂದು ಹೇಳಲು, ಅದನ್ನು ಮನಸ್ಸಿಗೆ ತಂದುಕೊಂಡು, ನೋಡುತ್ತಿರುವಂತೆಯೇ, ಶರತ್ಕಾಲದಲ್ಲಿ ಹುಟ್ಟುವ, ಮೋಡದ ರೀತಿಯಿಂದ ಕಣ್ಮರೆಯಾಗಿ, ಉತ್ಪಳಖೇಟವೆಂಬ ನಗರದ ವಜ್ರಬಾಹು ಎನ್ನುವ ರಾಜ ಮತ್ತವನ

ಮಹಾರಾಣಿ ವಸುಂಧರೆ ಎಂಬ ದಂಪತಿಗೆ ಹಿರಿಯ ಮಗನಾಗಿ ವಜ್ರಜಂಘ ಎಂಬ ಹೆಸರಿನಿಂದ ಹುಟ್ಟಿದ. ಹರೆಯದ ಕುರುಹುಗಳು ರಾಜಕುಮಾರನು ಕಾಣಿಸಲು, ದೇವಲೋಕದಲ್ಲಿ ಇಷ್ಟು ಕಾಲ ಪಡೆದ ಅನುಭವಕ್ಕೆ, ಆರಂಭಗಾರ್ತಿ ಎನಿಸಿದ್ದ ಸ್ವಯಂಪ್ರಭೆಯನ್ನು ನೆನೆಸಿಕೊಳ್ಳುತ್ತಿದ್ದ;

ಆ ಹೊತ್ತಿನಲ್ಲಿ ಈಶಾನಕಲ್ಪದ ಶ್ರೀಪ್ರಭವಿಮಾನದಲ್ಲಿಯೇ ಇದ್ದ, ತನ್ನ ಪ್ರಾಣಪ್ರಿಯ ವಿಯೋಗದ ಶೋಕದಿಂದ ಬೇಯುತ್ತಿದ್ದ ಸ್ವಯಂಪ್ರಭೆಯ ಬಳಿಗೆ ಸಾಮಾನಿಕ ದೇವಿಯರು, ಬಂದು, "(ಇದಕ್ಕಾಗಿ) ಗೋಳಾಡುವುದೇ? ದಡ್ಡತನ! ಮನಃಪೂರ್ವಕವಾಗಿ ಜಿನಪತಿಯನ್ನು ಧ್ಯಾನಿಸು; ನಿನ್ನ ಪ್ರಿಯಕರನನ್ನು ಮುಂದಿನ ಜನ್ಮದಲ್ಲಿ ಹೊಂದುತ್ತೀಯೆ" ಎನ್ನಲು, ಸ್ವಯಂಪ್ರಭೆಯು ಅದನ್ನು ಒಪ್ಪಿ, ಪಂಚನಮಸ್ಕಾರಗಳನ್ನು ಮಾಡುತ್ತ, ಬೆಳಗುಜಾವದ ನಕ್ಷತ್ರದ ಆಕಾರದಂತೆ ಅದೃಶ್ಯರೂಪಿಯಾಗಿ ಕಣ್ಮರೆಯಾಗಿ, ಪೂರ್ವವಿದೇಹದ ಪುಂಡರೀಕಿಣಿಯೆಂಬ ನಗರವನ್ನಾಳುವ ವಜ್ರದಂತರಾಜ-ಲಕ್ಷ್ಮೀಮಹಾರಾಣಿಗೂ, ಮಗಳಾಗಿ ಹುಟ್ಟಿ[ದಳು].

**ಕಾಮನ ಮಂತ್ರದೇವತೆಯೊ ಕಾಮನ ವಿದ್ಯೆಯೊ ಬದ್ಧರಂ ಗೆಲಲ್**
**ಕಾಮನ ನಿಚ್ಚಮರ್ಚಿಸುವ ಕೈದುವೊ ಕಾಮನ ಮೋಹಪಾಶಮೋ**
**ಕಾಮನ ಕಾಣ್ಬ ಕೈಪಿಡಿಯೊ ವಿಸ್ಮಯಮಾದಪುದೆಂಬಿನಂ ಮಗಳ್**
**ಶ್ರೀಮತಿಯೆಂಬಳಾಗಿ ನವಯೌವನಲಕ್ಷ್ಮಿಯನೆಯ್ದೆ ತಾಳಿದಳ್** ೨೦

**ಪದವಿಭಾಗ-ಅನ್ವಯ-ಅರ್ಥ:** ಕಾಮನ ಮಂತ್ರದೇವತೆಯೊ ಕಾಮನ ವಿದ್ಯೆಯೊ, ಬದ್ಧರಂ ಗೆಲಲ್ = ಪ್ರೌಢರನ್ನು ಗೆಲ್ಲಲು, ಕಾಮನ = ಕಾಮನು, ನಿಚ್ಚಂ + ಅರ್ಚಿಸುವ ಕೈದುವೊ = ನಿತ್ಯವೂ ಪೂಜಿಸುವ ಆಯುಧವೋ, ಕಾಮನ ಮೋಹಪಾಶಮೋ = ಕಾಮನು ಬಳಸುವ ಕಾಮಪಾಶವೋ, ಕಾಮನ = ಕಾಮನು = ಕಾಣ್ಬ ಕೈಪಿಡಿಯೊ = ನೋಡಿಕೊಳ್ಳುವ ಕನ್ನಡಿಯೋ, ವಿಸ್ಮಯಮಾದಪುದು + ಎಂಬಿನಂ = ಆಶ್ಚರ್ಯ ಹುಟ್ಟಿಸುತ್ತದೆ ಎನ್ನುವಂತಿದ್ದ, ಮಗಳ್ ಶ್ರೀಮತಿಯೆಂಬಳ್ ಆಗಿ = ಶ್ರೀಮತಿ ಎಂಬ ಹೆಸರನ್ನು ಹೊಂದಿದ ಮಗಳಾಗಿ, (ಹುಟ್ಟಿ) ನವಯೌವನಲಕ್ಷ್ಮಿಯನ್ + ಎಯ್ದೆ ತಾಳಿದಳ್ = ಹೊಸ ಯೌವನವೆಂಬ ಸಂಪತ್ತನ್ನು ಹೊಂದಿದಳು

**ಗದ್ಯಾನುಸರಣ:** ಕಾಮನ ಮಂತ್ರದೇವತೆಯೊ, ಕಾಮನ ವಿದ್ಯೆಯೊ, ಪ್ರೌಢರನ್ನು ಗೆಲ್ಲಲು ಕಾಮನು ನಿತ್ಯವೂ ಪೂಜಿಸುವ ಆಯುಧವೋ, ಕಾಮನು ಬಳಸುವ ಕಾಮಪಾಶವೋ, ಕಾಮನು ನೋಡಿಕೊಳ್ಳುವ ಕನ್ನಡಿಯೋ – ಎಂಬಂತೆ ಆಶ್ಚರ್ಯ ಹುಟ್ಟಿಸುವಂತೆ ಚೆಲುವಾದ, ಮಗಳಾಗಿ ಹುಟ್ಟಿ ಶ್ರೀಮತಿ ಎಂಬ ಹೆಸರನ್ನು ಹೊಂದಿ ಸುಂದರ ಯುವತಿಯಾಗಿ ಅರಳಿದಳು.

**ವ॥ ಒಂದು ದಿವಸಂ ಆ ಕನ್ನೆ ಕನ್ನೆಮಾಡದೋವರಿಯೊಳಗೆ ಪವಡಿಸಿರೆ, ನಿಶಾವಸಾನಸಮಯದೊಳ್ ಭೋಂಕನೆಚ್ಚತ್ತು ಯಶೋಧರಗುರುಗಳ ಕೇವಳಜ್ಞಾನೋತ್ಪತ್ತಿಯೊಸಗೆಗೆ ನೆರೆದ ದೇವಾಗಮನಮಂ ನೋಡಲೊಡಂ, ಪೂರ್ವಭವಸ್ಮರಣಮಾಗಿ ದೇವಲೋಕದ**

ಲಲಿತಾಂಗದೇವನಂ ನೆನೆದು ಬೆಚ್ಚನುಸಿರ್ದು ಮೂರ್ಛೆವೋದಳ್. ಕನ್ಯಾಂತಃಪುರದ ಮಹತ್ತರಿಯರ್ ಎಂತಾನುಂ ಮೂರ್ಛೆಯಿಂದೆಚ್ಚಱಿಸಿ ಬೆಸಗೊಳೆ, "ಎನ್ನೆರ್ದೆಯೊಳ್ ಲಲಿತಾಂಗದೇವನಾ ಸೌಂದರರೂಪಮಿನ್ನುಂ ಶಾಸನಂ ಬರೆದುದು; ಪಿರಿದುಂ ಅನುರಾಗದಿಂದಂ ಬರೆದ ಪಟಮನಿದನರ್ಚಿಸಿ ಕನ್ಯಾವ್ರತದೊಳೆ ಕಾಲಮಂ ಕಟಿಪುವೆನ್" ಎಂದು ನುಡಿದು ಮಾಣ್ದ ಕನ್ನೆಯ ನುಡಿಯಂ ಪಂಡಿತೆಯೆಂಬ ದಾದಿ ಮನಂಗೊಂಡು, "ನಿನ್ನ ನಿರ್ವೇಗಮನ್ ಅಱಿದೆಂ; ಶಕ್ತಿಯೊಳ್ ಮುಕ್ತಿಯಂ ಸಾಧಿಸಲಕ್ಕುಂ. ನಿನ್ನಿನಿಯನನಱಿಸಲ್ ಸಾರ್ವೆನ್ ಚಿಂತಿಸದಿರ್" ಎಂದು ಮುನ್ನಮಾ ಪಟದೊಳಾಕೆ ಬರೆಯದೆ ಬಂಚಿಸಿದ ಅವಿನಾಣಂಗಳನಱಿಯೆ ಬೆಸಗೊಂಡು, ಪಟಮಂ ಕೈಕೊಂಡು ಪೋಗಿ, ಜಗತ್ಪೂತಮೆನಿಸಿದ ಮಹಾಪೂತಜಿನಾಲಯಕ್ಕೆ ಬಂದು, ಕೆಲದ ಪಟ್ಟಸಾಲೆಯ ಮುಂತೆ ನೇಱೆ ಕಾರ್ಯಸಿದ್ಧಿಯನೆ ಪಾರುತ್ತುಮಿರ್ದಳ್.

ಅನ್ನೆಗಂ ಒರ್ವಂ ರಾಜಕುಮಾರಂ ಶ್ರೀಮಜ್ಜಿನಭವನಮಂ ಮೂಮೆ ಬಲಗೊಂಡು ಸಿದ್ಧಶೇಷೆಯಂ ಕೊಂಡು ಪೊಱಮಟ್ಟು ಚಿತ್ರಪಟಮಂ ಭೋಂಕನೆ ಕಂಡು, ನೀಡುಂ ಭಾವಿಸಿ ನೋಡಿ ಇರುಳ್ ಕಂಡ ಕನಸಂ ಮಱುದೆವಸಂ ನೆನೆವಂತೆ ಸುರಲೋಕಸಮುದ್ಭವ ಸುಖಾನುಭವಮನಾಗಳೆ ನೆನೆದು, "ಹಾ! ಸ್ವಯಂಪ್ರಭೇ" ಎಂದು ಮೂರ್ಛೆವೋಪುದುಂ, ತುರಿಪದೆ ಕರಕಾಂಬುವಂ ತಳಿದು ಎಚ್ಚರಿಸೆ ಕುಮಾರಂ ಮೂರ್ಛೆ ತಿಳಿದು, "ಈ ಪಟಮನಿಲ್ಲಿಗಾರ್ತಂದರ್?" ಎಂಬನ್ನೆಗಂ ಭವದೀವಲ್ಲಭಂ ಲಲಿತಾಂಗಚರ ವಜ್ರಜಂಘನೆಂಬುದನಾಂ ತಿಳಿದು, ನೀಂ ಲಲಿತಾಂಗಚರನಪ್ಪುದಱಿಂದಂ ಸ್ವಕೀಯಾಪ್ರಾಣೇಶ್ವರಿ ತತ್ಸ್ವಯಂಪ್ರಭಾದೇವಿ ನಿಮ್ಮ ಮಾವಂ ವಜ್ರದಂತ ಚಕ್ರವರ್ತಿಗಂ ನಿಮ್ಮತ್ತೆ ಲಕ್ಷ್ಮೀಮತಿಮಹಾದೇವಿಗಂ ಶ್ರೀಮತಿಯೆಂಬ ಮಗಳಾಗಿ ಪುಟ್ಟಿದಳ್. ಆಕೆ ನಿನ್ನೊಳಾದ ವೃತ್ತಾಂತಮನೀ ಪಟದೊಳ್ ಬರೆದು, ಎನ್ನ ಕೈಯೊಳ್ ಕೊಟ್ಟು 'ಮದೀಯ ಪ್ರಾಣವಲ್ಲಭನನ್ ಅಱಿಸು' ಎಂದಟ್ಟಿಮೊಡೆ ಬಂದು ಇದನಿಲ್ಲಿ ಪಸರಿಸಿರ್ದೆಂ. ಮದೀಯಕಾಯಕ್ಲೇಶಫಳಂ ಇಂದು ನಿನ್ನ ಬರವಿನಿಂದಂ ಸಫಳಮಾದುದು" ಎಂಬುದುಂ ಆತಂ ರೋಮಾಂಚಶರೀರನಾದಂ.

ಅನ್ನೆಗಂ ಅತ್ತ ಶ್ರೀಮತಿ ವಜ್ರಜಂಘರ ಜನ್ಮಾಂತರ ಸ್ನೇಹರಸಾಮೃತಪಾತ್ರ ಚಿತ್ರಪಟವ್ಯತಿಕರಮಂ ವಜ್ರಬಾಹುಮಹೀಭುಜಂ ವಜ್ರಜಂಘಾನುಚರರಿಂದಂ ಅಱಿದು, ನಿಜತನೂಜಗುಣಮಣಿಮಾಲೆಗೆ ತತ್ ಕನ್ಯಾರತ್ನಮಂ ನಾಯಕಮಣಿ ಮಾಡಲೆಂದು ಆತ್ಮೀಯ ವಿಳಾಸಂ ಬೆರಸು ಬರೆ, ವಜ್ರದಂತಚಕ್ರವರ್ತಿಯುಂ ಅನಂತಸಾಮಂತ ಅಂತಃಪುರ ಪರಿವೃತನುಂ ಬಂಧುರಗಂಧಸಿಂಧುರಾರೂಢನಾಗಿ ಬಂದು

ಪದವಿಭಾಗ-ಅನ್ವಯ-ಅರ್ಥ: (ಹೀಗಿರಲು), ಒಂದು ದಿವಸಂ ಆ ಕನ್ನೆ = ಒಂದು ದಿವಸ ಶ್ರೀಮತಿಯು, ತನ್ನ, ಕನ್ನೆಮಾಡದ + ಓವರಿಯೊಳಗೆ = ಅರಮನೆಯ ಕೋಣೆಯಲ್ಲಿ, ಪವಡಿಸಿರೆ = ಮಲಗಿರಲು, ನಿಶಾ + ಅವಸಾನಸಮಯದೊಳ್ = ಬೆಳಗಿನ ಜಾವದ ಹೊತ್ತಿನಲ್ಲಿ, ಭೋಂಕನೆಚ್ಚತ್ತು = ಧಿಡರನೆ ಎಚ್ಚರಗೊಂಡು, ಯಶೋಧರಗುರುಗಳು, ಕೇವಳಜ್ಞಾನೋತ್ಪತ್ತಿಯ + ಒಸಗೆಗೆ = ಕೇವಲಜ್ಞಾನವನ್ನು ಪಡೆದ ಕಾರಣ ನಡೆಯುತ್ತಿದ್ದ ಉತ್ಸವಕ್ಕೆಂದು, ನೆರೆದ ದೇವಾಗಮನಮಂ ನೋಡಲೊಡಂ ಸೇರಿದ್ದ ದೇವತಾಸಮೂಹವನ್ನು ನೋಡಿದಾಕ್ಷಣ, ಪೂರ್ವಭವಸ್ಮರಣಂ ಆಗಿ = ಹಿಂದಿನ ಜನ್ಮದ ನೆನಪುಂಟಾಗಿ, ದೇವಲೋಕದ ಲಲಿತಾಂಗದೇವನಂ ನೆನೆದು = ದೇವಲೋಕದಲ್ಲಿ ತನ್ನೊಡನಿದ್ದ ಲಲಿತಾಂಗನನ್ನು

ನೆನಪಿಸಿಕೊಂಡು, ಬೆಚ್ಚನೆ ಉಸಿರ್ದು ಮೂರ್ಛೆವೋದಳ್ = ನಿಟ್ಟುಸಿರು ಬಿಟ್ಟು ಮೂರ್ಛೆ ಹೋದಳು. ಕನ್ಯಾಂತಃಪುರದ ಮಹತ್ತರಿಯರ್ = ಆ ಕನ್ನೆಮಾಡದ ಸೇವಕಿಯರು, ಎಂತಾನುಂ ಮೂರ್ಛೆಯಿಂದೆಚ್ಚೆಜಿಸಿ ಬೆಸಗೊಳೆ = ಅಂತೂ ಇಂತೂ ಉಪಚರಿಸಿ ಅವಳು ಎಚ್ಚರಗೊಂಡಾಗ ವಿಚಾರಿಸಲು, "ಎನ್ನೆರ್ದೆಯೊಳ್ ಲಲಿತಾಂಗದೇವನಾ ಸೌಂದರರೂಪಂ ಇನ್ನುಂ ಶಾಸನಂ ಬರೆದುದು = ನನ್ನ ಹೃದಯದಲ್ಲಿ ಲಲಿತಾಂಗದೇವನ ಸುಂದರ ರೂಪವು ಶಾಸನದಂತೆ ಶಾಶ್ವತವಾಗಿದೆ; ಪಿರಿದುಂ ಅನುರಾಗದಿಂದಂ ಬರೆದ ಪಟಮನ್ ಇದನ್ ಅರ್ಚಿಸಿ = ಅತೀವ ಮಮತೆಯಿಂದ ಬರೆದ ಅವನ ಈ ಚಿತ್ರವನ್ನು ಪೂಜಿಸುತ್ತ, ಕನ್ಯಾಬ್ರತದೊಳೆ ಕಾಲಮಂ ಕಟಿಪುವೆನ್ = ಕನ್ಯೆಯಾಗಿಯೇ ಉಳಿದು ಜೀವನ ಸವೆಸುತ್ತೇನೆ", ಎಂದು ನುಡಿದು ಮಾಣ್ದ ಕನ್ನೆಯ ನುಡಿಯಂ = ಎಂದು ಮಾತು ನಿಲ್ಲಿಸಿದ ಅವಳ ಇಂಗಿತವನ್ನು, ಪಂಡಿತೆಯೆಂಬ ದಾದಿ ಮನಂಗೊಂಡು = ಪಂಡಿತೆ ಎಂಬ ಅವಳ ದಾಸಿಯು ಮನವರಿಕೆ ಮಾಡಿಕೊಂಡು, "ನಿನ್ನ ನಿರ್ಬೇಗಮನ್ ಅಜೆದೆಂ = ನಿನ್ನ ವೈರಾಗ್ಯದ ಕಾರಣ ತಿಳಿಯಿತು. ಶಕ್ತಿಯೊಳ್ ಮುಕ್ತಿಯಂ ಸಾಧಿಸಲಕ್ಕುಂ ಶಕ್ತಿಯಿಂದಲೇ ಇದಕ್ಕೆ ಬಿಡುಗಡೆ ಹುಡುಕಬೇಕು, ನಿನ್ನ ಇನಿಯನನ್ ಅಜಿಸಲ್ ಸಾರ್ವೆನ್ ಚಿಂತಿಸದಿರ್ = ನಿನ್ನ ನಲ್ಲನನ್ನು ಹುಡುತ್ತೇನೆ, ಚಿಂತಿಸಬೇಡ" ಎಂದು ಮುನ್ನಮಾ ಪಟದೊಳಾಕೆ ಬರೆಯದೆ ಬಂಚಿಸಿದ = ಈ ಮೊದಲು ಶ್ರೀಮತಿಯು ಬರೆಯದೆ ಮರೆಮಾಚಿದ್ದ, ಅಪಿನಾಣಂಗಳನ್ + ಅಜೆಯೆ ಬೆಸಗೊಂಡು = ಗುರುತುಗಳನ್ನು ತಿಳಿದುಕೊಂಡು, ಪಟಮಂ ಕೈಕೊಂಡು ಪೋಗಿ = ಆ ಚಿತ್ರವನ್ನು ತೆಗೆದುಕೊಂಡು ಹೋಗಿ, ಜಗತ್ + ಪೂತಂ + ಎನಿಸಿದ ಮಹಾಪೂತಜಿನಾಲಯಕ್ಕೆ ಬಂದು = ಜಗತ್ತಿನಲ್ಲಿನ ಪವಿತ್ರವಾದ ಮಹಾಪೂತ ಎನ್ನುವ ಬಸದಿಗೆ ಬಂದು, ಕೆಲದ ಪಟ್ಟಸಾಲೆಯ ಮುಂತೆ ನೇಜೆ = ಪಕ್ಕದಲ್ಲಿದ್ದ ಅಂಗಣದ ಮುಂಭಾಗದಲ್ಲಿ ನೇತು ಹಾಕಿ, ಕಾರ್ಯಸಿದ್ಧಿಯನೆ ಪಾರುತ್ತುಂ + ಇರ್ದಳ್ = ತನ್ನ ಉಪಾಯ ಫಲಿಸುವುದಕ್ಕಾಗಿ ಕಾಯುತ್ತಿದ್ದಳು.

ಅನ್ನೆಗಂ ಒರ್ವಂ ರಾಜಕುಮಾರಂ = ಅಷ್ಟರಲ್ಲಿ ಒಬ್ಬ ಅರಗುವರನು, ಶ್ರೀಮತ್ + ಜಿನಭವನಮಂ ಮೂಮೆ ಬಲಗೊಂಡು = ಪವಿತ್ರವಾದ ಬಸದಿಯನ್ನು ಮೂರು ಬಾರಿ ಪ್ರದಕ್ಷಿಣೆ ಹಾಕಿ ಬಂದು, ಸಿದ್ಧಶೇಷೆಯಂ ಕೊಂಡು = ಪ್ರಸಾದವನ್ನು ತೆಗೆದುಕೊಂಡು, ಪೊಜಮಟ್ಟು ಚಿತ್ರಪಟಮಂ ಭೋಂಕನೆ ಕಂಡು = ಅಲ್ಲಿ ತೂಗುಹಾಕಿದ್ದ ಚಿತ್ರವನ್ನು ಅಕಸ್ಮಾತ್ತಾಗಿ ನೋಡಿ, ನೀಡುಂ ಭಾವಿಸಿ ನೋಡಿ = ನಿಡುಗಾಲ ಆಲೋಚನಾಪರನಾಗಿ ಅದನ್ನು ನೋಡುತ್ತ, ಇರುಳ್ ಕಂಡ ಕನಸಂ ಮಜುದೆವಸಂ ನೆನೆವಂತೆ = ಕಳೆದ ರಾತ್ರಿ ಕಂಡ ಕನಸು ಮಾರನೆಯ ಹೊತ್ತು ನೆನಪಿಗೆ ಬಂದ ಹಾಗೆ, ಸುರಲೋಕಸಮುದ್ಭವಸುಖ + ಅನುಭವಮನ್ + ಆಗಳೆ ನೆನೆದು = ದೇವಲೋಕದಲ್ಲಿ ಹೊಂದಿದ ಮಧುರ ಸುಖದ ಅನುಭವವು ತಟಕ್ಕನೆ ನೆನಪಿಗೆ ಬಂದು, "ಹಾ! ಸ್ವಯಂಪ್ರಭೇ" ಎಂದು ಮೂರ್ಛೆವೋಪುದುಂ

= 'ಹಾ ಸ್ವಯಂಪ್ರಭೇ" ಎನ್ನುತ್ತ ಮೂರ್ಛೆ ಹೋದಾಗ, ತುರಿಪದೆ ಕರಕಾಂಬುವ ತಳಿದು ಎಚ್ಚರಿಸೆ ಕುಮಾರಂ ಮೂರ್ಛೆ ತಿಳಿದು = ಬೇಗನೇ ತಣ್ಣೀರನ್ನು ಚಿಮುಕಿಸಲು ಕುಮಾರನು ಮೂರ್ಛೆಯಿಂದ ಎಚ್ಚೆತ್ತು, "ಈ ಪಟಮನ್ + ಇಲ್ಲಿಗೆ + ಆರ್ + ತಂದರ್?" ಎಂಬನ್ನೆಗಂ = " ಈ ಚಿತ್ರಪಟವನ್ನು ಇಲ್ಲಿ ಯಾರು ತಂದು ಹಾಕಿದರು" ಎಂದವನು ವಿಚಾರಿಸಲು, ಭವದೀಯಪ್ರಾಣವಲ್ಲಭಂ = ನಿನ್ನ ಪ್ರಾಣಪ್ರಿಯನಾದ, ಲಲಿತಾಂಗಚರ ವಜ್ರಜಂಘನೆ + ಎಂಬುದನ್ +ಆಂ ತಿಳಿದು = ಲಲಿತಾಂಗನಾಗಿದ್ದ ವಜ್ರಜಂಘನೇ ಎಂಬುನ್ನು ನಾನು [ಪಂಡಿತೆ] ತಿಳಿದು, "ನೀಂ ಲಲಿತಾಂಗಚರನ್ = ನೀನು ಹಿಂದಿನ ಜನ್ಮದಲ್ಲಿ ಲಲಿತಾಂಗನಾಗಿದ್ದವನು. ಸ್ವಯಂಪ್ರಭಾದೇವಿ ನಿಮ್ಮ ಮಾವಂ ವಜ್ರದಂತ ಚಕ್ರವರ್ತಿಗಂ ನಿಮ್ಮತ್ತೆ ಲಕ್ಷ್ಮೀಮತಿಮಹಾದೇವಿಗಂ ಶ್ರೀಮತಿಯೆಂಬ ಮಗಳಾಗಿ ಪುಟ್ಟಿದಳ್ = ನಿನ್ನ ಪ್ರಿಯೆಯಾಗಿದ್ದ ಸ್ವಯಂಪ್ರಭೆಯು ಈ ಜನ್ಮದಲ್ಲಿ ಲಕ್ಷ್ಮೀಮತಿ–ವಜ್ರದಂತರ ಮಗಳಾಗಿ ಹುಟ್ಟಿದ್ದಾಳೆ. ಆಕೆ ನಿನ್ನೊಳಾದ ವೃತ್ತಾಂತಮನೀ ಪಟದೊಳ್ ಬರೆದು = ಅವಳು ನಿನ್ನೊಡನೆ ಪಡೆದ ಅನುಭವವನ್ನೆಲ್ಲ ಈ ಚಿತ್ರದಲ್ಲಿ ವರ್ಣಿಸಿ, ಎನ್ನ ಕೈಯೊಳ್ ಕೊಟ್ಟು = ನನ್ನ ಕೈಯಲ್ಲಿತ್ತು, 'ಮದೀಯ ಪ್ರಾಣವಲ್ಲಭನನ್ ಅಱಸು' = 'ನನ್ನ ಪ್ರಿಯನನ್ನು ಹುಡುಕಿ ತಾ', ಎಂದು + ಅಟ್ಟಿದೊಡೆ ಬಂದು ಇದನಿಲ್ಲಿ ಪಸರಿಸಿರ್ದೆಂ. = ಎಂದು ಹೇಳಲು ನಾನೇ ಈ ಚಿತ್ರವನ್ನಿಲ್ಲಿ ಹಾಕಿಸಿದ್ದೆ. ಮದೀಯಕಾಯಕ್ಲೇಶಫಳಂ ಇಂದು ನಿನ್ನ ಬರವಿನಿಂದಂ ಸಫಳಮಾದುದು = ನನ್ನ ಕಷ್ಟವೆಲ್ಲವೂ ಈಗ ನೀನು ಬಂದುದರಿಂದ ದೂರವಾಯಿತು," ಎಂಬುದುಂ ಆತಂ ರೋಮಾಂಚಶರೀರನಾದಂ = ಎನ್ನಲು ವಜ್ರಜಂಘನು ಪುಲಕಗೊಂಡ

ಅನ್ನೆಗಂ = ಅಷ್ಟರಲ್ಲಿ, ಅತ್ತ = ಆ ಕಡೆ, ಶ್ರೀಮತಿ ವಜ್ರಜಂಘರ ಜನ್ಮಾಂತರ ಸ್ನೇಹರಸಾಮೃತಪಾತ್ರ = ಶ್ರೀಮತಿ ವಜ್ರಜಂಘರ ಹಿಂದಿನ ಜನ್ಮಗಳ ಪ್ರೀತಿಯ ಕಾರಣದಿಂದಾದ, ಚಿತ್ರಪಟವ್ಯತಿಕರಮಂ = ಚಿತ್ರದ ಕತೆಯನ್ನು, ವಜ್ರಬಾಹು ಮಹೀಭುಜಂ ವಜ್ರಜಂಘಾನುಚರರಿಂದಂ ಅಱಿದು = ವಜ್ರಬಾಹುವು ವಜ್ರಜಂಘನ ಸೇವಕರಿಂದ ಕೇಳಿ ತಿಳಿದು, ನಿಜತನೂಜಗುಣಮಣಿಮಾಲೆಗೆ = ತನ್ನ ಮಗನ ಗುಣಗಳ ಮಾಲೆಯಲ್ಲಿ, ತತ್ ಕನ್ಯಾರತ್ನಮಂ ನಾಯಕಮಣಿ ಮಾಡಲೆಂದು = ಆ ಕನ್ಯೆಯನ್ನೇ ಮುಖ್ಯ ಮಣಿಯನ್ನಾಗಿ ಸೇರಿಸಲು ಬಗೆದು, ಆತ್ಮೀಯ ವಿಳಾಸಂ ಬೆರಸು ಬರೆ = ತನ್ನೆಲ್ಲ ಸಡಗರದಿಂದ ಬರಲು, ವಜ್ರದಂತಚಕ್ರವರ್ತಿಯುಂ = ವಜ್ರದಂತನೂ, ಅನಂತಸಾಮಂತ ಅಂತಃಪುರ ಪರಿವೃತನುಂ = ಅಸಂಖ್ಯಾತ ಸಾಮಂತರು ಹಾಗೂ ಅಂತಃಪುರಸ್ತ್ರೀಯರಿಂದ ಕೂಡಿ, ಬಂಧುರಗಂಧಸಿಂಧುರ + ಆರೂಢನಾಗಿ ಬಂದು = ಸುಂದರವಾದ ಮದ್ದಾನೆಯನ್ನೇರಿ ಬಂದಾಗ.

**ಗದ್ಯಾನುಸರಣ:** (ಹೀಗಿರಲು). ಒಂದು ದಿವಸ ಶ್ರೀಮತಿಯು ಅರಮನೆಯ ಕೋಣೆಯಲ್ಲಿ ಮಲಗಿರಲು, ಬೆಳಗಿನ ಜಾವದ ಹೊತ್ತಿನಲ್ಲಿ ಧಿಡೀರನೆ ಎಚ್ಚರಗೊಂಡು. ಯಶೋಧರಗುರುಗಳು ಕೇವಲಜ್ಞಾನವನ್ನು ಪಡೆದ ಕಾರಣ ನಡೆಯುತ್ತಿದ್ದ

ಉತ್ಸವಕ್ಕೆಂದು ಸೇರಿದ್ದ ದೇವತಾಸಮೂಹವನ್ನು ನೋಡಿದಾಕ್ಷಣ, ಹಿಂದಿನ ಜನ್ಮದ ನೆನಪುಂಟಾಗಿ, ದೇವಲೋಕದಲ್ಲಿ ತನ್ನೊಡನಿದ್ದ ಲಲಿತಾಂಗನನ್ನು ನೆನಪಿಸಿಕೊಂಡು ನಿಟ್ಟುಸಿರು ಬಿಟ್ಟು ಮೂರ್ಛೆ ಹೋದಳು. ಆ ಕನ್ನೆಮಾಡದ ಸೇವಕಿಯರು ಅಂತೂ ಇಂತೂ ಉಪಚರಿಸಿ ಅವಳು ಎಚ್ಚರಗೊಂಡಾಗ ವಿಚಾರಿಸಲು, "ನನ್ನ ಹೃದಯದಲ್ಲಿ ಲಲಿತಾಂಗದೇವನ ಸುಂದರ ರೂಪವು ಶಾಸನದಂತೆ ಶಾಶ್ವತವಾಗಿದೆ; ಅತೀವ ಮಮತೆಯಿಂದ ಬರೆದ ಅವನ ಈ ಚಿತ್ರವನ್ನು ಪೂಜಿಸುತ್ತ, ಕನ್ಯೆಯಾಗಿಯೇ ಉಳಿದು ಜೀವನ ಸವೆಸುತ್ತೇನೆ" ಎಂದು ಎಂದು ಮಾತು ನಿಲ್ಲಿಸಿದ ಅವಳ ಇಂಗಿತವನ್ನು, ಪಂಡಿತೆ ಎಂಬ ಅವಳ ದಾಸಿಯು ಮನವರಿಕೆ ಮಾಡಿಕೊಂಡು, "ನಿನ್ನ ವೈರಾಗ್ಯದ ಕಾರಣ ತಿಳಿಯಿತು, ಶಕ್ತಿಯಿಂದಲೇ ಇದಕ್ಕೆ ಬಿಡುಗಡೆ ಹುಡುಕಬೇಕು, ನಿನ್ನ ನಲ್ಲನನ್ನು ಹುಡುತ್ತೇನೆ, ಚಿಂತಿಸಬೇಡ" ಎಂದು ಈ ಮೊದಲು ಶ್ರೀಮತಿಯು ಬರೆಯದೆ ಮರೆಮಾಚಿದ್ದ ಗುರುತುಗಳನ್ನು ತಿಳಿದುಕೊಂಡು, ಆ ಚಿತ್ರವನ್ನು ತೆಗೆದುಕೊಂಡು ಹೋಗಿ, ಜಗತ್ತಿನಲ್ಲಿನ ಪವಿತ್ರವಾದ ಮಹಾಪೂತ ಎನ್ನುವ ಬಸದಿಗೆ ಬಂದು, ಪಕ್ಕದಲ್ಲಿದ್ದ ಅಂಗಣದ ಮುಂಭಾಗದಲ್ಲಿ ನೇತು ಹಾಕಿ ತನ್ನ ಉಪಾಯ ಫಲಿಸುವುದಕ್ಕಾಗಿ ಕಾಯುತ್ತಿದ್ದಳು.

ಅಷ್ಟರಲ್ಲಿ ಒಬ್ಬ ಅರಗುವರನು ಪವಿತ್ರವಾದ ಬಸದಿಯನ್ನು ಮೂರು ಬಾರಿ ಪ್ರದಕ್ಷಿಣೆ ಹಾಕಿ ಬಂದು, ಪ್ರಸಾದವನ್ನು ತೆಗೆದುಕೊಂಡು ಹೊರಬಂದು ಅಲ್ಲಿ ತೂಗುಹಾಕಿದ್ದ ಚಿತ್ರವನ್ನು ಅಕಸ್ಮಾತ್ತಾಗಿ ನೋಡಿ, ನಿಡುಗಾಲ ಆಲೋಚನಾಪರನಾಗಿ ಅದನ್ನು ನೋಡುತ್ತ, ಕಳೆದ ರಾತ್ರಿ ಕಂಡ ಕನಸು ಮಾರನೆಯ ಹೊತ್ತು ನೆನಪಿಗೆ ಬಂದ ಹಾಗೆ, ದೇವಲೋಕದಲ್ಲಿ ಹೊಂದಿದ ಮಧುರ ಸುಖದ ಅನುಭವವು ತಟಕ್ಕನೆ ನೆನಪಿಗೆ ಬಂದು, "ಹಾ! ಸ್ವಯಂಪ್ರಭೇ" ಎನ್ನುತ್ತ ಮೂರ್ಛೆ ಸಂದಾಗ, ಬೇಗನೇ ತಣ್ಣೀರನ್ನು ಚಿಮುಕಿಸಲು ಕುಮಾರನು ಮೂರ್ಛೆಯಿಂದ ಎಚ್ಚೆತ್ತು, " ಈ ಚಿತ್ರಪಟವನ್ನು ಇಲ್ಲಿ ಯಾರು ತಂದು ಹಾಕಿದರು" ಎನ್ನಲು, ನೀನು ಹಿಂದಿನ ಜನ್ಮದಲ್ಲಿ ಲಲಿತಾಂಗನಾಗಿದ್ದವನು, ನಿನ್ನ ಪ್ರಿಯೆಯಾಗಿದ್ದ ಸ್ವಯಂಪ್ರಭೆಯು ಈ ಜನ್ಮದಲ್ಲಿ ಲಕ್ಷ್ಮೀಮತಿ–ವಜ್ರದಂತರ ಮಗಳಾಗಿ ಹುಟ್ಟಿದ್ದಾಳೆ. ಅವಳು ನಿನ್ನೊಡನೆ ಪಡೆದ ಅನುಭವವನ್ನೆಲ್ಲ ಈ ಚಿತ್ರದಲ್ಲಿ ವರ್ಣಿಸಿ, ನನ್ನ ಕೈಯಲ್ಲಿತ್ತು, 'ನನ್ನ ಪ್ರಿಯನನ್ನು ಹುಡುಕಿ ತಾ', ಎಂದು ಹೇಳಲು ನಾನೇ ಈ ಚಿತ್ರವನ್ನಿಲ್ಲಿ ಹಾಕಿಸಿದ್ದೆ. ನನ್ನ ಕಷ್ಟವೆಲ್ಲವೂ ಈಗ ನೀನು ಬಂದುದರಿಂದ ದೂರವಾಯಿತು," ಎನ್ನಲು ವಜ್ರಜಂಘನು ಪುಲಕಗೊಂಡ.

ಅಷ್ಟರಲ್ಲಿ, ಆ ಕಡೆ ಶ್ರೀಮತಿ ವಜ್ರಜಂಘರ ಹಿಂದಿನ ಜನ್ಮಗಳ ಪ್ರೀತಿಯ ಕಾರಣದಿಂದಾದ ಚಿತ್ರದ ಕತೆಯನ್ನು ವಜ್ರಬಾಹುವು ವಜ್ರಜಂಘನ ಸೇವಕರಿಂದ ಕೇಳಿ ತಿಳಿದು, ತನ್ನ ಮಗನ ಗುಣಗಳ ಮಾಲೆಯಲ್ಲಿ, ಆ ಕನ್ಯೆಯನ್ನೇ ಮುಖ್ಯ ಮಣಿಯನ್ನಾಗಿ ಸೇರಿಸಲು ಬಗೆದು, ತನ್ನೆಲ್ಲ ಸಡಗರದಿಂದ ಬರಲು, ವಜ್ರದಂತನೂ

ಅಸಂಖ್ಯಾತ ಸಾಮಂತರು ಹಾಗೂ ಅಂತಃಪುರಸ್ತ್ರೀಯರಿಂದ ಕೂಡಿ, ಸುಂದರವಾದ ಮದ್ದಾನೆಯನ್ನೇರಿ ಬಂದ.

**ಬಾಲಸಹಕಾರತರು ನವ**
**ಮಾಲಿಕೆಗತಿಲಲಿತಪೂಗಭೂಜಾತಂ ತಾಂ**
**ಬೂಲಲತೆಗೆಂಬವೊಲ್ ಸಮ**
**ಲೀಲಂ ನಿಜತನಯನೆನ್ನ ನುಜೆಗೆ ತಕ್ಕಂ** ೨೧

**ಪದವಿಭಾಗ–ಅನ್ವಯ–ಅರ್ಥ:** ನವಮಾಲಿಕೆಗೆ ಬಾಲಸಹಕಾರತರು = ಹೊಸ ಜಾಜಿಯ ಬಳ್ಳಿಗೆ ಎಳೆಯ ಮಾವಿನ ಮರ, ತಾಂಬೂಲಲತೆಗೆ ಅತಿಲಲಿತಪೂಗ ಭೂಜಾತಂ = ವೀಳೆಯ ಬಳ್ಳಿಗೆ ಕೋಮಲವಾದ ಅಡಿಕೆಯ ಮರ – ಎಂಬವೊಲ್ = ಎನ್ನುವ ಹಾಗೆಯೇ, ಸಮಲೀಲಂ ನಿಜತನಯನ್ ಎನ್ನ ತನುಜೆಗೆ ತಕ್ಕಂ = ಸಮಾನ ಯೋಗ್ಯತೆಯ ನಿನ್ನ ಮಗ ನನ್ನ ಮಗಳಿಗೆ ಅನುರೂಪನಾದವನು.

**ಗದ್ಯಾನುಸರಣ:** 'ಹೊಸ ಜಾಜಿಯ ಬಳ್ಳಿಗೆ ಎಳೆಯ ಮಾವಿನ ಮರ, ವೀಳೆಯದೆಲೆಯ ಬಳ್ಳಿಗೆ ಕೋಮಲವಾದ ಅಡಿಕೆಯ ಮರ – ಜೋಡಿ ಎನ್ನುವ ಹಾಗೆಯೇ, ಸಮಾನ ಯೋಗ್ಯತೆಯ ನಿನ್ನ ಮಗ ನನ್ನ ಮಗಳಿಗೆ ಅನುರೂಪನಾದವನು.'

**ಎಂಬುದುಂ ನಿಜೋತ್ತರೀಯಾಂಶುಕವನೆ ಮಹೋತ್ಸವಧ್ವಜಮಂ ಮಾಡಿ ವಸುಂಧರಾಸೌಂದರಿಯುಂ ತಾನುಂ ಪ್ರಿಯತನಯನ ವಿವಾಹೋತ್ಸವಲಗ್ನಚಿತ್ತರಾಗಿ ಲಗ್ನಮನೆ ಪಾರುತ್ತುಮಿರ್ದರ್. ಅನತಿಕಾಲದೊಳ್ ಪಾಣಿಗ್ರಹಣಂಗೆಯಿಸಿದಾಗಳ್ ವಿವಾಹಮಂಗಳಂ ರಯ್ಯಮಾಯ್ತು.**

**ಪದವಿಭಾಗ–ಅನ್ವಯಅರ್ಥ:** ಎಂಬುದುಂ = ಎನ್ನಲು, ನಿಜ ಉತ್ತರೀಯ ಅಂಶುಕವನೆ = ತನ್ನ ಶಲ್ಯದ ಸೆರಗನ್ನೇ, ಮಹೋತ್ಸವಧ್ವಜಮಂ ಮಾಡಿ = ಮಹೋತ್ಸವದ ಧ್ವಜವನ್ನಾಗಿ ಮಾಡಿ, ಲಗ್ನಮನೆ ಪಾರುತ್ತುಮಿರ್ದರ್ = ಮದುವೆಯನ್ನೇ ಎದುರು ನೋಡುತ್ತಿದ್ದರು, ಅನತಿಕಾಲದೊಳ್ ಪಾಣಿಗ್ರಹಣಂ ಗೆಯಿಸಿದಾಗಳ್ = ಕೆಲವೇ ದಿನಗಳಲ್ಲಿಯೇ ಅವರಿಬ್ಬರ ಮದುವೆಯನ್ನು ನೆರವೇರಿಸಿದಾಗ, ವಿವಾಹಮಂಗಳಂ ರಯ್ಯಮಾಯ್ತು = ಆ ಮಹೋತ್ಸವವು ರಮ್ಯವೆನಿಸಿತು.

**ಗದ್ಯಾನುಸರಣ:** ಎನ್ನಲು, ತನ್ನ ಶಲ್ಯದ ಸೆರಗನ್ನೇ, ಮಹೋತ್ಸವದ ಧ್ವಜವನ್ನಾಗಿ ಮಾಡಿ, ಮದುವೆಯನ್ನೇ ಎದುರು ನೋಡುತ್ತಿದ್ದರು, ಕೆಲವೇ ದಿನಗಳಲ್ಲಿಯೇ ಅವರಿಬ್ಬರ ಮದುವೆಯನ್ನು ನೆರವೇರಿಸಿದಾಗ, ಆ ಮಹೋತ್ಸವವು ರಮ್ಯವೆನಿಸಿತು.

**ದಿವಿಜೇಂದ್ರಾವಾಸದೊಳ್ ಮುನ್ನೊಡನೆ ದಿವಿಜಭೋಗಂಗಳಂ ಭೋಗಿಸಿರ್ದೀ**
**ಭವದೊಳ್ ಬಂದಿಲ್ಲಿ ಜಾತಿಸ್ಮರರೆನೆ ನೆರೆದೋರ್ದೋರ್ವರೊಳ್ ಮತ್ತಮತ್ಯು**
**ತ್ಸವದಿಂದಂ ಮರ್ತ್ಯಭೋಗಂಗಳನನುಭವಿಸಲ್ ನೋಂತರಿಂತೀಗಳೆಂತುಂ**
**ತವದಂತೇಂ ಪುಣ್ಯಮಂ ಪುಂಜಿಸಿದರೊ ಪಿರಿದುಂ ಶ್ರೀಮತೀವಜ್ರಜಂಘರ್** ೨೨

**ಪದವಿಭಾಗ–ಅನ್ವಯ–ಅರ್ಥ:** ದಿವಿಜೇಂದ್ರ + ಆವಾಸದೊಳ್ = ದೇವಲೋಕದಲ್ಲಿ, ಮುನ್ನೊಡನೆ ದಿವಿಜಭೋಗಂಗಳಂ ಭೋಗಿಸಿರ್ದು =

ಜೊತೆಯಲ್ಲಿಯೇ ದೇವಭೋಗಗಳನ್ನು ಅನುಭವಿಸಿ. ಜಾತಿಸ್ಮರರೆನೆ ಈ ಭವದೊಳ್ ಬಂದು = ಹಿಂದಿನ ಜನ್ಮದ ನೆನಪಿನಿಂದ ಈ ಜನ್ಮದಲ್ಲಿ ಬಂದು, ಇಲ್ಲಿ ನೆರೆದು = ಇಲ್ಲಿ ಸೇರಿ, ಓರೋರ್ವರೊಳ್ = ಪರಸ್ಪರ, ಮತ್ತಂ + ಅತ್ಯುತ್ಸವದಿಂದಂ = ಪುನಃ ಮಹಾ ಉತ್ಸಾಹದಿಂದ ಮರ್ತ್ಯಭೋಗಂಗಳನ್ + ಅನುಭವಿಸಲ್ = ಭೂಮಿಯ ಭೋಗಗಳನ್ನು ಅನುಭವಿಸಲೆಂದು, ನೋಂತರ್ = ವ್ರತತೊಟ್ಟರು, ಇಂತೀಗಳ್ ಶ್ರೀಮತೀವಜ್ರಜಂಘರ್ = ಹೀಗೆ ಈಗ ಶ್ರೀಮತಿವಜ್ರಜಂಘರು, ಎಂತುಂ ತವದಂತು + ಏಂ ಪಿರಿದುಂ ಪುಣ್ಯಮಂ ಪುಂಜಿಸಿದರೊ = ಮುಗಿಯದ ಹಾಗೆ ಅಧಿಕ ಪುಣ್ಯವನ್ನು ಅದೆಂತು ಸಂಪಾದಿಸಿರೋ!

**ಗದ್ಯಾನುಸರಣ:** ದೇವಲೋಕದಲ್ಲಿ ಜೊತೆಯಲ್ಲಿ ದೇವಭೋಗಗಳನ್ನು ಅನುಭವಿಸಿ ಹಿಂದಿನ ಜನ್ಮದ ನೆನಪಿನಿಂದ ಈ ಜನ್ಮದಲ್ಲಿ ಹುಟ್ಟಿ ಸೇರಿ ಮತ್ತೆ ಜೊತೆಯಾಗಿಯೇ ಈ ಭೂಮಿಯ ಭೋಗಗಳನ್ನು ಅನುಭವಿಸಲೆಂದು ಆಶಿಸಿದರು; ಶ್ರೀಮತಿವಜ್ರಜಂಘರು ಹೀಗೆ ಮುಗಿಯದಷ್ಟು ಪುಣ್ಯವನ್ನು ಯಾವ ವ್ರತತೊಟ್ಟು ಸಂಪಾದಿಸಿರೋ!

[**ವಿಶೇಷ ವಿಚಾರ:** ಈ ಸಂದರ್ಭದಲಿ ಎಲ್. ಬಸವರಾಜು ಅವರ ವಿವರಣೆ ಹೀಗಿದೆ: 'ಇಲ್ಲಿಗೆ ಪೂರ್ವಪುರಾಣದಲ್ಲಿ ಪರ್ವ (ಎಂಟು) ಮುಗಿಯುವುದು. ಮುಂದಿನ ಒಂಬತ್ತನೇ ಪರ್ವ (ಪೂರ್ವಪುರಾಣದಲ್ಲಿ) ವಜ್ರಜಂಘ-ಶ್ರೀಮತಿಯರ ಶೃಂಗಾರಜೀವನ ಬಣ್ಣಬಣ್ಣವಾಗಿ ವರ್ಣನೆಯಾಗಿದೆ. ಆ ಔಜ್ವಲ್ಯ - ಬರುವ ದುರಂತಕ್ಕೆ ಅಪರಿಮಿತವಾದ ಧ್ವನಿಯನ್ನೂ, ಸೊಬಗನ್ನೂ ಒದಗಿಸಿ ದುರಂತವು ಪಕ್ವವಾಗುವಂತೆ ಪರಿಣಮಿಸಿದೆ - ಪಂಪನು ಈ ಸಂದರ್ಭವನ್ನು ವಿವರಿಸದೆ ಶೋಚನೀಯವಾದ ರೀತಿಯಲ್ಲಿ ಮುಗ್ಗರಿಸಿದ್ದಾನೆ ಎನ್ನಿಸುವುದು' (ಆದಿಪುರಾಣ, ೫.೨೨ ನೇ ಪದ್ಯಕ್ಕೆ ನೀಡಿರುವ ಅಡಿಟಿಪ್ಪಣಿ) ಅವರು ಹೇಳುವ ಭಾಗವೆಂದರೆ - ಪೂಪು. ೯. ೧-೨೭]

**ಒರ್ಮೆ, ಆ ವಜ್ರಜಂಘ ಮಂಡಳೇಶ್ವರಂ ಸರೋಜಷಂಡದೊಳ್ ಬೀಡಂ ಬಿಟ್ಟಿರ್ಪನ್ನೆಗಂ ಸ್ವರ್ಗಾಪವರ್ಗಮಾರ್ಗದಂತೆ ಅಪಗತಕಲ್ಮಷರುಂ, ಆದಿತ್ಯನಂತೆ ನಿರ್ಧೂತತಮಸ್ತಮರುಂ, ಚಂದ್ರನಂತೆ ಸರ್ವಸತ್ತ್ವಸೌಮ್ಯರುಂ, ಮೇರುವಿನಂತೆ ಅಚಳಿತಧೈರ್ಯಗುಣರುಮಪ್ಪ ಧಮಧರ-ಸಾಗರಸೇನರೆಂಬ ಗಗನಚಾರಣರ್ ಕಾಂತಾರಚರ್ಯಾಮಾರ್ಗದಿಂ ತಮ್ಮ ಆವಾಸಕ್ಕೆ ಬರ್ಪರಂ ಶ್ರೀಮತಿಯುಂ ತಾನುಂ ಕಂಡು ಸಂಭ್ರಮಂಬೆರಸು ಇದಿರಂ ನಡೆದು, ಬದ್ಧಾಂಜಲಿ ಪುಟಘಟಿತನಿಟಲರಾಗಿ, ನಿಲ್ಕೆಂದು ನಿಲಿಸಿ,**

**ಪದವಿಭಾಗ-ಅನ್ವಯ-ಅರ್ಥ:** ಒರ್ಮೆ = ಒಂದು ಸಲ, ಆ ವಜ್ರಜಂಘ ಮಹಾಮಂಡಳೇಶ್ವರನ್ = ಹಾಗೆ ವಜ್ರಜಂಘ ಮಂಡಲೇಶ್ವರನು, ಸರೋಜಷಂಡದೊಳ್ ಬೀಡಂಬಿಟ್ಟಿರ್ಪನ್ನೆಗಂ = ತಾವರೆಯ ಸಮೂಹದ ನಡುವೆ ಬೀಡುಬಿಟ್ಟಿರುವಾಗ, ಸ್ವರ್ಗ + ಅಪವರ್ಗಮಾರ್ಗದಂತೆ = ಸ್ವರ್ಗಮೋಕ್ಷಗಳ ದಾರಿಯ ಹಾಗೆ, ಅಪಗತಕಲ್ಮಷರುಂ = ಕಲ್ಮಷರಹಿತರೂ, ಆದಿತ್ಯನಂತೆ

ನಿರ್ಧೂತತಮಸ್ತಮರುಂ = ಸೂರ್ಯನ ಹಾಗೆ ಕತ್ತಲೆಯನ್ನು ಹೋಗಲಾಡಿಸುವವರೂ, ಚಂದ್ರನಂತೆ ಸರ್ವಸತ್ತ್ವಸೌಮ್ಯರುಂ = ಚಂದ್ರನ ಹಾಗೆ ಎಲ್ಲ ಜೀವಿಗಳ ಬಗ್ಗೆ ಮೃದುಸ್ವಭಾವ ತೋರುವವರೂ, ಮೇರುವಿನಂತೆ + ಅಚಳಿತಧೈರ್ಯಗುಣರುಂ + ಅಪ್ಪ = ಮೇರುಪರ್ವತದಂತೆ ನಿಶ್ಚಲವಾದ ಧೈರ್ಯಗುಣವುಳ್ಳವರೂ ಆದ, ದಮಧರ–ಸಾಗರಸೇನರೆಂಬ ಗಗನಚಾರಣರ್ = ದಮಧರ ಮತ್ತು ಸಾಗರಸೇನರೆಂಬ ಹೆಸರಿನ ಗಗನಚಾರಣರು, ಕಾಂತಾರಚರ್ಯಾಮಾರ್ಗದಿಂ = ಕಾಂತಾರಚರ್ಯೆಯ ಮಾರ್ಗದಲ್ಲಿ, ತಮ್ಮ ಆವಾಸಕ್ಕೆ ಬರ್ಪರಂ = ತಮ್ಮ ಬೀಡಿಗೆ ಬರುತ್ತಿರುವುದನ್ನು, ಶ್ರೀಮತಿಯುಂ ತಾನುಂ ಕಂಡು = ಶ್ರೀಮತಿ ವಜ್ರಜಂಘರು ಕಂಡು, ಸಂಭ್ರಮಂಬೆರಸು + ಇದಿರಂ ನಡೆದು = ಸಡಗರದಿಂದ ಎದುರುಗೊಳ್ಳಲು, ಬದ್ಧ + ಅಂಜಲಿಪುಟಘಟಿತನಿಟಿಲರಾಗಿ = ಜೋಡಿಸಿದ ಕೈಗಳನ್ನು ಹಣೆಯಲ್ಲಿ ಹೊತ್ತವರಾಗಿ, ನಿಲ್ಕೆ + ಎಂದು ನಿಲಿಸಿ = ದಯವಿಟ್ಟು ನಿಲ್ಲಿ ಎಂದು ಬೇಡಿ ನಿಲ್ಲಿಸಿಕೊಂಡು.

**ಗದ್ಯಾನುಸರಣ:** ಹಾಗೆ ಆ ಮಂಡಲೇಶ್ವರನು ತಾವರೆಯ ಸಮೂಹದ ನಡುವೆ ಬೀಡುಬಿಟ್ಟಿದ್ದ; ಒಂದು ದಿನ ಸ್ವರ್ಗಮೋಕ್ಷಗಳ ದಾರಿಯ ಹಾಗೆ ಕಲ್ಮಷರಹಿತರೂ, ಸೂರ್ಯನ ಹಾಗೆ ಕತ್ತಲೆ(ಅಜ್ಞಾನ)ಯನ್ನು ಹೋಗಲಾಡಿಸುವವರೂ, ಚಂದ್ರನ ಹಾಗೆ ಎಲ್ಲ ಜೀವಿಗಳ ಬಗ್ಗೆ ಮೃದುಸ್ವಭಾವ ತೋರುವವರೂ, ಮೇರುಪರ್ವತದಂತೆ ನಿಶ್ಚಲವಾದ ಧೈರ್ಯಗುಣವುಳ್ಳವರೂ ಆದ ಧರ್ಮವರ ಮತ್ತು ಸಾಗರಸೇನರೆಂಬ ಗಗನಚಾರಣರು ಕಾಂತಾರಚರ್ಯೆಯ ಮಾರ್ಗದಲ್ಲಿ ತಮ್ಮ ಬೀಡಿಗೆ ಬರುತ್ತಿರುವುದನ್ನು ಕಂಡರು; ಆಗ ಶ್ರೀಮತಿ ವಜ್ರಜಂಘರು ಸಡಗರದಿಂದ ಕೈಜೋಡಿಸಿ ಹಣೆಯಲ್ಲಿ ಹೊತ್ತು ಎದುರುಗೊಂಡು ದಯವಿಟ್ಟು ನಿಲ್ಲಲು ಬೇಡಿ ನಿಲ್ಲಿಸಿಕೊಂಡರು.

[**ವಿಶೇಷ ವಿಚಾರ:** ಕಾಂತಾರಚರ್ಯೆ = ಕಾಡಿನಲ್ಲಿ ಸಿಕ್ಕಿದುದನ್ನು ಮಾತ್ರ ಸೇವಿಸುವ ಋಷಿಗಳ ವ್ರತ.]

**ನೆಱೆದಟ್ಟೆ ಭಕ್ತಿ ದಯೆ ಪುದಿ**
**ದಱೆವೌದಾರ್ಯಂ ಕ್ಷಮಾಗುಣಂ ಶಕ್ತಿಯುಮೆಂ**
**ಬಱೆಕೆಯ ಗುಣಮೇೞಱೊಳಂ**
**ನೆಱೆದಿತ್ತರ್ ಮುನಿಯುಗಕ್ಕೆ ದಾನಮನವರ್ಗಳ್** ೨೩

**ಪದವಿಭಾಗ–ಅನ್ವಯ–ಅರ್ಥ:** ನೆಱೆದ = ಸೇರಿದ ಅಟ್ಟೆ ಭಕ್ತಿ ದಯೆ = ಪ್ರೀತಿ ಭಕ್ತಿ ದಯೆಗಳು, ಪುದಿದ + ಅಱೆವು + ಔದಾರ್ಯಂ = ತಿಳಿವಳಿಕೆ ಉದಾರತೆ, ಕ್ಷಮಾಗುಣಂ ಶಕ್ತಿಯುಂ = ಕ್ಷಮೆ ಮತ್ತು ಶಕ್ತಿ, ಎಂಬ + ಅಱೆಕೆಯ ಗುಣಮೇೞಱೊಳಂ = ಎನ್ನು ಶ್ರೇಷ್ಠವಾದ ಏಳುಗುಣಗಳನ್ನೂ ಒಳಗೊಂಡಂತೆ, ದಾನಮನ್ + ಅವರ್ಗಳ್ ಮುನಿಯುಗಕ್ಕೆ ನೆಱೆದು + ಇತ್ತರ್ = ಅವರು ದಾನಗಳನ್ನು ಆ ಮುನಿಗಳಿಗೆ ಯಥೇಷ್ಟವಾಗಿ ನೀಡಿದರು.

**ಗದ್ಯಾನುಸರಣ:** ಪ್ರೀತಿ ಭಕ್ತಿ ದಯೆ ತಿಳಿವಳಿಕೆ ಉದಾರತೆ ಕ್ಷಮೆ ಮತ್ತು ಶಕ್ತಿ, ಎನ್ನುವ ಶ್ರೇಷ್ಠವಾದ ಏಳುಗುಣಗಳಿಂದಲೂ ಕೂಡಿ ಅವರು ಆ ಮುನಿಗಳಿಗೆ ಯಥೇಷ್ಟವಾಗಿ ದಾನಗಳನ್ನು ನೀಡಿದರು.

[**ವಿಶೇಷ ವಿಚಾರ:** ಇದನ್ನೇ ಈ ಕಾವ್ಯದ ಮತ್ತೊಂದೆಡೆ 'ಶ್ರದ್ಧಾದಿ ಸಪ್ತಗುಣ' ಎಂದಿರುವುದು, ಆದಿಪು, ೧೦, ೧ ವ.]

**ಕ್ಷಿತಿಚಕ್ರಾರ್ಚಿತಚಕ್ರವರ್ತಿಪದಮುಂ ದೇವೇಂದ್ರರಾಜ್ಯೋದಯೋ**
**ನ್ನತಿಯುಂ ಭವ್ಯಜನಂಗಳಾಶೆವಡುತಿರ್ಪಾರ್ಹಂತ್ಯಮುಂ ಸಾರ್ಗುಮ**
**ನ್ವಿತದಾನಂಗರಿದುಂಟೆ ಸೌಖ್ಯಮೆನುತುಂ ದಾನಪ್ರಭಾವಕ್ಕೆ ಸಂ**
**ಚಿತಪುಣ್ಯೋದಯನಾಗಳಾದಮೊಸೆದಂ ಸಂಸಾರಸಾರೋದಯಂ** ೨೪

**ಪದವಿಭಾಗ–ಅನ್ವಯ–ಅರ್ಥ:** ಕ್ಷಿತಿಚಕ್ರ + ಅರ್ಚಿತಚಕ್ರವರ್ತಿಪದಮುಂ = ಭೂಮಂಡಲವೇ ಗೌರವಿಸುವ ಚಕ್ರವರ್ತಿ ಪದವಿಯೂ, ದೇವೇಂದ್ರರಾಜ್ಯೋದಯ + ಉನ್ನತಿಯುಂ = ದೇವೇಂದ್ರನ ರಾಜ್ಯವೇ ದೊರೆಯುವ ಹಿರಿಮೆಯೂ, ಭವ್ಯಜನಂಗಳ್ + ಆಶೆವಡುತಿರ್ಪ + ಆರ್ಹಂತ್ಯಮುಂ = ಭಾವುಕರು ಎದುರುನೋಡುವ ಅರ್ಹಂತಯೋಗವೂ. ಸಾರ್ಗುಂ = ಉಂಟಾಗುತ್ತವೆ; ಅನ್ವಿತದಾನಂಗೆ ಅರಿದು ಸೌಖ್ಯಂ ಉಂಟೆ = ದಾನಗುಣವುಳ್ಳನಿಗೆ ಅಸಾಧ್ಯವಾದ ಸುಖ ಎಂಬುದುಂಟೆ? ಎನುತುಂ = ಎಂದು, ದಾನಪ್ರಭಾವಕ್ಕೆ = ದಾನದ ಮಹಿಮೆಗೆ, ಆಗಳ್ ಸಂಚಿತಪುಣ್ಯೋದಯನ್ ಸಂಸಾರಸಾರೋದಯಂ ಆದಂ + ಒಸೆದಂ = ಪುಣ್ಯವನ್ನು ಗಳಿಸಿಕೊಂಡ ಸಂಸಾರಸಾರೋದಯನಾದ ವಜ್ರಜಂಘನು ಆಗ ತುಂಬ ಸಂತಸಪಟ್ಟ.

**ಗದ್ಯಾನುಸರಣ:** ಭೂಮಂಡಲವೇ ಗೌರವಿಸುವ ಚಕ್ರವರ್ತಿ ಪದವಿ, ದೇವೇಂದ್ರನ ರಾಜ್ಯವೇ ದೊರೆಯುವ ಹಿರಿಮೆ, ಭಾವುಕರು ಎದುರುನೋಡುವ ಅರ್ಹಂತಯೋಗ – ಇವು ದಾನಗುಣವುಳ್ಳನಿಗೆ ದೊರೆಯುತ್ತವೆ; ಅವನಿಗೆ ಅಸಾಧ್ಯವಾದ ಸುಖ ಎಂಬುದುಂಟೆ? ಎಂದು ದಾನದ ಮಹಿಮೆಯ ಬಗ್ಗೆ ಪುಣ್ಯವನ್ನು ಗಳಿಸಿಕೊಂಡ ಸಂಸಾರಸಾರೋದಯನಾದ ವಜ್ರಜಂಘನು ತುಂಬ ಸಂತಸಪಟ್ಟ.

**ವ। ಅಂತನೇಕಸಂವತ್ಸರಂಗಳ್ ಸಲ್ವಿನೆಗಮೊಂದು ದಿವಸಂ ರಜನೀಸಮಯದೊಳನರ್ಘ್ಯ ಮರಕತಮಣಿಶಿಲಾಸಂಪಾದಿತ ಮೇದಿನೀವಿಭಾಗದೊಳ್ ಅಮರಖಚರಕಿನ್ನರಮಿಥುನಸನಾಥ ವಿಚಿತ್ರವಿರಾಜಿತದೊಳತಿಬಹಳಕಾಳಾಗರುಧೂಪಧೂಮಾಮೋದದೊಳತಿ ವಿಶದಮಣಿಪ್ರದೀಪಿಕೋ ದ್ದ್ಯೋತದೂರೀಕೃತತಮಸ್ತಮದೊಳನೇಕರತ್ನಖಚಿತಪ್ರತಿಪಾದುಕಾವಿನ್ಯಸ್ತಕಾಂಚನ ಮಂಚೋಪಶೋಭಿತದೊಳ್ ಪಯಃ ಪಯೋನಿಧಿಫೇನಸಂಕಾಶದುಕೂಲೋಪಪ್ರಚ್ಛದಾಚ್ಛಾದಿತ ವಿಚಿತ್ರ ನೇತ್ರೋಭಯೋಪಧಾನ ಶಯ್ಯಾತಳದೊಳನೇಕವಿಳಾಸಿನೀ ವಿಳಾಸಾವಾಸಭವನದೊಳಾ ದಂಪತಿಗಳನ್ಯೋನ್ಯಾಂಗಸ್ಪರ್ಶಸುಖೋನ್ಮೀಲಿತವಿಲೋಚನರಂತಂತೆ ನಿದ್ರಾರಸವಶಗತರಾಗಿರ್ದರ್; ಅನ್ನೆಗಮಲ್ಲಿ ಮುಚ್ಚಿರ್ದ ಹರಿನೀಲಗವಾಕ್ಷಜಾಲಕವಾಟಪುಟಂಗಳಂ ತೆಱೆಯಲ್ಮಱೆದು ಸೂರ್ಯ ಕಾಂತದ ಧೂಪಗುಂಡಿಗೆಯೊಳಳವಱಿಯದೆ ಸೆಜ್ಜೆವಳನಿಕ್ಕಿದ ಕೇಶಸಂಸ್ಕಾರಕಾಳಾಗರುಧೂಪಂ,**

**ಪದವಿಭಾಗ-ಅನ್ವಯ-ಅರ್ಥ:** ಅಂತು + ಅನೇಕಸಂವತ್ಸರಂಗಳ್ ಸಲ್ವಿನೆಗಂ = ಹೀಗೇ ಅನೇಕ ವರ್ಷಗಳು ಸಂದಿರಲಾಗಿ, ಒಂದು ದಿವಸಂ ರಜನೀಸಮಯದೊಳ್ = ಒಂದು ದಿನ ರಾತ್ರಿಯ ಹೊತ್ತಿನಲ್ಲಿ, ಅನರ್ಘ್ಯ ಮರಕತಮಣಿಶಿಲಾಸಂಪಾದಿತ = ಅಮೂಲ್ಯವಾದ ಪಚ್ಚೆಯ ನೆಲಗಟ್ಟನ್ನುಳ್ಳ, ಮೇದಿನೀವಿಭಾಗದೊಳ್ = ಪ್ರದೇಶದಲ್ಲಿ, ಅಮರಖಚರಕಿನ್ನರಮಿಥುನಸನಾಥ ವಿಚಿತ್ರವಿರಾಜಿತದೊಳ್ = ದೇವತೆಗಳ ಖೇಚರರ ಕಿನ್ನರ ದಂಪತಿಗಳ ಸುಂದರ ಚಿತ್ರಗಳಿರುವಲ್ಲಿ, ಅತಿಬಹಳಕಾಳಾಗರುಧೂಪಧೂಮಾಮೋದದೊಳ್ = ಹೆಚ್ಚಿನ ಕಾಳಾಗರುಪಿನ ಹೊಗೆಯ ಪರಿಮಳ ಹರಡಿರುವಲ್ಲಿ, ಅತಿವಿಶದಮಣಿಪ್ರದೀಪಿಕಾ + ಉದ್ಯೋತದೂರೀಕೃತತಮಸ್ತಮದೊಳ್ = ಸ್ಪಷ್ಟವಾದ ಮಣಿಖಚಿತ ದೀಪಗಳ ಬೆಳಕಿನಿಂದ ಕತ್ತಲು ದೂರವಾಗಿರುವಲ್ಲಿ, ಅನೇಕರತ್ನಖಚಿತಪ್ರತಿಪಾದುಕಾವಿನ್ಯಸ್ತ = ನಾನಾ ಮಣಿಗಳನ್ನು ಜೋಡಿಸಿದ ಕಾಲುಗಳಿದ್ದ, ಕಾಂಚನಮಂಚ + ಉಪಶೋಭಿತದೊಳ್ = ಅಲಂಕರಣಗೊಂಡ ಚಿನ್ನದ ಮಂಚದಲ್ಲಿ, ಪಯಃಪಯೋನಿಧಿಫೇನಸಂಕಾಶ = ಹಾಲ್ಗಡಲಿನ ನೊರೆಯಂತೆ ಬೆಳ್ಳಗಿದ್ದ, ದುಕೂಲ + ಉಪಪ್ರಚ್ಛದ + ಆಚ್ಛಾದಿತ = ರೇಷ್ಮೆವಸ್ತ್ರದ ಹಚ್ಚಡವನ್ನು ಹಾಸಿದ್ದ, ವಿಚಿತ್ರ ನೇತ್ರ + ಉಭಯ + ಉಪಧಾನಶಯ್ಯಾತಳದೊಳ್ = ಎರಡೂ ಬದಿಗಳಲ್ಲಿ ಸುಂದರವಾದ ರೇಷ್ಮೆಯ ದಿಂಬುಗಳನ್ನು ಹೊಂದಿದ್ದ, ಅನೇಕವಿಳಾಸಿನೀ ವಿಳಾಸಾವಾಸಭವನದೊಳ್ = ಅನೇಕ ವಿಲಾಸಿನಿಯರ ಆ ಆಶ್ರಯದಾಣದಲ್ಲಿ, ಆ ದಂಪತಿಗಳ್ + ಅನ್ಯೋನ್ಯ + ಅಂಗಸ್ಪರ್ಶಸುಖ + ಉನ್ಮೀಳಿತವಿಲೋಚನರ್ = ವಜ್ರಜಂಘ-ಶ್ರೀಮತಿಯರು ಪರಸ್ಪರರ ಶರೀರಸ್ಪರ್ಶದ ಆನಂದದಲ್ಲಿ ಅರಳಿದ ಕಣ್ಣುಗಳಂತೆ, ಅಂತಂತೆ ನಿದ್ರಾರಸವಶಗತರಾಗಿರ್ದರ್ = ಹಾಗೆಯೇ ನಿದ್ರೆಯಲ್ಲಿ ಮುಳುಗಿದ್ದರು; ಅನ್ನೆಗಂ + ಅಲ್ಲಿ ಮುಚ್ಚಿರ್ದ ಹರಿನೀಲಗವಾಕ್ಷಜಾಲಕವಾಟ ಪುಟಂಗಳಂ = ಅಷ್ಟರಲ್ಲಿ, ಅಲ್ಲಿ ಮುಚ್ಚಿದ್ದ ಗವಾಕ್ಷದ ಹರಿನೀಲ ಮುಚ್ಚಳಗಳನ್ನು, ತೆಱೆಯಲ್ + ಮಱೆದು = ತೆಗೆದಿಡಲು ಮರೆತು, ಸೂರ್ಯಕಾಂತದ ಧೂಪಗುಂಡಿಗೆಯೊಳ್ = ಸೂರ್ಯಕಾಂತದ ಧೂಪದ ಗುಂಡಿಗೆಯಲ್ಲಿ, ಸೆಜ್ಜೆವಳನ್ ಅಳವು + ಅಱಿಯದೆ ಇಕ್ಕಿದ = ಮಲಗುವ ಮನೆಯ ಸೇವಕನು ಅಳತೆಯನ್ನು ಮೀರಿ ಹಾಕಿದ್ದ, ಕೇಶಸಂಸ್ಕಾರಕಾಳಾಗರುಧೂಪಂ = ಕೂದಲನ್ನು ಒಣಗಿಸಿಕೊಳ್ಳಲೆಂದಿದ್ದ ಕಾಳಾಗರುಧೂಪವು,

**ಗದ್ಯಾನುಸರಣ:** ಹೀಗೇ ಅನೇಕ ವರ್ಷಗಳು ಸರಿದುವು. ಒಂದು ದಿನ ಹೀಗಾಯಿತು: ರಾತ್ರಿಯ ಹೊತ್ತಿನಲ್ಲಿ ಅಮೂಲ್ಯವಾದ ಪಚ್ಚೆಯ ನೆಲಗಟ್ಟನ್ನುಳ್ಳ ಪ್ರದೇಶದಲ್ಲಿ ಅನೇಕ ವಿಲಾಸಿನಿಯರ ಒಂದು ಆಶ್ರಯದಾಣವಿತ್ತು; ಅದರಲ್ಲಿ ದೇವತೆಗಳ ಖೇಚರರ ಕಿನ್ನರ ದಂಪತಿಗಳ ಸುಂದರ ಚಿತ್ರಗಳು ಅಲಂಕರಿಸಿದ್ದುವು; ಕಾಳಾಗರುವಿನ ಹೊಗೆಯ ಪರಿಮಳವು ಎಲ್ಲೆಡೆ ಹರಡಿತ್ತು; ಪ್ರಕಾಶಮಾನವಾದ ಮಣಿಖಚಿತ ದೀಪಗಳ ಬೆಳಕಿನಿಂದ ಕತ್ತಲು ದೂರವಾಗಿತ್ತು; ಅಲ್ಲಿ ನಾನಾ ಮಣಿಗಳನ್ನು ಜೋಡಿಸಿದ

ಕಾಲುಗಳಿದ್ದ ಅಲಂಕರಣಗೊಂಡ ಚಿನ್ನದ ಮಂಚವೊಂದು ಶೋಭಿಸುತ್ತಿತ್ತು; ಅದರ ಮೇಲೆ ಹಾಲ್ಗಡಲಿನ ನೊರೆಯಂತೆ ಬೆಳ್ಳಗಿದ್ದ ರೇಷ್ಮೆವಸ್ತ್ರದ ಹಚ್ಚಡವನ್ನು ಹಾಸಿದ್ದರು; ಎರಡೂ ಬದಿಗಳಲ್ಲಿ ಸುಂದರವಾದ ರೇಷ್ಮೆಯ ದಿಂಬುಗಳನ್ನು ಜೋಡಿಸಲಾಗಿತ್ತು; ಅದರಲ್ಲಿ ವಜ್ರಜಂಘ-ಶ್ರೀಮತಿಯರು ಪರಸ್ಪರರ ಶರೀರಸ್ಪರ್ಶದ ಆನಂದದಲ್ಲಿ ಅರಳಿದ ಕಣ್ಣುಗಳಂತೆ ನಿದ್ರೆಯಲ್ಲಿ ಮುಳುಗಿದ್ದರು. ಈ ಮಧ್ಯೆ, ಅಲ್ಲಿ ಮುಚ್ಚಿದ್ದ ಗವಾಕ್ಷದ ಹರಿನೀಲ ಮುಚ್ಚಳಗಳನ್ನು ತೆಗೆದಿಡಲು ಮರೆತು ಮಲಗುವ ಮನೆಯ ಸೇವಕನು ಹೊರಟು ಹೋಗಿದ್ದ; ಜೊತೆಗೆ, ಸೂರ್ಯಕಾಂತದ ಒಂದು ಧೂಪದ ಗುಂಡಿಗೆಯಲ್ಲಿ ಕೂದಲನ್ನು ಒಣಗಿಸಿಕೊಳ್ಳಲೆಂದಿದ್ದ ಕಾಳಾಗರುಧೂಪವನ್ನು ಅವನು ಅಳತೆಯನ್ನು ಮೀರಿ ಹಾಕಿದ್ದ.

**ಮೊದಲೊಳ್ ನೀಳ್ದು ಪೊದಳ್ದು ಪರ್ಬಿ ಪರೆಪಂ ಕೈಕೊಂಡು ಮಂದೈಸಿ ಮಾ**
**ಣದೆ ತನ್ನಂದದೊಳೇಟಿಗ್ಗಿಗುಂದದೆ ನಿರುದ್ಧೋಚ್ಛ್ವಾಸಮುಪ್ಪನ್ನೆಗಂ**
**ಪುದಿದಾ ದಂಪತಿಯಂ ಪುದುಂಗೊಳಿಸಿ ಲೋಕಾಶ್ಚರ್ಯಮಂ ಮಾಡಿ ಕೊಂ**
**ದುದು ಕೃಷ್ಣಾಗರುಧೂಪಧೂಮನಿವರಹಂ ಕೃಷ್ಣೋರಗಂ ಕೊಲ್ವವೊಲ್** ೨೫

**ಪದವಿಭಾಗ-ಅನ್ವಯ-ಅರ್ಥ:** ಮೊದಲೊಳ್ ನೀಳ್ದು ಪೊದಳ್ದು ಪರ್ಬಿ = ಮೊದಲಲ್ಲಿ ಆ ಧೂಪವು ನೀಳವಾಗಿ ಹೊಮ್ಮಿ ಹರಡಿಕೊಂಡು, ಪದಪಂ ಕೈಕೊಂಡು ಮಂದೈಸಿ = ಸರಸರನೆ ಒಟ್ಟುಗೂಡಿ ದಟ್ಟವಾಗಿ, ಮಾಣದೆ ತನ್ನ + ಅಂದದೊಳ್ + ಏಟ್ಗಿಗುಂದದೆ = ಅಲ್ಲಿಗೇ ನಿಲ್ಲದೆ ತನ್ನ ಸ್ವರೂಪದಲ್ಲಿ ಕಡಿಮೆಗೊಳ್ಳದೆ, ನಿರುದ್ಧ + ಉಚ್ಛ್ವಾಸಂ + ಅಪ್ಪನ್ನೆಗಂ ಪುದಿದು = ಉಸಿರುಕಟ್ಟುವವರೆಗೂ ತುಂಬಿಕೊಂಡು, ಆ ದಂಪತಿಯಂ ಪುದುಂಗೊಳಿಸಿ = ತನ್ನಲ್ಲಿ ಆ ದಂಪತಿಯನ್ನು ಅಡಗಿಸಿಕೊಂಡು, ಲೋಕಾಶ್ಚರ್ಯಮಂ ಮಾಡಿ = ಜಗತ್ತಿಗೆ ಅಚ್ಚರಿಯುಂಟಾಗುವಂತೆ, ಕೃಷ್ಣಾಗರುಧೂಪಧೂಮನಿವಹಂ ಕೃಷ್ಣೋರಗಂ ಕೊಲ್ವವೊಲ್ ಕೊಂದುದು = ಆ ಕಪ್ಪು ಅಗರುವಿನ ಹೊಗೆಯು ಕಾಳಿಂಗಸರ್ಪದಂತೆ ಕೊಂದುಹಾಕಿತು.

**ಗದ್ಯಾನುಸರಣ:** ಮೊದಲಲ್ಲಿ ಆ ಧೂಪವು ನೀಳವಾಗಿ ಹೊಮ್ಮಿ ಹರಡಿಕೊಂಡಿತು; ಸರಸರನೆ ಒಟ್ಟುಗೂಡಿ ದಟ್ಟವಾಯಿತು; ಅಲ್ಲಿಗೇ ನಿಲ್ಲದೆ ತನ್ನ ಸ್ವರೂಪದಲ್ಲಿ ಕಡಿಮೆಗೊಳ್ಳದೆ ಮತ್ತಷ್ಟು ದಟ್ಟವಾಗಿ ಕೋಣೆಯಲ್ಲಿ ಉಸಿರುಕಟ್ಟುವಷ್ಟು ತುಂಬಿಕೊಂಡಿತು; ಅದರಲ್ಲಿ ಆ ಗಂಡಹೆಂಡಿರು ಅಡಗಿಹೋದರು; ಹೀಗೆ ಜಗತ್ತಿಗೆ ಅಚ್ಚರಿಯುಂಟಾಗುವಂತೆ ಕಪ್ಪು ಅಗರುವಿನ ಹೊಗೆಯು ಕಾಳಿಂಗಸರ್ಪದಂತೆ ಅವರನ್ನು ಕೊಂದುಹಾಕಿತು.

[**ವಿಶೇಷ ವಿಚಾರ:** ಕೃಷ್ಣೋರಗದ ಹೋಲಿಕೆ, ಧೂಪಧೂಮವು ಹಬ್ಬಿದ ಬಗೆ, ಅದು ಹಾವಿನಂತಿದ್ದ ವರ್ಣನೆ – ಇವುಗಳು ಮೂಲದಲ್ಲಿಲ್ಲ ಎಂಬುದನ್ನು ಗಮನಿಸಬೇಕು]

**ಬಿಡದೆ ಪೊಗೆ ಸುತ್ತೆ ತೋಳಂ**
**ಸಡಿಲಿಸದಾ ಪ್ರಾಣವಲ್ಲಭರ್ ಪ್ರಾಣಮನಂ**

ದೊಡಗಳೆದರೋಪರೋಪರೊ
ಳೊಡಸಾಯಲ್ಪಡೆದರಿನ್ನವೇಂ ಸಯ್ಪೊಳವೇ ೨೬

**ಪದವಿಭಾಗ-ಅನ್ವಯ-ಅರ್ಥ:** ಬಿಡದೆ ಪೊಗೆ ಸುತ್ತೆ = ಒಂದೇ ಸಮನೆ ಹೊಗೆಯು ಆವರಿಸಲು, ತೋಳಂ ಸಡಿಲಿಸದ + ಆ ಪ್ರಾಣವಲ್ಲಭರ್ = ತಮ್ಮ ಅಪ್ಪುಗೆಯನ್ನು ಸಡಿಲಿಸದ ಆ ಪ್ರಾಣವಲ್ಲಭರು, ಪ್ರಾಣಮನ್ + ಅಂದು + ಒಡಗಳೆದರ್ = ಆಗ ಜೊತೆಯಲ್ಲಿಯೇ ಪ್ರಾಣಬಿಟ್ಟರು; ಓಪರ್ + ಓಪರೊಳ್ + ಒಡಸಾಯಲ್ + ಪಡೆದರ್ = ಪ್ರಿಯರು ಪ್ರಿಯರೊಡನೆಯೇ ಸಾಯುವ ಭಾಗ್ಯವನ್ನು ಪಡೆದರು; ಇನ್ನು + ಅವೇಂ ಸಯ್ಪು + ಒಳವೇ = ಇದಕ್ಕಿಂತಲೂ ಹೆಚ್ಚಿನ ಪುಣ್ಯವಿದ್ದೀತೇ!

**ಗದ್ಯಾನುಸರಣ:** ಒಂದೇ ಸಮನೆ ಹೊಗೆಯು ಆವರಿಸಲು ತಮ್ಮ ಅಪ್ಪುಗೆಯನ್ನು ಸಡಿಲಿಸದ ಆ ಪ್ರಾಣವಲ್ಲಭರು, ಜೊತೆಯಲ್ಲಿಯೇ ಪ್ರಾಣಬಿಟ್ಟರು; ಪ್ರಿಯರು ತಮ್ಮ ಪ್ರಿಯರೊಡನೆಯೇ ಸಾಯುವ ಭಾಗ್ಯವನ್ನು ಪಡೆದರು; ಇದಕ್ಕಿಂತಲೂ ಹೆಚ್ಚಿನ ಪುಣ್ಯವಿದ್ದೀತೇ!

[**ವಿಶೇಷ ವಿಚಾರ:** 'ಪ್ರಾಣವಲ್ಲಭರ್' ಎಂಬ ಮಾತಿನ ಶ್ಲೇಷಾರ್ಥ ಎಷ್ಟು ಅದ್ಭುತವಾಗಿ ಪರಿಣಾಮಕಾರಿಯಾಗಿದೆ ಇಲ್ಲಿ! ವಜ್ರಜಂಘ-ಶ್ರೀಮತಿಯರು ಆಲಂಕಾರಿಕ ಅರ್ಥದಲ್ಲಿ ಮಾತ್ರ ಪ್ರಾಣವಲ್ಲಭರಲ್ಲ, ತಮ್ಮ ಪ್ರಾಣವನ್ನು ಮತ್ತೊಬ್ಬರಿಗಾಗಿ ತೆತ್ತವರು! ಇಂಥ ಅನುರಕ್ತಜೀವರು ಜೊತೆಗೆ ಸಾಯುವ ಪುಣ್ಯವನ್ನು ಪಡೆದುಕೊಂಡು ಬಂದಿದ್ದರು. 'ಪಡೆದು ಬರು'ವುದು ಇಂದಿನ ಕನ್ನಡದಲ್ಲಿಯೂ ಪುಣ್ಯ ಮಾಡು ಎಂಬರ್ಥವನ್ನೇ ಹೊಂದಿದೆ ಎಂಬುದನ್ನು ಗಮನಿಸಿ. ಗಂಡಹೆಂಡಿರ ಈ ಗಾಢಾನುರಕ್ತಿಯ ಬಗ್ಗೆ ಮೂಲದಲ್ಲಿ ಇಂಥ ಉದ್ಗಾರವಿಲ್ಲ (ಏಕೆಂದರೆ 'ಪೂರ್ವಪುರಾಣ'ದ ಕರ್ತೃ ಮುನಿ ಜಿನಸೇನಾಚಾರ್ಯ); ಅದಮ್ಯ ಜೀವನಪ್ರೀತಿಯ ಪಂಪನಂತಹವರು ಮಾತ್ರ ಹೀಗೆ ಉದ್ಗರಿಸಬಲ್ಲರು.]

**ಅಂತು ಪಂಚತ್ವಮನೆಯ್ದಿದ ವಜ್ರಜಂಘಂಗಂ ಶ್ರೀಮತಿಗಮಾ ತಿರಿಕಂಗಳ್ಗಂ ಉತ್ತಮಪಾತ್ರದಾನಾನುಮೋದದ ಪುಣ್ಯಫಲದಿಂದಮೀ ಜಂಬೂದ್ವೀಪದ ಮಂದರಮಹೀಧರದ ಉತ್ತರ ದಿಗ್ಭಾಗದೊಳಿರ್ದ ಉತ್ತರಕುರುವೆಂಬ ಉತ್ತಮಭೋಗಭೂಮಿಯೆ ಜನ್ಮಭೂಮಿಯಾದುದು; ಅದಱೊಳ್ ಅಱುಸಾಸಿರ ಬಿಲ್ನಿಡಿಯರಾಗಿ ದಿನತ್ರಯದೊಳ್ ಬದರೀಫಳ ಮಾತ್ರಾಹಾರಿಗಳುಂ, ಆರೋಗ್ಯಶರೀರಿಗಳುಂ, ತ್ರಿಪಲ್ಯೋಪಮ ಜೀವಿಗಳುಂ ಆಗಿ,**

**ಪದವಿಭಾಗ-ಅನ್ವಯ-ಅರ್ಥ:** ಅಂತು ಪಂಚತ್ವಮನೆಯ್ದಿದ ವಜ್ರಜಂಘಂಗಂ ಶ್ರೀಮತಿಗಂ = ಹಾಗೆ ಪ್ರಕೃತಿಯಲ್ಲಿ ಲೀನರಾದ ಶ್ರೀಮತಿ-ವಜ್ರಜಂಘರಿಗೆ, ತಿರಿಕಂಗಳ್ಗಂ + ಉತ್ತಮಪಾತ್ರದಾನ + ಅನುಮೋದದ ಪುಣ್ಯಫಲದಿಂದಂ = ಪ್ರಾಣಿಗಳಿಗೂ ಉತ್ತಮವಾದ ಪಾತ್ರದಾನ ಮಾಡಿದ ಪುಣ್ಯದ ಫಲದಿಂದ, ಈ ಜಂಬೂದ್ವೀಪದ ಮಂದರಮಹೀಧರದ + ಉತ್ತರ ದಿಕ್ + ಭಾಗದೊಳಿರ್ದ = ಮಂದರಪರ್ವತದ

ಉತ್ತರಭಗದಲ್ಲಿದ್ದ, ಉತ್ತರಕುರುವೆಂಬ + ಉತ್ತಮಭೋಗಭೂಮಿಯೆ ಜನ್ಮಭೂಮಿಯಾದುದು = ಉತ್ತರಕುರು ಎಂಬ ಭೋಗಭೂಮಿ ಅವರು ಹುಟ್ಟುವ ಜಾಗವಾಯಿತು.

**ಗದ್ಯಾನುಸರಣ:** ಹಾಗೆ ಪ್ರಕೃತಿಯಲ್ಲಿ ಲೀನರಾದ ಶ್ರೀಮತಿ–ವಜ್ರಜಂಘರು, ಪ್ರಾಣಿಗಳಿಗೂ (ಹುಲಿ ಹಂದಿ ಕೋತಿ ಮತ್ತು ಮುಂಗುಸಿ) ಉತ್ತಮವಾದ ಪಾತ್ರದಾನ ಮಾಡಿದ ಪುಣ್ಯದ ಫಲದಿಂದ, ಮಂದರಪರ್ವತದ ಉತ್ತರಭಾಗದ ಉತ್ತರಕುರು ಎಂಬ ಭೋಗಭೂಮಿಯಲ್ಲಿ ಅವರು ಹುಟ್ಟಿದರು; ಅದರಲ್ಲಿ, ಆರು ಸಾವಿರ ಬಿಲ್ಲುಗಳಷ್ಟು ಎತ್ತರವುಳ್ಳವರಾಗಿ ಮೂರು ದಿನಗಳಿಗೊಮ್ಮೆ, ಎಲಚಿಹಣ್ಣುಗಳನ್ನು ಮಾತ್ರ ತಿನ್ನುತ್ತಲೂ, ಆರೋಗ್ಯವಂತ ದೇಹವುಳ್ಳವರಾಗಿಯೂ, ಮೂರು ಪಲ್ಯಗಳಷ್ಟು ದೀರ್ಘ ಕಾಲ ಜೀವಿಸುವವರಾ[ದರು].

**ತೊಲಗದ ಜವ್ವನಂ ತವದ ಮೆಚ್ಚು ಮರಲ್ಚುವ ನೋಟಮಚ್ಚೆಯಿಂ**
**ಸಲಿಸುವ ಭೋಗಮೊಲ್ದಗಲದೋಪರ ಕೂಟಮನಂಗರಾಗದೊಳ್**
**ನಲಿದ ವಿನೋದಮಾದಮೆರ್ದೆಯೊಳ್ ತಡಮಾಡೆ ಸುಖಂಗಳೊಳ್ ಪಳಂ**
**ಚಲೆವುದು ನಾಕಲೋಕಮುಮನೇನಿರದೀವುದೊ ಭೋಗಭೂತಳಂ ೨೭**

**ಪದವಿಭಾಗ–ಅನ್ವಯ–ಅರ್ಥ:** ತೊಲಗದ ಜವ್ವನಂ = ಕಡಿಮೆಯಾಗದ ಹರಯ, ತವದ ಮೆಚ್ಚು = ಬತ್ತದ ಬಯಕೆ, ಮರಲ್ಚುವ ನೋಟಂ = ಪರಸ್ಪರ ನೋಟ, ಅಚ್ಚೆಯಂ ಸಲಿಸುವ ಭೋಗಂ = ಪ್ರೀತಿಯನ್ನುಕ್ಕಿಸುವ ಭೋಗ, ಒಲ್ದು + ಅಗಲದ + ಓಪರ ಕೂಟಂ = ಪ್ರೀತಿಸಿ ಬೇರೆಯಾಗದ ನಲ್ಲರ ಸೇರುವಿಕೆ, ಅನಂಗರಾಗದೊಳ್ ನಲಿದ ವಿನೋದಂ = ಕಾಮದ ಬಯಕೆಯಲ್ಲಿ ಸಂತಸಪಡುವ ರಸಿಕತೆ, ಎರ್ದೆಯೊಳ್ ಆದಂ ತಡಮಾಡೆ ಸುಖಂಗಳೊಳ್ ಪಳಂಚಲೆವುದು = ಎದೆಯಲ್ಲಿ ತೀವ್ರವಾಗಿ ತುಂಬಿದ ಸುಖಗಳಿಂದ ಕೂಡಿ, ಭೋಗಭೂತಳಂ ನಾಕಲೋಕಮುಮನ್ + ಏನ್ + ಇರದೆ + ಈವುದೊ = ಆ ಭೋಗಭೂಮಿಯು ಸ್ವರ್ಗಲೋಕದ ಸುಖವನ್ನು ನಿರಂತರವಾಗಿ ಅದೆಂತು ನೀಡುತ್ತದೆಯೋ!

**ಗದ್ಯಾನುಸರಣ:** ಕಡಿಮೆಯಾಗದ ಹರಯ, ಬತ್ತದ ಬಯಕೆ, ಪರಸ್ಪರ ನೋಟ, ಪ್ರೀತಿಯನ್ನುಕ್ಕಿಸುವ ಭೋಗ, ಪ್ರೀತಿಸಿ ವಿರಹವಿರದ ನಲ್ಲರ ಸೇರುವಿಕೆ, ಕಾಮದ ಬಯಕೆಯಲ್ಲಿ ಸಂತಸಪಡುವ ರಸಿಕತೆ, – ಹೀಗೆ ಎದೆಯಲ್ಲಿ ತೀವ್ರ ಸುಖವನ್ನು ನೀಡುವ ಆ ಭೋಗಭೂಮಿಯು ಸದಾ ಸ್ವರ್ಗಸುಖವನ್ನು ನೀಡುತ್ತದೆ.

**ವ। ಅಂತನೇಕಭೋಗನಿವಾಸಮೆನಿಸುವ ಭೋಗಭೂಮಿಯೊಳ್**

**ಅರ್ಥ:** ಅಂತು + ಅನೇಕಭೋಗನಿವಾಸಂ + ಎನಿಸುವ ಭೋಗಭೂಮಿಯೊಳ್ = ಈ ರೀತಿ ನಾನಾ ಭೋಗಗಳ ನೆಲೆ ಎನ್ನಿಸುವ ಆ ಭೋಗಭೂಮಿಯಲ್ಲಿ,

**ಅಗರುವ ಧೂಪಧೂಮದೊಳ್ ಸೊರ್ಕಿದ ಸೊರ್ಕುಗಳಾಗಳಲ್ಲಿ ತೊ**
**ಟ್ಟಗೆ ತಿಳಿದಂತೆ ತನ್ಮನುಜದಂಪತಿ ದಂಪತಿಯಾಗೆ ತೋಳ ತ**

ಳ್ತಗಲದಲಂಪಿನಿಂಪು ತವದಚ್ಚಿಳುರ್ಕೆ ನಿಮಿರ್ಕೆಗುಂದದಾ
ವಗಮತಿಸೌಖ್ಯಮಂ ಪಡೆವುದೀ ದೊರೆಯುನ್ನತಿ ಪಾತ್ರದಾನದಾ ೨೮

**ಪದವಿಭಾಗ-ಅನ್ವಯ-ಅರ್ಥ:** ಅಗರುವ ಧೂಪಧೂಮದೊಳ್ ಸೊರ್ಕಿದ ಸೊರ್ಕುಗಳ್ = ಕಾಳಾಗರುವಿನ ಹೊಗೆಯ ಉಸಿರುಕಟ್ಟಿಸುವಿಕೆಯು, ಆಗಳಲ್ಲಿ ತೊಟ್ಟಗೆ ತಿಳಿದಂತೆ = ಆಗ ಆ ಭೋಗಭೂಮಿಯಲ್ಲಿ ಇದ್ದಕ್ಕಿದ್ದಂತೆ ಉಪಶಮನಗೊಂಡಂತೆ, ತತ್ + ಮನುಜದಂಪತಿ ದಂಪತಿಯಾಗೆ = ವಜ್ರಜಂಘ-ಶ್ರೀಮತಿಯರೆಂಬ ಮಾನವ ಜೋಡಿಯು ಜೊತೆಯಾಗಿ ಹುಟ್ಟಿ, ತೋಳ ತಳ್ತು + ಅಗಲದ + ಅಲಂಪಿನ + ಇಂಪು = ಬಿಗಿದ ತೋಳು ಸಡಿಲಾಗದ ಸಂತಸದ ಸವಿ, ತವದ + ಅಚ್ಚಿಜ + ಅಳುರ್ಕೆ = ಕೊನೆಯಾಗದ ಪ್ರೀತಿಯ ಅತಿಶಯತೆ, ನಿಮಿರ್ಕೆಗುಂದದೆ + ಆವಗಂ + ಅತಿಸೌಖ್ಯಮಂ ಪಡೆವುದು = ಕಡಿಮೆಯಾಗದೆ ಯಾವಾಗಲೂ ಸುಖವನ್ನು ಹೊಂದುತ್ತದೆ; ಈ ದೊರೆಯ + ಉನ್ನತಿ ಪಾತ್ರದಾನದಾ = ಈ ಬಗೆಯ ಅತಿಶಯತೆ ಪಾತ್ರದಾನದ್ದು.

**ಗದ್ಯಾನುಸರಣ:** ಕಾಳಾಗರುವಿನ ಹೊಗೆಯ ಉಸಿರುಕಟ್ಟಿಸುವಿಕೆಯು ಇದ್ದಕ್ಕಿದ್ದಂತೆ ಉಪಶಮನಗೊಂಡಂತೆ, ಮಾನವ ಜೋಡಿಯಾದ ವಜ್ರಜಂಘ-ಶ್ರೀಮತಿಯರು ಭೋಗಭೂಮಿಯಲ್ಲಿ ಜೊತೆಯಾಗಿ ಹುಟ್ಟಿದರು; ಬಿಗಿದ ತೋಳು ಸಡಿಲಾಗದ ಸಂತಸದ ಸವಿ, ಕೊನೆಯಾಗದ ಪ್ರೀತಿಯ ಅತಿಶಯತೆ, ಯಾವಾಗಲೂ ಕಡಿಮೆಯಾಗದ ಸುಖ ಅವರದಾಯಿತು. ಪಾತ್ರದಾನದ ಮಹಿಮೆ ಈ ಬಗೆಯದು!

[**ವಿಶೇಷ ವಿಚಾರ:** 'ತೋಳ ತಳ್ತಗಲದಲಂಪಿನಿಂಪು' ಭಾಗಕ್ಕೆ 'ತೋಳ ತಳ್ಕು ಅಗಲದಲಂಪಿನಿಂಪು' - ಎಲ್. ಬಸವರಾಜು ಅವರ ಪಾಠ.]

**ವ॥ ಸಮ್ಯಗ್ದರ್ಶನಮಂ ಅಸ್ಖಲಿತಮಾರಾಧಿಸಿ ಆಯುಷ್ಯಾವಸಾನದೊಳ್ ವಜ್ರಜಂಘಾರ್ಯಂ ಶ್ರೀಪ್ರಭವಿಮಾನದೊಳ್ ಶ್ರೀಧರನೆಂಬ ದೇವನಾದಂ; ಶ್ರೀಮತ್ಯಾರ್ಯೆಯು ಸಮ್ಯಕ್ತ್ವಮಾಹಾತ್ಮ್ಯದಿಂ ಸ್ತ್ರೀರೂಪಮಂ ಪತ್ತುವಿಟ್ಟು ತತ್ಸ್ವಯಂಪ್ರಭಾವಿಮಾನದೊಳ್ ಶ್ರೀಧರಂಗೆ ಸಾಮಾನಿಕದೇವಂ ಸ್ವಯಂಪ್ರಭನೆಂಬ ದಿವಿಜನಾದಂ.**

**ಶ್ರೀಧರಂ ದಿವದಿಂ ಪರಿಚ್ಯುತನಾಗಿ ಜಂಬೂದ್ವೀಪದ ಪೂರ್ವವಿದೇಹದ ವತ್ಸಕಾವಿಷಯದ ಸುಸೀಮಾನಗರಮನಾಳ್ವ ಸುದೃಷ್ಟಿಮಹೀಪಾಳಂಗಂ ಸೌಂದರಸುನಂದಾಮಹಾದೇವಿಗಂ ಸುವಿಧೀ ನಾಮದಿಂ ಪುತ್ರನಾದಂ. ಸುವಿಧಿಗಂ ಮನೋರಮೆಗಂ ಶ್ರೀಮತೀಚರನೆನಿಸಿದಾ ಸ್ವಯಂಪ್ರಭದೇವಂ ದೇವಲೋಕದಿಂದವತರಿಸಿ ಕೇಶವಾಂಕಂ ಪ್ರಿಯತನುಜನಾದಂ. ಆಗಿ ಪೂರ್ವಭವಸ್ನೇಹಂ ತಮ್ಮನೊಂದು ಮಾಡೆ ಪಲಕಾಲಂ ಉರ್ವೀತಳದೊಳ್ ಉಣುತುಮಿರೆ, ಒಂದು ದಿವಸಂ ಸುವಿಧಿಯುಂ ಸಮಾಧಿವಿಧಿಯಿಂ ಶರೀರ ಪರಿತ್ಯಾಂಗಂಗೆಯ್ದು ಅಚ್ಯುತೇಂದ್ರನಾದಂ; ಕೇಶವನುಂ ಆತ್ಮೀಯ ಗುರುವಿಯೋಗದೊಳ್ ಪರಿತ್ಯಕ್ತರಾಜ್ಯಂ ಪ್ರವ್ರಜ್ಯಪದವಿಯೊಳ್ ಪರಿತ್ಯಕ್ತನುಮಾಗಿ ಅಚ್ಯುತಕಲ್ಪದೊಳ್ ಪ್ರತೀಂದ್ರನಾದಂ.**

**ಆ ದೇವನಲ್ಲಿಂ ತಳರ್ದು ಜಂಬೂದ್ವೀಪದ ಪ್ರಾಗ್ವಿದೇಹದ ಪುಷ್ಕಳಾವತೀ ವಿಷಯದ ಪ್ರತಿಬದ್ಧ ಪುಂಡರೀಕಿಣೀ ಪುರದೊಳ್ ವಣಿಗ್ವಂಶಾಗ್ರಣಿ ಕುಬೇರದತ್ತಂಗಂ ಅನಂತಮತಿಗಂ ಧನದೇವನೆಂಬ ತನೂಭವನಾದಂ. ವಜ್ರಸೇನ ಮಹಾರಾಜಂ ಕರ್ಮದ ತೊಡರಂ ಪಱಿವಂತೆ**

**ಕೇಶಪಾಶಮಂ ಪಱಿದು ತಪಂಗೊಂಡಂ. ವಜ್ರನಾಭಿಯುಂ ಧರಾತಳಂ ಪೊಗೞ್ವಿನಂ ರಾಜ್ಯದೊಳ್ ನಿಂದಂ**

**ಪದವಿಭಾಗ–ಅನ್ವಯ–ಅರ್ಥ:** ಸಮ್ಯಗ್ದರ್ಶನಮಂ ಅಸ್ಖಲಿತಂ + ಆರಾಧಿಸಿ = ಸಮ್ಯಗ್ದರ್ಶನವನ್ನು ಎಡೆಬಿಡದೆ ಆರಾಧಿಸುತ್ತ, ಆಯುಷ್ಯ + ಅವಸಾನದೊಳ್ = ತನ್ನ ಆಯುಸ್ಸು ಮುಗಿದ ಮೇಲೆ, ವಜ್ರಜಂಘಾರ್ಯಂ ಶ್ರೀಪ್ರಭವಿಮಾನದೊಳ್ ಶ್ರೀಧರನೆಂಬ ದೇವನಾದಂ = ವಜ್ರಜಂಘನು ಶ್ರೀಧರವಿಮಾನದಲ್ಲಿ ಶ್ರೀಧರನೆಂಬ ದೇವನಾದ; ಶ್ರೀಮತಿ + ಆರ್ಯೆಯು ಸಮ್ಯಕ್ತ್ವಮಾಹಾತ್ಮ್ಯದಿಂ ಸ್ತ್ರೀರೂಪಮಂ ಪತ್ತುವಿಟ್ಟು = ಶ್ರೀಮತಿಯು ಸಮ್ಯಕ್ತ್ವದ ಮಹಿಮೆಯಿಂದಾಗಿ ತನ್ನ ಹೆಣ್ಣುರೂಪವನ್ನು ಕೊನೆಗೊಳಿಸಿ, ತತ್ + ಸ್ವಯಂಪ್ರಭಾವಿಮಾನದೊಳ್ ಶ್ರೀಧರಂಗೆ ಸಾಮಾನಿಕದೇವಂ ಸ್ವಯಂಪ್ರಭನೆಂಬ ದಿವಿಜನಾದಂ = ಸ್ವಯಂಪ್ರಭಾವಿಮಾನದಲ್ಲಿ ಶ್ರೀಧರನಿಗೆ ಸಾಮಾನಿಕದೇವನಾಗಿ ಸ್ವಯಂಪ್ರಭ ಎಂಬ ದೇವನಾದ;

ಶ್ರೀಧರಂ = ಶ್ರೀಧರನು, ದಿವದಿಂ ಪರಿಚ್ಯುತನಾಗಿ = ದೇವಲೋಕದಿಂದ ಕೆಳಗಿಳಿದು, ಜಂಬೂದ್ವೀಪದ ಪೂರ್ವವಿದೇಹದ ವತ್ಸಕಾವಿಷಯದ ಸುಸೀಮಾ ನಗರಮನ್ + ಆಳ್ವ = ಈ ದೇಶದ ರಾಜನಾದ, ಸುದೃಷ್ಟಿಮಹೀಪಾಳಂಗಂ ಸೌಂದರಸುನಂದಾಮಹಾದೇವಿಗಂ = ಸುದೃಷ್ಟಿ ಮತ್ತು ಸೌಂದರ ಮಹಾದೇವಿಯರಿಗೆ, ಸುವಿಧಿ ನಾಮದಿಂ ಪುತ್ರನಾದಂ = ಸುವಿಧಿ ಎಂಬ ಹೆಸರಿನ ಮಗನಾಗಿ ಹುಟ್ಟಿದ. ಸುವಿಧಿಗಂ ಮನೋರಮೆಗಂ = ಸುವಿಧಿ ಮನೋರಮೆಯರಿಗೆ, ಶ್ರೀಮತೀಚರನೆನಿಸಿದಾ ಸ್ವಯಂಪ್ರಭದೇವಂ = ಶ್ರೀಮತಿ ಎಂಬ ಹೆಸರಿನಿಂದಿದ್ದ ಜೊತೆಗಾರನು, ದೇವಲೋಕದಿಂದೆ + ಅವತರಿಸಿ = ಸ್ವರ್ಗದಿಂದ ಇಳಿದು ಬಂದು, ಕೇಶವಾಂಕಂ ಪ್ರಿಯತನುಜನಾದಂ = ಕೇಶವ ಎಂಬ ಹೆಸರಿನಿಂದ ಮಗನಾಗಿ ಹುಟ್ಟಿದ. ಆಗಿ ಪೂರ್ವಭವಸ್ನೇಹಂ ತಮ್ಮನ್ + ಒಂದು ಮಾಡೆ = ಹೀಗೆ ಹುಟ್ಟಿ ಹಿಂದಿನ ಜನ್ಮದ ಸ್ನೇಹದ ಕಾರಣದಿಂದ ಮತ್ತೆ ಒಂದುಗೂಡಿ, ಪಲಕಾಲಂ ಉರ್ವೀತಳದೊಳ್ ಉಣುತುಮಿರೆ = ಕೆಲವು ಕಾಲ ಭೂಮಿಯಲ್ಲಿ ಜೀವಿಸಿರಲು, ಒಂದು ದಿವಸಂ ಸುವಿಧಿಯುಂ = ಒಂದು ದಿನ ಸುವಿಧಿಯೂ, ಸಮಾಧಿವಿಧಿಯಿಂ ಶರೀರ ಪರಿತ್ಯಾಂಗಂಗೆಯ್ದು = ಸುವಿಧಿಯೂ ಸಮಾಧಿವಿಧಿಯಿಂದ ದೇಹವನ್ನು ಬಿಟ್ಟು, ಅಚ್ಯುತೇಂದ್ರನಾದಂ = ಅಚ್ಯುತೇಂದ್ರನಾಗಿ ಹುಟ್ಟಿದ; ಕೇಶವನುಂ = ಅವನೂ, ಆತ್ಮೀಯ ಗುರುವಿಯೋಗದೊಳ್ = ಪ್ರಿಯರಾದ ಹಿರಿಯರ ಅಗಲುವಿಕೆಯಿಂದಾಗಿ, ಪರಿತ್ಯಕ್ತರಾಜ್ಯಂ = ರಾಜ್ಯವನ್ನು ತ್ಯಜಿಸಿ, ಪ್ರವ್ರಜ್ಯಪದವಿಯೊಳ್ ಪರಿತ್ಯಕ್ತನುಂ + ಆಗಿ = ಸನ್ಯಾಸದೀಕ್ಷೆ ಸ್ವೀಕರಿಸಿ, ಅಚ್ಯುತಕಲ್ಪದೊಳ್ ಪ್ರತೀಂದ್ರನಾದಂ = ಅಚ್ಯುತಕಲ್ಪದಲ್ಲಿ ಪ್ರತೀಂದ್ರನಾಗಿ ಹುಟ್ಟಿದ.

ಆ ದೇವನಲ್ಲಿಂ ತಳರ್ದು = ಆತನು ಅಲ್ಲಿಂದ ಹೊರಟು, ಜಂಬೂದ್ವೀಪದ ಪ್ರಾಗ್ವಿದೇಹದ ಪುಷ್ಕಳಾವತೀ ವಿಷಯದ ಪ್ರತಿಬದ್ಧ ಪುಂಡರೀಕಿಣೀ ಪುರದೊಳ್

= ಜಂಬೂದ್ವೀಪದ ಪೂರ್ವವಿದೇಹದಲ್ಲಿ ಪುಷ್ಕಳಾವತೀ ಎಂಬ ಪ್ರದೇಶದ ಪುಂಡರೀಕಿಣೀ ಊರಿನ, ವಣಿಗ್ವಂಶಾಗ್ರಣಿ ಕುಬೇರದತ್ತಂಗಂ ಅನಂತಮತಿಗಂ = ಶ್ರೇಷ್ಠ ವ್ಯಾಪಾರಿ ಕುಬೇರದತ್ತ ಮತ್ತವನ ಹೆಂಡತಿ ಅನಂತಮತಿಯರಿಗೆ, ಧನದೇವನೆಂಬ ತನೂಭವನಾದಂ = ಧನದೇವ ಎಂಬ ಹೆಸರಿನಲ್ಲಿ ಮಗನಾಗಿ ಹುಟ್ಟಿದ. ವಜ್ರಸೇನ ಮಹಾರಾಜಂ = ವಜ್ರಸೇನನು, ಕರ್ಮದ ತೊಡರಂ ಪಱಿವಂತೆ = ಕರ್ಮದ ತೊಡಕನ್ನು ಹರಿದುಕೊಳ್ಳುವ ರೀತಿಯಲ್ಲಿ, ಕೇಶಪಾಶಮಂ ಪಱಿದು ತಪಂಗೊಂಡಂ = ತನ್ನ ಕೂದಲನ್ನೆಲ್ಲ ಕಿತ್ತುಕೊಂಡು (ಲೋಚು) ತಪಸ್ಸಿನಲ್ಲಿ ತೊಡಗಿದ. ವಜ್ರನಾಭಿಯುಂ ಧರಾತಳಂ ಪೊಗೞ್ವಿನಂ ರಾಜ್ಯದೊಳ್ ನಿಂದಂ = ಆ ಬಳಿಕ ವಜ್ರನಾಭಿಯು ಜಗತ್ತು ಮೆಚ್ಚುವ ರೀತಿಯಲ್ಲಿ ರಾಜ್ಯಭಾರ ಮಾಡಿದ.

**ಅರ್ಥ:** ಆಗಿ ಜಂಬೂದ್ವೀಪದ ಪೂರ್ವವಿದೇಹದ ವತ್ಸಕಾವಿಷಯದ ಸುಸೀಮಾನಗರಮನಾಳ್ವ ಸುದೃಷ್ಟಿಮಹೀಪಾಳಂಗಂ ಸೌಂದರಸುನಂದಾ ಮಹಾದೇವಿಗಂ = ಹೀಗೆ ಸ್ವರ್ಗದಿಂದ ಕೆಳಗಿಳಿದು ಪೂರ್ವವಿದೇಹದ ವತ್ಸಕಾ ನಾಡಿನ ಸುಸೀಮಾಪುರದ ರಾಜದಂಪತಿಗಳಾದ ಸುದೃಷ್ಟಿ-ಸುನಂದಾದೇವಿಯರಿಗೆ ಸುವಿಧಿ ಎಂಬ ಹೆಸರಿನ ಮಗನಾಗಿ ಹುಟ್ಟಿದ. ಅನಂತರ ಸುವಿಧಿ ಮನೋರಮೆಯರಿಗೆ ಶ್ರೀಮತಿ ಎಂಬ ಹೆಸರಿನಿಂದಿದ್ದ ಜೊತೆಗಾರನು ಸ್ವರ್ಗದಿಂದ ಇಳಿದು ಬಂದು ಕೇಶವ ಎಂಬ ಹೆಸರಿನಿಂದ ಮಗನಾಗಿ ಹುಟ್ಟಿದ. ಹೀಗೆ ಹುಟ್ಟಿ ಹಿಂದಿನ ಜನ್ಮದ ಸ್ನೇಹದ ಕಾರಣದಿಂದ ಮತ್ತೆ ಒಂದುಗೂಡಿ ಕೆಲವು ಕಾಲ ಭೂಮಿಯಲ್ಲಿ ಕೇಶವನೂ ಪ್ರಿಯರಾದ ಹಿರಿಯರ ಅಗಲುವಿಕೆಯಿಂದಾಗಿ ರಾಜ್ಯವನ್ನು ತ್ಯಜಿಸಿ ಸನ್ಯಾಸದೀಕ್ಷೆಯನ್ನು ಪಡೆದು ಅಚ್ಯುತಕಲ್ಪದಲ್ಲಿ ಪ್ರತೀಂದ್ರನಾಗಿ ಹುಟ್ಟಿದ.

ಆತನು ಅಲ್ಲಿಂದ ಹೊರಟು, ಜಂಬೂದ್ವೀಪದ ಪೂರ್ವವಿದೇಹದಲ್ಲಿ ಪುಷ್ಕಳಾವತೀ ಎಂಬ ಪ್ರದೇಶದ ಪುಂಡರೀಕಿಣೀ ಊರಿನ ಶ್ರೇಷ್ಠ ವ್ಯಾಪಾರಿ ಕುಬೇರದತ್ತ ಮತ್ತವನ ಹೆಂಡತಿ ಅನಂತಮತಿಯರಿಗೆ ಧನದೇವ ಎಂಬ ಹೆಸರಿನಲ್ಲಿ ಮಗನಾಗಿ ಹುಟ್ಟಿದ. ವಜ್ರಸೇನನು ಕರ್ಮದ ತೊಡಕನ್ನು ಹರಿದುಕೊಳ್ಳುವ ರೀತಿಯಲ್ಲಿ ತನ್ನ ಕೂದಲನ್ನೆಲ್ಲ ಕಿತ್ತುಕೊಂಡು (ಲೋಚು) ತಪಸ್ಸಿನಲ್ಲಿ ತೊಡಗಿದ. ಆ ಬಳಿಕ ವಜ್ರನಾಭಿಯು ಜಗತ್ತು ಮೆಚ್ಚುವ ರೀತಿಯಲ್ಲಿ ರಾಜ್ಯಭಾರ ಮಾಡಿದ.

**ನೆಗೞ್ದೀ ಷಟ್ಖಂಡಮಂ ಸಾಧಿಸಿದೊಡೆ ಫಲಮೇಂ ಭೋಗದಿಂ ಸಾಧ್ಯಮೇಂ ಬಂ**
**ಧುಗಳಿಂದಂ ಬರ್ಪುದೇಂ ಸುತ್ತಿದ ಪರಿಜನದಿಂದಪ್ಪುದೇನೊಂದುಮಿಲ್ಲ**
**ಜ್ಜಿಗಮೊಂದುಂಟಲ್ಲಿ ಗಾಂಪಿಂ ತೊಡರ್ವೆನೆ ಪಡೆವೆಂ ಶಾಶ್ವತಶ್ರೀಯನೆಂಬು**
**ಜ್ಜುಗದೊಳ್ ಚಿತ್ತಂ ಕರಂ ತಣ್ಮಲೆಯೆ ನೆಱೆಯೆ ನಿಶ್ಚೈಸಿದಂ ಸಾರ್ವಭೌಮಂ ೨೯**

**ಪದವಿಭಾಗ-ಅನ್ವಯ-ಅರ್ಥ:** ನೆಗೞ್ದ + ಈ ಷಟ್ಖಂಡಮಂ ಸಾಧಿಸಿದೊಡೆ ಏಂ ಫಲಂ = ಪ್ರಸಿದ್ಧವಾದ ಈ ಷಟ್ಖಂಡಗಳನ್ನೂ ಗೆದ್ದರೆ ತಾನೇ ಏನು ಫಲ? ಭೋಗದಿಂ ಏಂ ಸಾಧ್ಯಂ = ಭೋಗದಿಂದ ಏನು ಬರುತ್ತದೆ? ಬಂಧುಗಳಿಂದಂ

ಬರ್ಪುದು + ಏಂ = ನಂಟರಿಂದಲಾದರೂ ಬರುವುದು ಏನು? ಸುತ್ತಿದ ಪರಿಜನದಿಂದೆ + ಅಪ್ಪುದು + ಏನ್ = ಸುತ್ತಲೂ ಇರುವ ಪರಿವಾರದವರಿಂದ ಆಗುವುದೇನು? ಒಂದುಂ + ಇಲ್ಲ = ಯಾವುದೂ ಇಲ್ಲ; ಅಲ್ಲಿ ಅಚ್ಚಿಗಂ + ಒಂದು + ಉಂಟು = ಅಲ್ಲಿ ದುಃಖ ಮಾತ್ರ ಇದೆ; ಗಾಂಪಿಂ ತೊಡರ್ವೆನೆ = ಮರುಳುತನದಿಂದ ಇದರಲ್ಲಿ ಸಿಲುಕಿವೆನೇನು? ಉಹ್ಞೂ; ಶಾಶ್ವತಶ್ರೀಯಸ್ ಪಡೆವೆಂ = ನಾಶವಾಗದ ಸಂಪತ್ತನ್ನು ಪಡೆಯುತ್ತೇನೆ, ಎಂಬ + ಉಜ್ಜುಗದೊಳ್ = ಎನ್ನುವ ಕಾರ್ಯದಲ್ಲಿ, ಚಿತ್ತಂ ಕರಂ ತಣ್ಮಲೆಯೆ ನೆಜೆಯೆ = ಮನಸ್ಸು ದೃಢವಾಗಿ ನಿಲ್ಲುವಂತೆ, ಸಾರ್ವಭೌಮಮಂ ನಿಶ್ಚೈಸಿದಂ = ಚಕ್ರವರ್ತಿಯು ನಿಶ್ಚಯಮಾಡಿದ.

**ಗದ್ಯಾನುಸರಣ:** 'ಪ್ರಸಿದ್ಧವಾದ ಈ ಷಟ್ಖಂಡಗಳನ್ನೂ ಗೆದ್ದರೆ ತಾನೇ ಏನು ಫಲ? ಭೋಗದಿಂದ ಏನು ಬರುತ್ತದೆ? ನಂಟರಿಂದಲಾದರೂ ಬರುವುದು ಏನು? ಸುತ್ತಲೂ ಇರುವ ಪರಿವಾರದವರಿಂದ ಆಗುವುದೇನು? ಯಾವುದೂ ಇಲ್ಲ; ಅಲ್ಲಿ ದುಃಖ ಮಾತ್ರ ಇದೆ; ಇದರಲ್ಲಿ ಮರುಳುತನದಿಂದ ಸಿಲುಕಿವೆನೇನು, ಉಹ್ಞೂ' ಎಂದು ನಾಶವಾಗದ ಸಂಪತ್ತನ್ನು ಪಡೆಯುವ ಕಾರ್ಯದಲ್ಲಿ ತನ್ನ ಮನಸ್ಸು ದೃಢವಾಗಿ ನೆಲೆಗೊಳಿಸಲು ಚಕ್ರವರ್ತಿಯು ನಿಶ್ಚಯಮಾಡಿದ.

**ವ॥ ಅಂತು ವಿಷಯವಿರಕ್ತನಾಗಿ ವಸುಂಧರಾಭರಮಂ ವಜ್ರದಂತನೆಂಬ ಅಗ್ರತನೂಜನೊಳ್ ನಿಜೆಸಿ, ನಿಜದ ರೂಪುಮಂ ಕೈಕೊಂಡು ಅಯ್ದುಂ ಮಹಾವ್ರತಂಗಳೊಳ್ ನೆರೆದು ತಪಮನೆತ್ತಿಕೊಂಡು ಅನಿತ್ಯಾದಿ ದ್ವಾದಶಾನುಪ್ರೇಕ್ಷಾನುಸ್ಮರಣ ಪರಿಣತಾಂತಃಕರಣನಾಗಿ ಶುಕ್ಲಧ್ಯಾನದೊಳ್ ಸಮಾಹಿತನುಪಶಾಂತ ಗುಣಸ್ಥಾನದೊಳ್ ಪ್ರಾಣ ಪರಿತ್ಯಾಗಂಗೆಯ್ದು ಸರ್ವಾರ್ಥಸಿದ್ಧಿಯೊಳ್ ಅಹಮಿಂದ್ರನಾಗಿ ಪುಟ್ಟಿ ಅಣಿಮಾದ್ಯಷ್ಟಗುಣಂಗಳ ಕಣಿಯಿರ್ಪಂತಿರ್ದು ಅಖಿಳಸುಖಮಂ ಪಡೆದಂ.**

**ಅನ್ವಯ–ಅರ್ಥ:** ಅಂತು ವಿಷಯವಿರಕ್ತನಾಗಿ = ಹೀಗೆ ಐಹಿಕತೆಯಿಂದ ದೂರನಾಗಿ, ವಸುಂಧರಾಭರಮಂ ವಜ್ರದಂತನೆಂಬ ಅಗ್ರತನೂಜನೊಳ್ ನಿಜೆಸಿ = ಭೂಮಿಯ ಹೊಣೆಯನ್ನು ಹಿರಿಯ ಮಗ ವಜ್ರದಂತನಿಗೆ ವಹಿಸಿಕೊಟ್ಟು, ನಿಜದ ರೂಪುಮಂ ಕೈಕೊಂಡು = ದಿಗಂಬರತ್ವವನ್ನು ಹೊಂದಿ, ಅಯ್ದುಂ ಮಹಾವ್ರತಂಗಳೊಳ್ ನೆರೆದು = ಐದು ಮಹಾವ್ರತಗಳನ್ನು ಅನುಸರಿಸುತ್ತ, ತಪಮನೆತ್ತಿಕೊಂಡು = ತಪಸ್ಸು ಮಾಡಿ, ಅನಿತ್ಯಾದಿ ದ್ವಾದಶಾನುಪ್ರೇಕ್ಷಾನುಸ್ಮರಣ ಪರಿಣತ + ಅಂತಃಕರಣನಾಗಿ = ಅನಿತ್ಯ ಮುಂತಾದ ಹನ್ನೆರಡು ಅನುಪ್ರೇಕ್ಷೆಗಳಲ್ಲಿ ಮನಸ್ಸನ್ನು ನೆಟ್ಟು, ಶುಕ್ಲಧ್ಯಾನದೊಳ್ ಸಮಾಹಿತನ್ = ಶುಕ್ಲಧ್ಯಾನದಲ್ಲಿ ತೊಡಗಿ, ಉಪಶಾಂತ ಗುಣಸ್ಥಾನದೊಳ್ ಪ್ರಾಣ ಪರಿತ್ಯಾಗಂಗೆಯ್ದು = ಉಪಶಾಂತ ಗುಣಸ್ಥಾನದಿಂದ ಜೀವವನ್ನು ತೊರೆದು, ಸರ್ವಾರ್ಥಸಿದ್ಧಿಯೊಳ್ ಅಹಮಿಂದ್ರನಾಗಿ ಪುಟ್ಟಿ = ಸರ್ವಾರ್ಥಸಿದ್ಧಿಯಲ್ಲಿ ಅಹಮಿಂದ್ರನಾಗಿ ಜನಿಸಿ, ಅಣಿಮಾದಿ + ಅಷ್ಟಗುಣಂಗಳ ಕಣಿಯಿರ್ಪಂತಿರ್ದು = ಅಣಿಮಾ ಮುಂತಾದ ಅಷ್ಟಗುಣಗಳ

ಗಣೆಯಂತೆ ಇದ್ದು. ಅಖಿಳಸುಖಮಂ ಪಡೆದಂ = ಕೊನೆಯಿಲ್ಲದ ಸುಖವನ್ನು ಹೊಂದಿದ.

**ಗದ್ಯಾನುಸರಣ:** ಹೀಗೆ ಐಹಿಕತೆಯಿಂದ ದೂರನಾಗಿ ಭೂಮಿಯ ಹೊಣೆಯನ್ನು ಹಿರಿಯ ಮಗ ವಜ್ರದಂತನಿಗೆ ವಹಿಸಿಕೊಟ್ಟು, ದಿಗಂಬರತ್ವವನ್ನು ಹೊಂದಿ, ಐದು ಮಹಾವ್ರತಗಳನ್ನು ಅನುಸರಿಸುತ್ತ ತಪಸ್ಸು ಮಾಡಿ, ಅನಿತ್ಯ ಮುಂತಾದ ಹನ್ನೆರಡು ಅನುಪ್ರೇಕ್ಷೆಗಳಲ್ಲಿ ಮನಸ್ಸನ್ನು ನೆಟ್ಟು, ಶುಕ್ಲಧ್ಯಾನದಲ್ಲಿ ತೊಡಗಿ, ಉಪಶಾಂತ ಗುಣಸ್ಥಾನದಿಂದ ಜೀವವನ್ನು ತೊರೆದು, ಸರ್ವಾರ್ಥಸಿದ್ಧಿಯಲ್ಲಿ ಅಹಮಿಂದ್ರನಾಗಿ ಜನಿಸಿ, ಅಣಿಮಾ ಮುಂತಾದ ಅಷ್ಟಗುಣಗಳ ಗಣೆಯಂತೆ ಇದ್ದು, ಕೊನೆಯಿಲ್ಲದ ಸುಖವನ್ನು ಹೊಂದಿದ.

*

# ಆದಿತೀರ್ಥಂಕರ ಚರಿತಂ: ಧರ್ಮಚಕ್ರವರ್ತಿತ್ವಂ

**ವ। ಅನ್ನೆಗಮಿತ್ತ ಮೇರುಗಿರಿಯೆ ತನಗೆ ನಾಭಿಯಾಗಿ ಸೊಗಯಿಸುವ ಜಂಬೂದ್ವೀಪಾಂತರ್ಗತ ಭರತಕ್ಷೇತ್ರ ಮಧ್ಯಮಧ್ಯಮ ಖಂಡದೊಳ್ ಅವಸರ್ಪಿಣಿಯೊಳ್ ಜಘನ್ಯ ಭೋಗಭೂಮಿಯ ಕಡೆಯ ಪಲ್ಯೋಪಮದ ಭಾಗದೊಳ್**

**ಅನ್ವಯ-ಅರ್ಥ:** ಅನ್ನೆಗಂ + ಇತ್ತ = ಅಷ್ಟರಲ್ಲಿ ಈ ಕಡೆ. ಮೇರುಗಿರಿಯೆ ತನಗೆ ನಾಭಿಯಾಗಿ ಸೊಗಯಿಸುವ = ಮೇರುಪರ್ವತವೇ ತನ್ನ ಹೊಕ್ಕುಳಿನಂತೆ ಶೋಭಿಸುವ, ಜಂಬೂದ್ವೀಪ + ಅಂತರ್ಗತ = ಜಂಬೂದ್ವೀಪದಲ್ಲಿನ, ಭರತಕ್ಷೇತ್ರ ಮಧ್ಯಮಧ್ಯಮ ಖಂಡದೊಳ್ = ಭರತಕ್ಷೇತ್ರದ ನಡುವಿನ ಭಾಗದಲ್ಲಿ, ಅವಸರ್ಪಿಣಿಯೊಳ್ = ಅವಸರ್ಪಿಣಿ ಕಾಲದಲ್ಲಿ, ಜಘನ್ಯ ಭೋಗಭೂಮಿಯ ಕಡೆಯ = ಕನಿಷ್ಠವೆನಿಸಿದ ಭೋಗಭೂಮಿಯ ಕೊನೆಯ, ಪಲ್ಯೋಪಮದ ಭಾಗದೊಳ್ = ಪಲ್ಯದಷ್ಟು ಕಾಲದಲ್ಲಿ,

**ಅರ್ಥ:** ಅಷ್ಟರಲ್ಲಿ ಈ ಕಡೆ, ಮೇರುಪರ್ವತವೇ ತನ್ನ ಹೊಕ್ಕುಳಿನಂತೆ ಶೋಭಿಸುವ ಜಂಬೂದ್ವೀಪದಲ್ಲಿನ ಭರತಕ್ಷೇತ್ರದ ನಡುವಿನ ಭಾಗದಲ್ಲಿ, ಅವಸರ್ಪಿಣಿ ಕಾಲದಲ್ಲಿ, ಕನಿಷ್ಠವೆನಿಸಿದ ಭೋಗಭೂಮಿಯ ಕೊನೆಯ ಪಲ್ಯದಷ್ಟು ಕಾಲದಲ್ಲಿ,

**ಉತ್ತಮಮಧ್ಯಮಾಧಮಗುಣಂ ನಿಜದಾನದ ಭೋಗಭೂತಳ**
**ಕ್ಕೆತ್ತಮೊಡಂಬಡಂ ಪಡೆಯೆ ಬೇಡಿದ ಭೋಗಮನಿತ್ತು ಪೇಟಿಮಿ**
**ತ್ತಿತ್ತಿವರ್ಗಿತ್ತೆನೆಂಬ ಬಗೆ ತೊಟ್ಟನೆ ಪುಟ್ಟಿರೆ ಮುನ್ನಮಿತ್ತು ಬೆ**
**ಳ್ಕುತ್ತಿನಿಸಿರ್ದ ಪಾರ್ಥಿವರೊಳೇಂ ದೊರೆಯಾದುದೊ ಕಲ್ಪಪಾರ್ಥಿವಂ** ೧

**ಪದವಿಭಾಗ-ಅನ್ವಯ-ಅರ್ಥ:** ನಿಜದಾನದ ಭೋಗಭೂತಳಕ್ಕೆ = ತನ್ನ ದಾನಕ್ಕನುಗುಣವಾದ ಭೋಗಭೂಮಿಗೆ, ಉತ್ತಮಮಧ್ಯಮ + ಆಧಮಗುಣಂ ಎತ್ತಂ + ಒಡಂಬಡಂ ಪಡೆಯೆ = ಉತ್ತಮ ಮಧ್ಯಮ ಹಾಗೂ ಅಧಮ ಗುಣಗಳು ಉಂಟಾಗಲು, ಬೇಡಿದ ಭೋಗಮನ್ + ಇತ್ತು = ಬೇಡಿದ ಭೋಗಗಳನ್ನು ನೀಡಿ, ಪೇಟಿಂ + ಇತ್ತು + ಇತ್ತು + ಇವರ್ಗೆ + ಇತ್ತೆನೆಂಬ ಬಗೆ ತೊಟ್ಟನೆ ಪುಟ್ಟಿರೆ = ಇವರಿಗೆ ಕೊಟ್ಟು ಇವರಿಗೆ ಕೊಟ್ಟೆ ಎಂಬ ಬುದ್ಧಿ ಹುಟ್ಟಲು, ಮುನ್ನಂ + ಇತ್ತು ಬೆಳ್ಕುತ್ತು = ಮೊದಲು ಕೊಟ್ಟು ಹಿಂಜರಿದು. ಇನಿಸಿರ್ದ ಪಾರ್ಥಿವರೊಳ್ ಕಲ್ಪಪಾರ್ಥಿವಂ ಏಂ ದೊರೆಯಾದುದೋ = ಹೀಗಿದ್ದ ರಾಜರುಗಳಿಗೆ ಕಲ್ಪವೃಕ್ಷಗಳು ಸಮನಾದುವು.

**ಗದ್ಯಾನುಸರಣ:** ಭೋಗಭೂಮಿಗೆ ದಾನಕ್ಕನುಗುಣವಾಗಿ ಉತ್ತಮ ಮಧ್ಯಮ ಹಾಗೂ ಅಧಮ ಎಂಬ ಗುಣಗಳು ಉಂಟಾದುವು; ಬೇಡಿದ ಭೋಗಗಳನ್ನು ನೀಡಿದ ಅವಕ್ಕೆ ಅವರಿಗೆ ಕೊಟ್ಟೆ ಇವರಿಗೆ ಕೊಟ್ಟೆ ಎಂಬ ಬುದ್ಧಿ ಹುಟ್ಟಿತು; ಹೀಗೆ ಮೊದಲು ಕೊಟ್ಟು ಆನಂತರ ಹಿಂದೆ ಮುಂದೆ ನೋಡಿದ ಕಲ್ಪವೃಕ್ಷಗಳು ಇತರ ರಾಜರುಗಳಿಗೆ ಸಮಾನವಾಗಿಬಿಟ್ಟವು.

[**ವಿಶೇಷ ವಿಚಾರ:** ಪಾರ್ಥಿವ ಎಂದರೆ ರಾಜ ಮತ್ತು ಮರ ಎಂಬೆರಡೂ ಅರ್ಥಗಳಿವೆ; ದಾನ ಕೊಟ್ಟ ರಾಜರುಗಳ ಮನಸ್ಸಿನಲ್ಲಿ ಹೆಮ್ಮೆ ಮೂಡಿದಂತೆ ಕಲ್ಪವೃಕ್ಷಗಳಲ್ಲಿಯೂ ಆಯಿತೆಂಬುದು ಕವಿಯ ಆಶಯ. ಮೊದಮೊದಲು ಬೇಡಿದ್ದನ್ನು ಕೊಡುತ್ತಿದ್ದ ಕಲ್ಪವೃಕ್ಷಗಳು ಬರಬರುತ್ತ ಕೊಡುವ ಶಕ್ತಿಯನ್ನು ಕಳೆದುಕೊಂಡುದನ್ನು ಕವಿ ಹೀಗೆ ಸೂಚಿಸುತ್ತಿದ್ದಾನೆ – ನೋಡಿ: ಮುಂದಿನ ಎರಡು ಪದ್ಯಗಳು.]

**ಮರಗಳೆ ಮುನ್ನಿತ್ತನಿಸಂ**
**ಮರವಟ್ಟುವು ಪೆಟ್ಟುವೆರ್ಚಿ ಕುದಿದಿತ್ತೊಡಮೀ**
**ಧರಣಿತಳಕ್ಕವಿವೇಕಿಯ**
**ಮರವಾನಸನಿತ್ತ ಚಾಗಮೇನಿರ್ದಪುದೇ** ೨

**ಪದವಿಭಾಗ–ಅನ್ವಯ–ಅರ್ಥ:** ಮರಗಳೆ ಇನಿಸಂ ಮುನ್ನಿತ್ತು ಮರವಟ್ಟುವು = ಈ ಕಲ್ಪವೃಕ್ಷಗಳು ಇಷ್ಟೆಲ್ಲವನ್ನೂ ಮೊದಲು ನೀಡಿ ಜಡವಾದುವು; ಪೆಟ್ಟುವೆರ್ಚಿ ಕುದಿದು ಈ ಧರಣಿತಳಕ್ಕೆ ಇತ್ತೊಡಂ = ಬೀಗುತ್ತ ಕುದಿಯುತ್ತ ಈ ಭೂಮಿಗೆ ಕೊಟ್ಟರೂ. ಅವಿವೇಕಿಯ ಮರವಾನಸನ್ + ಇತ್ತ ಚಾಗಂ + ಏನ್ + ಇರ್ದಪುದೇ = ಅವಿವೇಕಿಯಾದ ಮರದ ಬೊಂಬೆಯು ಕೊಡುವ ದಾನವು ಉಳಿಯುತ್ತದೆಯೇ?

**ಗದ್ಯಾನುಸರಣ:** ಈ ಕಲ್ಪವೃಕ್ಷಗಳು ಇಷ್ಟೆಲ್ಲವನ್ನೂ ಮೊದಲು ನೀಡಿ ಆನಂತರ ಜಡವಾದುವು; ಬೀಗುತ್ತ ಕುದಿಯುತ್ತ ಈ ಭೂಮಿಗೆ ಕೊಟ್ಟರೂ ಅದಕ್ಕೆ ಅವಿವೇಕಿಯಾದ ಮರದ ಬೊಂಬೆಯು ಕೊಡುವ ದಾನವು ಸಮಾನವಾದೀತೇ?

**ವ॥ ಅದಂ ಕಂಡು ಬೆರ್ಚಿ ಬೆಗಡುಗೊಂಡ ಭೋಗಭೂಮಿಜರಂ ಅಗ್ರಿಮಕುಲಧರಂ ಪ್ರತಿಶ್ರುತಿಯೆಂಬಂ ಸಂತಯಿಸಿದಂ. ಆನಂತರಮ್ ಜನಂಗಳ್ಗೆ ಸನ್ಮತಿವಿಕಾಸಮಂ ಮಾಡಿದ ಸನ್ಮತಿಯುಂ, ಮೃಗಸಂಕುಳಂ ಕೋಟ್ಮಸಗಿದೊಡೆ ಆರ್ಯಜನಕ್ಕೆ ಅವನಳವಡಿಸುವ ಬಗೆಯಂ ಪೇಟ್ದ ಕ್ಷೇಮಂಕರನುಂ, ಪಾಪಸತ್ತ್ವಂಗಳ್ ಕಾಡೆ ಲಕುಟ ಯಷ್ಟ್ಯಾದಿ ರಕ್ಷಾವಿಧಿಯನ್ ಉಪದೇಶಂಗೆಯ್ದ ಕ್ಷೇಮಂಧರನುಂ, ಭೂಮಿಜರೊಂದೊರ್ವರಂ ಪಳಂಚಲೆವೆಡೆಯೊಳ್ ಸೀಮೆಗಳ ತೊಡರನುಡುಗಿಸಿದ ಸೀಮಂಕರನುಂ, ಮರ್ಯಾದಾವಿಪ್ರಪತ್ತಿಯಿಂದಂ ಊಳ್ವ ಆರ್ಯಜನಕ್ಕೆ ಅಘಾಟಶುದ್ಧಿಯಂ ಮಾಡಿದ ಸೀಮಂಧರನುಂ, ಬನಕಂ ಪೊಲಕಂ ನಡೆಯಲ್ಕಾರದೆ ಮಱುಗುವ ಆರ್ಯರಂ ಕಂಡು ಕರಿ ಹರಿ ವಾಹನಂಗಳಂ ಪಡೆದ ವಿಮಲವಾಹನನುಂ, ಸುತಮುಖ ಆಲೋಕನಮತಿವಿಸ್ಮಯಮಾಗೆ ಮಱುಗುವ ಆರ್ಯಜನಕ್ಕೆ ಅತಿವಿದಿತಂ ಮಾಡಿ ತಿಳಿಸಿದ ಚಕ್ಷುಷ್ಮನುಂ, ಪೆಸರಿಲ್ಲದಾರ್ಯರ್ಗೆ ಪೆಸರಿಟ್ಟ ಯಶಸ್ವಿಯುಂ, ಚಂದ್ರನಂ ತೋಱಿ ಕೂಸುಗಳನ್ ಆಡಿಸುವಾಟಮಂ ತೋಱಿದ ಅಭಿಚಂದ್ರನುಂ, ಮಂಜಿನ ಮಱಿಯೊಳ್ ಮಸುಳ್ದ ಕಂಜಪ್ರಿಯ ಕುಮುದಬಂಧುಗಳಂ ಕಂಡಂಜಿರ್ದಾರಂ ಅಂಜಲಿಂ ಎಂದು ನಿಱಿಸಿದ ಚಂದ್ರಾಭನುಂ [ಎಂಬ ಪನ್ನೊಂದು ಮಂದಿ ಕುಲಧರರ್ ಭೋಗಭೂಮಿಯೊಳ್ ಅವತರಿಸಿದರ್].**

**ಆತನ ಕಡೆಯೊಳ್ ಅಸಂಖ್ಯೇಯ ವರ್ಷಾನಂತರ ವಿರಾಮದೊಳ್ ಪನ್ನೆರಡನೆಯ ಕುಲಧರಂ ಪುಟ್ಟಿದಂದು**

**ಅರ್ಥ:** ಅದಂ ಕಂಡು ಹೆದರಿಕೆಯಿಂದ ಗಾಬರಿಗೊಂಡ ಭೋಗಭೂಮಿಯ ಜನರನ್ನು ಮೊದಲ ಕುಲಧರನಾದ ಪ್ರತಿಶ್ರುತಿಯೆನ್ನುವವನು ಸಮಾಧಾನಪಡಿಸಿದ. ಆನಂತರ ಜನಗಳಿಗೆ ಬುದ್ಧಿಯ ವಿಕಾಸಕ್ಕೆ ಕಾರಣನಾದ ಸನ್ಮತಿ, ಮೃಗಗಳು ಹಿಂಸೆ ಮಾಡಲು ತೊಡಗಿದಾಗ ಅವುಗಳನ್ನು ನಿಯಂತ್ರಿಸುವ ಬಗೆಯನ್ನು ಆರ್ಯಜನರಿಗೆ ತಿಳಿಸಿಕೊಟ್ಟ ಕ್ಷೇಮಂಕರ, ಹಿಂಸಕ ಪ್ರಾಣಿಗಳು ಕಾಡಲು (ಲಕುಟ ಯಷ್ಟಿ + ಆದಿ)ದೊಣ್ಣೆ ಕೋಲು ಮುಂತಾದವುಗಳಿಂದ ರಕ್ಷಿಸಿಕೊಳ್ಳುವುದನ್ನು ಉಪದೇಶ ಮಾಡಿದ ಕ್ಷೇಮಂಧರ, ಭೂಮಿಯ ಮೇಲಿನ ಜನರು ಆಹಾರಕ್ಕಾಗಿ ಓಡಾಡುವಾಗ ಸೀಮೆಗಳ ತೊಡರನ್ನು ಉಡುಗಿಸಿದ ಸೀಮಂಕರ, ತಮ್ಮ ತಮ್ಮ ಪ್ರದೇಶಗಳ ಮೇರೆಯ ಬಗ್ಗೆ ವಿವಾದದಿಂದ ಜಗಳ ಕಾಯುವ ಆರ್ಯಜನಕ್ಕೆ ಎಲ್ಲೆಗಳನ್ನು ನಿರ್ಧರಿಸಿದ ಸೀಮಂಧರ, ಕಾಡಿಗೂ ಜಮೀನಿಗೂ ನಡೆಯಲಾರದೆ ಕಷ್ಟಪಡುತ್ತಿದ್ದವರಿಗೆ ಆನೆ ಕುದುರೆಗಳನ್ನೇ ವಾಹನಗಳನ್ನಾಗಿ ಮಾಡಿಕೊಳ್ಳುವಂತೆ ಹೇಳಿಕೊಟ್ಟ ವಿಮಲವಾಹನ, ಮಕ್ಕಳ ಮುಖವನ್ನೇ ನೋಡಲಾಗದಷ್ಟು ಬೇಗ ತೀರಿಕೊಳ್ಳುವ ಕಾರಣದಿಂದ ಮರುಗುತ್ತಿದ್ದ ಆರ್ಯಜನಕ್ಕೆ ಆ ಕುರಿತು ವಿಶದಪಡಿಸಿದ ಚಕ್ಷುಷ್ಮ, ವೈಯಕ್ತಿಕ ಹೆಸರುಗಳಿಲ್ಲದೆ ಗುರುತಿಸಲು ಕಷ್ಟಪಡುತ್ತಿದ್ದವರಿಗೆ ಹೆಸರುಗಳನ್ನಿತ್ತ ಯಶಸ್ವಿ, ಚಂದ್ರನ ಕಡೆ ತೋರಿಸಿ ಕೂಸುಗಳನ್ನು ಆಟವಾಡಿಸುವ ರೀತಿಯನ್ನು ಹೇಳಿಕೊಟ್ಟ ಅಭಿಚಂದ್ರ, ದಟ್ಟವಾದ ಮಂಜಿನಿಂದ ಮಸುಕಾಗುತ್ತಿದ್ದ ಸೂರ್ಯ ಚಂದ್ರರನ್ನು ಕಂಡು ಹೆದರಿದವರಿಗೆ 'ಅಂಜಬೇಡಿ' ಎಂದು ಸಮಾಧಾನಪಡಿಸಿದ ಚಂದ್ರಾಭ [ಎಂಬ ಹನ್ನೊಂದು ಮಂದಿ ಕುಲಧರರು ಭೋಗಭೂಮಿಯಲ್ಲಿ ಕ್ರಮವಾಗಿ ಹುಟ್ಟಿದರು].

ಹನ್ನೊಂದನೆಯವನ ನಂತರ ಅಸಂಖ್ಯ ವರ್ಷಗಳ ಬಳಿಕ ಹನ್ನೆರಡನೆಯ ಕುಲಧರ ಹುಟ್ಟಿದಾಗ

**ತುಱುಗಿದ ಮುಗಿಲಾ ಮುಗಿಲಿಂ**
**ದೆಱಗುವ ಮೞೆ ಕದಡಿ ಬರ್ಪ ತೊಱೆ ಬೆಟ್ಟು ತೆವರ್**
**ಮೊಱಡುಪಜಲಧಿಗಳೆನೆ ಜನ**
**ಮಱೆಯಱೆಯೆ ದಲುದ್ದಬಿದ್ದಮಾಯ್ತವನಿತಳಂ** ೩

**ಪದವಿಭಾಗ–ಅನ್ವಯ–ಅರ್ಥ:** ತುಱುಗಿದ ಮುಗಿಲ್ + ಆ ಮುಗಿಲಿಂದೆ + ಎಱಗುವ ಮೞೆ = (ಆಗಸವನ್ನೆಲ್ಲ) ಕವಿದ ಮೋಡ, ಆ ಮೋಡದಿಂದ ಬಿದ್ದ ಮಳೆ, ಕದಡಿ ಬರ್ಪ ತೊಱೆ = ಒಟ್ಟಾಗಿ ಹರಿಯುವ ಪ್ರವಾಹವು, ಬೆಟ್ಟು ತೆವರ್ ಮೊಱಡು + ಉಪಜಲಧಿಗಳ್ + ಎನೆ = ಬೆಟ್ಟಗಳು ದಿಬ್ಬಗಳು ಮತ್ತು ದಿಣ್ಣೆಗಳ ನಡುವೆ ಸಣ್ಣ ಸಮುದ್ರಗಳಂತೆ ತುಂಬಿಕೊಂಡು, ಜನಂ + ಅಱೆ + ಅಱೆಯೆ ಅವನಿತಳಂ ಉದ್ದಬಿದ್ದಮಾಯ್ತು ದಲ್ = ಜನರು ನೋಡನೋಡುತ್ತಿದ್ದಂತೆ ಭೂತಳವೆಲ್ಲ ನೀರಿನಿಂದ ತುಂಬಿಕೊಂಡಿತಲ್ಲ!

**ಗದ್ಯಾನುಸರಣ:** ಆಗಸವನ್ನೆಲ್ಲ ಕವಿದ ಮೋಡದಿಂದ ಮಳೆ ಬಿದ್ದು ಒಗ್ಗೂಡಿ ಹರಿಯುವ ಪ್ರವಾಹವು ಬೆಟ್ಟಗುಡ್ಡಗಳು ಮತ್ತು ದಿಣ್ಣೆಗಳ ನಡುವೆ ಸಣ್ಣ ಸಮುದ್ರಗಳಂತೆ ತುಂಬಿಕೊಂಡು ಜನರು ನೋಡನೋಡುತ್ತಿದ್ದಂತೆಯೇ ಭೂತಳವೆಲ್ಲ ನೀರಿನಿಂದ ತುಂಬಿಕೊಂಡುಬಿಟ್ಟಿತು!

**ವ॥ ಅಂತು ಕರ್ಮಭೂಮಿಸ್ಥಿತಿಯೊಳ್ ಉಪನದಿ ಉಪಸಮುದ್ರಂ ಉಪಪರ್ವತಂಗಳ್ ಅತಿಪ್ರಕಟಮಾಗೆ ಸೋಪಾನಪದ್ಧತಿಗಳೊಳ್ ಗಿರಿದುರ್ಗಾರೋಹಣಮುಮಂ ದ್ರೋಣಿಯಾನ ಪಾತ್ರಾದಿಗಳೊಳ್ ಜಲದುರ್ಗೋತ್ತರಣಮುಮನುಪದೇಶಂಗೆಯ್ದು,**

**ಪದವಿಭಾಗ–ಅನ್ವಯ–ಅರ್ಥ:** ಅಂತು ಕರ್ಮಭೂಮಿಸ್ಥಿತಿಯೊಳ್ = ಹೀಗೆ ಜಗತ್ತು ಕರ್ಮಭೂಮಿಯಾಗಿ ಮಾರ್ಪಟ್ಟಾಗ, ಉಪನದಿ + ಉಪಸಮುದ್ರಂ + ಉಪಪರ್ವತಂಗಳ್ + ಅತಿಪ್ರಕಟಮಾಗೆ = ಉಪನದಿಗಳೂ ಉಪಸಮುದ್ರಗಳೂ ಸಣ್ಣ ಬೆಟ್ಟಗಳೂ ಎದ್ದು ಕಾಣಿಸಿದಾಗ, ಸೋಪಾನಪದ್ಧತಿಗಳೊಳ್ ಗಿರಿದುರ್ಗ + ಆರೋಹಣಮುಮಂ = ಮೆಟ್ಟಿಲುಗಳ ಮೂಲಕ ಬೆಟ್ಟಗುಡ್ಡಗಳನ್ನು ಹತ್ತುವುದನ್ನೂ, ದ್ರೋಣಿಯಾನಪಾತ್ರ + ಆದಿಗಳೊಳ್ = ದೋಣಿ ತೆಪ್ಪ ಮುಂತಾದವುಗಳ ಮೂಲಕ, ಜಲದುರ್ಗ + ಉತ್ತರಣಮುಮನ್ + ಉಪದೇಶಂಗೆಯ್ದು = ಜಲಾಶಯಗಳನ್ನು ದಾಟುವ ಕ್ರಮವನ್ನೂ ಹೇಳಿಕೊಟ್ಟು,

**ಗದ್ಯಾನುಸರಣ:** ಹೀಗೆ ಜಗತ್ತು ಕರ್ಮಭೂಮಿಯಾಗಿ ಮಾರ್ಪಟ್ಟಾಗ ಉಪನದಿಗಳೂ ಉಪಸಮುದ್ರಗಳೂ ಸಣ್ಣ ಬೆಟ್ಟಗಳೂ ಎದ್ದು ಕಾಣಿಸಿಕೊಂಡವು; ಆಗ ಮೆಟ್ಟಲುಗಳ ಮೂಲಕ ಬೆಟ್ಟಗುಡ್ಡಗಳನ್ನು ಹತ್ತುವುದನ್ನೂ, ದೋಣಿ ತೆಪ್ಪ ಮುಂತಾದವುಗಳ ಮೂಲಕ ಜಲಾಶಯಗಳನ್ನು ದಾಟುವ ಕ್ರಮವನ್ನೂ ಅವನು ಹೇಳಿಕೊಟ್ಟ.

**ಇದು ಕರ್ಮಭೂಮಿಯಂದಂ**
**ಪೊದಳ್ದು ತೋಜಿದುದು ಭೋಗಭೂಮಿಸ್ಥಿತಿ ಕುಂ**
**ದಿದುದೆಂದು ಪೇಬ್ದು ಮನು ಜಸ**
**ಮೊದವೆ ಮರುದ್ದೇವನೆಂಬ ಪೆಸರಂ ಪಡೆದಂ** ೪

**ಪದವಿಭಾಗ–ಅನ್ವಯ–ಅರ್ಥ:** ಇದು ಕರ್ಮಭೂಮಿ + ಅಂದಂ ಪೊದಳ್ದು ತೋಜಿದುದು = ಇದು ಕರ್ಮಭೂಮಿಯ ರೀತಿ, ಅದು ಎದ್ದು ಕಾಣಿಸುತ್ತಿದೆ; ಭೋಗಭೂಮಿಸ್ಥಿತಿ ಕುಂದಿದುದು + ಎಂದು ಪೇಬ್ದು = ಭೋಗಭೂಮಿಯ ಮಹಿಮೆ ಕುಂದಿದೆ ಎಂದು ವಿವರಿಸಿ, ಮನು ಮರುದ್ದೇವನೆಂಬ ಪೆಸರಂ ಜಸಂ + ಒದವೆ ಪಡೆದಂ = ಮನುವು ಮರುದ್ದೇವ ಎಂಬ ಹೆಸರನ್ನು ಜಗತ್ತೇ ಅರಿಯುವಂತೆ ಪಡೆದು ಪ್ರಸಿದ್ಧನಾದ.

**ಗದ್ಯಾನುಸರಣ:** ಇದು ಕರ್ಮಭೂಮಿಯ ರೀತಿ, ಅದು ಈಗ ಎದ್ದು ಕಾಣಿಸುತ್ತಿದೆ; ಭೋಗಭೂಮಿಯ ಮಹಿಮೆ ಕುಂದಿಹೋಗಿದೆ ಎಂದು ವಿವರಿಸಿ ಈ ಮನುವು ಮರುದ್ದೇವ ಎಂಬ ಹೆಸರನ್ನು ಜಗತ್ತೇ ಅರಿಯುವಂತೆ ಪಡೆದು ಪ್ರಸಿದ್ಧನಾದ.

**ವ|| ಆತನ ಕಡೆಯೊಳುಚಿತಮನ್ವಂತರವ್ಯತಿಕ್ರಮದೊಳ್, ಪದಿಮೂಜನೆಯ ಕುಲಧರಂ ಪುಟ್ಟಿ,**

**ಅರ್ಥ:** ಆತನ ಕಡೆಯೊಳ್ + ಉಚಿತಮನ್ವಂತರವ್ಯತಿಕ್ರಮದೊಳ್ = ಆತನ ನಂತರ ಸೂಕ್ತವಾಗಿ ಮನ್ವಂತರ ಬದಲಾವಣೆಗೊಂಡು, ಪದಿಮೂಜನೆಯ ಕುಲಧರಂ ಪುಟ್ಟಿ = ಹದಿಮೂರನೆಯ ಕುಲಧರನು ಜನ್ಮತಾಳಿ,

**ಪಸರಿಸೆ ಜರಾಯುಪಟಲಂ**
**ಪಸುಗೂಸುಗಳೊಡಲೊಳವನಗಲ್ಚುವ ಮತಿಯಂ**
**ವಸುಮತಿಗಜಿಪಿ ಮಹಾತ್ಮಂ**
**ಪ್ರಸೇನಜಿನ್ನಾಮಧೇಯಮಂ ಪ್ರಕಟಿಸಿದಂ** ೫

**ಪದವಿಭಾಗ–ಅನ್ವಯ–ಅರ್ಥ:** ಒಡಲೊಳ್ ಪಸುಗೂಸುಗಳ ಜರಾಯುಪಟಲಂ ಪಸರಿಸೆ = ತಾಯ ಗರ್ಭದಲ್ಲಿ ಹಸುಗೂಸುಗಳ ಸುತ್ತ ಗರ್ಭಕೋಶದ ಪೊರೆ ಆವರಿಸಲು, ಅವನ್ + ಅಗಲ್ಚುವ ಮತಿಯಂ ವಸುಮತಿಗೆ + ಅಜಿಪಿ = ಅವುಗಳನ್ನು ನಿವಾರಿಸುವ ಕ್ರಮವನ್ನು ತಿಳಿಸಿದ, ಮಹಾತ್ಮಂ = ಮಹಾತ್ಮನು, ಪ್ರಸೇನಜಿತ್ + ನಾಮಧೇಯಮಂ ಪ್ರಕಟಿಸಿದಂ = ಪ್ರಸೇನಜಿತು ಎಂಬ ಹೆಸರನ್ನು ಪಡೆದ.

**ಗದ್ಯಾನುಸರಣ:** ತಾಯ ಗರ್ಭದಲ್ಲಿ ಹಸುಗೂಸುಗಳ ಸುತ್ತ ಗರ್ಭಕೋಶದ ಪೊರೆ ಆವರಿಸಿರುವುದನ್ನು ನಿವಾರಿಸುವ ಕ್ರಮವನ್ನು ತಿಳಿಸಿದ ಮಹಾತ್ಮನು ಪ್ರಸೇನಜಿತು ಎಂಬ ಹೆಸರನ್ನು ಪಡೆದ.

**ವ|| ಆತನಿಂ ಬಟಿಯಮಸಂಖ್ಯೇಯವರ್ಷಪ್ರಮಿತ ಮನ್ವಂತರಾತಿಕ್ರಮದೊಳ್ ಪದಿನಾಲ್ಕನೆಯ ಮನು ಪುಟ್ಟಿದಂದು,**

**ಅರ್ಥ:** ಆತನಿಂ ಬಟಿಯಂ + ಅಸಂಖ್ಯೇಯವರ್ಷಪ್ರಮಿತಮನ್ವಂತರ + ಅತಿಕ್ರಮದೊಳ್ ಪದಿನಾಲ್ಕನೆಯ ಮನು ಪುಟ್ಟಿದಂದು = ಆತನ ನಂತರ ಲೆಕ್ಕವಿರದಷ್ಟು ವರ್ಷಗಳ ಮನ್ವಂತರವು ಕಳೆದ ಬಳಿಕ ಹದಿನಾಲ್ಕನೆಯ ಮನುವು ಹುಟ್ಟಿದ;

**ಮನುಗಳೊಳೀತನೆ ಪದಿನಾ**
**ಲ್ಕನೆಯಾತಂ ತಪ್ಪದಪ್ಪನೆನಿಸಿಯುಮಂತಾ**
**ಮನುಗಳೊಳೀತನೆಗ ಮೊದಲಿಗೆ**
**ನೆನಿಸಿದನೇಂ ನಾಭಿ ನಾಭಿಯೋ ಗುಣಗಣದಾ** ೬

**ಪದವಿಭಾಗ–ಅನ್ವಯ–ಅರ್ಥ:** ಮನುಗಳೊಳ್ + ಈತನೆ ಪದಿನಾಲ್ಕನೆಯಾತಂ ತಪ್ಪದು + ಅಪ್ಪನ್ + ಎನಿಸಿಯುಂ = ಮನುಗಳಲ್ಲಿ ಈತ ಹದಿನಾಲ್ಕನೆಯವನು, ಸರಿಯೆ, ಹೀಗಿದ್ದರೂ, ಅಂತು + ಆ ಮನುಗಳೊಳ್ + ಈತನೇಂ ಮೊದಲಿಗನ್ + ಎನಿಸಿದಂ = ಆ ಮನುಗಳಲ್ಲಿ ಈತನೇ ಮೊದಲಿಗ ಎನ್ನಿಸಿಕೊಂಡ, ಏಂ ಗುಣಗಣದಾ ನಾಭಿಯೋ = ಈತ ಗುಣಸಮೂಹಗಳ ಕೇಂದ್ರವಾಗಿದ್ದನಲ್ಲ!

**ಗದ್ಯಾನುಸರಣ:** ಮನುಗಳಲ್ಲಿ ಈತ ಹದಿನಾಲ್ಕನೆಯವನು ಎಂಬುದು ನಿಜ. ಆದರೆ ಆ ಮನುಗಳಲ್ಲಿ ಈತನೇ ಮೊದಲಿಗ ಎನ್ನಿಸಿಕೊಂಡ – ಹೀಗೆ ಈತ ಗುಣಸಮೂಹಗಳ ಕೇಂದ್ರವಾಗಿದ್ದ.

ವ॥ ಆ ನಾಭಿರಾಜನ ಕಾಲದೊಳ್ ಪಯೋಧರಕಾಲಸ್ವರೂಪಂ ಚಿತ್ರರೂಪದಿಂ ನಭೋಭಾಗಮಂ ಪರ್ವಿದಾಗಳ್,

**ಅರ್ಥ:** ಆ ನಾಭಿರಾಜನ ಕಾಲದೊಳ್ ಪಯೋಧರಕಾಲಸ್ವರೂಪಂ ಚಿತ್ರರೂಪದಿಂ ನಭೋಭಾಗಮಂ ಪರ್ವಿದಾಗಳ್ = ಆ ನಾಭಿರಾಜನ ಕಾಲದಲ್ಲಿ ಮಳೆಗಾಲದ ಸ್ವರೂಪವು ಚಿತ್ರವಿಚಿತ್ರವಾಗಿ ಆಕಾಶವನ್ನೆಲ್ಲ ಹಬ್ಬಿತು.

**ನವಮೇಘಧ್ವನಿ ಪುಷ್ಕರಧ್ವನಿ ತರತ್ತಾರಾಳಿ ಪುಷ್ಪೋಪಹಾ**
**ರವಿಳಾಸಂ ರುಚಿರಾಂಬುದಂ ಯವನಿಕಾವಿನ್ಯಾಸಮಾದಲ್ಲಿ ಚಿ**
**ತ್ರವಿದಂ ಬಂದವಸರ್ಪಿಣೀನಟನ ಪೇಟಿಕ್ಕೊಂದಂದಿಂದೆತ್ತಮಾ**
**ಡೆ ವಿಯದ್ರಂಗಮೊಳಂದದೇಂ ನಲಿದುದೋ ವಿದ್ಯುನ್ನಟೀನರ್ತನಂ** ೭

**ಪದವಿಭಾಗ–ಅನ್ವಯ–ಅರ್ಥ:** ನವಮೇಘಧ್ವನಿ ಪುಷ್ಕರಧ್ವನಿ = ಹೊಸತು ಮೋಡಗಳ ಗುಡುಗೇ ಡಮರುಗಧ್ವನಿ, ತರತ್ + ತಾರಾ + ಆಳಿ ಪುಷ್ಪೋಪಹಾರವಿಳಾಸಂ = ಹೊಳೆಯುವ ನಕ್ಷತ್ರಸಾಲೇ ಹೂವಿನ ಹಾರ, ರುಚಿರ + ಅಂಬುದಂ ಯವನಿಕಾವಿನ್ಯಾಸಂ = ಸೊಬಗಿನ ಮೋಡವೇ ತೆರೆಯ ರೀತಿ, ಆದಲ್ಲಿ = ಹೀಗಾಗಿ, ಚಿತ್ರವಿದಂ ಬಂದ + ಅವಸರ್ಪಿಣೀನಟನ = ಆಕರ್ಷಕವಾಗಿ ಬಂದ ಅವಸರ್ಪಿಣಿಕಾಲವೆಂಬ ನರ್ತಕನ, ಪೇಟ್ಕಿ + ಒಂದು + ಅಂದದಿಂದೆ = ಒಂದು ರೀತಿಯಿಂದ, ಅಂದು + ವಿಯತ್ + ರಂಗದೊಳ್ + ಎತ್ತಂ + ಆಡೆ = ಆಗ ಆಗಸರಂಗದಲ್ಲಿ ಎಲ್ಲೆಲ್ಲೂ ಕುಣಿಯಲು, ವಿದ್ಯುತ್ + ನಟೀನರ್ತನಂ ಅದೇಂ ನಲಿದುದೋ = ಮಿಂಚೆಂಬ ನಟಿಯ ನರ್ತನವು ಅದೆಷ್ಟು ಸೊಗಸಿತೋ!

**ಗದ್ಯಾನುಸರಣ:** ಹೊಸತು ಮೋಡಗಳ ಗುಡುಗೇ ಡಮರುಗಧ್ವನಿ, ಹೊಳೆಯುವ ನಕ್ಷತ್ರಸಾಲೇ ಹೂವಿನ ಹಾರ, ಸೊಬಗಿನ ಮೋಡವೇ ತೆರೆಯ ರೀತಿಯಾಗಲು ಆಕರ್ಷಕ ವೇಷದಿಂದ ಬಂದ ಅವಸರ್ಪಿಣಿಕಾಲವು ನರ್ತಕನ ರೀತಿಯಲ್ಲಿ ಆಗಸರಂಗದಲ್ಲೆಡೆ ಕುಣಿಯಲು – ಮಿಂಚೆಂಬ ನಟಿಯ ನರ್ತನವು ಕಣ್ತುಂಬಿ ಸೊಗಸಿತು!

[**ವಿಶೇಷ ವಿಚಾರ:** ಹಿಂದೆ ಇಲ್ಲದಿದ್ದ ಪ್ರಾಕೃತಿಕ ಬದಲಾವಣೆಗಳು ಆಗತೊಡಗಿದವು; ಹಿಂದೆ ಹೇಳಿದವುಗಳ ಜೊತೆಯಲ್ಲಿ ಋತುವ್ಯತ್ಯಾಸಗಳುಂಟಾಗಿ ಮಳೆಗಾಲ ಬಂದ ಚಿತ್ರಣ ಇಲ್ಲಿದೆ; ಧರ್ಮ ಸತ್ಯ ನ್ಯಾಯ ಆಯುಸ್ಸು ಬಲ ಸುಖ ಮುಂತಾದವು ಹೆಚ್ಚಿರುವ ಉತ್ಸರ್ಪಿಣೀಕಾಲ ಹೋಗಿ ಆ ಗುಣಗಳು ಬರಬರುತ್ತ ಕಡಿಮೆಯಾಗುವ ಅವಸರ್ಪಿಣಿಕಾಲ ಬಂದಿದೆ; ಭೋಗಭೂಮಿ ಕರ್ಮಭೂಮಿಯಾಗಿ ಬದಲಾಗಿದೆ; ಹೀಗಾಗಿ ಮನುಷ್ಯ ತನ್ನ ದುಡಿಮೆಯಿಂದ ಬಾಳಬೇಕಾದ ಕಾಲ ಉಂಟಾಗಿದೆ. ಪಂಪ ಈ ಪದ್ಯದಲ್ಲಿ ಮಳೆಗಾಲದ ಆರ್ಭಟಸಹಿತವಾದ ದೃಶ್ಯವನ್ನು ವಿರಾಟ್ ನೃತ್ಯಕ್ಕೆ ಹೋಲಿಸಿ ಮಹಾದೃಶ್ಯವೊಂದನ್ನು ಕಣ್ಮುಂದೆ ತರುತ್ತಾನೆ. ಮಿಂಚನ್ನು ನರ್ತಕಿಗೆ ಹೋಲಿಸಿರುವ ಚೆಲುವನ್ನು ಪರಿಭಾವಿಸಿ.]

ವ॥ ಅಂತು ಕೊಂಡ ಪವಪಟಿಗಳೊಳ್ ಕಳಮ ಷಷ್ಟಿಕಾ ವ್ರೀಹಿ ಯವನಾಳ ಗೋಧೂಮ ಕಂಗು ಶ್ಯಾಮಕ ಕೋದ್ರವ ನೀವಾರ ತಿಳ ಅತಸಿ ಮಸೂರಿಕಾ ಕುಳಿತ್ಥ ಮುದ್ಗ ಮಾಷ ರಾಜಮಾಷ

**ಆಢಕೀ ನಿಷ್ಪಾವ ಚಣಕ ಕುಸುಂಭ ಕಾರ್ಪಾಸ ಸರ್ಷಪ ಜೀರಕ ಧಾನ್ಯಕಾದಿ ವಿವಿಧಧಾನ್ಯಭೇದಂಗಳ್ – ಕಲ್ಪವೃಕ್ಷಪರಿಕ್ಷಯದೊಳ್ – ಪ್ರಜಾಜೀವನೋಪಾಯಹೇತುಗಳ್ ಅಕೃಷ್ಟಪಚ್ಯಂಗಳಾಗಿ, ಬೆಳೆದೆಱಗಿರೆಯುಂ, ಅವಂ ಪುಲ್ಗಳೆಂದೇ ಬಗೆದು ಅಳುರ್ವ ಪಸಿವನಾಮೇಗೊಂಡೇನ್ ಗಳ ಗೆಯ್ವೆಮೆಂದು ಜನಂ ನಾಭಿಯಲ್ಲಿಗೆ ವಂದರ್. ನಾಭಿರಾಜಂ**

**ಪದವಿಭಾಗ–ಅನ್ವಯ–ಅರ್ಥ:** ಅಂತು = ಹೀಗೆ. ಕೊಂಡ ಪದವಟೆಗಳೊಳ್ = ಬಿದ್ದ ಹದವಾದ ಮಳೆಯ ಕಾರಣದಿಂದ, ಕಳಮ = ಬತ್ತ, ಷಷ್ಟಿಕಾವ್ರೀಹಿ = ಅರುವತ್ತು ದಿನಗಳಲ್ಲಿ ಬೆಳೆ ಬರುವ ಬತ್ತ, ಯವನಾಳ = ಜೋಳ, ಗೋಧೂಮ = ಗೋದಿ, ಕಂಗು = ನವಣೆ, ಶ್ಯಾಮಕ = ಸಾವೆ, ಕೋದ್ರವ = ಹಾರಕ, ನೀವಾರ = ಬರಗು, ತಿಳ = ಎಳ್ಳು, ಅತಸಿ = ಅಗಸೆ, ಮಸೂರಿಕಾ = ಕಡಲೆ ಕಾಳು, ಕುಳಿತ್ಥ = ಹುರುಳಿ, ಮುದ್ಗ = ಹೆಸರು, ಮಾಷ = ಉದ್ದು, ರಾಜಮಾಷ = ಅಲಸಂದೆ, ಆಢಕೀ = ತೊಗರಿ, ನಿಷ್ಪಾವ = ಅವರೆ, ಚಣಕ = ಕಡಲೆ, ಕುಸುಂಭ = ಕುಸುಬೆ, ಕಾರ್ಪಾಸ = ಹತ್ತಿ, ಸರ್ಷಪ = ಸಾಸಿವೆ, ಜೀರಕ = ಜೀರಿಗೆ, ಧಾನ್ಯಕಾ = ಕೊತ್ತಂಬರಿ, ಆದಿ ವಿವಿಧಧಾನ್ಯಭೇದಂಗಳುಂ = ಮುಂತಾದ ವಿವಿಧ ಆಹಾರಧಾನ್ಯಗಳು, ಕಲ್ಪವೃಕ್ಷಪರಿಕ್ಷಯದೊಳ್ = ಕಲ್ಪವೃಕ್ಷಗಳು ಕ್ಷೀಣಿಸಿದ ಸಂದರ್ಭದಲ್ಲಿ, ಪ್ರಜಾಜೀವನೋಪಾಯಹೇತುಗಳ್ = ಜನರು ಜೀವಿಸಲು ಕಾರಣಗಳಾದ, ಅಕೃಷ್ಟಪಚ್ಯಂಗಳಾಗಿ = ತಾವಾಗಿ ಬೆಳೆದವುಗಳಾಗಿ, ಬೆಳೆದು + ಎಱಗಿರೆಯುಂ = ಬೆಳೆದು ಒರಗಿದ್ದರೂ ಕೂಡ, ಅವಂ ಪುಲ್ಗಳೆಂದೆ ಬಗೆದು = ಅವುಗಳನ್ನು ಹುಲ್ಲುಗಳೆಂದು ತಿಳಿದು, ಅಳುರ್ವ ಪಸಿವನ್ + ಆಂ + ಏಗೊಂಡು + ಏಂ ಗಳ ಗೆಯ್ವೆವು ಎಂದು = ಪೀಡಿಸುವ ಹಸಿವನ್ನು ಏನನ್ನು ತಿಂದು ಹೇಗೆ ಬದುಕೋಣ ಎಂದು, ಪಶ್ಚಿಮಕುಳಧರನ್ + ಎನೆ ನೆಗಟ್ದ ನಾಭಿಯಲ್ಲಿಗೆ ಬಂದರ್ = ಕೊನೆಯ ಮನು ಎಂದು ಪ್ರಸಿದ್ಧನಾದ ನಾಭಿರಾಜನ ಬಳಿ ಬಂದರು.

**ಗದ್ಯಾನುಸರಣ:** ಹೀಗೆ, ಕಲ್ಪವೃಕ್ಷಗಳು ಕ್ಷೀಣಿಸಿದ ಸಂದರ್ಭದಲ್ಲಿ ಬಿದ್ದ ಹದವಾದ ಮಳೆಯ ಕಾರಣದಿಂದ ಬತ್ತ, ಅರುವತ್ತು ದಿನಗಳಲ್ಲಿ ಬೆಳೆ ಬರುವ ಬತ್ತ, ಜೋಳ, ಗೋದಿ, ನವಣೆ, ಸಾವೆ, ಹಾರಕ, ಬರಗು, ಎಳ್ಳು, ಅಗಸೆ, ಕಡಲೆ ಕಾಳು, ಹುರುಳಿ, ಹೆಸರು, ಉದ್ದು, ರಾಜಮಾಷ, ಅಲಸಂದೆ, ತೊಗರಿ, ಅವರೆ, ಕಡಲೆ, ಕುಸುಬೆ, ಹತ್ತಿ, ಸಾಸಿವೆ, ಜೀರಿಗೆ, ಕೊತ್ತಂಬರಿ ಮುಂತಾದ ಜನರು ಜೀವಿಸಲು ಕಾರಣಗಳಾದ ವಿವಿಧ ಆಹಾರಧಾನ್ಯಗಳು ತಾವಾಗಿ ತಾವು ಬೆಳೆದವು. ಬೆಳೆದು ಒರಗಿದ್ದರೂ ಕೂಡ ಅವುಗಳನ್ನು ಹುಲ್ಲುಗಳೆಂದು ತಿಳಿದ ಜನರು, 'ಏನನ್ನು ತಿಂದು ಈ ಪೀಡಿಸುವ ಹಸಿವನ್ನು ನೀಗಿಕೊಳ್ಳೋಣ' ಎಂದು ಕೊನೆಯ ಮನು ಎಂದು ಪ್ರಸಿದ್ಧನಾದ ನಾಭಿರಾಜನ ಬಳಿ ಬಂದರು.

[**ವಿಶೇಷ ವಿಚಾರ:** ಎಲ್. ಬಸವರಾಜು ಅವರ ಆವೃತ್ತಿಯಲ್ಲಿ 'ಜೀರಕ'ದ ಬದಲು 'ಮರೀಚ' ಇದೆ.]

**ಬಗೆಯಲ್ವೇಡ ಸುಧಾಮಹೀರುಹದೊಳಾದೌದಾರ್ಯಮಂ ವೀರ್ಯಮೀ**
**ಯುಗದೊಳ್ ತತ್ತರುಗಿಲ್ಲ ಪಕ್ವಫಲನಮ್ರಾಮ್ರಾದಿಭೂಜಂಗಳೀ**

ಯುಗದೊಳ್ ಕಲ್ಪಕುಜಂಗಳಿಂತಿವಱ ಪಣ್ ಭೋಜ್ಯಂಗಳಾರೋಗ್ಯಹೇ
ತುಗಳೀ ಪಣ್ಗಳೆ ಭೋಜ್ಯಮೆಂದು ವಿಳಸದ್ಭಾಗ್ಯೋದಯಂ ತೋಱಿದಂ ೮

**ಪದವಿಭಾಗ–ಅನ್ವಯ–ಅರ್ಥ:** ಸುಧಾಮಹೀರುಹದೊಳ್ + ಆದ + ಔದಾರ್ಯಮಂ ಬಗೆಯಲ್ವೇಡ = ಕಲ್ಪವೃಕ್ಷಗಳಲ್ಲಿ ಹಿಂದಿನ ಔದಾರ್ಯವನ್ನು ನಿರೀಕ್ಷಿಸಬೇಡಿ; ಈ ಯುಗದೊಳ್ ತತ್ + ತರುಗೆ ವೀರ್ಯಂ ಇಲ್ಲ = ಈ ಯುಗದಲ್ಲಿ ಆ ಮರಕ್ಕೆ ಅಂತಹ ಸಾಮರ್ಥ್ಯ ಇಲ್ಲ; ಪಕ್ವಫಲನಮ್ರ + ಆಮ್ರ + ಆದಿಭೂಜಂಗಳ್ ಈ ಯುಗದೊಳ್ ಕಲ್ಪಕುಜಂಗಳ್ = ಮಾಗಿದ ಹಣ್ಣುಗಳಿಂದ ಬಾಗಿದ ಮಾವು ಮುಂತಾದ ಮರಗಳೇ ಈ ಯುಗದಲ್ಲಿ ಕಲ್ಪವೃಕ್ಷಗಳು; ಇಂತು + ಇವಱ ಪಣ್ ಭೋಜ್ಯಂಗಳ್ + ಆರೋಗ್ಯಹೇತುಗಳ್ = ಹೀಗೆ ಇವುಗಳ ಹಣ್ಣುಗಳು ತಿನ್ನಬಹುದಾದವು ಮತ್ತು ಆರೋಗ್ಯಕ್ಕೆ ಕಾರಣವಾದವು; ಈ ಪಣ್ಗಳೆ ಭೋಜ್ಯಂ = ಈ ಹಣ್ಣುಗಳು ತಿನ್ನಬಹುದಾದವು, ಎಂದು ವಿಳಸತ್ + ಭಾಗ್ಯ + ಉದಯಂ ತೋಱಿದಂ = ಶ್ರೇಷ್ಠ ಭಾಗ್ಯೋದಯನಾದ ಅವುಗಳನ್ನು ತೋರಿಸಿಕೊಟ್ಟ.

**ಗದ್ಯಾನುಸರಣ:** 'ಕಲ್ಪವೃಕ್ಷಗಳಲ್ಲಿ ಹಿಂದಿನ ಔದಾರ್ಯವನ್ನು ನಿರೀಕ್ಷಿಸಬೇಡಿ; ಆ ಮರಕ್ಕೆ ಈ ಯುಗದಲ್ಲಿ ಅಂತಹ ಸಾಮರ್ಥ್ಯ ಇಲ್ಲ; ಮಾಗಿದ ಹಣ್ಣುಗಳಿಂದ ಕೂಡಿದ ಮಾವು ಮುಂತಾದ ಮರಗಳೇ ಈ ಯುಗದಲ್ಲಿ ಕಲ್ಪವೃಕ್ಷಗಳು; ಇವುಗಳ ಹಣ್ಣುಗಳು ತಿನ್ನಬಹುದಾದವು ಮತ್ತು ಆರೋಗ್ಯಕ್ಕೆ ಕಾರಣವಾದವು; ಈ ಹಣ್ಣುಗಳು ತಿನ್ನಲು ಯೋಗ್ಯವಾದವು' ಎಂದು ಭಾಗ್ಯೋದಯನಾದ ಆತನು ಅವುಗಳನ್ನು ತೋರಿಸಿಕೊಟ್ಟ.

[**ವಿಶೇಷ ವಿಚಾರ:** ಪಂಪನಿಗೆ ಮಾವು ತುಂಬ ಇಷ್ಟವೆಂಬುದು ಆಗಾಗ್ಗೆ ಅದರ ಬಗ್ಗೆ ಪ್ರಸ್ತಾಪಿಸುವ ರೀತಿಯಿಂದ ತಿಳಿಯಬಹುದು; ಪಂಪಭಾರತದಲ್ಲಿ ಕಾವ್ಯ ಹೊಸತಾಗುವುದು ಮಾರ್ಗದಲ್ಲಿ ದೇಸಿ ಸೇರಿದಾಗ ಎಂಬುದನ್ನು ವಿವರಿಸಲು ಆರಿಸಿಕೊಳ್ಳುವುದು ವಸಂತಕಾಲದ ಮಾವಿನ ಮರವನ್ನು.]

**ವ॥ ತೋಱಿ ಫಳಪಾಕಾಂತಂಗಳಪ್ಪೌಷಧಿಗಳಂ ಸ್ತಂಬಕರ್ಯಾದಿ ನಾನಾವಿಧ ಧಾನ್ಯಂಗಳಂ ಪದನಱಿದುಡುಗುವ ಕಣಂ ಮಾಡುವೊಕ್ಕುವಡಕುವ ಬಯ್ತಿಡುವಕ್ಕಿಮಾಡುವ ವಿವಿಧಭಾಜನಗಳೊಳಡುವ ಘೃತಲವಣತೈಲಕ್ಷೀರದಧಿವ್ಯಂಜನಂಗಳೊಳ್ ಸಂಸ್ಕಾರಂ ಮಾಡುವಳವಿಯಱಿದುಮ್ಬುವುಪಾಯಮಂ ಪುಂಡ್ರೇಕ್ಷುದಂಡಂಗಳಂ ಕಡಿಕಡಿದು ಯಂತ್ರಪೀಡನೆಯಿಂ ರಸಂಗೊಳ್ವ ತೆಱನುಮನಱಿಯೆ ಪೇೞ್ದು,**

**ಪದವಿಭಾಗ–ಅನ್ವಯ–ಅರ್ಥ:** ತೋಱಿ = ಹಾಗೆ ತೋರಿಸಿ, ಫಳಪಾಕ + ಅಂತಂಗಳಪ್ಪ + ಔಷಧಿಗಳಂ = ಫಸಲು ಬಿಟ್ಟ ಸಸ್ಯಗಳನ್ನೂ, ಸ್ತಂಬಕರಿ + ಆದಿ ನಾನಾವಿಧ ಧಾನ್ಯಂಗಳಂ = ಬತ್ತವೇ ಮುಂತಾದ ಹಲವು ಧಾನ್ಯಗಳನ್ನು, ಪದನ್ + ಅಱಿದು = ಹದ ತಿಳಿದು, ಉಡುಗುವ = ಶುದ್ಧಿ ಮಾಡುವ, ಕಣಂ ಮಾಡುವ = ಕಣ ಮಾಡುವ, ಒಕ್ಕುವ + ಅಡಕುವ = ಕಾಳನ್ನು ಬೇರ್ಪಡಿಸಿ ರಾಸಿ ಮಾಡುವ, ಬಯ್ತಿಡುವ = ಕಾಪಾಡುವ, ಅಕ್ಕಿಮಾಡುವ = ಅಕ್ಕಿ ಮಾಡುವ,

ವಿವಿಧಭಾಜನಂಗಳೊಳ್ + ಅಡುವ = ವಿವಿಧ ಪಾತ್ರೆಗಳಲ್ಲಿ ಬೇಯಿಸುವ. ಘೃತಲವಣತೈಲಕ್ಷೀರದಧಿವ್ಯಂಜನಗಳಂಗಳೊಳ್ = ತುಪ್ಪ ಉಪ್ಪು ಹಾಲು ಮೊಸರು ಮುಂತಾದ ವ್ಯಂಜನಗಳೊಡನೆ. ಸಂಸ್ಕಾರಂ ಮಾಡುವ = ಪರಿಷ್ಕರಿಸುವ. ಅಳವಿ + ಅಱಿದು + ಉಮ್ಬುವ + ಉಪಾಯಮಂ = ಸಾಮರ್ಥ್ಯಕ್ಕೆ ತಕ್ಕಂತೆ ಊಟಮಾಡುವ ಬಗೆಯನ್ನೂ. ಪುಂಡ್ರ + ಇಕ್ಷುದಂಡಂಗಳಂ = ಪಟ್ಟೆ ಕಬ್ಬು ಜಲ್ಲೆಗಳನ್ನು. ಕಡಿಕಡಿದು = ತುಂಡು ತುಂಡು ಮಾಡಿ. ಯಂತ್ರಪೀಡನೆಯಿಂ ರಸಂ + ಕೊಳ್ವ ತೆಱನುಮನ್ = ಗಾಣದಲ್ಲಿ ಹಿಂಡಿ ರಸವನ್ನು ಪಡೆಯುವ ವಿಧಾನವನ್ನು. ಅಱಿಯೆ ಪೇೞ್ದು = ತಿಳಿಸಿಕೊಟ್ಟು,

**ಗದ್ಯಾನುಸರಣ:** ಹಾಗೆ ತೋರಿಸಿ, ಫಸಲು ಬಿಟ್ಟ ಸಸ್ಯಗಳನ್ನೂ, ಬತ್ತವೇ ಮುಂತಾದ ಹಲವು ಧಾನ್ಯಗಳನ್ನು, ಪದನ್ + ಅಱಿದು = ಹದ ತಿಳಿದು ಶುದ್ಧಿ ಮಾಡುವ, ಕಣ ಮಾಡುವ, ಕಾಲನ್ನು ಬೇರ್ಪಡಿಸಿ ರಾಸಿ ಮಾಡುವ. ಕಾಪಾಡುವ, ಅಕ್ಕಿ ಮಾಡುವ, ವಿವಿಧ ಪಾತ್ರೆಗಳಲ್ಲಿ ಬೇಯಿಸುವ, ತುಪ್ಪ ಉಪ್ಪು ಹಾಲು ಮೊಸರು ಮುಂತಾದ ವ್ಯಂಜನಗಳೊಡನೆ ಪರಿಷ್ಕರಿಸುವ. ಹಾಗೂ ಸಾಮರ್ಥ್ಯಕ್ಕೆ ತಕ್ಕಂತೆ ಊಟಮಾಡುವುದನ್ನು ಹೇಳಿಕೊಟ್ಟ; ಅಲ್ಲದೆ, ಪಟ್ಟೆ ಕಬ್ಬು ಜಲ್ಲೆಗಳನ್ನು ತುಂಡು ತುಂಡು ಮಾಡಿ ಗಾಣದಲ್ಲಿ ಹಿಂಡಿ ರಸವನ್ನು ಪಡೆಯುವ ವಿಧಾನವನ್ನೂ ತಿಳಿಸಿಕೊಟ್ಟ.

**ಚ್ಯುತಿಯಾಗೆ ಭೋಗಭೂಮಿ**
**ಸ್ಥಿತಿ ಕಲ್ಪಮಹೀರುಹವ್ಯಪಾಯದೊಳೆಂತುಂ**
**ಕ್ಷಿತಿಪತಿ ಕಲ್ಪಮಹೀಜ**
**ಸ್ಥಿತಿಯಿಂ ತಾನಿಂತು ಜನಮನೇಂ ನಿಱಿಸಿದನೋ** ೯

**ಪದವಿಭಾಗ–ಅನ್ವಯ–ಅರ್ಥ:** ಕಲ್ಪಮಹೀರುಹವ್ಯಪಾಯದೊಳ್ ಭೋಗ ಭೂಮಿಸ್ಥಿತಿ ಚ್ಯುತಿಯಾಗೆ = ಕಲ್ಪವೃಕ್ಷಗಳು ಇಲ್ಲದ ಸ್ಥಿತಿಯಲ್ಲಿ ಭೋಗಭೂಮಿಯು ಇಲ್ಲವಾಗಲು, ಎಂತುಂ ಕ್ಷಿತಿಪತಿ ಕಲ್ಪಮಹೀಜಸ್ಥಿತಿಯಿಂ ಜನಮನೇಂ ನಿಱಿಸಿದನೋ = ಆದರೂ ನಾಭಿರಾಜನು ಕಲ್ಪವೃಕ್ಷಸ್ವರೂಪದ ಮರಗಳಿಂದ ಜನರನ್ನು ಅದೆಂತು ಕಾಪಾಡಿದ!

**ಗದ್ಯಾನುಸರಣ:** ಕಲ್ಪವೃಕ್ಷಗಳು ಇಲ್ಲದ ಸ್ಥಿತಿಯಲ್ಲಿ ಭೋಗಭೂಮಿಯು ಇಲ್ಲವಾಯಿತು; ಆದರೂ ನಾಭಿರಾಜನು ಕಲ್ಪವೃಕ್ಷಸ್ವರೂಪದ ಮರಗಳಿಂದ ಜನರನ್ನು ಅದೆಂತು ಕಾಪಾಡಿದ!

[**ವಿಶೇಷ ವಿಚಾರ:** ಪೂರ್ವಪುರಾಣದಲ್ಲಿ ಆರಂಭದಲ್ಲಿಯೇ ಕಾಲದ ಮತ್ತು ಮನುಗಳ ಈ ವಿವರಗಳು ಬಂದಿವೆ; ಮೊದಲ ತೀರ್ಥಂಕರನ ಜನ್ಮಪೂರ್ವದಲ್ಲಿ ಇವುಗಳನ್ನು ಹೇಳುವುದು ಹೆಚ್ಚು ಉಚಿತವೆಂದು ಪಂಪ ಭಾವಿಸಿರಬೇಕು. ವೈದಿಕ ಪುರಾಣಗಳ ಪ್ರಕಾರ ಬ್ರಹ್ಮನ ಒಂದು ಹಗಲಿನಲ್ಲಿ ದೇವಲೋಕವನ್ನು ಹದಿನಾಲ್ಕು ಮಂದಿ ಇಂದ್ರರೂ, ಭೂಲೋಕವನ್ನು ಹದಿನಾಲ್ಕು ಮಂದಿ ಮನುಗಳೂ ಆಳುತ್ತಾರೆ. ಇದನ್ನೇ ಜೈನಪುರಾಣದ ಇಂದ್ರ–ಮನುಗಳ ಕಲ್ಪನೆಯು ಮೇಲುನೋಟಕ್ಕೆ

ಹೋಲಿದರೂ ವಿವರಗಳಲ್ಲಿ ವ್ಯತ್ಯಾಸವಿದೆ. ವೈದಿಕದ ಪ್ರಕಾರ, ಇಂದ್ರರೂ ಮನುಗಳಂತೆ ಒಬ್ಬರಾದ ಮೇಲೆ ಒಬ್ಬರು ಬರುವವರು; ಆದರೆ ಇಲ್ಲಿ ಅವರು ಸಮಕಾಲೀನರು, ಹದಿನಾಲ್ಕು ಕಲ್ಪಗಳ ಒಡೆಯರು; ಮನುಗಳು ಮಾತ್ರ ಇಲ್ಲಿಯೂ ಕಾಲಾನುಕ್ರಮದಲ್ಲಿಯೇ ಬರುತ್ತಾರೆ. ಆದರೆ ಭೋಗಭೂಮಿಸ್ಥಿತಿ ಚ್ಯುತಿಗೊಂಡ ಮೇಲೆ ಪೃಥ್ವಿಯಲ್ಲಿ ಆದ ಬದಲಾವಣೆಗಳಿಗೆ ಮನುಸಂಕುಲವು ಹೊಂದಿಕೊಂಡ ಬಗೆಯನ್ನು, ಅಲೆಮಾರಿ ಭಯಗ್ರಸ್ತ ನೆಲೆಯಿಂದ ಕೃಷಿಸಮಾಜ ಸ್ಥಾಪಿತವಾದ ನೆಲೆಯವರೆಗಿನ ಬೆಳವಣಿಗೆಯನ್ನು, ಮನುಗಳ ಮೂಲಕ ಇಲ್ಲಿ ವರ್ಣಿಸಿರುವುದು ಹೆಚ್ಚು ತಾರ್ಕಿಕವಾಗಿದೆ. ಇದು ಆಧುನಿಕ ಸಾಮಾಜಿಕ ಮಾನವಶಾಸ್ತ್ರದ ವಿವರಗಳನ್ನು ಹೋಲುತ್ತದೆ. ಮನುಸಂಕುಲವನ್ನು ಈ ರೀತಿ ಕ್ರಮಬದ್ಧವಾಗಿ ಮಾರ್ಗದರ್ಶನ ಮಾಡಿದ್ದರಿಂದಾಗಿ ಮನುಗಳನ್ನು ಕುಲಧರರೆಂದು ಕರೆದಿರುವುದೂ ಹೆಚ್ಚು ಉಚಿತವಾಗಿದೆ. ಆದರೆ ಇಲ್ಲಿ ಸಸ್ಯಾಹಾರಿಗಳನ್ನು ಮಾತ್ರ ಪರಿಗಣಿಸಲಾಗಿದೆ; ಮಾಂಸಾಹಾರಿಗಳ ಪ್ರಸ್ತಾಪವೇ ಇಲ್ಲ. ಆಗ ಜಗತ್ತಿನಲ್ಲಿದ್ದವರೆಲ್ಲ ಜೈನರೇ ಎಂಬ ನಂಬಿಕೆ ಈ ಪುರಾಣದ್ದಿರಹುದು.]

**ವ। ಕುಳಧರನೆನಿಪ ನಾಭಿರಾಜಂಗೆ ಸತಿ ಮರುದೇವಿಯೆಂಬಳ್. ಅನ್ಯೋನ್ಯಪ್ರೇಮವಾಗಿ ನಿಳಿಂಪದಂಪತಿಯನೆ ಪೋಲ್ವ ತತ್ ದಂಪತಿಯಿಂದಂ ಪವಿತ್ರೀಭೂತಮಪ್ಪ ಭೂತಳೋದ್ದೇಶದೊಳ್ ಉತ್ಪತ್ಸ್ಯಮಾನ ಭಾವೀ ತೀರ್ಥಕರ ಪುಣ್ಯ ದೂತಾಹೂತಂ ಪುರುಹೂತಂ ಬಂದು**

**ಪದವಿಭಾಗ–ಅನ್ವಯ–ಅರ್ಥ:** ಕುಳಧರಂ ಎನಿಪ = ಕುಲಶ್ರೇಷ್ಠ ಎನಿಸಿದ ನಾಭಿರಾಜನಿಗೆ, ಸತಿ ಮರುದೇವಿಯೆಂಬಳ್ = ಹೆಂಡತಿಯು ಮರುದೇವಿ ಎನ್ನುವವಳು. ಅನ್ಯೋನ್ಯಪ್ರೇಮವಾಗಿ ನಿಳಿಂಪದಂಪತಿಯನೆ ಪೋಲ್ವ ತತ್ ದಂಪತಿಯಿಂದಂ = ಪರಸ್ಪರ ಪ್ರೇಮದಿಂದ ದೇವದಂಪತಿಗಳಂತೆ ಇದ್ದ ಅವರಿಂದ, ಪವಿತ್ರೀಭೂತಂ + ಅಪ್ಪ ಭೂತಳೋದ್ದೇಶದೊಳ್ = ಪವಿತ್ರವಾದ ಅವರ ಭೂಮಿಯಲ್ಲಿ, ಉತ್ಪತ್ಸ್ಯಮಾನಭಾವಿತೀರ್ಥಕರಪುಣ್ಯದೂತ + ಆಹೂತಂ = ಮುಂದೆ ಜನಿಸಲಿರುವ ತೀರ್ಥಂಕರನ ಪುಣ್ಯದ ದೂತನಿಂದ ಆಹ್ವಾನಿಸಲ್ಪಟ್ಟು, ಪುರುಹೂತಂ ಬಂದು = ದೇವೇಂದ್ರನು ಬಂದು,

**ಗದ್ಯಾನುಸರಣ:** ಕುಲಶ್ರೇಷ್ಠ ಎನಿಸಿದ ನಾಭಿರಾಜನಿಗೆ ಹೆಂಡತಿಯು ಮರುದೇವಿ ಎನ್ನುವವಳು. ಹೀಗೆ ಈ ಗಂಡಹೆಂಡಿರು ಪರಸ್ಪರ ಪ್ರೇಮದಿಂದ ಕೂಡಿದ ಮನೋಸಂಪತ್ತಿನಿಂದ ದೇವದಂಪತಿಗಳನ್ನು ಹೋಲುತ್ತಿದ್ದರು; ಪವಿತ್ರವಾದ ಅವರ ಈ ಭೂಮಿಯಲ್ಲಿ ಮುಂದೆ ಜನಿಸಲಿರುವ ತೀರ್ಥಂಕರನ ಪುಣ್ಯದ ದೂತನಿಂದ ಆಹ್ವಾನಿಸಲ್ಪಟ್ಟು ದೇವೇಂದ್ರನು ಬಂದ.

**ಕಿವಜೆ ಮನುಷ್ಯದಂಪತಿಗಳಿರ್ದುವನೊಂದೆಡೆಯೊಳ್ ತೆರಳ್ಚಿ ನಾ**
**ಕದ ಫಣಿಲೋಕದಂದದ ಪೊಟಲ್ಗಳನೀ ಪೊಟಲೊಂದು ರಮ್ಯಹ**
**ರ್ಮ್ಯದ ಬೆಲೆಗಂಬರಂ ನೆಜಿಯದೆಂಬಿನಮುಜ್ಜ್ವಳಪಂಚರತ್ನಭಾ**
**ಸ್ವದಸದನಂಗಳಿಂ ನೆಜಿಯುದಂ ಸಮೆದಂ ಪುರಮಂ ಪುರಂದರಂ** ೧೦

**ಪದವಿಭಾಗ–ಅನ್ವಯ–ಅರ್ಥ:** ಕೆದಱೆ ಮನುಷ್ಯದಂಪತಿಗಳಿರ್ದುವನ್ + ಒಂದೆಡೆಯೊಳ್ ತೆರಳ್ಚಿ = ಚೆದುರಿಹೋಗಿದ್ದ ಮನುಷ್ಯ ದಂಪತಿಗಳಿದ್ದ (ಮನೆಗಳನ್ನು) ಒಂದೆಡೆ ಸೇರಿಸಿ, ನಾಕದ ಫಣಿಲೋಕದ + ಅಂದದ ಪೊೞಲ್ಗಳನ್ = ದೇವಲೋಕ ನಾಗಲೋಕಗಳ ಸುಂದರವಾದ ನಗರಗಳೂ, ಈ ಪೊೞಲ + ಒಂದು ರಮ್ಯಹರ್ಮ್ಯದ ಬೆಲೆಗಂಬರಂ ನೆಱೆಯದು + ಎಂಬಿನಂ = ಈ ನಗರದ ಒಂದು ಚೆಲುವಾದ ಸೌಧದ ಬೆಲೆಗೆ ಬಾರದು ಎನ್ನುವಂತೆ, ಉಜ್ಜ್ವಳ ಪಂಚರತ್ನಭಾಸ್ವದಸದನಂಗಳಿಂ ನೆಱೆದುದಂ ಪುರಮಂ = ಶೋಭಯಮಾನವಾದ ಪಂಚರತ್ನಗಳಿಂದ ಹೊಳೆಯುವ ಮನೆಗಳಿಂದ ಕೂಡಿದ ನಗರವನ್ನು, ಪುರಂದರಂ ಸಮೆದಂ = ಇಂದ್ರನು ನಿರ್ಮಿಸಿದ.

**ಗದ್ಯಾನುಸರಣ:** ಮನುಷ್ಯ ದಂಪತಿಗಳ ಚೆದುರಿಹೋಗಿದ್ದ ಮನೆಗಳನ್ನೆಲ್ಲ ಒಂದೆಡೆ ಸೇರಿಸಿ, ದೇವಲೋಕ ನಾಗಲೋಕಗಳ ಸುಂದರವಾದ ನಗರಗಳೂ ಈ ನಗರದ ಒಂದು ಚೆಲುವಾದ ಸೌಧದ ಬೆಲೆಗೆ ಬಾರದು ಎನ್ನುವಂತೆ, ಶೋಭಾಯಮಾನವಾದ ಪಂಚರತ್ನಗಳಿಂದ ಹೊಳೆಯುವ ಮನೆಗಳಿದ ಕೂಡಿದ ಒಂದು ನಗರವನ್ನು ಇಂದ್ರನು ನಿರ್ಮಿಸಿದ.

[**ವಿಶೇಷ ವಿಚಾರ:** ಇಲ್ಲಿನ 'ಫಣಿಲೋಕದಂದದ ಪೊೞಲ್ಗಳನೀ' ಪಾಠದ ಬದಲು 'ಫಣಿಲೋಕದ ಅಂಕದ ಪೊೞಲ್ಗಳನೀ' ಹಾಗೂ 'ಬೆಲೆಗಂಬರಂ' ಬದಲು 'ಬೆಲೆಗಂ ಬರಲ್' – ಎಲ್. ಬಸವರಾಜು ಅವರ ಆವೃತ್ತಿಯ ಪಾಠಗಳು.]

**ವ॥ ಅಂತು ಸಮೆದ ಪುರವರಕೆ – ಅರಾತಿನಿಕರಕ್ಕೆ ಅಯೋಧ್ಯೆಯಪ್ಪುದಱಿಂದೆ ಅಯೋಧ್ಯೆಯುಂ, ಅನೇಕ ನಿಕೇತನಸಹಿತಮಪ್ಪುದಱಿಂ ಸಾಕೇತಮುಂ, ವಿನೀತ ಜನಸಂಕೀರ್ಣಮಪ್ಪುದಱಿಂ ವಿನೀತೆಯುಂ, ಭವಿಷ್ಯತ್ ಸುಕೌಶಲವಿಷಯ ಸಾಹಚರ್ಯದಿಂ ಸುಕೌಶಲೆಯುಂ – ಎಂಬ ಪೆಸರ್ಗಳನಿಟ್ಟು ನಾಭಿರಾಜಂಗೆ ರಾಜ್ಯಾಭಿಷೇಕಂ ಗೆಯ್ದು ಮರುದೇವಿ ಮಹಾದೇವಿವೆರಸು ಪಟ್ಟಮಂ ಕಟ್ಟಿ ಸಕಳಜನಮನ್ ಆಜ್ಞಾಕರಣದೊಳ್ ನಿಯೋಜಿಸಿ, ದಿವಿಜಕುಜಜನಿತ ವಸನ ಪ್ರಸವ ವಿಲೇಪನಾಭರಣಂಗಳಿಂ ಪೂಜಿಸಿ**

**ಪದವಿಭಾಗ–ಅನ್ವಯ–ಅರ್ಥ:** ಅಂತು ಸಮೆದ ಪುರವರಕೆ = ಹಾಗೆ ನಿರ್ಮಿಸಿದ ಶ್ರೇಷ್ಠ ನಗರಕ್ಕೆ, ಅರಾತಿನಿಕರಕ್ಕೆ + ಅಯೋಧ್ಯೆ + ಅಪ್ಪುದಱಿಂದೆ + ಅಯೋಧ್ಯೆಯುಂ = ಶತ್ರುಸಮುದಾಯಕ್ಕೆ ಗೆಲ್ಲಲಸಾಧ್ಯವಾದುದರಿಂದ ಅಯೋಧ್ಯೆಯೆಂದೂ, ಅನೇಕನಿಕೇತನಸಹಿತಂ + ಅಪ್ಪುದಱಿಂ ಸಾಕೇತಮುಂ = ನಾನಾ ಸೌಧಗಳನ್ನೊಳಗೊಂಡುದರಿಂದ ಸಾಕೇತವೆಂದೂ, ವಿನೀತಜನ + ಸಂಕೀರ್ಣಂ + ಅಪ್ಪುದಱಿಂ ವಿನೀತೆಯುಂ = ಸೌಜನ್ಯಭರಿತ ಜನರಿಂದ ಕೂಡಿದ್ದುದರಿಂದ ವಿನೀತೆಯೆಂದೂ, ಭವಿಷ್ಯತ್ + ಕೌಶಲವಿಷಯಸಾಹಚರ್ಯದಿಂ ಸುಕೌಶಲೆಯುಂ + ಎಂಬ ಪೆಸರ್ಗಳನ್ + ಇಟ್ಟು = ಮುಂದೆ ಅಧಿಕ ಕೌಶಲಗಳನ್ನು ಹೊಂದುವುದರಿಂದ ಸುಕೌಶಲೆಯೆಂದೂ ಹೆಸರುಗಳನ್ನಿಟ್ಟು, ನಾಭಿರಾಜಂಗೆ ರಾಜ್ಯಾಭಿಷೇಕಂಗೆಯ್ದು = ನಾಭಿರಾಜನಿಗೆ ರಾಜ್ಯಾಭಿಷೇಕವನ್ನು ಮಾಡಿ, ಮರುದೇವಿ

ಮಹಾದೇವಿವೆರಸು ಪಟ್ಟಮಂ ಕಟ್ಟಿ = ಪಟ್ಟದ ರಾಣಿಯಾದ ಮರುದೇವಿಯ ಜೊತೆಗೆ ಪಟ್ಟವನ್ನು ಕಟ್ಟಿ, ಸಕಳಜನಮುಮನ್ + ಆಜ್ಞಾಕರಣದೊಳ್ ನಿಯೋಜಿಸಿ = ಎಲ್ಲ ಜನರನ್ನೂ ನಾಭಿರಾಜನ ಆಜ್ಞೆಗಳನ್ನು ಪಾಲಿಸುವಂತೆ ನಿಯಮಿಸಿ, ದಿವಿಜಕುಜಜನಿತವಸನಪ್ರಸವವಿಲೇಪನ + ಆಭರಣಂಗಳಿಂ ಪೂಜಿಸಿ = ಕಲ್ಪತರುಗಳಿತ್ತ ಹೂಗಳು ಸುಗಂಧ ಹಾಗೂ ಆಭರಣಗಳಿಂದ ಪೂಜೆ ಮಾಡಿ,

**ಗದ್ಯಾನುಸರಣ:** ಹಾಗೆ ನಿರ್ಮಿಸಿದ ಶ್ರೇಷ್ಠ ನಗರಕ್ಕೆ ಇಂದ್ರನು, ಶತ್ರುಸಮುದಾಯಕ್ಕೆ ಗೆಲ್ಲಲಸಾಧ್ಯವಾದುದರಿಂದ ಅಯೋಧ್ಯೆಯೆಂದೂ, ನಾನಾ ಸೌಧಗಳನ್ನೊಳಗೊಂಡುದರಿಂದ ಸಾಕೇತವೆಂದೂ, ಸೌಜನ್ಯಭರಿತ ಜನರಿಂದ ಕೂಡಿದ್ದುದರಿಂದ ವಿನೀತೆಯೆಂದೂ, ಮುಂದೆ ಅಧಿಕ ಕೌಶಲಗಳನ್ನು ಹೊಂದುವುದರಿಂದ ಸುಕೌಶಲೆಯೆಂದೂ ಹೆಸರುಗಳನ್ನಿಟ್ಟ; ಆ ಬಳಿಕ ನಾಭಿರಾಜನಿಗೆ ರಾಜ್ಯಾಭಿಷೇಕವನ್ನು ಮಾಡಿ, ಪಟ್ಟದ ರಾಣಿಯಾದ ಮರುದೇವಿಯ ಜೊತೆಗೆ ಸಾಮ್ರಾಜ್ಯಪಟ್ಟವನ್ನು ಕಟ್ಟಿದ; ಎಲ್ಲ ಜನರನ್ನೂ ನಾಭಿರಾಜನ ಆಜ್ಞೆಗಳನ್ನು ಪಾಲಿಸುವಂತೆ ನಿಯಮಿಸಿದ; ಆನಂತರ ಕಲ್ಪತರುಗಳಿತ್ತ ಹೂಗಳು ಸುಗಂಧ ಆಭರಣಗಳಿಂದ ಪೂಜೆ ಮಾಡಿದ;

**ಸುರರಾಜಂ ತಾನೆ ರಾಜ್ಯಾಭಿಷವಣವಿಧಿಯಂ ಮಾಡಿದಂ ಸ್ವರ್ಗದಿಂದಂ**
**ಪುರುದೇವಂ ಬಂದಪಂ ನಂದನನೆನಗೆನಿಸಲ್ಕಾನೆ ಸಂಸಾರಸೌಖ್ಯಾ**
**ಕರನಾಗಿರ್ದಪ್ಪೆನೆಂಬುತ್ಸವದೊಳೆ ಸುಖದಿಂದಿರ್ದನೊಪ್ಪಿರ್ದಯೋಧ್ಯಾ**
**ಪುರದೊಳ್ ಶ್ರೀನಾಭಿರಾಜಂ ಸುಕವಿಜನಮನೋಮಾನಸೋತ್ತಂಸಹಂಸಂ** ೧೧

**ಪದವಿಭಾಗ–ಅನ್ವಯ–ಅರ್ಥ:** ಸುರರಾಜಂ ತಾನೆ ರಾಜ್ಯಾಭಿಷವಣವಿಧಿಯಂ ಮಾಡಿದಂ = ದೇವೇಂದ್ರ ತಾನೇ ರಾಜ್ಯಾಭಿಷೇಕವನ್ನು ಮಾಡಿದ್ದಾನೆ; ಎನಗೆ ನಂದನನ್ + ಎನಿಸಲ್ಕೆ ಪುರುದೇವಂ ಸ್ವರ್ಗದಿಂದಂ ಬಂದಪಂ = ನನಗೆ ಮಗನಾಗಲು ಪುರುದೇವನು ಸ್ವರ್ಗದಿಂದ ಬರಲಿದ್ದಾನೆ; ಆನೆ ಸಂಸಾರಸೌಖ್ಯ + ಆಕರನಾಗಿರ್ದಪ್ಪೆನ್ + ಎಂಬ + ಉತ್ಸವದೊಳೆ = ನಾನು ಸಂಸಾರ ಸುಖದ ನೆಲೆಯಾಗಿಬಿಟ್ಟೆ ಎಂಬ ಉತ್ಸಾಹದಿಂದ, ಸುಕವಿಜನೋಮಾನಸೋತ್ತಂಸಹಂಸಂ ಶ್ರೀನಾಭಿರಾಜಂ ಒಪ್ಪಿರ್ದ ಅಯೋಧ್ಯಾಪುರದೊಳ್ ಸುಖದಿಂದೆ ಇರ್ದನ್ = ಸುಕವಿಗಳ ಮನಸ್ಸುಗಳೆಂಬ ಸರೋವರದಲ್ಲಿ ವಿಹರಿಸುವ ಹಂಸನಾದ ನಾಭಿರಾಜನು ಅಯೋಧ್ಯೆಯಲ್ಲಿ ಸುಖವಾಗಿದ್ದ

**ಗದ್ಯಾನುಸರಣ:** 'ದೇವೇಂದ್ರ ತಾನೇ ನನಗೆ ರಾಜ್ಯಾಭಿಷೇಕವನ್ನು ಮಾಡಿದ್ದಾನೆ; ನನಗೆ ಮಗನಾಗಲು ಪುರುದೇವನು ಸ್ವರ್ಗದಿಂದ ಬರಲಿದ್ದಾನೆ; ಹೀಗಾಗಿ ನಾನು ಸಂಸಾರಸುಖದ ನೆಲೆಯಾಗಿಬಿಟ್ಟೆ' ಎಂಬ ಉತ್ಸಾಹದಿಂದ ಸುಕವಿಗಳ ಮನಸ್ಸುಗಳೆಂಬ ಸರೋವರದಲ್ಲಿ ವಿಹರಿಸುವ ಹಂಸನಾದ ನಾಭಿರಾಜನು ಅಯೋಧ್ಯೆಯಲ್ಲಿ ಸುಖವಾಗಿದ್ದ.

**ವ॥ ಆ ಪ್ರಸ್ತಾವದೊಳ್,**

**ಅರ್ಥ:** ಆ ಪ್ರಸ್ತಾವದೊಳ್ = ಆ ಸಂದರ್ಭದಲ್ಲಿ.

**ಲಯಮಂ ಕರ್ಮತಮಸ್ತಮಕ್ಕೆ ಜಯಮಂ ಧರ್ಮಕ್ಕೆ ಪೀನಂ ಪರಾ**
**ಜಯಮಂ ದೋಷಗಣಕ್ಕೆ ಲಕ್ಕೆತೆಱದಿಂ ಮುಂ ಮಾಡಿ ಸರ್ವಾರ್ಥಸಿ**
**ದ್ಧಿಯನೀಯಲ್ಕೆ ವಿನೇಯಸಂತತಿಗಭಿಪ್ರಾಯಾರ್ಥ ಸರ್ವಾರ್ಥಸಿ**
**ದ್ಧಿಯಿನುದ್ಧೂತ ತಮಂ ಬರಲ್ಕೆ ಬಗೆದಂ ಸಂಸಾರಸಾರೋದಯಂ** ೧೨

**ಪದವಿಭಾಗ-ಅನ್ವಯ-ಅರ್ಥ:** ಕರ್ಮತಮಃ + ತಮಕ್ಕೆ ಲಯಮಂ = ಕರ್ಮವೆಂಬ ಕತ್ತಲರಾಶಿಗೆ ವಿನಾಶವನ್ನೂ, ಧರ್ಮಕ್ಕೆ ಜಯಮಂ = ಧರ್ಮಕ್ಕೆ ಗೆಲುವನ್ನೂ, ದೋಷಗಣಕ್ಕೆ ಪೀನಂ ಪರಾಜಯಮಂ = ದೋಷಸಮೂಹಕ್ಕೆ ಭಾರಿ ಸೋಲನ್ನೂ, ಲಕ್ಕೆತೆಱದಿಂ ಮುಂ ಮಾಡಿ = ಅಸಂಖ್ಯ ಬಗೆಯಿಂದ ಮೊದಲು ಉಂಟುಮಾಡಿ, ವಿನೇಯಸಂತತಿಗೆ = ವಿನಯವಂತ ಜನಸಮೂಹಕ್ಕೆ, ಸರ್ವ + ಅರ್ಥಸಿದ್ಧಿಯನ್ + ಈಯಲ್ಕೆ = ಎಲ್ಲ ಅಭೀಷ್ಟಗಳನ್ನೂ ನೀಡಲು, ಅಭಿಪ್ರಾಯಾರ್ಥ = ಉದ್ದೇಶದಿಂದ, ಸರ್ವಾರ್ಥಸಿದ್ಧಿಯಿನ್ = ಪಂಚಾಣೂತ್ತರ ವಿಮಾನಗಳಲ್ಲಿ ತುತ್ತತುದಿಯ ವಿಮಾನವಾದ ಸರ್ವಾರ್ಥಸಿದ್ಧಿಯಿಂದ, ಉದ್ಧೂತತಮಂ ಸಂಸಾರಸಾರೋದಯಂ = ಕತ್ತಲನ್ನು ಅಥವಾ ಅಜ್ಞಾನವನ್ನು ದೂರಮಾಡುವ ಸಂಸಾರಸಾರೋದಯನಾದ ಆದಿದೇವನು, ಬರಲ್ಕೆ ಬಗೆದಂ = ಬರಲು ನಿರ್ಧರಿಸಿದ.

**ಗದ್ಯಾನುಸರಣ:** ಕರ್ಮವೆಂಬ ಕತ್ತಲರಾಶಿಗೆ ವಿನಾಶವನ್ನೂ, ಧರ್ಮಕ್ಕೆ ಗೆಲುವನ್ನೂ, ದೋಷಸಮೂಹಕ್ಕೆ ಭಾರಿ ಸೋಲನ್ನೂ, ಅಸಂಖ್ಯ ಬಗೆಯಿಂದ ಮೊದಲು ಉಂಟುಮಾಡಿ, ಆನಂತರ ವಿನಯವಂತ ಜನಸಮೂಹಕ್ಕೆ ಎಲ್ಲ ಅಭೀಷ್ಟಗಳನ್ನೂ ನೆರವೇರಿಸುವ ಉದ್ದೇಶದಿಂದ ಕೂಡಿ ಪಂಚಾಣೂತ್ತರ ವಿಮಾನಗಳಲ್ಲಿ ತುತ್ತತುದಿಯ ವಿಮಾನವಾದ ಸರ್ವಾರ್ಥಸಿದ್ಧಿಯಿಂದ ಕತ್ತಲನ್ನು ಅಥವಾ ಅಜ್ಞಾನವನ್ನು ದೂರಮಾಡುವ ಸಂಸಾರಸಾರೋದಯನಾದ ಆದಿದೇವನು ಬರಲು ನಿರ್ಧರಿಸಿದ.

**ಯುಗಮಂ ನಿಪ್ಪೊಸತಪ್ಪಿನಂ ಕೃತಯುಗಂಮಾಡಲ್ ಸುರೇಂದ್ರಾಳಿಗಾ**
**ವಗಮುತ್ಸಾಹಮನುಂಟುಮಾಡಲೆಡೆಗೊಟ್ಟೀ ಧರ್ಮಮಂ ನೀಂ ಜಲ**
**ಕ್ಕಗೆ ಮಾಡಲ್ಬಗೆವರ್ಪುದೆಂದು ನಯದಿಂ ಸಾಕೇತಮುತ್ಕೇತುಬಾ**
**ಹುಗಳಿಂದಂ ಕರೆವಂತದೇನೆಸೆದುದೋ ಸರ್ವಾರ್ಥಸಿದ್ಧೀಶನಂ** ೧೩

**ಪದವಿಭಾಗ-ಅನ್ವಯ-ಅರ್ಥ :** ಯುಗಮಂ ನಿಪ್ಪೊಸತು + ಅಪ್ಪಿನಂ ಕೃತಯುಗಂ ಮಾಡಲ್ = ಯುಗವನ್ನು ಹೊಚ್ಚ ಹೊಸತಾದ ಕೃತಯುಗವನ್ನಾಗಿ ಮಾಡಲು, ಸುರೇಂದ್ರ + ಆಳಿಗೆ + ಆವಗಂ + ಉತ್ಸಾಹಮನ್ + ಉಂಟುಮಾಡಲ್ + ಎಡೆಗೊಟ್ಟ + ಈ ಧರ್ಮಮಂ = ದೇವೇಂದ್ರಸಮುದಾಯಕ್ಕೆ ಸದಾ ಉತ್ಸಾಹವನ್ನು ನೀಡಲು ಅವಕಾಶವಿತ್ತ ಈ ಧರ್ಮವನ್ನು, ಜಲಕ್ಕಗೆ ಮಾಡಲ್ ನೀಂ ಬಗೆದರ್ಪುದು = ಪರಿಶುದ್ಧವನ್ನಾಗಿಸಲು ನೀನು ಕೃಪೆಮಾಡು, ಎಂದು ಸರ್ವಾರ್ಥಸಿದ್ಧೀಶನಂ ನಯದಿಂ ಸಾಕೇತಂ + ಉತ್ + ಕೇತು + ಬಾಹುಗಳಿಂದಂ ಕರೆವಂತೆ + ಅದೇನ್ + ಎಸೆದುದೋ = ಎಂದು ವಿನಯದಿಂದ ಸರ್ವಾರ್ಥಸಿದ್ಧಿಯೊಡೆಯನನ್ನು

ಸಾಕೇತವು ಎತ್ತರದ ಬಾವುಟಗಳೆಂಬ ತನ್ನ ಚಾಚಿದ ತೋಳುಗಳಿಂದ ಕರೆಯುವಂತೆ ವಿರಾಜಿಸಿತು.

**ಗದ್ಯಾನುಸರಣ:** 'ಯುಗವನ್ನು ಹೊಚ್ಚ ಹೊಸತಾದ ಕೃತಯುಗವನ್ನಾಗಿ ಮಾಡಲು ಮತ್ತು ದೇವೇಂದ್ರಸಮುದಾಯಕ್ಕೆ ಸದಾ ಉತ್ಸಾಹವನ್ನು ನೀಡಲು ಅವಕಾಶವಿತ್ತ ಈ ಧರ್ಮವನ್ನು ಪರಿಶುದ್ಧವನ್ನಾಗಿಸಲು ನೀನು ಕೃಪೆಮಾಡು' ಎಂದು ವಿನಯದಿಂದ ಸರ್ವಾರ್ಥಸಿದ್ಧಿಯೊಡೆಯನನ್ನು ಸಾಕೇತವು ಎತ್ತರದ ಬಾವುಟಗಳೆಂಬ ತನ್ನ ಚಾಚಿದ ತೋಳುಗಳಿಂದ ಕರೆಯುವಂತೆ ವಿರಾಜಿಸಿತು.

**ವ॥ ಅನ್ನೆಗಂ ಅಮರಪತಿ ಪರಮನ ಚರಮಗರ್ಭಾವತರಣಮನ್ ಅವಧಿಯಿಂದಂ ಅಱಿದು ಅಱುದಿಂಗಳುಂಟೆನೆ ಮುನ್ನಮೆ,**

**ಪದವಿಭಾಗ-ಅನ್ವಯ-ಅರ್ಥ :** ಅನ್ನೆಗಂ + ಅಮರಪತಿ = ಅಷ್ಟರಲ್ಲಿ ದೇವೇಂದ್ರನು, ಪರಮನ ಚರಮಗರ್ಭ + ಅವತರಣಮನ್ = ಪುರುದೇವನು ಕೊಟ್ಟ ಕೊನೆಯ ಬಾರಿಗೆ ತಾಯಗರ್ಭವನ್ನು ಪ್ರವೇಶಿಸುವುದನ್ನು, ಅವಧಿಯಿಂದಂ + ಅಱಿದು = ಅವಧಿಜ್ಞಾನದಿಂದ ತಿಳಿದು, ಅಱುದಿಂಗಳ್ + ಉಂಟೆನೆ ಮುನ್ನಮ = ಇನ್ನು ಆರು ತಿಂಗಳಿದೆ ಎನ್ನುವಾಗಲೇ,

**ಗದ್ಯಾನುಸರಣ:** ಅಷ್ಟರಲ್ಲಿ ದೇವೇಂದ್ರನು. ಪುರುದೇವನು ಕೊಟ್ಟ ಕೊನೆಯ ಬಾರಿಗೆ ತಾಯ ಗರ್ಭವನ್ನು ಪ್ರವೇಶಿಸುವುದನ್ನು ಅವಧಿಜ್ಞಾನದಿಂದ ತಿಳಿದ; ಅದಕ್ಕೆ ಇನ್ನು ಆರು ತಿಂಗಳಿದೆ ಎನ್ನುವಾಗ,

**ಸುರಿವುದು ತಡೆಯದಯೋಧ್ಯಾ**
**ಪುರದೊಳ್ ನೀನಿಂದೆ ತೊಡಗಿ ವಸುಧಾರೆಯನಾ**
**ದರದಿನೆನೆ ಸಹಜಭಕ್ತಿಯ**
**ಭರದಿಂ ಸುರಪತಿಯ ಬೆಸದಿನೊಸೆದಂ ಧನದಂ** ೧೪

**ಪದವಿಭಾಗ-ಅನ್ವಯ-ಅರ್ಥ:** ತಡೆಯದೆ ನೀನ್ + ಇಂದೆ ತೊಡಗಿ ಅಯೋಧ್ಯಾಪುರದೊಳ್ ವಸುಧಾರೆಯನ್ ಆದರದಿನ್ ಸುರಿವುದು ಎನೆ = ತಡಮಾಡದೆ ನೀನು ಇವತ್ತಿನಿಂದಲೇ ಆರಂಭಿಸಿ ಅಯೋಧ್ಯೆಯಲ್ಲಿ ಚಿನ್ನದ ಮಳೆಯನ್ನು ಭಕ್ತಿಯಿಂದ ಸುರಿಸು ಎನ್ನಲು, ಸುರಪತಿಯ ಬೆಸದಿನ್ ಸಹಜಭಕ್ತಿಯ ಭರದಿಂ ಧನದಂ ಒಸೆದಂ = ದೇವೇಂದ್ರನ ಆಜ್ಞೆಯನ್ನು ಕುಬೇರನು ತನ್ನ ಸಹಜಭಕ್ತಿಯ ತೀವ್ರತೆಯಿಂದ ಕೈಗೊಂಡ.

**ಗದ್ಯಾನುಸರಣ:** 'ತಡಮಾಡದೆ ನೀನು ಇವತ್ತಿನಿಂದಲೇ ಆರಂಭಿಸಿ ಅಯೋಧ್ಯೆಯಲ್ಲಿ ಚಿನ್ನದ ಮಳೆಯನ್ನು ಭಕ್ತಿಯಿಂದ ಸುರಿಸು' ಎಂದು ದೇವೇಂದ್ರನು ಆಜ್ಞಾಪಿಸಿದ; ಅದನ್ನು ಕುಬೇರನು ತನ್ನ ಭಕ್ತಿಭಾವದಿಂದ ಕೈಗೊಂಡ.

**ವ॥ ಮತ್ತಂ ಎತ್ತಾನುಂ ತೆಱದ ಬೆಸಂಗಳಂ ಬೆಸಸುವುದುಂ, ಅಮರ ಕಾಮಿನೀ ಮಹತ್ತರಿಕೆಯರ್ ಜಿನಜನನಿಯ ಮನಮನಱಿದೋಲಗಿಸುವಲ್ಲಿ**

**ಪದವಿಭಾಗ-ಅನ್ವಯ-ಅರ್ಥ:** ಮತ್ತಂ ಎತ್ತಾನುಂ ತೆಱದ ಬೆಸಂಗಳಂ = ಎಂಥೆಂಥದೋ ಬಗೆಯ ಕಾರ್ಯಗಳಿಗೆ, ಬೆಸಸುವುದುಂ = ಹೇಳಲು,

ಅಮರಕಾಮಿನೀ ಮಹತ್ತರಿಕೆಯರ್ = ದೇವಲೋಕದ ಸೇವಕಿಯರು. ಜಿನಜನನಿಯ ಮನಮನ್ + ಅಱಿದು + ಓಲಗಿಸುವಲ್ಲಿ = ಜಿನಮಾತೆಯ ಮನಸ್ಸನ್ನು ಅರ್ಥಮಾಡಿಕೊಂಡು ಸೇವೆಗೈಯುತ್ತಿರಲು,

**ಗದ್ಯಾನುಸರಣ:** ಅಲ್ಲದೆ, ದೇವತಾಸ್ತ್ರೀಯರನ್ನು ಎಂಥೆಂಥದೋ ಬಗೆಯ ಕಾರ್ಯಗಳಿಗೆ ನಿಯೋಜಿಸಿದ; ದೇವಲೋಕದ ಸೇವಕಿಯರು ಜಿನಮಾತೆಯ ಮನಸ್ಸನ್ನು ಅರ್ಥಮಾಡಿಕೊಂಡು ಸೇವೆಗೈಯುತ್ತಿದ್ದರು.

**ಮನಮೊಲ್ದಿಂದ್ರನಿವಾಸಸಂಭವಶುಚಿದ್ರವ್ಯಂಗಳಿಂ ಗರ್ಭಶೋ**
**ಧನಮಂ ದೇವಿಯರಿರ್ದು ಮಾಡೆ ಪೆಱದಿನ್ನೇನೆಂಬುದಾ ಕಾಂತೆಗಂ**
**ದು ನಯಂ ಬೇಱೆ ಬೆಡಂಗು ಬೇಱೆ ಪೊಳೆವಂಘಚ್ಛಾಯೆಯುಂ ಬೇಱೆ ತೊ**
**ಟ್ಟನೆ ಮೆಯ್ದೋಱೆ ವಿಶುದ್ಧಮಪ್ಪ ಪಳಿಕಿಂ ಪೆಣ್ಮಾಡಿದಂತೊಪ್ಪಿದಳ್ ೧೫**

**ಪದವಿಭಾಗ–ಅನ್ವಯ–ಅರ್ಥ:** ದೇವಿಯರ್ + ಇರ್ದು = ದೇವತಾಸ್ತ್ರೀಯರೇ ಸ್ವತಃ, ಮನಂ + ಒಲ್ದು = ಮನಃಪೂರ್ವಕವಾಗಿ, ಇಂದ್ರನಿವಾಸಸಂಭವ ಶುಚಿದ್ರವ್ಯಂಗಳಿಂ = ಇಂದ್ರನ ಅರಮನೆಯಲ್ಲಿ ಮಾಡಿದ ಶುಚಿಕರ ವಸ್ತುಗಳಿಂದ, ಗರ್ಭಶೋಧನಮಂ ಮಾಡೆ = ಮರುದೇವಿಯ ಗರ್ಭವನ್ನು ಶುಚಿಗೊಳಿಸುವ ಕೆಲಸವನ್ನು ಮಾಡಿದರೆಂದ ಮೇಲೆ, ಪೆಱತು + ಇನ್ನೇನೆಂಬುದು = ಬೇರೆ ಇನ್ನೇನು ಹೇಳಬೇಕು? ಅಂದು ಆ ಕಾಂತೆಗೆ ಬೇಱೆ ನಯಂ ಬೇಱೆ ಬೆಡಂಗು ಬೇಱೆ ಪೊಳೆವಂಗಚ್ಛಾಯೆಯುಂ = ಆಗ ಆಕೆಗೆ ವಿಶೇಷ ರೀತಿಯ ನಯ ಬೆಡಗು ದೇಹಕಾಂತಿ ಇವುಗಳು, ತೊಟ್ಟನೆ ಮೆಯ್ದೋಱೆ = ಹೊಸತಾಗಿ ಮೈದೋರಿದುವು; ವಿಶುದ್ಧಮಪ್ಪ ಪಳಿಕಿಂ ಪೆಣ್ಮಾಡಿದಂತೆ + ಒಪ್ಪಿದಳ್ = ಪರಿಶುದ್ಧ ಸ್ಫಟಿಕದಿಂದ ನಿರ್ಮಿಸಿದ ಹೆಣ್ಣಿನಂತೆ ಅವಳು ಕಂಗೊಳಿಸಿದಳು.

**ಗದ್ಯಾನುಸರಣ:** ದೇವತಾಸ್ತ್ರೀಯರೇ ಸ್ವತಃ ಮನಃಪೂರ್ವಕವಾಗಿ ಇಂದ್ರನ ಅರಮನೆಯಲ್ಲಿ ಮಾಡಿದ ಶುಚಿಕರ ವಸ್ತುಗಳಿಂದ ಮರುದೇವಿಯ ಗರ್ಭವನ್ನು ಶುಚಿಗೊಳಿಸುವ ಕೆಲಸವನ್ನು ಮಾಡಿದರೆಂದ ಮೇಲೆ ಬೇರೆ ಹೇಳುವುದೇನಿದೆ? ಆಗ ಆಕೆಗೆ ವಿಶೇಷ ರೀತಿಯ ನಯ ಬೆಡಗು ದೇಹಕಾಂತಿ ಇವುಗಳು, ಹೊಸತಾಗಿ ಕಾಣಿಸಿಕೊಂಡವು; ಪರಿಶುದ್ಧ ಸ್ಫಟಿಕದಿಂದ ನಿರ್ಮಿಸಿದ ಹೆಣ್ಣಿನಂತೆ ಅವಳು ಕಂಗೊಳಿಸಿದಳು.

**ವ॥ ಮತ್ತಂ ಅಮರಾಧೀಶ ಶಾಸನದೊಳೆ ನಾಭಿರಾಜ ರಾಜಮಂದಿರಾಂಗಣದೊಳ್ ಧನದಂ ಪಂಚರತ್ನಮಯವೃಷ್ಟಿಯಂ ಪ್ರತಿದಿನಂ ಮಾಡೆ;**

**ಅನ್ವಯ:** ಮತ್ತಂ = ಜೊತೆಗೆ. ಅಮರಾಧೀಶ ಶಾಸನದೊಳೆ = ದೇವೇಂದ್ರನ ಆಜ್ಞೆಯ ಪ್ರಕಾರ, ನಾಭಿರಾಜ ರಾಜಮಂದಿರ + ಅಂಗಣದೊಳ್ = ನಾಭಿರಾಜನ ಅರಮನೆಯ ಆವರಣದಲ್ಲಿ, ಧನದಂ = ಕುಬೇರನು, ಪಂಚರತ್ನಮಯವೃಷ್ಟಿಯಂ = ಪಂಚರತ್ನಗಳನ್ನೊಳಗೊಂಡ ಮಳೆಯನ್ನು, ಪ್ರತಿದಿನಂ ಮಾಡೆ = ಪ್ರತಿನಿತ್ಯವೂ ಸುರಿಸಲು,

**ಅರ್ಥ:** ಜೊತೆಗೆ, ದೇವೇಂದ್ರನ ಆಜ್ಞೆಯಂತೆ ಕುಬೇರನು ನಾಭಿರಾಜನ ಅರಮನೆಯ ಆವರಣದಲ್ಲಿ ಪ್ರತಿನಿತ್ಯವೂ ಪಂಚರತ್ನಗಳನ್ನೊಳಗೊಂಡ ಮಳೆಯನ್ನು ಸುರಿಸಿದ.

**ಧರೆ ರತ್ನಗರ್ಭಮಾದುದು**
**ಸುರರೆಲ್ಲಂ ಹರ್ಷಗರ್ಭರಾದರ್ ಪಿರಿದ**
**ಚ್ಚರಿಯೆನೆ ಹಿರಣ್ಯಗರ್ಭನ**
**ನಿರುಪಮಗರ್ಭಾವತರಣಮಂಗಳವಿಧಿಯೊಳ್** ೧೬

**ಪದವಿಭಾಗ-ಅನ್ವಯ-ಅರ್ಥ :** ಹಿರಣ್ಯಗರ್ಭನ ನಿರುಪಮಗರ್ಭ + ಅವತರಣಮಂಗಳವಿಧಿಯೊಳ್ = ಆದಿಬ್ರಹ್ಮನು ತಾಯ ಗರ್ಭವನ್ನು ಹೊಗುವ ಹೋಲಿಕೆಯಿಲ್ಲದ ಮಂಗಳ ವಿಧಿಯ ಸಂದರ್ಭದಲ್ಲಿ, ಪಿರಿದು + ಅಚ್ಚರಿಯೆನೆ = ಮಹಾ ಆಶ್ಚರ್ಯಕರವಾಗಿ, ಧರೆ ರತ್ನಗರ್ಭಂ + ಆದುದು = ಭೂಮಿಯ ಬಸಿರಲ್ಲಿ ರತ್ನಗಳು ಸೇರಿದುವು, ಸುರರ್ + ಎಲ್ಲಂ ಹರ್ಷಗರ್ಭರಾದರ್ = ದೇವತೆಗಳೆಲ್ಲ ಮನದಲ್ಲಿ ಸಂತಸವು ತುಂಬಿತು.

**ಗದ್ಯಾನುಸರಣ:** ಆದಿಬ್ರಹ್ಮನು ತಾಯ ಗರ್ಭವನ್ನು ಹೊಗುವ ಹೋಲಿಕೆಯಿಲ್ಲದ ಮಂಗಳ ವಿಧಿಯ ಸಂದರ್ಭದಲ್ಲಿ, ಮಹಾ ಆಶ್ಚರ್ಯಕರವಾಗಿ, ಭೂಮಿಯ ಬಸಿರಲ್ಲಿ ರತ್ನಗಳು ಸೇರಿದುವು, ದೇವತೆಗಳೆಲ್ಲ ಮನದಲ್ಲಿ ಸಂತಸವು ತುಂಬಿತು.

**ವ॥ ಮತ್ತೊಂದು ದಿವಸಮಾ ಮರುದೇವಿಮಹಾದೇವಿ ಚತುರ್ಥಸ್ನಾನದೊಳ್ ಕಲ್ಪದ್ರುಮದುಕೂಲವಸನೆಯಾಗಿ,**

**ಪದವಿಭಾಗ-ಅನ್ವಯ-ಅರ್ಥ:** ಮತ್ತೊಂದು ದಿವಸಂ = ಇನ್ನೊಂದು ದಿನ, ಆ ಮರುದೇವಿಮಹಾದೇವಿ ಚತುರ್ಥಸ್ನಾದೊಳ್ = ಮರುದೇವಿಯು ಚತುರ್ಥಸ್ನಾನಮಾಡಿ, ಕಲ್ಪದ್ರುಮದುಕೂಲವಸನೆಯುಂ = ಕಲ್ಪವೃಕ್ಷವು ನೀಡಿದ ರೇಷ್ಮೆವಸ್ತ್ರವನ್ನುಟ್ಟು,

**ಗದ್ಯಾನುಸರಣ:** ಇನ್ನೊಂದು ದಿನ ಮರುದೇವಿಯು ಚತುರ್ಥಸ್ನಾನಮಾಡಿ ಕಲ್ಪವೃಕ್ಷವು ನೀಡಿದ ರೇಷ್ಮೆವಸ್ತ್ರವನ್ನುಟ್ಟಳು,

**ಶ್ರೀಗೆ ಕುಳಸದನಮೆನೆ ತೊಳಪ ಮಣಿಭವನದೊಳ್**
**ರಾಗರಸಮೊದವೆ ಸರಸಿರುಹಸಮವದನದೊಳ್ ॥**
**ಪೊಳೆವ ಪಚ್ಚದೊಳೆ ಸೊಗಯಿಸುವ ಮೃದುತಲ್ಪದೊಳ್**
**ಲಲಿತಗಂಗಾನದೀಲಹರಿಕಾತಲ್ಪದೊಳ್ ॥**

**ಪದವಿಭಾಗ-ಅನ್ವಯ-ಅರ್ಥ:** ಶ್ರೀಗೆ ಕುಳಸದನಮೆನೆ ತೊಳಪ ಮಣಿಭವನದೊಳ್ = ಸಂಪತ್ತಿನ ತವರುಮನೆಯೋ ಎನ್ನುವಂತೆ ಕಾಂತಿಯುಕ್ತವಾದ ಮಣಿಖಚಿತ ಅರಮನೆಯಲ್ಲಿ, ರಾಗರಸಂ + ಒದವೆ ಸರಸಿರುಹಸಮವದನದೊಳ್ = ಪ್ರೀತಿಯ ರಸವುಂಟಾಗಲು ಕಮಲದಂತಹ ಮುಖದಲ್ಲಿ. ಪೊಳೆವ ಪಚ್ಚದೊಳೆ ಸೊಗಯಿಸುವ ಮೃದುತಲ್ಪದೊಳ್ = ಹೊಳೆಯುವ ಮರಕತದ ಸೊಗಸುವ ಮಿದುವಾದ ಹಾಸಿಗೆಯಲ್ಲಿ. ಲಲಿತಗಂಗಾನದೀಲಹರಿಕಾತಲ್ಪದೊಳ್ =

ಕೋಮಲವಾದ ಗಂಗಾನದಿಯ ಅಲೆಗಳಂತಹ ಹಾಸಿಗೆಯಲ್ಲಿ (ಮರುದೇವಿಯು ಮಲಗಿದ್ದಳು)

**ಗದ್ಯಾನುಸರಣ:** ಆಕೆಯ ಅರಮನೆ ಸಂಪತ್ತಿನ ತವರುಮನೆಯೋ ಎನ್ನುವಂತೆ ಮಣಿಖಚಿತವಾಗಿ ಕಾಂತಿಯುಕ್ತವಾಗಿತ್ತು; ಹೊಳೆಯುವ ಸೊಗಸಾದ ಮಿದುವಾದ ಮರಕತದಂತಿದ್ದ ಗಂಗಾನದಿಯ ಅಲೆಗಳಂತಹ ಕೋಮಲವಾದ ಹಾಸಿಗೆಯಲ್ಲಿ ಮರುದೇವಿಯು ಮಲಗಿದ್ದಳು; ಅವಳ ಕಮಲದಂತಹ ಮುಖದಲ್ಲಿ ಪ್ರೀತಿಯ ರಸವೊಸರುತ್ತಿತ್ತು.

**ದೇವಿ ಮರುದೇವಿ ವಿಶದೀಕೃತಾಶಾಂತದೊಳ್**
**ಭಾವಿ ಜಿನಜನನಿ ಸತಿ ಪವಡಿಸಿ ನಿಶಾಂತದೊಳ್**
**ಚಂಡಗಜಗಮನೆ ಪರಿಖಂಡಿತಾಘಾಳಿಯಂ**
**ಕಂಡಳೀರೆಂಟುಮೊಳ್ಗನಸಿನೆಸೆವೋಳಿಯಂ ॥**

**ಪದವಿಭಾಗ–ಅನ್ವಯ–ಅರ್ಥ:** ದೇವಿ ಮರುದೇವಿ ವಿಶದೀಕೃತ + ಆಶಾಂತದೊಳ್ = ಮಹಾರಾಣಿಯಾದ ಮರುದೇವಿಯು ದಿಕ್ಕುಗಳೆಲ್ಲ ಸ್ವಚ್ಛವಾಗಿರುವಾಗ, ಭಾವಿ ಜಿನಜನನಿ ಸತಿ ಪವಡಿಸಿ = ಮುಂದೆ ಜಿನನ ತಾಯಾಗಲಿರುವ ದೇವಿಯು ಮಲಗಿರಲು, ನಿಶಾ + ಅಂತದೊಳ್ = ಬೆಳಗಿನ ಜಾವದಲ್ಲಿ, ಚಂಡಗಜಗಮನೆ = ಆ ಮದಗಜಗಮನೆಯು, ಪರಿಖಂಡಿತ + ಅಘಾಳಿಯಂ ಈರೆಂಟುಂ + ಒಳ್ಗನಸಿನ + ಎಸೆವ + ಓಳಿಯಂ ಕಂಡಳ್ = ಪಾಪಸಮೂಹವನ್ನು ನಾಶಮಾಡುವಂತಹ ಹದಿನಾರು ಒಳ್ಳೆಯ ಕನಸುಗಳ ಸೊಗಸಾದ ಸಾಲನ್ನು ಕಂಡಳು;

**ಗದ್ಯಾನುಸರಣ:** ದೇವಕನ್ನಿಕೆಯರು ಕ್ರಮವಾಗಿ ಹೆಜ್ಜೆ ಹಾಕುತ್ತ ನರ್ತಿಸುತ್ತಿದ್ದರು; ದೇವವಿಲಾಸಿನಿಯರು ಇಂಪಾಗಿ ಹಾಡುವ ಧ್ವನಿಯು ಅವಳನ್ನು ಮೆಚ್ಚಿಸಿತು; ದಿಕ್ಕುಗಳೆಲ್ಲ ಸ್ವಚ್ಛವಾಗಿರುವಾಗ ಮುಂದೆ ಜಿನನ ತಾಯಾಗಲಿರುವ ದೇವಿಯು ನಿದ್ರಿಸಿದಳು; ಬೆಳಗಿನ ಜಾವದಲ್ಲಿ, ಪಾಪಸಮೂಹವನ್ನು ನಾಶಮಾಡುವಂತಹ ಹದಿನಾರು ಒಳ್ಳೆಯ ಕನಸುಗಳ ಸೊಗಸಾದ ಸಾಲನ್ನು ಆ ಮದಗಜಗಮನೆಯು ಕಂಡಳು;

**ಶರದಮಳಜಳದನಿಭಧವಳಗಜರಾಜನಂ ।**
**ಕುಮುದದಳಧವಳರುಚಿರುಚಿರವೃಷನಾಥನಂ**
**ಲೋಲಲಾಂಗೂಲಮದಸಿಂಧುರಾರಾತಿಯಂ**
**ದರದಳಿತಕರಕಳಿತಸರಸಿರುನಿಳಯೆಯಂ ॥**

**ಪದವಿಭಾಗ–ಅನ್ವಯ–ಅರ್ಥ:** ಶರತ್ + ಅಮಳ ಜಳದನಿಭ ಧವಳ ಗಜರಾಜನಂ = ಮಾಗಿ ಕಾಲದ ಬಿಳಿಯ ಮೋಡದ ಹಾಗೆ ಬೆಳ್ಳಗಿರುವ ಆನೆಯನ್ನೂ, ಕುಮುದದಳಧವಳರುಚಿರ ವೃಷನಾಥನಂ = ನೈದಿಲೆಯ ಹೂಪಿನಂತೆ ಬೆಳ್ಳಗೆ

ಕಾಮಯಿಯುಕ್ತವಾದ ಎತ್ತನ್ನೂ, ಲೋಲಲಾಂಗೂಲಮದಸಿಂಧುರಾರಾತಿಯಂ = ಡೊಂಕಾದ ಬಾಲವಿರುವ ಮದ್ದಾನೆಯ ಶತ್ರುವಾದ ಸಿಂಹವನ್ನೂ, ದರದಳಿತಕರಕಳಿತ ಸರಸಿರುನಿಳಯೆಯಂ = ಅರಳಿರುವ ಕಮಲವನ್ನು ಕೈಯಲ್ಲಿ ಹಿಡಿದ (ಲಕ್ಷ್ಮಿಯನ್ನು) ಕಂಡಳು.

**ಗದ್ಯಾನುಸರಣ:** ಮಾಗಿ ಕಾಲದ ಬಿಳಿಯ ಮೋಡದ ಹಾಗೆ ಬೆಳ್ಳಗಿರುವ ಆನೆಯನ್ನೂ, ನೈದಿಲೆಯ ಹೂವಿನಂತೆ ಬೆಳ್ಳಗೆ ಕಾಮಯಿಯುಕ್ತವಾದ ಎತ್ತನ್ನೂ, ಡೊಂಕಾದ ಬಾಲವಿರುವ ಮದ್ದಾನೆಯ ಶತ್ರುವಾದ ಸಿಂಹವನ್ನೂ, ಅರಳಿರುವ ಕಮಲವನ್ನು ಕೈಯಲ್ಲಿ ಹಿಡಿದ (ಲಕ್ಷ್ಮಿಯನ್ನು) ಕಂಡಳು.

**ವಿಕಚನವಮಾಳಿಕಾಕುಸುಮನವಮಾಳೆಯಂ**
**ವಿಮಳತರಗಗನತಳತಿಳಕಹಿಮಕಿರಣನಂ।**
**ಉದಯಗಿರಿಶಿಖರಗತತರುಣಮಾರ್ತಂಡನಂ**
**ಮಿಳಿರ್ವ ಜಳದೊಳಗೆ ಪೊಳೆವೆರಡುವೆಳವಾಳೆಯಂ ॥**

**ಪದವಿಭಾಗ-ಅನ್ವಯ-ಅರ್ಥ:** ವಿಕಚನವಮಾಳಿಕಾಕುಸುಮನವಮಾಳೆಯಂ = ಅರಳಿದ ಹೊಸ ಮಾಲಿಕಾಕುಸುಮಮಾಲೆಯನ್ನೂ, ವಿಮಳತರಗಗನತಳ ತಿಳಕಹಿಮಕಿರಣನಂ = ನಿರಭ್ರವಾದ ಆಕಾಶದ ತಿಲಕವೆನ್ನಿಸುವ ಚಂದ್ರನನ್ನೂ, ಉದಯಗಿರಿಶಿಖರಗತತರುಣಮಾರ್ತಂಡನಂ = ಮೂಡಲ ಬೆಟ್ಟದ ತುದಿಯಲ್ಲಿ ಉದಯಿಸುವ ಸೂರ್ಯನನ್ನೂ, ಮಿಳಿರ್ವ ಜಳದೊಳಗೆ ಪೊಳೆವ + ಎರಡು + ಎಳವಾಳೆಯಂ = ಅಲೆಗಳುಳ್ಳ ನೀರಿನಲ್ಲಿ ಹೊಳೆಯುವ ಎರಡು ಎಳೆಯ ಮೀನುಗಳನ್ನೂ (ಕಂಡಳು).

**ಗದ್ಯಾನುಸರಣ:** ಅರಳಿದ ಹೊಸ ಮಾಲಿಕಾಕುಸುಮಮಾಲೆಯನ್ನೂ, ಮೋಡಗಳಿಲ್ಲದ ಆಕಾಶದ ತಿಲಕವೆನ್ನಿಸುವ ಚಂದ್ರನನ್ನೂ, ಮೂಡಲ ಬೆಟ್ಟದ ತುದಿಯಲ್ಲಿ ಉದಯಿಸುವ ಸೂರ್ಯನನ್ನೂ, ಅಲೆಗಳುಳ್ಳ ನೀರಿನಲ್ಲಿ ಹೊಳೆಯುವ ಎರಡು ಎಳೆಯ ಮೀನುಗಳನ್ನೂ ಕಂಡಳು.

**ಜಳಜದಳನಯನಯುಗೆ ಪೊಣರ್ದ ಮಣಿಕುಂಭಮಂ**
**ಜಳಜಕುಳನಿಭೃತಜಳಪದ್ಮಿನೀನಿಳಯಮಂ ।**
**ಕರಿಮಕರಕರದಳಿತವೀಚಿವಾರಾಶಿಯಂ**
**ಮಂದರೋತ್ತುಂಗಕಂಠೀರವಾಸಂದಿಯಂ ॥**

**ಪದವಿಭಾಗ-ಅನ್ವಯ-ಅರ್ಥ:** ಜಳಜದಳನಯನಯುಗೆ = ತಾವರೆಯ ಎಸಳಿನಂಹ ಜೋಡಿ ಕಣ್ಣುಗಳ (ಮರುದೇವಿಯು), ಪೊಣರ್ದ ಮಣಿಕುಂಭಮಂ = ಜೋಡಿ ಮಣಿಖಚಿತ ಕಳಸಗಳನ್ನೂ, ಜಳಜಕುಳನಿಭೃತಜಳಪದ್ಮಿನೀನಿಳಯಮಂ = ಕಮಲಗಳಿಂದ ತುಂಬಿದ ಸರೋವರವನ್ನೂ, ಕರಿಮಕರಕರ ದಳಿತವೀಚಿವಾರಾಶಿಯಂ = ನೀರಾನೆ ಮೊಸಳೆಗಳಿಂದ ಸೀಳಲ್ಪಟ್ಟ ಅಲೆಗಳ ಸಮುದ್ರವನ್ನೂ, ಮಂದರ + ಉತ್ತುಂಗಕಂಠೀರವ + ಆಸಂದಿಯಂ = ಮಂದರ ಪರ್ವತದಂತೆ ಎತ್ತರವಾದ ಸಿಂಹಪೀಠವನ್ನೂ (ಕಂಡಳು).

**ಗದ್ಯಾನುಸರಣ:** ಅರಳಿದ ತಾವರೆಯ ಪರಾಗದಿಂದ ಕೆಂಪಾದ ತಾವರೆಯ ಎಸಳಿನಂಥ ಜೋಡಿ ಕಣ್ಣುಗಳ ಮರುದೇವಿಯು ಮಣಿಖಚಿತ ಜೋಡಿ ಕಳಸಗಳನ್ನೂ, ಕಮಲಗಳಿಂದ ತುಂಬಿದ ಸರೋವರವನ್ನೂ, ನೀರಾನೆ ಮೊಸಳೆಗಳಿಂದ ಸೀಳಲ್ಪಟ್ಟ ಅಲೆಗಳ ಸಮುದ್ರವನ್ನೂ, ಮಂದರ ಪರ್ವತದಂತೆ ಎತ್ತರವಾದ ಸಿಂಹಪೀಠವನ್ನೂ ಕನಸಿನಲ್ಲಿ ಕಂಡಳು.

**ಸ್ಥೂಳಮಣಿಖಚಿತಸುರಪರಿವೃಢವಿಮಾನಮಂ**
**ಕ್ವಣಿತಮಣಿಕಿಂಕಿಣೀನಿನದಘಣಿಗೇಹಮಂ**
**ಸುರುಚಿರಾಂಶೂಲ್ಲಸದ್ರತ್ನಸಂಘಾತಮಂ**
**ಸತತಗತಿಪಥಮನಡರ್ವುಜ್ಜ್ವಳಜ್ವಾಳೆಯಂ ॥**

**ಪದವಿಭಾಗ-ಅನ್ವಯ-ಅರ್ಥ:** ಸ್ಥೂಳಮಣಿಖಚಿತಸುರಪರಿವೃಢವಿಮಾನಮಂ = ತೋರ ಮಣಿಗಳಿಂದ ಕೂಡಿದ ದೇವೇಂದ್ರನ ವಿಮಾನವನ್ನೂ, ಕ್ವಣಿತಮಣಿಕಿಂಕಿಣೀನಿನದಘಣಿಗೇಹಮಂ = ಧ್ವನಿಸುವ ಮಣಿಕಿಂಕಿಣಿಗಳ ಧ್ವನಿಯಿಂದ ಕೂಡಿದ ಹುತ್ತವನ್ನೂ, ಸುರುಚಿರ + ಅಂಶೂಲ್ಲಸತ್ + ರತ್ನಸಂಘಾತಮಂ = ಮನೋಹರವಾದ ದೀಪ್ತಿಯನ್ನು ಸೂಸುವ ರತ್ನರಾಶಿಯನ್ನೂ, ಸತತಗತಿಪಥಮನಡರ್ವ + ಉಜ್ಜ್ವಳಜ್ವಾಳೆಯಂ = ನಿರಂತರವಾಗಿ ಆಕಾಶಪಥವನ್ನು ಆವರಿಸುವ ಪ್ರಜ್ವಲಿಸುವ ಬೆಂಕಿಯನ್ನೂ, (ಕನಸಲ್ಲಿ ಕಂಡಳು).

**ಗದ್ಯಾನುಸರಣ:** ತೋರ ಮಣಿಗಳಿಂದ ಕೂಡಿದ ದೇವೇಂದ್ರನ ವಿಮಾನವನ್ನೂ, ಧ್ವನಿಸುವ ಮಣಿಕಿಂಕಿಣಿಗಳ ಧ್ವನಿಯಿಂದ ಕೂಡಿದ ಹುತ್ತವನ್ನೂ, ಮನೋಹರವಾದ ದೀಪ್ತಿಯನ್ನು ಸೂಸುವ ರತ್ನರಾಶಿಯನ್ನೂ, ನಿರಂತರವಾಗಿ ಆಕಾಶಪಥವನ್ನು ಆವರಿಸುವ ಪ್ರಜ್ವಲಿಸುವ ಬೆಂಕಿಯನ್ನೂ ಮರುದೇವಿ ತನ್ನ ಕನಸಲ್ಲಿ ಕಂಡಳು.

**ರಜತಗಿರಿರುಂದ್ರನಂ ಜಿತಶರಚ್ಚಂದ್ರನಂ**
**ನಿಜವದನವನಜಮಂ ಪುಗುವ ವೃಷಭೇಂದ್ರನಂ**
**ನೋಡಿ ಗಜಗಮನೆ ಕನಸೆಂದು ಬಗೆವನ್ನೆಗಂ**
**ತೀಡೆ ಕಿವಿಗುಚಿತಮಂಗಳನಿನದಮನ್ನೆಗಂ ॥** ೧೭

**ಪದವಿಭಾಗ-ಅನ್ವಯ-ಅರ್ಥ:** ರಜತಗಿರಿರುಂದ್ರನು = ಬೆಳ್ಳಿ ಬೆಟ್ಟದಂತಹ ನಿಲವುಳ್ಳ, ಜಿತಶರತ್ + ಚಂದ್ರನಂ = ಶರತ್‌ಕಾಲದ ಚಂದ್ರನನ್ನು ಮೀರಿಸುವ ಬೆಳ್ಳಗಿನ ನಿಜವದನವನಜಮಂ ಪುಗುವ ವೃಷಭೇಂದ್ರನಂ = ತನ್ನ ಮೊಗಕಮಲವನ್ನೇ ಹೊಗುತ್ತಿರುವ ಎತ್ತನ್ನೂ, ನೋಡಿ ಗಜಗಮನೆ ಕನಸೆಂದು ಬಗೆವ + ಅನ್ನೆಗಂ = ಕಂಡು ಅದೆಲ್ಲ ಕನಸೆಂದು ಆಕೆಯು ತಿಳಿಯಷ್ಟರಲ್ಲಿ, ಅನ್ನೆಗಂ ಕಿವಿಗುಚಿತ ಮಂಗಳನಿನದಂ ತೀಡೆ = ಕಿವಿಗೆ ಹಿತಕರವಾಗಿ ಮಂಗಳಧ್ವನಿಯು ಬೀಳಲು,

**ಗದ್ಯಾನುಸರಣ:** ತನ್ನ ಮೊಗವನ್ನೇ ಹೊಗುತ್ತಿರುವ ಎತ್ತರ ನಿಲವಿನ ಹಾಗೂ ಬಳಿಯ ಎತ್ತನ್ನೂ ಕಂಡು ಅದೆಲ್ಲ ಕನಸೆಂದು ಆಕೆಯು ತಿಳಿಯಷ್ಟರಲ್ಲಿ ಕಿವಿಗೆ ಹಿತಕರವಾಗಿ ಮಂಗಳಧ್ವನಿಯು ಕೇಳಿಸಿತು;

[**ವಿಶೇಷ ವಿಚಾರ:** ಮುಂದಿನ ಇಪ್ಪತ್ತಾರು ಸಾಲುಗಳ ರಳೆಯ ಭಾಗವು ಪ್ರಕ್ಷಿಪ್ತವೆಂದು ತೀರ್ಮಾನಿಸಿ ಬಸವರಾಜು ಅಡಿಟಿಪ್ಪಣಿಯಲ್ಲಿ ಕೊಡುತ್ತಾರೆ. ಅದಕ್ಕೆ

ಅವರು ನೀಡುವ ಕಾರಣ ಇಂತಿದೆ: ಕೆಲವು ಪ್ರತಿಗಳಲ್ಲಿ ಈ ಭಾಗ ಇಲ್ಲ. 'ಈ (ಬಿಟ್ಟಿರುವ) ವಿಷಯ ಮುಂದೆ ಪಾಠದಲ್ಲಿ ಬರುವ ಕಂದಗಳೆರಡರಲ್ಲಿ ಮೊದಲೇ ಉಕ್ತವಾಗಿರುವುದರಿಂದ ಮತ್ತು ಈ ಭಾಗವಿಲ್ಲದಿದ್ದರೂ ಕಥಾಸೂತ್ರಕ್ಕೆ ಭಂಗಬಾರದಿರುವುದರಿಂದ. ಆ ಅಧಿಕರಗಳೆಯ ಭಾಗವನ್ನು ಸೇರಿಸಿಕೊಂಡು ಓದಿದಾಗ ಮುಂದೆ ಬರುವ ಕಂದಪದ್ಯಗಳು ಅನನ್ವಯವಾಗುವುದರಿಂದ, ಈ ಅಧಿಕಭಾಗದಲ್ಲೇ ಎರಡು ಕಡೆ ಪ್ರಾಸಭಂಗವಿರುವುದರಿಂದ – ಈ ಮೇಲೆ ಹೇಳಿದ ಮುಂದಿನ ಪಾಠ ಪ್ರಕ್ಷಿಪ್ತ.' – ಆ ಭಾಗದ ಅಡಿಟಿಪ್ಪಣಿ..]

**ಕಂಡುಪ್ಪವಡಿಸಿ ಮಜ್ಜನ**
**ಮಂಡನವಿಧಿಯಂ ಲತಾಂಗಿ ನಿರ್ವರ್ತಿಸಿ ಭೂ**
**ಮಂಡಳಪತಿಗಜೆಪಿದೊಡೆರ್ದೆ**
**ಗೊಂಡದಱ ಫಲಂಗಳನಿತುಮಂ ಮನು ತಿಳಿದಂ** ೧೮

**ಪದವಿಭಾಗ–ಅನ್ವಯ–ಅರ್ಥ:** ಕಂಡು ಲತಾಂಗಿ ಉಪ್ಪವಡಿಸಿ ಮಜ್ಜನ ಮಂಡನವಿಧಿಯಂ ನಿರ್ವರ್ತಿಸಿ = ಕಂಡ ಮರುದೇವಿಯು ಮೇಲೆದ್ದು ಸ್ನಾನಾ ಅಲಂಕಾರಗಣ್ಣು ಮುಗಿಸಿ. ಭೂಮಂಡಳಪತಿಗೆ + ಅಜೆಪಿದೊಡೆ = ಮಹಾರಾಜನಿಗೆ ನಿರೂಪಿಸಲು, ಅದಱ ಫಲಂಗಳ್ + ಅನಿತುಮಂ ಮನು ಎರ್ದೆಗೊಂಡು ತಿಳಿದಂ = ಅವುಗಳ ಫಲಗಳನ್ನು ತಿಳಿದು ಹದಿನಾಲ್ಕನೆಯ ಮನುವಾದ ನಾಭಿರಾಜನು ಸಂತಸದಿಂದ ಕೂಡಿದ.

**ಗದ್ಯಾನುಸರಣ:** ಕನಸುಗಳನ್ನು ಕಂಡ ಮರುದೇವಿಯು ಮೇಲೆದ್ದು ಸ್ನಾನಾಲಂಕಾರಗಳನ್ನು ಮುಗಿಸಿ ಅವುಗಳನ್ನು ಮಹಾರಾಜನಿಗೆ ನಿರೂಪಿಸಿದಾಗ ಅವುಗಳ ಫಲಗಳನ್ನು ತಿಳಿದು ಹದಿನಾಲ್ಕನೆಯ ಮನುವಾದ ನಾಭಿರಾಜನು ಸಂತಸದಿಂದ ಕೂಡಿದ.

**ನಮಗೆ ತನೂಜಂ ದಿವದಿಂ**
**ದಮೋಘಮವತರಿಸಿದಪ್ಪನಖಿಳವಿನೇಯ**
**ಪ್ರಮದಕರಂ ದಿವಿಜೇಂದ್ರ**
**ಪ್ರಮೋದಕರನೆನೆ ಗುಣಾಕರಂ ತೀರ್ಥಕರಂ** ೧೯

**ಪದವಿಭಾಗ–ಅನ್ವಯ–ಅರ್ಥ:** ನಮಗೆ ತನೂಜಂ = ನಮಗೆ ಮಗನಾಗಿ ಹುಟ್ಟಲು, ಅಖಿಳವಿನೇಯಪ್ರಮದಕರಂ = ಎಲ್ಲ ವಿನಯವಂತರಿಗೂ ಸಂತಸ ತರುವವನು, ದಿವಿಜೇಂದ್ರಪ್ರಮೋದಕರನ್ = ದೇವೇಂದ್ರನಿಗೆ ಮುದವುಂಟು ಮಾಡುವವನು. ಎನೆ ಗುಣಾಕರಂ ತೀರ್ಥಕರಂ = ಎನಿಸಿದ ಗುಣಗಳ ನೆಲೆಯಾದ ತೀರ್ಥಂಕರನು. ದಿವದಿಂದೆ + ಅಮೋಘಂ + ಅವತರಿಸಿದಪ್ಪನ್ = ದೇವಲೋಕದಿಂದ ಇಳಿದು ಬರುವನು.

**ಗದ್ಯಾನುಸರಣ:** 'ನಮಗೆ ಮಗನಾಗಿ ಹುಟ್ಟಲು ವಿನಯವಂತರಿಗೂ ದೇವೇಂದ್ರನಿಗೂ ಮುದವುಂಟುಮಾಡುವ ಗುಣಗಳ ನೆಲೆಯಾದ ತೀರ್ಥಂಕರನು ದೇವಲೋಕದಿಂದ ಇಳಿದು ಬರುತ್ತಾನೆ'

**ವ॥ ಎಂದು ನಿರ್ವಚಿಸುವನ್ನೆಗಂ, ಸರ್ವಾರ್ಥಸಿದ್ಧೀಶ್ವರನ್ ಆ ಭುವನಾಂಬಿಕೆಯ ಗರ್ಭಸರೋವರಾಂಬುವಿನೊಳ್ ಚಂದ್ರಬಿಂಬದಂತೆ ಸಂಕ್ರಮಿಸಿದಾಗಳ್, ದೇವೇಂದ್ರಂ ಚತುರ್ನಿಕಾಯ ಅಮರರರ್ವೆರಸು ಪ್ರಥಮಕಲ್ಯಾಣಮಂ ನಿರ್ವರ್ತಿಸಿದಂ. ಗರ್ಭಂ ಬಳೆಯೆವಳೆಯೆ,**

**ಪದವಿಭಾಗ-ಅನ್ವಯ-ಅರ್ಥ:** ಎಂದು ನಿರ್ವಚಿಸುವನ್ನೆಗಂ = ಎಂದು ಕನಸುಗಳಿಗೆ ಅರ್ಥ ಹೇಳುವ ಮುನ್ನವೇ, ಸರ್ವಾರ್ಥಸಿದ್ಧೀಶ್ವರನ್ = ಸರ್ವಾರ್ಥಸಿದ್ಧಿಯ ಒಡೆಯನು, ಆ ಭುವನಾಂಬಿಕೆಯ ಗರ್ಭಸರೋವರ + ಅಂಬುವಿನೊಳ್ = ಆ ಜಗನ್ಮಾತೆಯ ಗರ್ಭ ಸರೋವರದಲ್ಲಿ, ಚಂದ್ರಬಿಂಬದಂತೆ ಸಂಕ್ರಮಿಸಿದಾಗಳ್ = ಚಂದ್ರಬಿಂಬದಂತೆ ಬಂದು ಸೇರಿಕೊಳ್ಳಲು,, ದೇವೇಂದ್ರಂ ಚತುರ್ನಿಕಾಯ ಅಮರರರ್ವೆರಸು = ದೇವೇಂದ್ರನು ಭುವನ ವನ ಜ್ಯೋತಿ ಮತ್ತು ಕಲ್ಪಗಳೆಂಬ ನಾಲ್ಕು ಬಗೆಯ ದೇವತೆಗಳ ಸಮೇತ ಬಂದು, ಪ್ರಥಮಕಲ್ಯಾಣಮಂ ನಿರ್ವರ್ತಿಸಿದಂ = ಪಂಚಕಲ್ಯಾಣಗಳಲ್ಲಿ ಮೊದಲನೆಯದಾದ ಗರ್ಭಾವತರಣ ಕಲ್ಯಾಣವನ್ನು ನೆರವೇರಿಸಿದ. ಗರ್ಭಂ ಬಳೆಯೆವಳೆಯೆ = ಮರುದೇವಿಯ ಗರ್ಭವು ಬೆಳೆಯುತ್ತಿರಲು,

**ಗದ್ಯಾನುಸರಣ:** ಹೀಗೆಂದು ಕನಸುಗಳಿಗೆ ಅರ್ಥ ಹೇಳುವ ಮುನ್ನವೇ, ಸರ್ವಾರ್ಥಸಿದ್ಧಿಯ ಒಡೆಯನಾದ ಆದಿಜಿನನು ಆ ಜಗನ್ಮಾತೆಯ ಗರ್ಭ ಸರೋವರದಲ್ಲಿ ಚಂದ್ರಬಿಂಬದಂತೆ ಬಂದು ಸೇರಿಕೊಂಡ; ಆಗ ದೇವೇಂದ್ರನು ಭುವನ ವನ ಜ್ಯೋತಿ ಮತ್ತು ಕಲ್ಪಗಳೆಂಬ ನಾಲ್ಕು ಬಗೆಯ ದೇವತೆಗಳ ಸಮೇತ ಬಂದು ಪಂಚಕಲ್ಯಾಣಗಳಲ್ಲಿ ಮೊದಲನೆಯದಾದ ಗರ್ಭಾವತರಣ ಕಲ್ಯಾಣವನ್ನು ನೆರವೇರಿಸಿದ. ಆನಂತರ ಮರುದೇವಿಯ ಗರ್ಭವು ಬೆಳೆಯುತ್ತಿತ್ತು,

**ಜ್ಞಾನಮಯಂ ತೇಜೋನಿಧಿ**
**ತಾನಿರ್ದುಂ ತಾಯ ಗರ್ಭದೊಳ್ ಪೀಡೆಯನಂ**
**ತೇನುಂ ಮಾಡಿದನಿಲ್ಲ ಕೃ**
**ಶಾನುವ ನೆಟಿಲಳುರದಂತೆವೊಲ್ ಕನ್ನಡಿಯಂ** ೨೦

**ಪದವಿಭಾಗ-ಅನ್ವಯ-ಅರ್ಥ:** ಕೃಶಾನುವ ನೆಟಿಲ್ ಕನ್ನಡಿಯಂ ಉರದಂತೆವೊಲ್ = ಬೆಂಕಿಯ ಪ್ರತಿಬಿಂಬವು ಕನ್ನಡಿಯನ್ನು ಸುಡದ ಹಾಗೆ, ಜ್ಞಾನಮಯಂ ತೇಜೋನಿಧಿ ತಾಯ ಗರ್ಭದೊಳ್ ತಾನಿರ್ದುಂ = ಜ್ಞಾನಸ್ವರೂಪನೂ ಬೆಳಗಿನಾಗರವೂ ಆದ ಜಿನಶಿಶುವು ತಾಯಿಯ ಬಸಿರಲ್ಲಿದ್ದರೂ, ಪೀಡೆಯನ್ + ಅಂತು + ಏನುಂ ಮಾಡಿದನ್ + ಇಲ್ಲ = ಸ್ವಲ್ಪವೂ ಕಷ್ಟವನ್ನು ಉಂಟುಮಾಡಲಿಲ್ಲ.

**ಗದ್ಯಾನುಸರಣ:** ಬೆಂಕಿಯ ಪ್ರತಿಬಿಂಬವು ಕನ್ನಡಿಯನ್ನು ಸುಡದ ಹಾಗೆ, ಜ್ಞಾನಸ್ವರೂಪನೂ ಬೆಳಗಿನಾಗರವೂ ಆದ ಜಿನಶಿಶುವು ತಾಯಿಯ ಬಸಿರಲ್ಲಿದ್ದರೂ ಸ್ವಲ್ಪವೂ ಕಷ್ಟವನ್ನು ಉಂಟುಮಾಡಲಿಲ್ಲ.

**ಪಳಿಕಿನ ಕೊಡದೊಳ್ ಸೊಡರ್ಗುಡಿ**
**ಬೆಳಗುವವೊಲ್ ಶುದ್ಧಗರ್ಭಗೃಹದೊಳ್ ತೇಜೋ**

ನಿಳಯಂ ಬೆಳಗಿದನಜೀವಿನ
ಬೆಳಗಿನ ಮೊಳೆ ಮೊಳೆತು ಬೆಳೆವುದೊಂದಚ್ಚರಿಯೇ ೨೧

**ಪದವಿಭಾಗ-ಅನ್ವಯ-ಅರ್ಥ:** ಪಳಿಕಿನ ಕೊಡದೊಳ್ ಸೊಡರ್ಗುಡಿ ಬೆಳಗುವವೊಲ್ = ಸ್ಫಟಿಕದ ಗಡಿಗೆಯಲ್ಲಿ ದೀಪದ ಕುಡಿಯು ಬೆಳಗುವಂತೆ, ಶುದ್ಧಗರ್ಭಗೃಹದೊಳ್ ತೇಜೋನಿಳಯಂ ಬೆಳಗಿದನ್ = ಮರುದೇವಿಯ ಪರಿಶುದ್ಧ ಬಸಿರಿನಲ್ಲಿ ತೇಜಸ್ಸಿನ ನೆಲೆಯಾದ ಶಿಶುವು ಬೆಳಗಿದ; ಅಜೀವಿನ ಬೆಳಗಿನ ಮೊಳೆ ಮೊಳೆತು ಬೆಳೆವುದು + ಒಂದಚ್ಚರಿಯೇ = ಜ್ಞಾನದ ಬೀಜವು ಮೊಳಕೆಯೊಡೆದು ಬೆಳೆಯುವುದೇನು ಆಶ್ಚರ್ಯ?

**ಗದ್ಯಾನುಸರಣ:** ಸ್ಫಟಿಕದ ಗಡಿಗೆಯಲ್ಲಿ ದೀಪದ ಕುಡಿಯು ಬೆಳಗುವಂತೆ ಮರುದೇವಿಯ ಪರಿಶುದ್ಧ ಬಸಿರಿನಲ್ಲಿ ತೇಜಸ್ಸಿನ ನೆಲೆಯಾದ ಶಿಶುವು ಬೆಳಗಿದ; ಜ್ಞಾನದ ಬೀಜವು ಮೊಳಕೆಯೊಡೆದು ಬೆಳೆಯುವುದೇನು ಆಶ್ಚರ್ಯ?

**ಬರೆ ಚೈತ್ರಂ ಕೃಷ್ಣಪಕ್ಷಂ ದೊರೆಕೊಳೆ ನವಮೀವಾಸರಂ ಪೊರ್ದೆ ಲೋಕೋ**
**ತ್ತರಮಾಗಿರ್ದುತ್ತರಾಷಾಢದೊಳತಿಶುಭದಂ ಬ್ರಹ್ಮಯೋಗಂ ಮನಂಗೊಂ**
**ಡಿರೆ ಭಾಸ್ವನ್ನಾಭಿರಾಜಾಂಗನೆ ವಿಶದಯಶೋಭಾಗಿಯಂ ಭವ್ಯಪದ್ಮಾ**
**ಕರಬೋಧಾದಾಯಿಯಂ ತಿಗ್ಮಕರನುದಯದೊಳ್ ಪುತ್ರನಂ ಪೆತ್ತಳಾಗಳ್** ೨೨

**ಪದವಿಭಾಗ-ಅನ್ವಯ-ಅರ್ಥ:** ಚೈತ್ರಂ ಬರೆ = ಚೈತ್ರಮಾಸವು ಬರಲು, ಕೃಷ್ಣಪಕ್ಷಂ ದೊರೆಕೊಳೆ = ಕೃಷ್ಣಪಕ್ಷವೂ ಬಂದಿತು, ನವಮೀವಾಸರಂ ಪೊರ್ದೆ = ನವಮಿಯ ತಿಥಿಯು ಉಂಟಾಯಿತು, ಲೋಕೋತ್ತರಮಾಗಿರ್ದ + ಉತ್ತರಾಷಾಢದೊಳ್ = ಅತ್ಯತಿಶಯವಾದ ಉತ್ತರಾಷಾಢ ನಕ್ಷತ್ರದಲ್ಲಿ, ಅತಿಶುಭದಂ ಬ್ರಹ್ಮಯೋಗಂ ಮನಂಗೊಂಡಿರೆ = ತುಂಬ ಮಂಗಳಕರವಾದ ಬ್ರಹ್ಮಯೋಗವು ಒದಗಿರಲು, ಆಗಳ್ = ಆ ಹೊತ್ತಿನಲ್ಲಿ, ಭಾಸ್ವತ್ + ನಾಭಿರಾಜ + ಅಂಗನೆ = ತೇಜಃಪೂರ್ಣಳಾದ ನಾಭಿರಾಜನ ರಾಣಿಯು, ತಿಗ್ಮಕರನ + ಉದಯದೊಳ್ = ಸೂರ್ಯ ಮೂಡಿದಾಗ, ವಿಶದಯಶೋಭಾಗಿಯಂ = ನಿರ್ಮಲ ಕೀರ್ತಿಗೆ ಭಾಜನನಾಗುವವನೂ, ಭವ್ಯಪದ್ಮಾಕರಬೋಧಾದಾಯಿಯಂ = ಭವ್ಯರೆಂಬ ಪದ್ಮಗಳ ಕೊಳಕ್ಕೆ ತಿಳಿವನ್ನುಂಟುಮಾಡುವವನೂ ಆದ, ಪುತ್ರನಂ ಪೆತ್ತಳ್ = ಮಗನನ್ನು ಹೆತ್ತಳು.

**ಗದ್ಯಾನುಸರಣ:** ಚೈತ್ರಮಾಸದ ಕೃಷ್ಣಪಕ್ಷ ನವಮಿಯ ತಿಥಿಯಂದು ಅತ್ಯತಿಶಯವಾದ ಉತ್ತರಾಷಾಢ ನಕ್ಷತ್ರ ಹಾಗೂ ತುಂಬ ಮಂಗಳಕರವಾದ ಬ್ರಹ್ಮಯೋಗವು ಕೂಡಿಕೊಂಡುವು; ಆಗ ತೇಜಃಪೂರ್ಣಳಾದ ನಾಭಿರಾಜನ ರಾಣಿಯು ಸೂರ್ಯ ಮೂಡುವ ಹೊತ್ತಿನಲ್ಲಿ ನಿರ್ಮಲ ಕೀರ್ತಿಗೆ ಭಾಜನನಾಗುವವನೂ, ಭವ್ಯರೆಂಬ ಪದ್ಮಗಳ ಕೊಳಕ್ಕೆ ತಿಳಿವನ್ನುಂಟುಮಾಡುವವನೂ ಆದ ಮಗನನ್ನು ಹೆತ್ತಳು.

ತ್ರಿದಶಾನೇಕಾನಕಂಗಳ್ ಮೊಳಗಿದುವು ಕರಾಸ್ಫಾಳನಂ ದೇವರಿಂದಾ
ಗವೆ ಮುಂ ಕಲ್ಪದ್ರುಮಂಗಳ್ ಪೊಸತಲರ್ದಲರಂ ತಾಮೆ ಸಾಲ್ವಸ್ನೆಗಂ ಸೂ

ಸಿದುವೇಕಾಯ್ತೀ ಕಿರೀಟಕ್ಕವನತಿಯೆನೆ ದೇವೋತ್ತಮಾಂಗಂಗಳುಂ ಬಾ
ಗಿದುವಾ ತ್ರೈಲೋಕ್ಯನಾಥೋದಯಮನಱಿಪುವಂತಾ ತ್ರಿಲೋಕಕ್ಕಮಾಗಳ್ ೨೩

**ಪದವಿಭಾಗ-ಅನ್ವಯ-ಅರ್ಥ:** ಆ ತ್ರೈಲೋಕ್ಯನಾಥ + ಉದಯಮನ್ ಆ ತ್ರಿಲೋಕಕ್ಕಂ ಅಱಿಪುವಂತೆ = ಆ ಮೂಲೋಕಗಳ ಒಡೆಯನ ಹುಟ್ಟನ್ನು ಮೂಲೋಕಗಳಿಗೂ ತಿಳಿಸುವಂತೆ, ಆಗಳ್ = ಆಗ, ದೇವರಿಂದೆ ಕರ + ಆಸ್ಫಾಳನಂ ಆಗದೆ ಮುಂ = ದೇವತೆಗಳು ಕೈಯಿಂದ ಬಾರಿಸುವ ಮುಂಚೆಯೇ, ಅನೇಕ ತ್ರಿದಶ ಆನಕಂಗಳ್ ಮೊಳಗಿದುವು = ನಾನಾ ದೇವವಾದ್ಯಗಳು ಸದ್ದುಮಾಡಿದುವು, ಕಲ್ಪದ್ರುಮಂಗಳ್ ತಾಮೆ ಪೊಸತು + ಅಲರ್ದು + ಅಲರಂ ಸಾಲ್ವನ್ನೆಗಂ ಸೂಸಿದುವು = ಕಲ್ಪವೃಕ್ಷಗಳು ತಾವಾಗಿಯೇ ಹೊಸತಾಗಿ ಹೂಬಿಟ್ಟು ಸಾಕಗುವಂತೆ ಸುರಿಸಿದುವು, ಕಿರೀಟಕ್ಕೆ ಈ ಅವನತಿ ಏಕೆ + ಆಯ್ತು ಎನೆ = ಕಿರೀಟಕ್ಕೆ ಈ ಅವನತಿಯು ಏಕೆ ಉಂಟಾಯಿತು ಎನ್ನುವಂತೆ, ದೇವ + ಉತ್ತಮಾಂಗಂಗಳುಂ ಬಾಗಿದುವು = ದೇವತೆಗಳ ತಲೆಗಳು ತಾವಾಗಿ ಬಾಗಿದುವು.

**ಗದ್ಯಾನುಸರಣ:** ಆ ಮೂಲೋಕದೊಡೆಯನ ಹುಟ್ಟನ್ನು ಮೂಲೋಕಗಳಿಗೂ ತಿಳಿಸುವಂತೆ, ಆಗ ದೇವತೆಗಳು ತಮ್ಮ ಕೈಗಳಿಂದ ಬಾರಿಸುವ ಮುಂಚೆಯೇ ನಾನಾ ದೇವವಾದ್ಯಗಳು ಸದ್ದುಮಾಡಿದುವು. ಕಲ್ಪವೃಕ್ಷಗಳು ತಾವಾಗಿಯೇ ಸಮೃದ್ಧವಾಗಿ ಹೊಸತಾದ ಹೂಬಿಟ್ಟು ಸುರಿಸಿದುವು. ಕಿರೀಟಕ್ಕೆ ಈ ಅವನತಿಯು ಏಕೆ ಉಂಟಾಯಿತು ಎನ್ನುವಂತೆ ದೇವತೆಗಳು ಅರಿವಿಲ್ಲದೆಯೇ ತಲೆಬಾಗಿಸಿದರು.

ವಾಸವನಾಸನಕಂಪದಿ
ನಾ ಸಮಯದೊಳವಧಿಯಂ ಪ್ರಯೋಗಿಸಿ ಬೋಧಾ
ವಾಸಪ್ರಿಯನುದಯಮನಱಿ
ದಾಸನದಿಂದೆರ್ದು ಮೂಱುಸೂೞ್ ಪೊಡೆವಟ್ಟಂ ೨೪

**ಪದವಿಭಾಗ-ಅನ್ವಯ-ಅರ್ಥ:** ಆ ಸಮಯದೊಳ್ ಆಸನಕಂಪದಿನ್ ವಾಸವನ್ = ಆ ಹೊತ್ತಿನಲ್ಲಾದ ಆಸನಕಂಪದಿಂದ ದೇವೇಂದ್ರನು, ಅವಧಿಯಂ ಪ್ರಯೋಗಿಸಿ = ತನ್ನ ಅವಧಿಜ್ಞಾನದ ಬಲದಿಂದ, ಬೋಧಾವಾಸಪ್ರಿಯನ + ಉದಯಮನ್ + ಅಱಿದು = ಜ್ಞಾನದ ನೆಲೆವನೆಯಾದವನ ಹುಟ್ಟನ್ನು ತಿಳಿದು, ಆಸನದಿಂದೆ + ಎರ್ದು ಮೂಱುಸೂೞ್ ಪೊಡೆವಟ್ಟಂ = ತನ್ನ ಪೀಠದಿಂದ ಮೇಲೆದ್ದು ಮೂರು ಬಾರಿ ನಮಸ್ಕರಿಸಿದ.

**ಗದ್ಯಾನುಸರಣ:** ಆ ಹೊತ್ತಿನಲ್ಲಾದ ಆಸನಕಂಪದಿಂದ ದೇವೇಂದ್ರನು ತನ್ನ ಅವಧಿಜ್ಞಾನದ ಬಲದಿಂದ ಜ್ಞಾನದ ನೆಲೆವನೆಯಾದವನ ಹುಟ್ಟನ್ನು ತಿಳಿದ; ತಕ್ಷಣವೇ ತನ್ನ ಪೀಠದಿಂದ ಮೇಲೆದ್ದು ಮೂರು ಬಾರಿ ನಮಸ್ಕರಿಸಿದ.

[**ವಿಶೇಷ ವಿಚಾರ:** ಆಸನಕಂಪ = ತೀರ್ಥಂಕರನ ಜೀವಿತದ ವಿಶೇಷ ಪ್ರಸಂಗಗಳಲ್ಲಿ ಆಗುವ ದೇವೇಂದ್ರನ ಸಿಂಹಾಸನದ ಅಲುಗಾಟ]

**ವ॥ ಅಂತು ಪೊಡೆವಟ್ಟು ಜನ್ಮಾಭಿಷೇಕೋದ್ಯುಕ್ತಚಿತ್ತನಾದಾಗಳ್**

**ಪದವಿಭಾಗ–ಅನ್ವಯ–ಅರ್ಥ:** ಅಂತು ಪೊಡೆವಟ್ಟು = ಹಾಗೆ ನಮಸ್ಕರಿಸಿ, ಜನ್ಮ + ಅಭಿಷೇಕ + ಉದ್ಯುಕ್ತಚಿತ್ತನಾದಾಗಳ್ = ತೀರ್ಥಂಕರನ ಜನನಕಲ್ಯಾಣವನ್ನು ಮಾಡುವ ಆಸಕ್ತಿಯನ್ನು ತಾಳಿ,

**ಗದ್ಯಾನುಸರಣ:** ಹಾಗೆ ನಮಸ್ಕರಿಸಿದ ದೇವೇಂದ್ರನು ತೀರ್ಥಂಕರನ ಜನನಕಲ್ಯಾಣವನ್ನು ಆಚರಿಸುವುದರತ್ತ ತನ್ನ ಮನಸ್ಸನ್ನು ತೊಡಗಿಸಿದ;

**ನೆಗಟ್ದಾ ದೇವೇಂದ್ರರೆಲ್ಲಂ ಬಳಸಿ ಬರೆ ಮದಶ್ರೀಯುತೈರಾವತಸ್ಕಂ**
**ಧಗತಂ ನಾನಾತಪತ್ರಸ್ಥಗಿತದಶದಿಶಾಮಂಡಲಂ ದೇವತೂರ್ಯಾ**
**ನುಗದೇವೀಗೀತಜೈನಸ್ತವಸಮುಪಹಿತಾತ್ಮೀಯಚಿತ್ತಂ ವಿಳಾಸಂ**
**ಮಿಗೆ ಸೌಧರ್ಮೇಂದ್ರನಂದಾ ಶಚಿವೆರಸು ಮಹೋತ್ಸಾಹದಿಂ ಬಂದನಾಗಳ್** ೨೫

**ಪದವಿಭಾಗ–ಅನ್ವಯ–ಅರ್ಥ:** ನೆಗಟ್ದಿ + ಆ ದೇವೇಂದ್ರರ್ + ಎಲ್ಲಂ ಬಳಸಿ ಬರೆ = ಕೀರ್ತಿವಂತ ದೇವೇಂದ್ರರುಗಳೆಲ್ಲ, ಸುತ್ತಲೂ ಬರುತ್ತಿರಲು, ಮದಶ್ರೀಯುತ + ಐರಾವತಸ್ಕಂಧಗತಂ = ಮದವೆಂಬ ಸಂಪತ್ತಿನಿಂದ ಕೂಡಿದ ಐರಾವತದ ಕುತ್ತಿಗೆಯ ಮೇಲೆ ಕುಳಿತು, ನಾನಾ + ಆತಪತ್ರಸ್ಥಗಿತದಶದಿಶಾಮಂಡಲಂ = ನಾನಾ ಕೊಡೆಗಳಿಂದ ಹತ್ತು ದಿಕ್ಕುಗಳನ್ನೂ ಮುಚ್ಚಿ, ದೇವತೂರ್ಯ + ಆನಂದಗೇದೀವೀಗೀತ = ದೇವದುಂದುಭಿಗಳೊಡನೆ (ಮರು)ದೇವಿಯ ಬಗೆಗಿನ ಹಾಡು, ಜೈನಸ್ತವಸಮುಪಹಿತ + ಆತ್ಮೀಯಚಿತ್ತಂ = ಹಾಗೂ ಜಿನಸ್ತುತಿಗಳಲ್ಲಿ ತನ್ನ ಮನಸ್ಸನ್ನು ಇಟ್ಟು, ಸೌಧರ್ಮೇಂದ್ರನ್ + ಅಂದು + ಆ ಶಚಿವೆರಸು = ಸೌಧರ್ಮೇಂದ್ರನು ತನ್ನ ಮಡದಿ ಶಚಿಯ ಜೊತೆಯಲ್ಲಿ, ಮಹೋತ್ಸಾಹದಿಂ ಆಗಳ್ ವಿಳಾಸಂ ಮಿಗೆ ಬಂದನ್ = ತುಂಬ ಸಂಭ್ರಮದಿಂದಲೂ ವೈಭವದಿಂದಲೂ ಬಂದ.

**ಗದ್ಯಾನುಸರಣ:** ಕೀರ್ತಿವಂತ ದೇವೇಂದ್ರರುಗಳೆಲ್ಲ ಸುತ್ತಲೂ ಬರುತಿರಲು ಮದವೆಂಬ ಸಂಪತ್ತಿನಿಂದ ಕೂಡಿದ ಐರಾವತದ ಕುತ್ತಿಗೆಯ ಮೇಲೆ ಕುಳಿತು, ನಾನಾ ಕೊಡೆಗಳಿಂದ ಹತ್ತು ದಿಕ್ಕುಗಳನ್ನೂ ಮುಚ್ಚಿರಲು, ದೇವದುಂದುಭಿಗಳೊಡನೆ ಮರುದೇವಿಯ ಬಗೆಗಿನ ಹಾಡು ಹಾಗೂ ಜಿನಸ್ತುತಿಗಳಲ್ಲಿ ತನ್ನ ಮನಸ್ಸನ್ನು ಇಟ್ಟು, ಸೌಧರ್ಮೇಂದ್ರನು ತನ್ನ ಮಡದಿ ಶಚಿಯ ಜೊತೆಯಲ್ಲಿ ತುಂಬ ಸಂಭ್ರಮದಿಂದಲೂ ವೈಭವದಿಂದಲೂ ಬಂದ.

**ವ॥ ಅಂತು ಗಗನತಳದಿನ್ ಅವತರಿಸಿ ಸಾಕೇತಮಂ ಬಳಸಿ ದೇವನಿಕಾಯಮಿರೆ ಸೌಧರ್ಮೇಂದ್ರಪ್ರಮುಖ ಚತುರ್ನಿಕಾಯಾಮರೇಂದ್ರವೃಂದಂ ನಾಭಿರಾಜರಾಜಗೇಹಾಂಗಣದೊಳ್ ಸಂದಣಿಸಿ ಬಂದಿರೆ, ಶಚಿಮಹಾದೇವಿ ತಿರೋಹಿತಶರೀರೆಯಾಗಿ ಪ್ರಸೂತಿಗೃಹಮಂ ಪೊಕ್ಕು ತೇಜೋಧಿಕನಪ್ಪ ಬಾಳನನಟ್ಟರ್ತು ನೋಡುತ್ತುಮಿರ್ಬರುಂ ಮೂಮೆ ಬಲಗೊಂಡು**

**ಪದವಿಭಾಗ–ಅನ್ವಯ–ಅರ್ಥ:** ಅಂತು ಗಗನತಳದಿನ್ + ಅವತರಿಸಿ = ಹಾಗೆ ಆಕಾಶದಿಂದ ಇಳಿದು, ಸಾಕೇತಮಂ ಬಳಸಿ = ಸಾಕೇತಪುರವನ್ನು ಸುತ್ತಿ ಬಂದು, ದೇವನಿಕಾಯಂ + ಇರೆ = ದೇವಸಮುದಾಯವು ನಿಂತಿರಲು,

ಸೌಧರ್ಮೇಂದ್ರಪ್ರಮುಖಚತುರ್ನಿಕಾಯ + ಅಮರೇಂದ್ರವೃಂದಂ = ಸೌಧಮೇಂದ್ರನು ಮುಖ್ಯವಾದ ನಾಲ್ಕೂ ಬಗೆಯ ದೇವೇಂದ್ರರುಗಳು, ನಾಭಿರಾಜರಾಜಗೇಹಾಂಗಣದೊಳ್ ಸಂದಣಿಸಿ ಬಂದಿರೆ = ನಾಭಿರಾಜನ ಅರಮನೆಯ ಅಂಗಳದಲ್ಲಿ ಒಟ್ಟಾಗಿ ಬರಲು, ಶುಚಿಶಚಿಮಹಾದೇವಿ ತಿರೋಹಿತಶರೀರೆಯಾಗಿ = ಪರಿಶುಭ್ರಳಾದ ಶಚಿದೇವಿಯು ತನ್ನ ಶರೀರವನ್ನು ಅದೃಶ್ಯವಾಗಿಸಿಕೊಂಡು, ಪ್ರಸೂತಿಗೃಹಮಂ ಪೊಕ್ಕು = ಬಾಣಂತಿ ಮನೆಯನ್ನು ಹೊಕ್ಕು, ತೇಜಃ + ಅಧಿಕನಪ್ಪ ಬಾಳನನ್ = ಹೆಚ್ಚಿನ ಕಾಂತಿಯಿಂದ ಕೂಡಿದ ಆ ಮಗುವನ್ನು, ಅಣ್ಕರ್ತು ನೋಡುತ್ತುಂ = ಪ್ರೀತಿಯಿಂದ ನೋಡುತ್ತ, ಇರ್ಬರುಂ ಮೂಮೆ ಬಲಗೊಂಡು = ಇಂದ್ರ-ಶಚಿಯರು ಮೂರು ಬಾರಿ ಬಲಗೊಂಡು

**ಗದ್ಯಾನುಸರಣ:** ಹಾಗೆ ಆಕಾಶದಿಂದ ನೆಲದ ಮೇಲೆ ಇಳಿದರು; ನಾನಾ ಬಗೆಯ ಮಣಿಸೌಧಗಳ ತುದಿಯಲ್ಲಿ ಹಾರಾಡುತ್ತಿದ್ದ ಬಾವುಟಗಳ ಸಾಲಿನಿಂದ ಕಂಗೊಳಿಸುತ್ತಿದ್ದ ಸಾಕೇತಪುರವನ್ನು ಸುತ್ತಿ ದೇವಸಮುದಾಯವು ನಿಂತುಕೊಂಡಿತು; ಸೌಧಮೇಂದ್ರನು ಮುಖ್ಯವಾದ ನಾಲ್ಕೂ ಬಗೆಯ ದೇವೇಂದ್ರರುಗಳು ನಾಭಿರಾಜನ ಅರಮನೆಯ ಅಂಗಳದಲ್ಲಿ ಒಟ್ಟಾಗಿ ಬಂದರು; ಆಗ ಪರಿಶುಭ್ರಳಾದ ಶಚಿದೇವಿಯು ತನ್ನ ಶರೀರವನ್ನು ಮರೆಮಾಚಿಕೊಂಡಳು. ಆನಂತರ ಬಾಣಂತಿ ಮನೆಯನ್ನು ಹೊಕ್ಕು ಹೆಚ್ಚಿನ ಕಾಂತಿಯಿಂದ ಕೂಡಿದ ಆ ಮಗುವನ್ನು ಪ್ರೀತಿಯಿಂದ ನೋಡುತ್ತ ಇಂದ್ರ-ಶಚಿಯರು ಮೂರು ಬಾರಿ ಬಲಗೊಂಡು ಬಂದರು.

**ಎಱಗಿ ಜಗತ್ತ್ರಯಗುರುಗೆರ್ದೆ**
**ಯೆಱಕದೆ ಪೊಗೞ್ದಖಿಳಭುವನಜನನಿಯನಾಗಳ್**
**ಮಱಿಯಿಸಿ ಮಾಯಾನಿದ್ರೆಯಿ**
**ನುಱೆ ಮಾಯಾಶಿಶುವನಿರಿಸಿ ಮುಂದಂಬಿಕೆಯಾ** ೨೬

**ಪದವಿಭಾಗ-ಅನ್ವಯ-ಅರ್ಥ:** ಜಗತ್ತ್ರಯಗುರುಗೆ + ಎರ್ದೆಯ + ಎಱಕದೆ ಎಱಗಿ = ಮೂಲೋಕಗಳ ಗುರುವಿಗೆ ಹೃದಯದಲ್ಲಿ ಅಕ್ಕರೆ ಉಕ್ಕಲು ನಮಸ್ಕರಿಸಿ, ಆಗಳ್ ಅಖಿಳಭುವನಜನನಿಯನ್ ಪೊಗೞ್ದು = ಆಗ ಜಗನ್ಮಾತೆಯನ್ನು ಸ್ತುತಿ ಮಾಡಿ, ಮಾಯಾನಿದ್ರೆಯಿನ್ ಉಱೆ ಮಱೆಯಿಸಿ = ಮಾಯಾನಿದ್ರೆಯಿಂದ ಪೂರ್ತಿ ಮೈಮರೆಯುವಂತೆ ಮಾಡಿ, ಅಂಬಿಕೆಯಾ ಮುಂದೆ ಮಾಯಾಶಿಶುವನ್ + ಇರಿಸಿ = ತಾಯಿಯ ಮಗ್ಗುಲಲ್ಲಿ ಮಾಯಾಶಿಶುವೊಂದನ್ನು ಇರಿಸಿ,

**ಗದ್ಯಾನುಸರಣ:** ಹೃದಯದಲ್ಲಿ ಅಕ್ಕರೆ ಉಕ್ಕಲು ಮೂಲೋಕ ಗುರುವಿಗೆ ನಮಸ್ಕರಿಸಿದಳು; ಆಗ ಜಗನ್ಮಾತೆಯನ್ನು ಸ್ತುತಿ ಮಾಡಿ, ಮಾಯಾನಿದ್ರೆಯಿಂದ ಆಕೆ ಪೂರ್ತಿ ಮೈಮರೆಯುವಂತೆ ಮಾಡಿ ತಾಯಿಯ ಮಗ್ಗುಲಲ್ಲಿ ಮಾಯಾಶಿಶುವೊಂದನ್ನು ಇರಿಸಿದಳು.

**ಪಡೆಯಲ್ಕಾಗದ ನಿಧಿಯಂ**
**ಬಡವಂ ಪಡೆದಂತೆ ಕಮಳದಳಕರತಳದಿಂ**

**ಪಿಡಿದೆತ್ತಿಕೊಂಡ ಸಂತಸ**
**ಕೊಡಮೆಯನಾಂ ಪೊಗಟಲಜೆಯೆನಿಂದ್ರಾಂಗನೆಯಾ** ೨೭

**ಪದವಿಭಾಗ-ಅನ್ವಯ-ಅರ್ಥ:** ಪಡೆಯಲ್ಕೆ + ಆಗದ ನಿಧಿಯಂ ಬಡವಂ ಪಡೆದಂತೆ = ಎಂದೂ ಪಡೆಯಲಾರದ ಸಂಪತ್ತನ್ನು ಬಡವನು ಪಡೆದಂತೆ, ಕಮಳದಳಕರತಳದಿಂ ಸಂತಸದೊಡಮೆಯನ್ ಪಿಡಿದೆತ್ತಿಕೊಂಡ ಇಂದ್ರಾಂಗನೆಯನ್ = ತನ್ನ ಕರಕಮಲಗಳಲ್ಲಿ ಆನಂದದ ಒಡವೆಯನ್ನು ಹಿಡಿದೆತ್ತಿಕೊಂಡ ಇಂದ್ರನ ಮಡದಿಯನ್ನು, ಆಂ ಪೊಗಟಲ್ + ಅಜೆಯೆನ್ = ನಾನು ಹೊಗಳಲಸಮರ್ಥ.

**ಗದ್ಯಾನುಸರಣ:** ಎಂದೂ ಪಡೆಯಲಾರದ ಸಂಪತ್ತನ್ನು ಬಡವನು ಪಡೆದಂತೆ, ತನ್ನ ಕರಕಮಲಗಳಲ್ಲಿ ಆನಂದದ ಒಡವೆಯನ್ನು ಇಂದ್ರನ ಮಡದಿ ಹಿಡಿದೆತ್ತಿಕೊಂಡಳು. ಆಕೆಯ ಆನಂದವನ್ನು ವರ್ಣಿಸಲು ನಾನು ಅಸಮರ್ಥ.

**ಮಂಗಳಮನೆ ಪಾಡುತ್ತುಂ**
**ಮಂಗಳಧಾರಿಣಿಯರಾಗಿ ಮುಂದಂ ನಡೆವಾ**
**ಶಾಂಗನೆಯರಿಂದೆ ದಿವಿಜೇಂ**
**ದ್ರಾಂಗನೆ ಕರಮೆಸೆದು ಹಂಸಗತಿಯೊಳ್ ಬಂದಳ್** ೨೮

**ಪದವಿಭಾಗ-ಅನ್ವಯ-ಅರ್ಥ:** ಮಂಗಳಮನೆ ಪಾಡುತ್ತುಂ = ಮಂಗಳ ಗೀತಗಳನ್ನು ಹಾಡುತ್ತ, ಮಂಗಳಧಾರಿಣಿಯರಾಗಿ = ಮಂಗಳದ್ರವ್ಯಗಳನ್ನು ಹಿಡಿದು, ಮುಂದಂ ನಡೆವ + ಆಶಾಂಗನೆಯರಿಂದೆ = ಮುಂದೆ ಸಾಗುವ ದಿಗಂಗನೆಯರ ಜೊತೆಯಲ್ಲಿ, ದಿವಿಜೇಂದ್ರ + ಅಂಗನೆ ಕರಂ + ಎಸೆದು ಹಂಸಗತಿಯೊಳ್ ಬಂದಳ್ = ಶಚಿದೇವಿಯು ಅತಿಶಯ ಶೋಭೆಯಿಂದ ಹಂಸದಂತೆ ನಡೆದು ಬಂದಳು.

**ಗದ್ಯಾನುಸರಣ:** ಮಂಗಳಗೀತಗಳನ್ನು ಹಾಡುತ್ತ ಮಂಗಳದ್ರವ್ಯಗಳನ್ನು ಹಿಡಿದು ದಿಗಂಗನೆಯರು ಮುಂದೆ ಸಾಗುತ್ತಿರಲು ಶಚಿದೇವಿಯು ಅತಿಶಯ ಶೋಭೆಯಿಂದ ಹಂಸದಂತೆ ಅವರೊಡನೆ ನಡೆದು ಬಂದಳು.

**ವ॥ ಅಂತು ಬಂದು ಜಗತ್ರಿತಯಪತಿಯಂ ತ್ರಿದಶಪತಿಯ ನೀಡಿದ ಭುಜಯುಗಳಕ್ಕೆ ನೀಡಿದಾಗಳ್ ನಿಜಾಂಕಮನೇಜಿಸಿಕೊಂಡು,**

**ಪದವಿಭಾಗ-ಅನ್ವಯ-ಅರ್ಥ:** ಅಂತು ಬಂದು ಜಗತ್ + ತ್ರಿತಯಪತಿಯಂ = ಹಾಗೆ ಬಂದು ಮೂಲೋಕದೊಡೆಯನನ್ನು, ತ್ರಿದಶಪತಿಯ ನೀಡಿದ = ದೇವೇಂದ್ರನು ಚಾಚಿದ, ಭುಜಯುಗಳಕ್ಕೆ ನೀಡಿದಾಗಳ್ = ತೋಳುಗಳಿಗೆ ನೀಡಲು, ನಿಜ + ಅಂಕಮನ್ + ಏಜಿಸಿಕೊಂಡು = ತನ್ನ ತೊಡೆಯ ಮೇಲೆ ಇರಿಸಿಕೊಂಡು,

**ಗದ್ಯಾನುಸರಣ:** ಹಾಗೆ ಬಂದ ಶಚಿಯು ಮೂಲೋಕದೊಡೆಯನನ್ನು ದೇವೇಂದ್ರನು ಚಾಚಿದ ತೋಳುಗಳಿಗೆ ನೀಡಿದಳು; ಆ ಮಗುವನ್ನು ಸೌಧರ್ಮೇಂದ್ರನು ತನ್ನ ತೊಡೆಯ ಮೇಲೆ ಮಲಗಿಸಿಕೊಂಡ.

ತ್ರಿಜಗನ್ನಾಥನ ಮಜ್ಜನಕ್ಕೆ ಮಣಿಪೀಠಾಕಾರದಂತಾಗಿ ವಿ
ಶ್ವಜಗತ್ಪೂಜಿತಮಾಗಿ ಪೆಂಪುವಡೆದಾ ಹೇಮಾಚಳೇಂದ್ರಕ್ಕೆ ಕ

ಲ್ಪಜರಂ ಪೋಗಲೆ ಸನ್ನೆಗೆಯ್ಯೆ ಭಗವಜ್ಜನ್ಮಾಭಿಷೇಕೋತ್ಸವ
ಧ್ವಜಮಂ ಪೋಲ್ತುದು ರತ್ನರಂಜಿತಭುಜಾದಂಡಂ ಸುರಾಧೀಶನಾ ೨೯

**ಪದವಿಭಾಗ-ಅನ್ವಯ-ಅರ್ಥ** : ತ್ರಿಜಗನ್ನಾಥನ ಮಜ್ಜನಕ್ಕೆ = ಮೂಲೋಕದೊಡೆಯನ ಸ್ನಾನಕ್ಕೆ, ಮಣಿಪೀಠ + ಆಕಾರದಂತಾಗಿ = ಮಣಿಪೀಠದ ಆಕಾರವನ್ನು ಪಡೆದು, ವಿಶ್ವಜಗತ್ಪೂಜಿತಂ + ಆಗಿ ಪೆಂಪುವಡೆದ = ಇಡೀ ವಿಶ್ವದ ಗೌರವಕ್ಕೆ ಪಾತ್ರವಾಗಿ ಹಿರಿಮೆವಡೆದ, ಆ ಹೇಮಾಚಳೇಂದ್ರಕ್ಕೆ ಪೋಗಲೆ ಕಲ್ಪಜರಂ ಸನ್ನೆಗೆಯ್ಯೆ = ಹಿಮವತ್ಪರ್ವತಕ್ಕೆ ಹೋಗಲು ಕಲ್ಪಾಮರರಿಗೆ ಸನ್ನೆ ಮಾಡಲು, ಸುರ + ಆಧೀಶನಾ ರತ್ನರಂಜಿತಭುಜಾದಂಡಂ = ದೇವೇಂದ್ರನ ರತ್ನಕಾಂತಿಯುಕ್ತವಾದ ತೋಳು, ಭಗವತ್ + ಜನ್ಮ + ಅಭಿಷೇಕ + ಉತ್ಸವ ಧ್ವಜಮಂ ಪೋಲ್ತುದು = ಭಗವಂತನ ಜನ್ಮಕಲ್ಯಾಣ ಸಂಭ್ರಮಕ್ಕೆಂದು ಎತ್ತಿ ಹಿಡಿದ ಬಾವುಟದಂತೆ ತೋರಿತು.

**ಗದ್ಯಾನುಸರಣ:** ಮೂಲೋಕದೊಡೆಯನ ಸ್ನಾನಕ್ಕೆಂದು ಮಣಿಪೀಠದ ಆಕಾರವನ್ನು ಪಡೆದು ಇಡೀ ವಿಶ್ವದ ಗೌರವಕ್ಕೆ ಪಾತ್ರವಾಗಿ ಹಿಮವತ್ಪರ್ವವು ಹಿರಿಮೆವಡೆದಿತ್ತು; ಅಲ್ಲಿಗೆ ಹೋಗಲು ಇಂದ್ರನು ಕಲ್ಪಾಮರರಿಗೆ ತೋಳೆತ್ತಿ ಸನ್ನೆ ಮಾಡಿದ; ಆಗ ದೇವೇಂದ್ರನ ರತ್ನಕಾಂತಿಯುಕ್ತವಾದ ಆ ತೋಳು ಭಗವಂತನ ಜನ್ಮಕಲ್ಯಾಣ ಸಂಭ್ರಮಕ್ಕೆಂದು ಎತ್ತಿ ಹಿಡಿದ ಬಾವುಟದಂತೆ ತೋರಿತು

**ವ॥ ಆಗಳ್ ಸೌಧರ್ಮೇಂದ್ರನೇಱಿದೈರಾವತಗಜೇಂದ್ರಕ್ಕೆ ನಿಜಗಜೇಂದ್ರಂಗಳಂ ಪಕ್ಕುಮಾಡಿ,**

**ಅರ್ಥ:** ಆಗಳ್ ಸೌಧರ್ಮೇಂದ್ರನ್ + ಏಱಿದೈರಾವತಗಜೇಂದ್ರಕ್ಕೆ ನಿಜಗಜೇಂದ್ರಂಗಳಂ ಪಕ್ಕುಮಾಡಿ = ಆಗ ಸೌಧರ್ಮೇಂದ್ರನು ಹತ್ತಿದ ಐರಾವತವನ್ನು ತಮ್ಮ ಆನೆಗಳು ಅನುಸರಿಸುವಂತೆ ಕಲ್ಪಜರು ನೋಡಿಕೊಂಡರು.

ಹಿಮಕರಬಿಂಬನಿಭಚ್ಛ
ತ್ರಮನೀಶಾನೇಂದ್ರನೆತ್ತಿದಂ ತತ್ಕರವಿ
ಭ್ರಮದಿಂ ಪದಪೊದವೆ ಸನ
ತ್ಕುಮಾರಮಾಹೇಂದ್ರರಿಕ್ಕಿದರ್ ಚಾಮರಮಂ ೩೦

**ಪದವಿಭಾಗ-ಅನ್ವಯ-ಅರ್ಥ:** ಈಶಾನೇಂದ್ರನ್ ಹಿಮಕರಬಿಂಬನಿಭಚ್ಛತ್ರಮನ್ ಎತ್ತಿದಂ = ಈಶಾನೇಂದ್ರನು ಚಂದ್ರಬಿಂಬದಂತಿದ್ದ ಬೆಳ್ಗೊಡೆಯನ್ನು ಮಗುವಿನ ಮೇಲೆ ಎತ್ತಿ ಹಿಡಿದ; ಸನತ್ಕುಮಾರಮಾಹೇಂದ್ರರ್ ತತ್ + ಕರವಿಭ್ರಮದಿಂ = ಸನತ್ಕುಮಾರ ಮಹೇಂದ್ರರು ತಮ್ಮ ಬೆಡಗುಗೈಗಳಿಂದ, ಪದಪು + ಒದವೆ ಚಾಮರಮಂ ಇಕ್ಕಿದರ್ = ಸೊಗಸಾಗಿ ಚಾಮರಗಳಿಂದ ಬೀಸಿದರು.

**ಗದ್ಯಾನುಸರಣ:** ಈಶಾನೇಂದ್ರನು ಚಂದ್ರಬಿಂಬದಂತಿದ್ದ ಬೆಳ್ಗೊಡೆಯನ್ನು ಮಗುವಿನ ಮೇಲೆ ಎತ್ತಿ ಹಿಡಿದ; ಸನತ್ಕುಮಾರ ಮಹೇಂದ್ರರು ತಮ್ಮ ಬೆಡಗುಗೈಗಳಿಂದ ಚಾಮರಗಳಿಂದ ಮೆಲುವಾಗಿ ಬೀಸಿದರು.

ನೆಗೞ್ದೈರಾವತದಂತಿಗಾದುದು ಮೊಗಂ ಮೂವತ್ತೆರಡುಕ್ಕೋಟಿಯೊಪ್ಪಿಪಾ
ಮೊಗಮೊಂದೊಂದಱೊಳೆಂಟು ಕೋಡವಱೊಳಂತೊಂದೊಂದಱೊಳ್ ಪೂಗೊಳಂ

**ನೆಗಟಿಱ್ದೊಂದೊಂದೆಸೆದಿರ್ಕುಮಾ ಕೊಳಂಗಳಂತೊಂದೊಂದೊದಱೊಳ್ ಚಿತ್ರಪ**
**ತ್ರಗಣಂ ಪದ್ಮಿನಿ ನಾಡೆ ಚೆಲ್ವನೊಳಕೊಂಡೊಂದೊಂದೆ ಕಣ್ಗೊಪ್ಪುಗುಂ** ೩೧

**ಪದವಿಭಾಗ–ಅನ್ವಯ–ಅರ್ಥ:** ನೆಗಟ್ಟ + ಐರಾವತದಂತಿಗೆ ಮೂವತ್ತೆರಟ್ ಮೊಗಂ ಆದುದು = ಸುಪ್ರಸಿದ್ಧವಾದ ಐರಾವತ ಆನೆಗೆ ಮೂವತ್ತೆರಡು ಮುಖಗಳುಂಟಾದುವು; ನೋಟ್ಪೊಡೆ + ಆ ಮೊಗಂ + ಒಂದೊಂದಱೊಳ್ + ಎಂಟು ಕೋಡು = ನೋಡನೋಡುತ್ತಿರುವಂತೆಯೇ ಒಂದೊಂದು ಮುಖದಲ್ಲಿಯೂ ಎಂಟು ದಂತಗಳು. ಅಂತು ಅವಱೊಳ್ ಒಂದೊದಱೊಳ್ ಒಂದೊಂದು + ಪೂಗೊಳಂ ನೆಗಟ್ದು ಎಸೆದಿರ್ಕುಂ = ಹಾಗೆಯೇ ಅವುಗಳಲ್ಲಿ ಒಂದೊಂದರಲ್ಲಿಯೂ ಒಂದೊಂದು ಹೂವಿನ ಕೊಳವು ಶೋಭಿಸುತ್ತಿತ್ತು; ಅಂತು ಆ ಕೊಳಂಗಳ್ ಒಂದೊಂದೊದಱೊಳ್ = ಅಂತೆಯೇ ಆ ಒಂದೊಂದು ಕೊಳದಲ್ಲಿಯೂ, ನಾಡೆ ಚೆಲ್ವನ್ + ಒಳಕೊಂಡು = ಆಕರ್ಷಕ ಎಲೆಗಳ ಸಮೂಹವುಳ್ಳ, ಚಿತ್ರಪತ್ರಗಣಂ ಪದ್ಮಿನಿ ಒಂದೊಂದೆ ಕಣ್ಗೆ + ಒಪ್ಪುಗುಂ = ಒಂದೊಂದು ತಾವರೆ ಬಳ್ಳಿಯು ಶೋಭಿಸುತ್ತಿತ್ತು.

**ಗದ್ಯಾನುಸರಣ:** ಸುಪ್ರಸಿದ್ಧವಾದ ಐರಾವತ ಆನೆಗೆ ಮೂವತ್ತೆರಡು ಮುಖಗಳುಂಟಾದುವು; ನೋಡನೋಡುತ್ತಿರುವಂತೆಯೇ ಒಂದೊಂದು ಮುಖದಲ್ಲಿಯೂ ಎಂಟು ದಂತಗಳು; ಹಾಗೆಯೇ ಪ್ರತಿಯೊಂದು ದಂತದಲ್ಲಿ ಒಂದೊಂದು ಹೂವಿನ ಕೊಳವು ಶೋಭಿಸುತ್ತಿತ್ತು; ಅಂತೆಯೇ ಆ ಒಂದೊಂದು ಕೊಳದಲ್ಲಿಯೂ ಆಕರ್ಷಕ ಎಲೆಗಳ ಸಮೂಹವುಳ್ಳ ಒಂದೊಂದು ತಾವರೆ ಬಳ್ಳಿಯು ಶೋಭಿಸುತ್ತಿತ್ತು.

**ಪೊಸಪೂವಬ್ಜಿನಿಯೊಂದಱೊಳ್ ಸೊಗಯಿಕುಂ ಮೂವತ್ತೆರಟ್ಪೂವಿನೊಳ್**
**ಪೊಸಗಂಪಂ ಪುದಿದೊಪ್ಪಿ ತೋಱುವೆಸಳ್ಗಳ್ಮೂವತ್ತೆರಟ್ಚೆಲ್ವನ**
**ಪ್ಪೆಸಳೋರೊಂದಱ ಮೇಲೆ ಲೀಲೆ ಮಿಗೆ ಮೂವತ್ತಿರ್ವರೋರಂತೆ ನ**
**ರ್ತಿಸೆ ದೇವಾಂಗನೆಯರ್ ಬೆಡಂಗನೊಳಕೊಂಡತ್ತಿಂದ್ರರುಂದ್ರದ್ವಿಪಂ** ೩೨

**ಪದವಿಭಾಗ–ಅನ್ವಯ–ಅರ್ಥ:** ಅಬ್ಜಿನಿಯೊಂದಱೊಳ್ ಮೂವತ್ತೆರಟ್ ಪೊಸಪೂವು ಸೊಗಯಿಕುಂ = ತಾವರೆಬಳ್ಳಿಯೊಂದೊಂದರಲ್ಲಿಯೂ ಮೂವತ್ತೆರಡು ಹೊಸಗೂಗಳು ಶೋಭಿಸುತ್ತವೆ; ಪೂವಿನೊಳ್ ಪೊಸಗಂಪಂ ಪುದಿದು + ಒಪ್ಪಿ ತೋಱುವ + ಎಸಳ್ಗಳ್ + ಮೂವತ್ತೆರಟ್ = ಒಂದೊಂದು ಹೂವಿನಲ್ಲಿಯೂ ಹೊಸಗಂಪನ್ನು ತುಂಬಿಕೊಂಡು ಸೊಗಸುವ ಮೂವತ್ತೆರಡು ದಳಗಳು; ಚೆಲ್ವನಪ್ಪ + ಎಸಳ್ + ಓರೊಂದಱ ಮೇಲೆ ಮೂವತ್ತಿರ್ವರ್ ದೇವಾಂಗನೆಯರ್ = ಸುಂದರವಾದ ಒಂದೊಂದು ದಳದ ಮೇಲೆಯೂ ಮೂವತ್ತೆರಡು ಮಂದಿ ದೇವತಾಸ್ತ್ರೀಯರು. ಓರಂತೆ ಲೀಲೆ ಮಿಗೆ ನರ್ತಿಸೆ = ಒಂದೇ ಸಮನೆ ಲೀಲಾವಿಲಾಸದಿಂದ ಕುಣಿಯುತ್ತಿರಲು, ಇಂದ್ರರುಂದ್ರದ್ವಿಪಂ ಬೆಡಂಗನ್ + ಒಳಕೊಂಡತ್ತು = ಇಂದ್ರನ ಮಹಾ ಆನೆಯು ಅದ್ಭುತತೆಯನ್ನು ಒಳಗೊಂಡಿತ್ತು.

**ಗದ್ಯಾನುಸರಣ:** ಒಂದೊಂದು ತಾವರೆಬಳ್ಳಿಯಲ್ಲಿಯೂ ಮೂವತ್ತೆರಡು ಹೊಸಗೂಗಳು ಶೋಭಿಸುತ್ತವೆ; ಒಂದೊಂದು ಹೂವಿನಲ್ಲಿಯೂ ಹೊಸಗಂಪನ್ನು ತುಂಬಿಕೊಂಡು ಸೊಗಸುವ ಮೂವತ್ತೆರಡು ದಳಗಳು; ಸುಂದರವಾದ ಒಂದೊಂದು ದಳದ ಮೇಲೆಯೂ ಮೂವತ್ತೆರಡು ಮಂದಿ ದೇವತಾಸ್ತ್ರೀಯರು ಒಂದೇ ಸಮನೆ ಲೀಲಾವಿಲಾಸದಿಂದ ಕುಣಿಯುತ್ತಿದ್ದರು; ಹೀಗೆ ಇಂದ್ರನ ಮಹಾ ಆನೆಯು ಅದ್ಭುತವಾಗಿ ಕಾಣುತ್ತಿತ್ತು.

**ನಡೆ ನೋಡಲ್ ರೂಪು ಕೇಳಲ್ ನುಡಿ ಪುರದ ಜನಕ್ಕಾಯ್ತು ಮುನ್ನಂತೆ ಮೇಗ**
**ಣ್ಗಡರ್ದಾಗಳ್ ಮೆಯ್ಯ ಕಾಣಲ್ ಕಳಕಳಮಿನಿಸಂ ಕೇಳಲಾಯ್ತಂತು ಮತ್ತಂ**
**ನಡೆಗೊಂಡಾಗಳ್ ತನುವ್ಯಕ್ತಿಯನಜೆಯಲಣಂ ಬಾರದಾಯ್ತತ್ತಣಂ ಕಾ**
**ಣ್ಬೆಡೆಗಂ ಗೆಂಟಾದುದೆಂಬಂತಿರೆ ಗಗನತಳೋದ್ಗಾಮಿಯಾಯ್ತಿಂದ್ರಸೈನ್ಯಂ** ೩೩

**ಪದವಿಭಾಗ–ಅನ್ವಯ–ಅರ್ಥ:** ಮುನ್ನೆ + ಅಂತೆ ನಡೆ ನೋಡಲ್ ರೂಪು = ಮೊದಲು ಹಾಗೆಯೇ ಚೆನ್ನಾಗಿಯೇ ಆಕಾರವನ್ನು ನೋಡಲೂ, ಕೇಳಲ್ ನುಡಿ ಪುರದ ಜನಕ್ಕೆ + ಆಯ್ತು = ಧ್ವನಿ ಕೇಳಲೂ ಊರ ಜನಕ್ಕೆ ಸಾಧ್ಯವಾಯಿತು, ಮೇಗಣ್ಗೆ + ಅಡರ್ದಾಗಳ್ ಮೆಯ್ಯ ಕಾಣಲ್ ಕಳಕಳಂ + ಇನಿಸಂ ಕೇಳಲಾಯ್ತು = ಮೇಲಕ್ಕೆ ಅಡರಿದಾಗ ಅವರ ದೇಹಗಳನ್ನು ನೋಡಲೂ ಧ್ವನಿಯನ್ನು ಕೇಲಲೂ ಸ್ವಲ್ಪವೇ ಸಾಧ್ಯವಾಯಿತು, ಅಂತು ಮತ್ತಂ ನಡೆಗೊಂಡಾಗಳ್ = ಹಾಗೆಯೇ ಮತ್ತೂ ಮುಂದುವರಿದಾಗ, ತನುವ್ಯಕ್ತಿಯನಜೆಯಲ್ + ಅಣಂ ಬಾರದಾಯ್ತು = ವ್ಯಕ್ತಿದೇಹಗಳು ಸ್ವಲ್ಪವೂ ಕಾಣದಾದುವು, ಅತ್ತಣಂ ಕಾಣ್ಬಎಡೆಗಂ ಗೆಂಟಾದುದು = ಆನಂತರ ಕಾಣಲು ಕೂಡ ದೂರವಾಯಿತು, ಎಂಬಂತಿರೆ ಇಂದ್ರಸೈನ್ಯಂ ಗಗನತಳ + ಉದ್ಗಾಮಿಯಾಯ್ತು = ಎನ್ನುವ ರೀತಿಯಲ್ಲಿ ಇಂದ್ರನ ಸೈನ್ಯವು ಆಗಸತಳದಲ್ಲಿ ಪಯಣ ಬೆಳೆಸಿತು.

**ಗದ್ಯಾನುಸರಣ:** ಇಂದ್ರನ ಸೈನ್ಯವು ಆಗಸತಳದಲ್ಲಿ ಪಯಣ ಬೆಳೆಸಿತು: ಮೊದಲು ಅವರ ರೂಪನ್ನು ಚೆನ್ನಾಗಿ ನೋಡಲೂ ನುಡಿಗಳನ್ನು ಸ್ಪಷ್ಟವಾಗಿ ಕೇಳಲೂ ಊರ ಜನಕ್ಕೆ ಸಾಧ್ಯವಾಯಿತು, ಅವರು ಮೇಲಕ್ಕೆ ಅಡರಿದಾಗ ಅವರ ದೇಹಗಳನ್ನು ನೋಡಲೂ ಧ್ವನಿಯನ್ನು ಕೇಳಲೂ ಸ್ವಲ್ಪವೇ ಸಾಧ್ಯವಾಯಿತು, ಮತ್ತೂ ಮುಂದುವರಿದಾಗ ವ್ಯಕ್ತಿದೇಹಗಳು ಸ್ವಲ್ಪವೂ ಕಾಣದಾದುವು, ಆನಂತರ ಕಾಣಲು ಕೂಡ ಸಾಧ್ಯವಾಗದಷ್ಟು ದೂರವಾಯಿತು.

**ವ॥ ಅಂತು ಪೋಗಿ ಮಂದರಾಚಳಮನೆಯ್ದಿ ಪಾಂಡುಕವನದ ಪೂರ್ವೋತ್ತರಾಶಾಮುಖ ನಿವಾಸಿಯಾಗಿ ಅಷ್ಟಮೀಚಂದ್ರಾಕೃತಿಯೊಳಮ್ ಅಷ್ಟಮಂಗಳ ಪರಿವೇಷ್ಟನದೊಳಂ ನೆಱೆದು,**

**ಪದವಿಭಾಗ–ಅನ್ವಯ–ಅರ್ಥ:** ಅಂತು ಪೋಗಿ = ಹಾಗೆ ಹೋಗಿ, ಮಂದರಾ + ಆಚಳಮನ್ + ಎಯ್ದಿ = ಮಂದರಪರ್ವತವನ್ನು ತಲುಪಿ, ಪಾಂಡುಕವನದ ಪೂರ್ವೋತ್ತರಾಶಾಮುಖನಿವಾಸಿಯಾಗಿ = ಪಾಂಡುಕವನದ ಈಶಾನ್ಯಕ್ಕೆದುರಾಗಿ, ಅಷ್ಟಮೀಚಂದ್ರಾಕೃತಿಯೊಳಮ್ = ಶುಕ್ಲಪಕ್ಷದ ಎಂಟನೆಯ ದಿನ ಚಂದ್ರನಂತೆ,

ಅಷ್ಟಮಂಗಳ ಪರಿವೇಷ್ಟನದೊಳಂ ನೆಱೆದು = ಛತ್ರ ಧ್ವಜ ಕುಶ ಚಾಮರ ಸುಪ್ರತಿಷ್ಠಕ ಭೃಂಗಾರ ದರ್ಪಣ ಮತ್ತು ವ್ಯಜನ ಎಂಬ ಎಂಟು ಮಂಗಳವಸ್ತುಗಳಿಂದ ಕೂಡಿ,

**ಗದ್ಯಾನುಸರಣ:** ಹಾಗೆ ಹೋಗಿ ಮಂದರಪರ್ವತವನ್ನು ತಲುಪಿದ ಮೇಲೆ ಪಾಂಡುಕವನದ ಈಶಾನ್ಯಕ್ಕೆದುರಾಗಿ ಶುಕ್ಲಪಕ್ಷದ ಎಂಟನೆಯ ದಿನ ಚಂದ್ರನಂತೆ ಕಾಂತಿಯುಕ್ತವಾಗಿದ್ದ ಮಗುವನ್ನು ಎಂಟು ಮಂಗಳವಸ್ತುಗಳಿಂದ ಕೂಡಿಸಿದ (ದೇವೇಂದ್ರ).

**ಕ್ಷೀರೋದವಾರಿಧಾರಾ**
**ಪೂರದ ಚೆಲ್ವಿಂಗೆ ಸೆಣಸುವಂತಭಿನವ ನೀ**
**ಹಾರದ ಬೆಳ್ಪನೆ ಬಾರಿಸಿ**
**ಬಾರಿಸಿ ಪಾಂಡುಕಶಿಳಾತಳಂ ಸೊಗಯಿಸುಗುಂ** ೩೪

**ಪದವಿಭಾಗ-ಅನ್ವಯ-ಅರ್ಥ:** ಕ್ಷೀರೋದವಾರಿಧಾರಾಪೂರದ ಚೆಲ್ವಿಂಗೆ ಸೆಣಸುವಂತೆ = ಹಾಲ್ಗಡಲಿನ ನೀರಿನ ಸೊಗಸಿನ ಜೊತೆ ಸ್ಪರ್ಧಿಸುವ ಹಾಗೆ, ಪಾಂಡುಕಶಿಳಾತಳಂ = ಪಾಂಡುಕಶಿಲೆಯು, ಅಭಿನವನೀಹಾರದ ಬೆಳ್ಪನೆ ಬಾರಿಸಿ ಬಾರಿಸಿ ಸೊಗಯಿಸುಗುಂ = ಹೊಸತಾದ ಹಿಮವನ್ನೂ ಮೀರಿಸುವಂತೆ ಬೆಳ್ಳಗೆ ಶೋಭಿಸಿತು.

**ಗದ್ಯಾನುಸರಣ:** ಹಾಲ್ಗಡಲಿನ ನೀರಿನ ಸೊಗಸಿನ ಜೊತೆ ಸ್ಪರ್ಧಿಸುವ ಹಾಗೆ ಆ ಪಾಂಡುಕಶಿಲೆಯು ಹೊಸ ಹಿಮವನ್ನೂ ಮೀರಿಸುವಂತೆ ಬೆಳ್ಳಗೆ ಶೋಭಿಸಿತು.

**ವ॥ ಅಲ್ಲಿ ದೇವರಾಜಂ ಶ್ರೀಮಂಟಪಮಂ ವಿರಚಿಸಿ ಮೃಗರಾಜವಿಷ್ಟರದೊಳ್ ಬಾಳಕನಂ ಪೂರ್ವಾಭಿಮುಖ ನಿವಿಷ್ಟನಂ ಮಾಡುವುದುಂ,**

**ಪದವಿಭಾಗ-ಅನ್ವಯ-ಅರ್ಥ:** ಅಲ್ಲಿ ದೇವರಾಜಂ ಶ್ರೀಮಂಟಪಮಂ ವಿರಚಿಸಿ = ಅಲ್ಲಿ ದೇವೇಂದ್ರನು ಪವಿತ್ರ ಮಂಟಪವನ್ನು ನಿರ್ಮಿಸಿ, ಬಾಳಕನಂ ಮೃಗರಾಜವಿಷ್ಟರದೊಳ್ = ಮಗುವನ್ನು ಸಿಂಹಾಸನದಲ್ಲಿ, ಪೂರ್ವ + ಅಭಿಮುಖ ನಿವಿಷ್ಟನಂ ಮಾಡುವುದುಂ = ಪೂರ್ವಕ್ಕೆ ಎದುರಾಗಿ ಮಲಗಿಸಿದ.

**ಅನುಸರಣ:** ಹೀಗೆ ತೆಗೆದುಕೊಂಡು ಹೋದ ದೇವೇಂದ್ರನು ಪಾಂಡುಕವನದಲ್ಲಿ ಪವಿತ್ರ ಮಂಟಪವೊಂದನ್ನು ರಚಿಸಿ, ಅದರಲ್ಲಿನ ಸಿಂಹಾಸನದಲ್ಲಿ ಮಗುವನ್ನು ಪೂರ್ವಾಭಿಮುಖವಾಗಿ ಮಲಗಿಸಿದ.

**ತನು ಕಿಱಿದಾದೊಡಮುದ್ಯ**
**ತ್ತನುಪ್ರಭಾಪ್ರಸರಮೆಸೆದು ಪಸರಿಸಿ ಸಿಂಹಾ**
**ಸನಮಂ ಪುದಿದಿರೆ ದೇವಂ**
**ಕನಕ ಕನಚ್ಛಿಕರಿಶಿಖರಶೇಖರನಾದಂ** ೩೫

**ಪದವಿಭಾಗ-ಅನ್ವಯ-ಅರ್ಥ:** ತನು ಕಿಱಿದಾದೊಡಂ = ದೇಹ ಚಿಕ್ಕದಾದರೂ, ಉದ್ಯತ್ + ತನುಪ್ರಭಾಪ್ರಸರಂ + ಎಸೆದು ಪಸರಿಸಿ = ಅದರಿಂದ ಹೊಮ್ಮುವ ಕಾಂತಿರಾಶಿಯು ಉಜ್ವಲವಾಗಿ ಹರಡಿ, ಸಿಂಹಾಸನಮಂ ಪುದಿದಿರೆ = ಸಿಂಹಾಸನವನ್ನು

ಆವರಿಸಿರಲು. ದೇವಂ ಕನಕಕನತ್ + ಶಿಖರಿಶೇಖರನ್ + ಆದಂ = ಜಿನನು ಹೊಳೆಯುವ ಚಿನ್ನದ ಬೆಟ್ಟದ ತುದಿಯಲ್ಲಿ ಮೆರೆದ.

**ಗದ್ಯಾನುಸರಣ:** ದೇಹ ಚಿಕ್ಕದಾದರೂ ಅದರಿಂದ ಹೊಮ್ಮುವ ಕಾಂತಿರಾಶಿಯು ಉಜ್ವಲವಾಗಿ ಹರಡಿ ಸಿಂಹಾಸನವನ್ನು ಆವರಿಸಿತ್ತು; ಹೀಗೆ ಜಿನಶಿಶುವು ಹೊಳೆಯುವ ಚಿನ್ನದ ಬೆಟ್ಟದ ತುದಿಯಲ್ಲಿ ಮೆರೆಯಿತು.

**ವ। ಅಲ್ಲಿಂ ಬಟೆಯಂ ಪೂರ್ಣಕಳಶಂಗಳಂ ಕಳಶೋದ್ಧಾರ ಮಂತ್ರಪೂರ್ವಕಂ ಸೌಧರ್ಮೇಂದ್ರನುಂ ಈಶಾನೇಂದ್ರನುಮೆತ್ತಿಕೊಂಡು,**

**ಅರ್ಥ:** ಅಲ್ಲಿಂ ಬಟೆಯಂ = ಅನಂತರ, ಪೂರ್ಣಕಳಶಂಗಳಂ = ತುಂಬಿದ ಕಳಶಗಳನ್ನು, ಕಳಶೋದ್ಧಾರ ಮಂತ್ರಪೂರ್ವಕಂ = ಕಳಶವನ್ನು ಪವಿತ್ರಗೊಳಿಸುವ ಮಂತ್ರಗಳೊಡನೆ, ಸೌಧರ್ಮೇಂದ್ರನುಂ ಈಶಾನೇಂದ್ರನುಂ ಎತ್ತಿಕೊಂಡು = ಶೌಧರ್ಮೇಂದ್ರ ಮತ್ತು ಈಶಾನೇಂದ್ರರು ಎತ್ತಿಕೊಂಡರು.

**ಇತರೇಂದ್ರರ್ ಪರಿಚಾರಕಪ್ರಭೃತಿಯಿಂ ಮುಂದಾಡೆ ದೇವಾಂಗನಾ**
**ನ್ವಿತದೇವಾಧಿಪಕಾಂತೆ ಕನ್ನಡಿ ಸೊಡರ್ ಪೂಮಾಲೆ ಭೃಂಗಾರಮ**
**ಕ್ಷತಮೆಂಬುಜ್ಜ್ವಳಮಂಗಳೋಪಕರಣದ್ರವ್ಯಂಗಳಂ ನೀಡೆ ಸಂ**
**ತತಮೇನಂದು ಜಿನಾರ್ಭಕಂಗೆಸೆದುದೋ ಜನ್ಮಾಭಿಷೇಕೋತ್ಸವಂ** ೩೬

**ಪದವಿಭಾಗ-ಅನ್ವಯ-ಅರ್ಥ :** ಇತರೇಂದ್ರರ್ ಪರಿಚಾರಕಪ್ರಭೃತಿಯಿಂ ಮುಂದಾಡೆ = ಇತರ ಕಲ್ಪಗಳ ಒಡೆಯರು ಸೇವಕರಂತಿರಲು, ದೇವಾಂಗನಾ + ಅನ್ವಿತದೇವಾಧಿಪಕಾಂತೆ = ದೇವವನಿತೆಯರೊಡನಿದ್ದ ಶಚೀದೇವಿಯು, ಕನ್ನಡಿ ಸೊಡರ್ ಪೂಮಾಲೆ ಭೃಂಗಾರಂ + ಅಕ್ಷತಂ + ಎಂಬ + ಉಜ್ಜ್ವಳಮಂಗಳ + ಉಪಕರಣದ್ರವ್ಯಂಗಳಂ ನೀಡೆ = ಕನ್ನಡಿ ದೀಪ ಹೂಹಾರ ಚಿನ್ನದ ಗಿಂಡಿ ಅಕ್ಷತೆಗಳೆಂಬ ಉಜ್ವಲವಾದ ಮಂಗಳ ಉಪಕರಣಗಳನ್ನೂ ವಸ್ತುಗಳನ್ನೂ ನೀಡಲು, ಜಿನಾರ್ಭಕಂಗೆ ಜನ್ಮಾಭಿಷೇಕೋತ್ಸವಂ ಏನಂದು ಸಂತತಂ ಎಸೆದುದೋ = ಜಿನಶಿಶುವಿಗೆ ಜನ್ಮಾಭಿಷೇಕವು ಅದೇನು ವೈಭವದಿಂದ ಒಂದೇ ಸಮನೆ ನಡೆಯಿತು!

**ಗದ್ಯಾನುಸರಣ:** ಇತರ ಕಲ್ಪಗಳ ಒಡೆಯರು ಪರಿಚಾರಕರಂತೆ ಇದ್ದರು; ಆಗ ದೇವವನಿತೆಯರೊಡನಿದ್ದ ಶಚೀದೇವಿಯು ಕನ್ನಡಿ ದೀಪ ಹೂಹಾರ ಚಿನ್ನದ ಗಿಂಡಿ ಅಕ್ಷತೆಗಳೆಂಬ ಉಜ್ವಲವಾದ ಮಂಗಳ ಉಪಕರಣಗಳನ್ನೂ ವಸ್ತುಗಳನ್ನೂ ನೀಡಲು ಜಿನಶಿಶುವಿಗೆ ಜನ್ಮಾಭಿಷೇಕವು ವೈಭವದಿಂದ ನಡೆಯಿತು!

**ಜಳನಿಧಿ ತೊಱೆಗಳನೆನಿತುಮ**
**ನೊಳಕೊಳ್ವವೊಲಿನಿಸು ತಳರದಾಶ್ಚರ್ಯಮಹಾ**
**ಜಳನಿಧಿ ಪಯಃಪ್ಲವಂಗಳ**
**ನೊಳಕೊಂಡಂ ಸುರರ ಮಿಸಿಸುವವಸರದಾಗಳ್** ೩೭

**ಪದವಿಭಾಗ-ಅನ್ವಯ-ಅರ್ಥ:** ಜಳನಿಧಿ ಎನಿತುಮನ್ ತೊಱೆಗಳನ್ ಒಳಕೊಳ್ವವೊಲ್ = ಸಮುದ್ರವು ಎಷ್ಟು ನದಿಗಳನ್ನಾದರೂ ಒಳಗೊಳ್ಳುವ ಹಾಗೆ,

ಸುರರ ಮಿಸಿಸುವ + ಅವಸರದಾಗಳ್ = ದೇವತೆಗಳು ಮಜ್ಜನಗೈಸುವ ಸಂದರ್ಭದಲ್ಲಿ, ಆಶ್ಚರ್ಯಮಹಾಜಳನಿಧಿ = ಆಶ್ಚರ್ಯಸಾಗರವಾದ ಜಿನಶಿಶುವು. ಇನಿಸು ತಳರದೆ ಪಯಃಪ್ಲವಂಗಳನ್ + ಒಳಕೊಂಡಂ = ಸ್ವಲ್ಪವಾದರೂ ಗಲಿಬಿಲಿಗೊಳ್ಳದೆ ನೀರಿನ ಧಾರೆಗಳನ್ನೆಲ್ಲ ಒಳಗೊಂಡ.

**ಗದ್ಯಾನುಸರಣ:** ಸಮುದ್ರವು ಎಷ್ಟು ನದಿಗಳನ್ನಾದರೂ ಒಳಗೊಳ್ಳುವ ಹಾಗೆ. ದೇವತೆಗಳು ಮಜ್ಜನಗೈಸುವ ಸಂದರ್ಭದಲ್ಲಿ ಆಶ್ಚರ್ಯಸಾಗರವಾದ ಜಿನಶಿಶುವು ಸ್ವಲ್ಪವಾದರೂ ಗಲಿಬಿಲಿಗೊಳ್ಳದೆ ಸುರಿದ ನೀರಿನ ಧಾರೆಗಳನ್ನೆಲ್ಲ ಒಳಗೊಂಡ.

**ಮಜ್ಜನಪೀಠಂ ಸುರಗಿರಿ**
**ಮಜ್ಜನಜಳವಮೃತಜಳಧಿಜಳವಮರೇಂದ್ರಂ**
**ಮಜ್ಜನವಳ್ಳನುಮೆನೆ ಜಿನ**
**ಮಜ್ಜನಮಹಿಮೆಯ ಬೆಡಂಗನೇವಣ್ಣಿಪುದೋ** ೩೮

**ಪದವಿಭಾಗ-ಅನ್ವಯ-ಅರ್ಥ:** ಸುರಗಿರಿ ಮಜ್ಜನಪೀಠಂ = ಮಂದರಪರ್ವತವೇ ಸ್ನಾನದ ವೇದಿಕೆ. ಅಮೃತಜಳಧಿಜಳ ಮಜ್ಜನಜಳ = ಹಾಲ್ಗಡಲ ನೀರೇ ಸ್ನಾನಕ್ಕೆ ನೀರು. ಅಮರೇಂದ್ರಂ ಮಜ್ಜನವಳ್ಳನುಂ = ದೇವೇಂದ್ರನೇ ಸ್ನಾನ ಮಾಡಿಸುವವನು. ಎನೆ ಜಿನಮಜ್ಜನಮಹಿಮೆಯ ಬೆಡಂಗನ್ + ಏ + ಬಣ್ಣಿಪುದೋ = ಅಂದ ಮೇಲೆ ಜಿನಶಿಶುವಿನ ಅಭಿಷೇಕದ ಮಹಿಮೆಯ ಬೆಡಗನ್ನು ಏನೆಂದು ವರ್ಣಿಸುವುದು!

**ಗದ್ಯಾನುಸರಣ:** ಮಂದರಪರ್ವತವೇ ಸ್ನಾನದ ವೇದಿಕೆ, ಹಾಲ್ಗಡಲೇ ಅವನ ಸ್ನಾನದ ನೀರು, ದೇವೇಂದ್ರನೇ ಸ್ನಾನ ಮಾಡಿಸುವವನು - ಅಂದ ಮೇಲೆ ಜಿನಶಿಶುವಿನ ಅಭಿಷೇಕದ ಮಹಿಮೆಯ ಬೆಡಗನ್ನು ಏನೆಂದು ವರ್ಣಿಸುವುದು!

**ಜಳಗಂಧಾಕ್ಷತೆ ಪುಷ್ಪಾ**
**ವಳಿ ಚರು ದೀಪಪ್ರದೀಪಧೂಪಫಲಂಗಳ್**
**ಕುಳಿಶಾಯುಧನರ್ಚಿಸೆ ತೊಳ**
**ತೊಳತೊಳಗಿದುವೆಳಸಿ ಬಳಸಿ ಜಿನನಡಿದಳಿರೊಳ್** ೩೯

**ಪದವಿಭಾಗ-ಅನ್ವಯ-ಅರ್ಥ:** ಕುಳಿಶ + ಆಯುಧನ್ + ಅರ್ಚಿಸೆ = ವಜ್ರಾಯುಧನಾದ ದೇವೇಂದ್ರನು ಪೂಜಿಸಿದಾಗ, ಜಿನನಡಿದಳಿರೊಳ್ = ಜಿನಶಿಶುವಿನ ಚಿಗುರಿನಂಥ ಅಡಿಗಳಲ್ಲಿ, ಜಳಗಂಧ + ಅಕ್ಷತೆ ಪುಷ್ಪಾವಳಿ ಚರು ದೀಪಪ್ರದೀಪ ಧೂಪ ಫಲಂಗಳ್ = ಪರಿಮಳಯುಕ್ತ ನೀರು ಹೂಗಳ ರಾಶಿ ನೈವೇದ್ಯ ದೀಪಗಳ ಬೆಳಕು ಧೂಪ ಮತ್ತು ಹಣ್ಣುಗಳು. ಎಳಸಿ ಬಳಸಿ ತೊಳತೊಳತೊಳಗಿದುವು = ಸುತ್ತುವರಿದು ಹೊಳಪುಂಟುಮಾಡಿದವು.

**ಗದ್ಯಾನುಸರಣ:** ವಜ್ರಾಯುಧನಾದ ದೇವೇಂದ್ರನು ಜಿನಶಿಶುವಿನ ಚಿಗುರಿನಂಥ ಅಡಿಗಳನ್ನು ಪೂಜಿಸಿದಾಗ ಪರಿಮಳಯುಕ್ತ ನೀರು, ಹೂಗಳ ರಾಶಿ, ನೈವೇದ್ಯ, ದೀಪಗಳ ಬೆಳಕು, ಧೂಪ ಮತ್ತು ಹಣ್ಣುಗಳು ಸುತ್ತಲೂ ಹೊಳಪುಂಟು ಮಾಡಿದವು.

ಜಯ ಗುಣಮಣಿರತ್ನಾಕರ
ಜಯ ಭುವನತ್ರಯಲಲಾಮ ಜಯ ಮನಸಿಜದು
ರ್ಜಯ ಜಯ ವಿನೇಯಬಾಂಧವ
ಜಯ ಮಂದರಶಿಖರಿಶಿಖರರತ್ನೋತ್ತಂಸಾ ೪೦

**ಪದವಿಭಾಗ–ಅನ್ವಯ–ಅರ್ಥ:** ಗುಣಮಣಿರತ್ನಾಕರ ಜಯ = ಗುಣಗಳೆಂಬ ಮಣಿಗಲ ಸಮುದ್ರನೇ ನಿನಗೆ ಜಯ, ಭುವನತ್ರಯಲಲಾಮ ಜಯ = ಮೂರು ಲೋಕಗಳ ಶ್ರೇಷ್ಠನೇ ನಿನಗೆ ಜಯ, ಮನಸಿಜದುರ್ಜಯ ಜಯ = ಕಾಮನಿಂದ ಗೆಲ್ಲಲಾಗದವನೇ ನಿನಗೆ ಜಯ, ವಿನೇಯಬಾಂಧವ ಜಯ = ವಿನೀತ ಜನರ ಬಂಧುವೇ ನಿನಗೆ ಜಯ, ಮಂದರಶಿಖರಿಶಿಖರರತ್ನ + ಉತ್ತಂಸಾ ಜಯ = ಮಂದರ ಪರ್ವತದ ತಲೆವಣಿಯೇ ನಿನಗೆ ಜಯ !

**ಗದ್ಯಾನುಸರಣ:** 'ಗುಣಮಣಿಗಳ ಸಮುದ್ರನೇ ನಿನಗೆ ಜಯ, ಮೂರು ಲೋಕಗಳ ಶ್ರೇಷ್ಠನೇ ನಿನಗೆ ಜಯ, ಕಾಮನಿಂದ ಗೆಲ್ಲಲಾಗದವನೇ ನಿನಗೆ ಜಯ, ವಿನೀತ ಜನರ ಬಂಧುವೇ ನಿನಗೆ ಜಯ, ಮಂದರಪರ್ವತದ ತಲೆವಣಿಯೇ ನಿನಗೆ ಜಯ'

**ವ॥ ಎಂದು ಪರಿಸಮಾಪ್ತಿ ಸವನಾರ್ಚನಸ್ತವನ ಸಮಯಾನಂತರಂ ಇಂದ್ರಾಣಿ ಭಗವದಂಗಸಂಗತ ಜಳಕಣಂಗಳಂ ದೇವಾಂಗವಸ್ತ್ರಂಗಳೊಳೊತ್ತಿ ಕಳೆದು, ಸುಗಂಧದ್ರವ್ಯಂಗಳಂ ಪೂಸಿ, ತಿಳಕಮನಿಟ್ಟು, ಮಣಿಮಯಕಂಠಿಕೆಯಂ ಕಟ್ಟಿ, ಬಾಹುಯುಗಳಕ್ಕೆ ಕೇಯೂರ ಹಾರಾಂಗದ ಕಟಕಾಳಂಕಾರಂ ಮಾಡಿ, ಅಮರಸಮಿತಿವೆರಸು ಅಯೋಧ್ಯಾಪುರಕ್ಕಭಿಮುಖನಾಗಿ ಗಗನತಳದಿಂದವತರಿಸಿ ರಾಜಭವನಮಂ ಪೊಕ್ಕು,**

**ಪದವಿಭಾಗ–ಅನ್ವಯ–ಅರ್ಥ:** ಎಂದು + ಇಂತು ಪರಿಸಮಾಪ್ತಿಸವನ + ಅರ್ಚನ ಸ್ತವನಸಮಯ ಅನಂತರಂ = ಹೀಗೆಂದು ಅಭಿಷೇಕದ ಕೊನೆಯಲ್ಲಿ ಪೂಜೆ ಸ್ತುತಿಗಳನ್ನು ಪೂರೈಸಿ, ಭಗವತ್ + ಅಂಗಸಂಗತಜಳಕಣಂಗಳಂ = ಜಿನನ ದೇಹದ ಮೇಲೆ ಅಂಟಿದ್ದ ನೀರಿನ ಹನಿಗಳನ್ನು, ಇಂದ್ರಾಣಿ ದೇವಾಂಗವಸ್ತ್ರಂಗಳೊಳ್ + ಒತ್ತಿ ಕಳೆದು = ಶಚೀದೇವಿಯು ರೇಷ್ಮೆಯ ಬಟ್ಟೆಯಿಂದ ಒರೆಸಿ ತೆಗೆದು, ಸುಗಂಧದ್ರವ್ಯಂಗಳಂ ಪೂಸಿ = ಪರಿಮಳದ್ರವ್ಯಗಳನ್ನು ಲೇಪಿಸಿ, ತಿಳಕಮನಿಟ್ಟು = ತಿಲಕವನ್ನಿಟ್ಟು, ಮಣಿಮಯಕಂಠಿಕೆಯಂ ಕಟ್ಟಿ = ಕೊರಳ ಆಭರಣವನ್ನು ಕಟ್ಟಿ, ಬಾಹುಯುಗಳಕ್ಕೆ = ತೋಳುಗಳಿಗೆ, ಕೇಯೂರಹಾರ + ಅಂಗದ ಕಟಕ + ಅಳಂಕಾರಂ ಮಾಡಿ = ಕಡಗ ಹಾರ ತೋಳಬಂದಿಗಳಿಂದ ಅಲಂಕರಿಸಿ, ಅಮರಸಮಿತಿವೆರಸು = ದೇವತೆಗಳ ಸಮೂಹದೊಡನೆ, ಅಯೋಧ್ಯಾಪುರಕ್ಕೆ + ಅಭಿಮುಖನಾಗಿ = ಅಯೋರ್ಧಯಾಪುರಕ್ಕೆ ದಿಕ್ಕಿನಲ್ಲಿ, (ಹೋಗಿ) ಗಗನತಳದಿಂದೆ + ಅವತರಿಸಿ = ಆಗಸದಿಂದ ಕೆಳಗಿಳಿದು, ರಾಜಭವನಮಂ ಪೊಕ್ಕು = ಅರಮನೆಯನ್ನು ಸೇರಿ,

**ಗದ್ಯಾನುಸರಣ:** ಹೀಗೆಂದು ಅಭಿಷೇಕದ ಕೊನೆಯಲ್ಲಿ ದೇವೇಂದ್ರನು ಪೂಜೆ ಸ್ತುತಿಗಳನ್ನು ಪೂರೈಸಿದ; ಅನಂತರ ಶಚೀದೇವಿಯು ಜಿನನ ದೇಹದ ಮೇಲೆ

ಅಂಟಿದ್ದ ನೀರಿನ ಹನಿಗಳನ್ನು ರೇಷ್ಮೆಯ ಬಟ್ಟೆಯಿಂದ ಒರೆಸಿದಳು; ಮಗುವಿಗೆ ದಿವ್ಯಪರಿಮಳವನ್ನು ಲೇಪಿಸಿದಳು; ತಿಲಕವನ್ನಿಟ್ಟಳು. ತೋಳುಗಳಿಗೆ ಕಡಗ ಹಾರ ತೋಳಬಂದಿಗಳನ್ನು ತೊಡಿಸಿ ಅಲಂಕರಿಸಿದಳು; ಆ ಬಳಿಕ ದೇವೇಂದ್ರನು ದೇವತೆಗಳ ಗುಂಪಿನೊಡನೆ ಕೂಡಿ ಅಯೋಧ್ಯಾನಗರಿಯ ಕಡೆಗೆ ಹಾರಿ, ಅಲ್ಲಿ ಕೆಳಗಿಳಿದು ಅರಮನೆಯನ್ನು ಸೇರಿದ.

**ಕಳಧೌತೋಜ್ಜ್ವಳಕೂಟಕೋಟಿಘಟಿತಶ್ರೀಗೇಹದಿಂ ಮುಂದೆ ಮಂ**
**ಗಳಕಾರ್ಯೋಚಿತಮಾಗೆ ಮುನ್ನೆ ಸುರಾನೀಕಂ ಜನಂಗಳ್ ಮನಂ**
**ಗೊಳೆ ಮಾಡಿಟ್ಟ ವಿಚಿತ್ರಮಂಟಪದ ಸಿಂಹಾಸಂದಿಯೊಳ್ ಬಾಲನಂ**
**ಕುಳಿಶಾಸ್ತ್ರಂ ಪಿರಿದುಂ ವಿಭೂತಿವೆರಸಿಟ್ಟೇಂ ಸಂತಸಂಬಟ್ಟನೋ** ೪೧

**ಪದವಿಭಾಗ–ಅನ್ವಯ–ಅರ್ಥ:** ಕಳಧೌತ + ಉಜ್ಜ್ವಳಕೂಟಕೋಟಿಘಟಿತ = ಅಸಂಖ್ಯ ಚಿನ್ನದ ಗೋಪುರಗಳಿಂದ ಕೂಡಿದ. ಶ್ರೀಗೇಹದಿಂ = ಶುಭಕರವಾದ ಮನೆಯಲ್ಲಿ, ಮುಂದೆ ಮಂಗಳಕಾರ್ಯ + ಉಚಿತಂ + ಆ.ಗೆ = ಮುಂದೆ ಶುಭ ಆಚರಣೆಯು ತಕ್ಕನಾದ ರೀತಿಯಲ್ಲಿ ನಡೆಯಲೆಂದು, ಮುನ್ನೆ ಸುರ + ಅನೀಕಂ = ಮುಂಚೆಯೇ ದೇವತೆಗಳ ಗುಂಪು, ಜನಂಗಳ್ ಮನಂಗೊಳೆ ಮಾಡಿಟ್ಟ = ಜನಗಳ ಆಕರ್ಷಣೆಗಾಗಿ ಸಿದ್ಧಪಡಿಸಿದ್ದ, ವಿಚಿತ್ರಮಂಟಪದ ಸಿಂಹ + ಆಸಂದಿಯೊಳ್ = ಚೆಲುವಾದ ಮಂಟಪದಲ್ಲಿನ ಸಿಂಹಪೀಠದಲ್ಲಿ, ಪಿರಿದುಂ ವಿಭೂತಿವೆರಸು ಬಾಲನಂ ಇಟ್ಟು = ಮಹಾ ಸಡಗರದಿಂದ ಜಿನಶಿಶುವನ್ನು ಮಲಗಿಸಿ, ಕುಳಿಶ + ಅಸ್ತ್ರಂ ಏಂ ಸಂತಸಂ + ಪಟ್ಟನೋ = ದೇವೇಂದ್ರನು ಅದೇನು ಸಂತಸಪಟ್ಟ!

**ಗದ್ಯಾನುಸರಣ:** ಅಸಂಖ್ಯ ಚಿನ್ನದ ಗೋಪುರಗಳಿಂದ ಕೂಡಿದ ಆ ಶುಭಕರವಾದ ಅರಮನೆಯಲ್ಲಿ ಚೆಲುವಾದ ಮಂಟಪದಲ್ಲಿನ ಸಿಂಹಪೀಠದಲ್ಲಿ ಮಹಾ ಸಡಗರದಿಂದ ಜಿನಶಿಶುವನ್ನು ಮಲಗಿಸಿ ದೇವೇಂದ್ರನು ಅದೆಷ್ಟು ಸಂತಸಪಟ್ಟ! ನಡೆಯಲಿರುವ ಶುಭ ಆಚರಣೆಯು ತಕ್ಕನಾದ ರೀತಿಯಲ್ಲಿ ಜರುಗಲೆಂದು ಮುಂಚೆಯೇ ದೇವತೆಗಳ ಗುಂಪು ಆಕರ್ಷಕವಾಗಿ ಅದನ್ನು ಅಲಂಕರಿಸಿ ಸಿದ್ಧಪಡಿಸಿದ್ದರು.

**ವ॥ ಆಗಳ್ ಸುತಮುಖನಿರೀಕ್ಷಣ ಜನಿತಪುಳಕನಪ್ಪ ನಾಭಿಮಹೀಜಜನ್ ಇಂದ್ರಾಣೀವದನ ಚಂದ್ರಿಕಾವಿಘಟಿತ ನಿಕೃತನಿದ್ರಾಮುದ್ರಿತ ನಯನನೀಲೋತ್ಪಳೆಯಪ್ಪ ಜಗದ್ಗುರುಜನನಿ[ವೆರಸು] ಬಂದು ನಿಜತನೂಜವದನಮನಟ್ಟುರ್ತು ನೋಡಿ[ದನ್]. ಆಗಳ್ ಸುರೇಶ್ವರಂ ಜನ್ಮಾಭಿಷೇಕ ವ್ಯತಿಕರಮನವರ್ಗೆ ಮಹೋತ್ಸಾಹಕರಮಾಗೆ ಸವಿಸ್ತರಮಱೆಪಿ ಭಗವಜ್ಜನ್ಮಾಭಿಷೇಕಸಂಬಂಧಿಯಾಗೆ ತನ್ನ ಪೊಸತೆ ಸಮೆದ ಸಮವಕಾರರೂಪಕಮುಂ ದಶಾವತಾರರೂಪಗರ್ಭಸಂದರ್ಭಂಗಳಪ್ಪ ಶೇಷಾಶೇಷರೂಪಕಂಗಳುಮಂ ಸುರಾಸುರಸಭೆಗಂ ನಾಭಿರಾಜಾದಿಮನುಜಸಭೆಗಂ ಮೆಚ್ಚುಯಲೆಂದು ನಾಂದೀವಿಧಿಯಂ ನಿರ್ವರ್ತಿಸಿ ರಂಗಂಬೊಕ್ಕು, ಲೋಕಾಕಾರಮನಭಿನಯಿಪ ಆಕಾರಂ ನೆಗಳ್ಚಿ ನಿಂದನ್. ಆಗಳ್ ಪುಷ್ಪಾಂಜಳಿಯಂ ಸೂಸಿ ನಾಕಲೋಕ ವಾದ್ಯಂಗಳೊಳ್ ಕಿನ್ನರೀಜನ ಮಧುರ ಗೀತಾನುಗತಂಗಳನ್ ಅನುಕ್ರಮದೊಳೆ ನೆಗಳ್ಚಿ**

**ಪದವಿಭಾಗ–ಅನ್ವಯ–ಅರ್ಥ:** ಆಗಳ್ ಸುತಮುಖನಿರೀಕ್ಷಣಪುಳಕನಪ್ಪ = ಆಗ ಮುಗನ ಮುಖವನ್ನು ರೋಮಾಂಚನದಿಂದ ಕೂಡಿದ ನಾಭಿರಾಜನೂ, ಇಂದ್ರಾಣೀವದನ ಚಂದ್ರಿಕಾವಿಘಟಿತ = ಶಚೀದೇವಿಯ ಮುಖದ ಬೆಳುದಿಂಗಳಿಂದ ಅರಳಿದ, ನಿಕೃತನಿದ್ರಾಮುದ್ರಿತನಯನನೀಳೋತ್ಪಳೆಯಪ್ಪ = ಮಾಯಾನಿದ್ರೆಯಿಂದ ಮುಚ್ಚಿಕೊಂಡ ಕಣ್ಣೆಂಬ ನೈದಿಲೆಗಳ, ಜಗದ್ಗುರುಜನನಿವೆರಸು = ಜಗದೊಡೆಯನ ತಾಯಿ ಮರುದೇವಿಯೊಡನೆ, ಬಂದು ನಿಜತನೂಜವದನಮನ್ + ಅಕ್ಕರ್ತು ನೋಡಿ = ಬಂದು ತಮ್ಮ ಮಗನ ಮೊಗವನ್ನು ಅಕ್ಕರೆಯಿಂದ ನೋಡಿದರು. ಆಗಳ್ ಸುರೇಶ್ವರಂ = ಆಗ ದೇವೇಂದ್ರನು. ಜನ್ಮಾಭಿಷೇಕ ವ್ಯತಿಕರಮನ್ + ಅವರ್ಗೆ ಮಹೋತ್ಸಾಹಕರವಂ + ಆಗೆ ಸವಿಸ್ತರಂ + ಅಜೆಪಿ = ಜನ್ಮಾಭಿಷೇಕದ ವಾರ್ತೆಯನ್ನು ಉತ್ಸಾಹದಿಂದ ವಿಸ್ತಾರವಾಗಿ ಬಣ್ಣಿಸಿ ಹೇಳಿ, ಭಗವತ್ + ಜನ್ಮಾಭಿಷೇಕಸಂಬಂಧಿಯಾಗೆ = ಭಗವಂತನ ಹುಟ್ಟುಸಂಭ್ರಮಕ್ಕೆ ಸಂಬಂಧಿಸಿದಂತೆ, ತನ್ನ ಪೊಸತೆ ಸಮೆದ ಸಮವಕಾರರೂಪಕಮಂ = ತಾನು ಹೊಸತಾಗಿ ರಚಿಸಿದ ಸಮವಕಾರ ಎಂಬ ರೂಪಕಭೇದವನ್ನು, ದಶಾವತಾರರೂಪಗರ್ಭಸಂದರ್ಭಂಗಳಪ್ಪ = ಹತ್ತು ಅವತಾರಗಳ ಸ್ವರೂಪವನ್ನೊಳಗೊಂಡ ಸಂದರ್ಭಗಳ, ಶೇಷಾಶೇಷರೂಪಕಂ ಗಳುಮಂ = ಇರುವ ಮತ್ತು ಹೊಸತಾದ ರೂಪಕಗಳನ್ನು, ಸುರಾಸುರಸಭೆಗಂ ನಾಭಿರಾಜಾದಿಮನುಜಭೆಗಂ ಮೆಱೆಯಲೆಂದು = ಸುರಾಸುರರ ಸಮುದಾಯದ ಹಾಗೂ ನಾಭಿರಾಜನೇ ಮೊದಲಾದ ಮಾನವಸಮುದಾಯದ ಮುಂದೆ ತೋರಿಸುವ ಉದ್ದೇಶದಿಂದ, ನಾಂದೀವಿಧಿಯನ್ನು ಪೂರೈಸಿ ರಂಗಮಂದಿರವನ್ನು ಹೊಕ್ಕು, (ಜೈನ ಪುರಾಣಕಲ್ಪನೆಯಂತೆ) ಲೋಕಾಕಾರಮನ್ + ಅಭಿನಯಿಪ ಆಕಾರಂ ನೆಗೞೆ ನಿಂದನ್ = ಲೋಕದ ಆಕಾರವನ್ನು ಪ್ರತೀಕಿಸುವ ಭಂಗಿಯಲ್ಲಿ ನಿಂತ. ಆಗಳ್ ಪುಷ್ಪ + ಅಂಜಳಿಯಂ ಸೂಸಿ = ಆಗ ಬೊಗಸೆಯಲ್ಲಿನ ಹೂಗಳನ್ನು ಎರಚಿ, ನಾಕಲೋಕ ವಾದ್ಯಂಗಳೊಳ್ = ದೇವಲೋಕದ ವಾದ್ಯಗಳ ಧ್ವನಿಗಳೊಡನೆ, ಕಿನ್ನರೀಜನ = ಕಿನ್ನರೀಜನರು, ಮಧುರ ಗೀತಾನುಗತಂಗಳನ್ ಅನುಕ್ರಮದೊಳೆ ನೆಗೞೆ = ಇಂಪಾದ ಹಾಡುಗಳನ್ನು ಒಂದಾದ ಮೇಲೊಂದರೋತೆ ಹಾಡಲು,

**ಗದ್ಯಾನುಸರಣ:** ಆಗ ಮಗನ ಮುಖವನ್ನು ನೋಡುವ ಸಂಭ್ರಮದ ರೋಮಾಂಚನದಿಂದ ಕೂಡಿದ ನಾಭಿರಾಜನು, ಮಾಯಾನಿದ್ರೆಯಿಂದ ಮುಚ್ಚಿಕೊಂಡಿದ್ದ ಕಣ್ಣೆಂಬ ನೈದಿಲೆಗಳು ಶಚೀದೇವಿಯ ಮುಖದ ಬೆಳುದಿಂಗಳಿಂದ ಅರಳಿದ ಜಗದೊಡೆಯನ ತಾಯಿ ಮರುದೇವಿಯೂ ಬಂದು ತಮ್ಮ ಮಗನ ಮೊಗವನ್ನು ಅಕ್ಕರೆಯಿಂದ ನೋಡಿದರು. ಆಗ ದೇವೇಂದ್ರನು ಜನ್ಮಾಭಿಷೇಕದ ವಾರ್ತೆಯನ್ನು ಉತ್ಸಾಹದಿಂದ ವಿಸ್ತಾರವಾಗಿ ಬಣ್ಣಿಸಿ ಹೇಳಿ, ಭಗವಂತನ ಹುಟ್ಟು ಸಂಭ್ರಮಕ್ಕೆ ಸಂಬಂಧಿಸಿದಂತೆ ಸಮವಕಾರ ಎಂಬ ರೂಪಕಭೇದವನ್ನು ತಾನು ಹೊಸತಾಗಿ ರಚಿಸಿಕೊಂಡ; ಭಗವಂತನ ಹತ್ತು ಅವತಾರಗಳ ಸ್ವರೂಪವನ್ನೊಳಗೊಂಡ ಸಂದರ್ಭಗಳನ್ನು ಇರುವ ಮತ್ತು ಹೊಸತಾದ ರೂಪಕಗಳನ್ನು ಸುರಾಸುರರ

ಸಮುದಾಯದ ಹಾಗೂ ನಾಭಿರಾಜನೇ ಮೊದಲಾದ ಮಾನವಸಮುದಾಯದ ಮುಂದೆ ತೋರಿಸುವ ಉದ್ದೇಶ ಅವನದಾಗಿತ್ತು; ನಾಂದೀವಿಧಿಯನ್ನು ಪೂರೈಸಿ ಇಂದ್ರನು ರಂಗಮಂದಿರವನ್ನು ಹೊಕ್ಕ. ಹಾಗೆ ಹೊಕ್ಕು (ಜೈನ ಪುರಾಣಕಲ್ಪನೆಯಂತೆ) ಲೋಕದ ಆಕಾರವನ್ನು ಪ್ರತೀಕಿಸುವ ಭಂಗಿಯಲ್ಲಿ ನಿಂತ. ಆಗ ಬೊಗಸೆಯಲ್ಲಿನ ಹೂಗಳನ್ನು ಎರಚಿ, ದೇವಲೋಕದ ವಾದ್ಯಗಳ ಧ್ವನಿಗಳೊಡನೆ, ಕಿನ್ನರೀಜನರು, ಇಂಪಾದ ಹಾಡುಗಳನ್ನು ಒಂದಾದ ಮೇಲೊಂದರೋತೆ ಹಾಡಲು ತೊಡಗಿದರು.

[**ವಿಶೇಷ ವಿಚಾರ:** 'ನಿಕೃತನಿದ್ರಾ' ಬದಲು ಎಲ್. ಬಸವರಾಜು ಅವರು ಸ್ವೀಕರಿಸಿರುವ ಪಾಠ 'ವಿಕೃತನಿದ್ರಾ']

**ರಸಭಾವಾಭಿನಯಂಗಳಂ ಭುಜಲತಾಭ್ರೂಚಾಪನೇತ್ರೋತ್ಪಲ**
**ಪ್ರಸರಂಗಳ್ ಪಸರಂಗೆಯ್ಯುತ್ತಿರೆ ಲಸನ್ನೇತ್ರಂಗಳಂ ಕೂಡೆ ಬಂ**
**ಚಿಸುತುಂ ಮೆಟ್ಟುವ ಮೆಟ್ಟಿನೊಳ್ಪು ಜನತಾನೇತ್ರಂಗಳಂ ನಾಡೆ ಚೆ**
**ಲ್ವೆಸೆದತ್ತಿಂದ್ರನ ನೀಳ್ದ ತೋಳ್ದುಜುಗಲೊಳ್ ದೇವಾಂಗನಾನರ್ತನಂ** ೩೨

**ಪದವಿಭಾಗ-ಅನ್ವಯ-ಅರ್ಥ:** ಇಂದ್ರನ ನೀಳ್ದ ತೋಳ್ದುಜುಗಲೊಳ್ ದೇವಾಂಗನಾನರ್ತನಂ = ಚಾಚಿದ ದೇವೇಂದ್ರನ ತೋಳ ಗೊಂಚಲುಗಳಲ್ಲಿ, ರಸಭಾವಾಭಿನಯಂಗಳಂ = ರಸ ಭಾವಗಳ ಅಭಿವ್ಯಕ್ತಿಯನ್ನು, ಭುಜಲತಾ ಭ್ರೂಚಾಪ ನೇತ್ರ + ಉತ್ಪಲ ಪ್ರಸರಂಗಳ್ ಪಸರಂಗೆಯ್ಯುತ್ತಿರೆ = ತೋಳಬಳ್ಳಿಗಳ ಹುಬ್ಬುಬಿಲ್ಲುಗಳ ಕಣ್ಣೈದಿಲೆಗಳ ಸಮೂಹವು ಸೂಸುತ್ತಿರಲು, ಲಸತ್ + ನೇತ್ರಂಗಳಂ ಕೂಡೆ ಬಂಚಿಸುತುಂ ಮೆಟ್ಟುವ ಮೆಟ್ಟಿನ ಒಳ್ಪು = ಚಂಚಲ ಕಣ್ಣುಗಳನ್ನು ಮೀರಿಸುವಂತೆ ಇಡುವ ಪದಗತಿಗಳ ಚೆಲುವು, ಜನತಾನೇತ್ರಂಗಳಂ ನಾಡೆ ಚೆಲ್ವೆಸೆದತ್ತು = ನೋಡುಗರ ಕಣ್ಣುಗಳಿಗೆ ಚೆಲುವಾಗಿ ಕಾಣಿಸುತ್ತಿತ್ತು.

**ಗದ್ಯಾನುಸರಣ:** ಚಾಚಿದ ದೇವೇಂದ್ರನ ತೋಳ ಗೊಂಚಲುಗಳಲ್ಲಿ ದೇವಾಂಗನೆಯರ ಕುಣಿತದಲ್ಲಿ ರಸ ಭಾವಗಳ ಅಭಿವ್ಯಕ್ತಿಯು ಅವರ ತೋಳಬಳ್ಳಿಗಳ ಹುಬ್ಬುಬಿಲ್ಲುಗಳ ಕಣ್ಣೈದಿಲೆಗಳ ಮೂಲಕ ಸೂಸುತ್ತಿತ್ತು; ಚಂಚಲ ಕಣ್ಣುಗಳನ್ನು ಮೀರಿಸುವಂತೆ ಇಡುವ ಅವರ ಪದಗತಿಗಳ ಚೆಲುವು ನೋಡುಗರ ಕಣ್ಣುಗಳಿಗೆ ಚೆಲುವಾಗಿ ಕಾಣಿಸುತ್ತಿತ್ತು.

**ಯುವಸಂಘಾತಮದೊಂದು ತೋಳ್ದುಜುಗಳೊಳ್ ಮತ್ತೊಂದು ತೋಳೋಳಿಯೊಳ್**
**ಯುವತೀವ್ರಾತಮನೇಕಭೇದರಸಭಾವಂಗಳ್ ಪೊದಳ್ದುಣ್ಮೆ ಪೊ**
**ಣ್ಮುವಿನಂ ನರ್ತಿಸೆ ಸೂತ್ರಧಾರವಿಧಿಯಿಂ ಸುತ್ರಾಮನಂದಿಂತು ತಾಂ**
**ಡವಲಾಸ್ಯಂಗಳ ಚೆಲ್ವನೊರ್ಮೆಯೆ ತದೀಯಾಸ್ಥಾನದೊಳ್ ತೋಜಿದಂ** ೩೩

**ಪದವಿಭಾಗ-ಅನ್ವಯ-ಅರ್ಥ :** ಅದೊಂದು ತೋಳ್ದುಜುಗಳೊಳ್ ಯುವಸಂಘಾತಂ = ಒಂದು ಕಡೆಯ ಬಾಹುಗಳ ಸಮೂಹದಲ್ಲಿ ಯುವಕರ ಗುಂಪು. ಮತ್ತೊಂದು ತೋಳ + ಓಳಿಯೊಳ್ ಯುವತೀವ್ರಾತಂ = ಇನ್ನೊಂದು ಕಡೆಯ ತೋಳಸಾಲಿನಲ್ಲಿ ಯುವತಿಯರ ಗುಂಪು. ಅನೇಕಭೇದರಸಭಾವಂಗಳ್

ಪೊದಳ್ದುಣ್ಮಿ ಪೊಣ್ಮುವಿನಂ ನರ್ತಿಸೆ = ನಾನಾ ಬಗೆಯ ರಸಭಾವಗಳು ಹೊರಹೊಮ್ಮುವಂತೆ ಕುಣಿಯಲು, ಅಂದಿಂತು ತಾಂಡವಲಾಸ್ಯಂಗಳ ಚೆಲ್ವನ್ ಸೂತ್ರಧಾರವಿಧಿಯಿಂ = ಈ ರೀತಿ ತಾಂಡವನೃತ್ಯದ ಸೊಬಗನ್ನು ಸೂತ್ರಧಾರನ ರೀತಿಯಲ್ಲಿ, ತದೀಯ + ಆಸ್ಥಾನದೊಳ್ ಸುತ್ರಾಮನ್ ಒರ್ಮೆಯೆ ತೋಱಿದಂ = ತನ್ನ ಆಸ್ಥಾನದಲ್ಲಿ ದೇವೇಂದ್ರನು ಒಮ್ಮೆಗೇ ತೋರಿಸಿದ.

**ಗದ್ಯಾನುಸರಣ:** ಒಂದು ಕಡೆಯ ಬಾಹುಗಳ ಸಮೂಹದಲ್ಲಿ ಯುವಕರ ಗುಂಪು, ಇನ್ನೊಂದು ಕಡೆಯ ತೋಳಸಾಲಿನಲ್ಲಿ ಯುವತಿಯರ ಗುಂಪು ನಾನಾ ಬಗೆಯ ರಸಭಾವಗಳು ಹೊರಹೊಮ್ಮುವಂತೆ ಕುಣಿಯುತ್ತಿದ್ದವು; ಈ ರೀತಿ ಇಂದ್ರನು ತನ್ನ ಆಸ್ಥಾನದಲ್ಲಿ ತಾಂಡವನೃತ್ಯದ ಸೊಬಗನ್ನು ಒಮ್ಮೆಗೇ ನಟನಾಗಿಯೂ ನಿರ್ದೇಶಕನಾಗಿಯೂ ತೋರಿಸಿದ.

**ವ॥ ಅಂತು ಪುರಂದರನಾನಂದನೃತ್ತಾವಸಾನದೊಳೀ ಪರಮೇಶ್ವರಂ ಧರ್ಮಾಮೃತವರ್ಷದಿಂ ಭವ್ಯಸಸ್ಯಸಮೃದ್ಧಿಯಂ ಮಾಡುವುದಱಿಂ ವೃಷಮೆಂಬುದು ಧರ್ಮಮದಱಿಂದೊಪ್ಪುವುದಱಿಂದಂ ಸ್ವರ್ಗಾವತರಣಸಮಯದೊಳ್ ನಿಜಜನನೀವದನವನಜಮಂ ಸ್ವಪ್ನದೊಳ್ ಧವಳವೃಷಭಾಕಾರದಿಂ ಪೊಕ್ಕುದಱಿಂದಂ ವೃಷಭಸ್ವಾಮಿಯೆಂದು ಪೆಸರನಿಟ್ಟು ಮಜ್ಜನಮಂಡನಕ್ರಿಯೆಗಳ್ಗೆ ದೇವಿಯರನೆ ದಾದಿಯರ್ಮಾಡಿ ಸಮವಯಾನುರೂಪವೇಷದ ಸುರಕುಮಾರಕರನೊಡನಾಡಿಗಳ್ಮಾಡಿ ದೇವಸಮಾಜಂ ಬೆರಸು ಅಮರೇಂದ್ರಂ ಪೋದನಾಗಳ್**

**ಪದವಿಭಾಗ–ಅನ್ವಯ–ಅರ್ಥ:** ಅಂತು ಪುರಂದರನ್ + ಆನಂದನೃತ್ಯ + ಅವಸಾನದೊಳ್ = ಹೀಗೆ ಪುರಂದರನು ತನ್ನ ನರ್ತನ ಮುಗಿದ ಬಳಿಕ, ಈ ಪರಮೇಶ್ವರಂ = ಈ ಜಿನೇಶ್ವರನು ಧರ್ಮ + ಅಮೃತವರ್ಷದಿಂ ಭವ್ಯಸಸ್ಯಸಮೃದ್ಧಿಯಂ ಮಾಡುವುದಱಿಂ = ಧರ್ಮವೆಂಬ ಅಮೃತದ ಮಳೆಗರೆದು ಭವ್ಯರೆಂಬ ಸಸಿಗಳನ್ನು ಬೆಳಸುವುದರಿಂದಲೂ, ವೃಷಂ + ಎಂಬುದು ಧರ್ಮಂ + ಅದಱಿಂದೆ + ಒಪ್ಪುವುದಱಿಂದಂ = ವೃಷವೆಂದರೆ ಧರ್ಮ ಮತ್ತು ಅದರಿಂದ ಕೂಡಿದವನಾದುದರಿಂದಲೂ, ಸ್ವರ್ಗ + ಅವತರಣಸಮಯದೊಳ್ = ಸ್ವರ್ಗದಿಂದ ಭೂಮಿಗಿಳಿಯುವಾಗ, ನಿಜಜನನೀವದನವನಜಮಂ = ತನ್ನ ತಾಯಿಯ ಮುಖವೆಂಬ ಸರೋವರವನ್ನು, ಸ್ವಪ್ನದೊಳ್ ಧವಳವೃಷಭ + ಆಕಾರದಿಂ ಪೊಕ್ಕುದಱಿಂದಂ = ಕನಸಿನಲ್ಲಿ ಬಿಳಿಯ ಎತ್ತಿನ ರೂಪದಲ್ಲಿ ಬಂದು ಸೇರಿದುದರಿಂದಲೂ, ವೃಷಭಸ್ವಾಮಿಯೆಂದು ಪೆಸರನಿಟ್ಟು = ಮಗುವಿಗೆ ವೃಷಭಸ್ವಾಮಿ ಎಂದು ನಾಮಕರಣ ಮಾಡಿ, ಮಜ್ಜನಮಂಡನಕ್ರಿಯೆಗಳ್ಗೆ ದೇವಿಯರನೆ ದಾದಿಯರ್ಮಾಡಿ = ಮಗುವಿನ ಸ್ನಾನ ಅಲಂಕಾರಗಳನ್ನು ಮಾಡಲು ದೇವತಾಸ್ತ್ರೀಯರನ್ನೇ ದಾದಿಯರನ್ನಾಗಿ ನೇಮಿಸಿ, ಸಮವಯ + ಅನುರೂಪವೇಷದ ಸುರಕುಮಾರಕರನ್ + ಒಡನಾಡಿಗಳ್ + ಮಾಡಿ = ಸಮವಯಸ್ಕರೂ ಅವನಂತೆಯೇ ಇರುವವರೂ ಆದ ಮಕ್ಕಳನ್ನು ಜೊತೆಗಾರರನ್ನಾಗಿಸಿ, ದೇವಸಮಾಜಂ ಬೆರಸು = ದೇವತೆಗಳ ಸಮೂಹದೊಡನೆ, ಅಮರೇಂದ್ರಂ ಆಗಳ್ ಪೋದನ್ = ದೇವೇಂದ್ರನು ಹೋದ

**ಗದ್ಯಾನುಸರಣ:** ಹೀಗೆ ದೇವೇಂದ್ರನು ತನ್ನ ನರ್ತನ ಮುಗಿದ ಬಳಿಕ, ಈ ಜಿನೇಶ್ವರನು ಧರ್ಮವೆಂಬ ಅಮೃತದ ಮಳೆಗರೆದು ಭವ್ಯರೆಂಬ ಸಸಿಗಳನ್ನು ಬೆಳಸುವುದರಿಂದಲೂ, ವೃಷವೆಂದರೆ ಧರ್ಮ ಮತ್ತು ಅದರಿಂದ ಕೂಡಿದವನಾದುದರಿಂದಲೂ, ಸ್ವರ್ಗದಿಂದ ಭೂಮಿಗಿಳಿಯುವಾಗ ತನ್ನ ತಾಯಿಯ ಮುಖವೆಂಬ ಸರೋವರವನ್ನು ಕನಸಿನಲ್ಲಿ ಬಿಳಿಯ ಎತ್ತಿನ ರೂಪದಲ್ಲಿ ಬಂದು ಸೇರಿದುದರಿಂದಲೂ, ಮಗುವಿಗೆ ವೃಷಭಸ್ವಾಮಿ ಎಂದು ನಾಮಕರಣ ಮಾಡಿದ; ಅಲ್ಲದೆ, ಮಗುವಿನ ಸ್ನಾನ ಅಲಂಕಾರಗಳನ್ನು ಮಾಡಲು ದೇವತಾಸ್ತ್ರೀಯರನ್ನೇ ದಾದಿಯರನ್ನಾಗಿ ನೇಮಿಸಿದ, ಸಮವಯಸ್ಕರೂ ಅವನಂತೆಯೇ ಇರುವವರೂ ಆದ ಮಕ್ಕಳನ್ನು ಜೊತೆಗಾರರನ್ನಾಗಿಸಿದ; ಬಳಿಕ ದೇವತೆಗಳ ಸಮೂಹದೊಡನೆ ದೇವೇಂದ್ರನು ಹೋದ.

**ವ॥ ಬಾಲ್ಯಕಾಲಮಂ ಬಾಳಕೇಳೀಲೀಲೆಯಿಂ ಕಟಿಪಿ ಕುಮಾರಕಾಲದೊಳ್ ಸಹೋತ್ಪನ್ನ ಮಹೋತ್ಪನ್ನ ಮತಿಶ್ರುತಾವಧಿಬೋಧನಪ್ಪುದಱಿಂ ವಿಶ್ವವಿದ್ಯೇಶ್ವರನುಂ ಜನ್ಮಾಂತರಾಭ್ಯಸ್ತ ಕಳಾಕುಶಲನುಂ ಪ್ರತ್ಯಕ್ಷೀಕೃತ ಸಕಲವಾಙ್ಮಯನಪ್ಪುದಱಿಂದಂ ಪ್ರತಿದಿನಪ್ರವರ್ಧಮಾನತನು ವಯೋವಿಭವನನುಕ್ರಮದೊಳೆ ಬಳೆದು, ಮನೋಹರಮೆನಿಸಿತ್ತು ಯೌವನೋದಯಮಿಂದ್ರ ನರೇಂದ್ರವಂದ್ಯನಾ. ಪರಮನ ಪರಿಪೂರ್ಣ ಯೌವನಶ್ರೀಯಂ ನಾಭಿರಾಜಂ ನೋಡಿ, "ಈಗಳ್ ಕುಮಾರಂಗೆ ಯೌವನಂ ನೆಱೆದತ್ತು; ಈತಂಗೆ ವಿವಾಹಮಂಗಳಮಂ ಮಾಡಲ್ವೇಟ್ಕುಂ" ಎಂದು ತನ್ನೊಳೆ ಬಗೆದು ಕುಮಾರನಂ ಸಾರೆವಂದು,**

**ಪದವಿಭಾಗ–ಅನ್ವಯ–ಅರ್ಥ:** ಬಾಲ್ಯಕಾಲಮಂ ಬಾಳಕೇಳೀಲೀಲೆಯಿಂ ಕಟಿಪಿ = ಮಗುತನವನ್ನು ಹುಡುಗಾಟದ ಮೂಲಕ ಕಳೆದು, ಕುಮಾರಕಾಲದೊಳ್ ಸಹ + ಉತ್ಪನ್ನ = ಕುಮಾರಾವಸ್ಥೆಯಲ್ಲಿ ಹುಟ್ಟಿನೊಡನೇ ಬಂದಿದ್ದ ಮಹೋತ್ಪನ್ನಮತಿಶ್ರುತ + ಅವಧಿಬೋಧನಪ್ಪುದಱಿಂ = ತುಂಬ ಶ್ರೇಷ್ಠವಾದ ಮತಿ ಶ್ರುತ ಅವಧಿಜ್ಞಾನಗಳಿಂದ ಕೂಡಿದವನಾದ್ದರಿಂದ, ವಿಶ್ವವಿದ್ಯಾ + ಈಶ್ವರನುಂ = ಜಗತ್ತಿನ ವಿದ್ಯೆಗಳಿಗೆ ಒಡೆಯನೂ, ಜನ್ಮಾಂತರ + ಅಭ್ಯಸ್ತಕಳಾಕುಶಲನುಂ = ಹಿಂದಿನ ಜನ್ಮಗಳಲ್ಲಿ ಕಲಿತ ಕಲೆಗಳಲ್ಲಿ ಕುಶಲನಾಗಿಯೂ, ಪ್ರತ್ಯಕ್ಷೀಕೃತಸಕಲವಾಙ್ಮಯನ್ = ಎಲ್ಲ ಸಾಹಿತ್ಯವನ್ನೂ ಕಣ್ಮುಂದೆ ನಿಲ್ಲಿಸಿಕೊಂಡವನಾಗಿಯೂ, ಪ್ರತಿದಿನಪ್ರವರ್ಧಮಾನವಯೋವಿಭವನ್ = ನಿತ್ಯವೂ ಬೆಳೆಯುವ ಹರೆಯದ ಬೆಡಗಿನವನಾಗಿ, ಅನುಕ್ರಮದೊಳೆ ಬಳೆದು = ಕಾಲಾನುಕ್ರಮದಲ್ಲಿ ಬೆಳೆದು, ಇಂದ್ರನರೇಂದ್ರವಂದ್ಯನಾ ಯೌವನ + ಉದಯಂ ಮನೋಹರಂ + ಎನಿಸಿತ್ತು = ದೇವೇಂದ್ರರಿಂದ ವಂದಿತನಾದ ಆದಿದೇವನ ಯೌವನದ ಬೆಳವಣಿಗೆಯು ಕಣ್ಣಿಗೆ ಮುದ ನೀಡುವಂತಿತ್ತು. ಪರಮನ ಪರಿಪೂರ್ಣ ಯೌವನಶ್ರೀಯಂ ನಾಭಿರಾಜಂ ನೋಡಿ = ಪರಮಪುರುಷನ ಯೌವನದ ಸೊಬಗನ್ನು ತಂದೆ ನಾಭಿರಾಜನು ನೋಡಿ, "ಈಗಳ್ ಕುಮಾರಂಗೆ ಯೌವನಂ ನೆಱೆದತ್ತು; ಈತಂಗೆ ವಿವಾಹಮಂಗಳಮಂ ಮಾಡಲ್ವೇಟ್ಕುಂ" = ಈತನಿಗೆ ಹರೆಯವು ಬಂದಿದೆ; ಹಾಗಾಗಿ ಇವನಿಗೆ ಮದುವೆಯನ್ನು ನೆರವೇರಿಸಬೇಕು"

ಎಂದು ತನ್ನೊಳೆ ಬಗೆದು ಕುಮಾರನಂ ಸಾರೆವಂದು = ಎಂದು ತನ್ನಲ್ಲಿಯೇ ಆಲೋಚಿಸಿ ಮಗನ ಬಳಿ ಬಂದು.

**ಗದ್ಯಾನುಸರಣ:** ಆದಿದೇವನು ಮಗುತನವನ್ನು ಹುಡುಗಾಟದ ಮೂಲಕ ಕಳೆದ: ಕುಮಾರಾವಸ್ಥೆಯಲ್ಲಿ ಇತರ ಸುಕುಮಾರರೊಡನೆ ಸೇರಿ, ತುಂಬ ಶ್ರೇಷ್ಠವಾದ ಮತಿ ಶ್ರುತ ಅವಧಿಜ್ಞಾನಗಳಿಂದ ಕೂಡಿದವನಾದ್ದರಿಂದ, ಜಗತ್ತಿನ ವಿದ್ಯೆಗಳ ಪ್ರಭುತ್ವ ಪಡೆದು, ಹಲವು ಲೋಕವ್ಯಾಪಾರಗಳನ್ನು ಅರಿತವನಾದ; ಹಿಂದಿನ ಜನ್ಮಗಳಲ್ಲಿ ಕಲಿತ ಕಲೆಗಳಲ್ಲಿ ಕುಶಲನಾಗಿ, ಎಲ್ಲ ಸಾಹಿತ್ಯವನ್ನೂ ಕಣ್ಮುಂದೆ ನಿಲ್ಲಿಸಿಕೊಂಡವನಾಗಿ ತುಂಬಿಕೊಳ್ಳುವ ಹರೆಯದ ಬೆಡಗಿನಿಂದಲೂ ಕೂಡಿ ಬೆಳೆದ; ಹೀಗೆ ದೇವೇಂದ್ರರಿಂದ ವಂದಿತನಾದ ಆದಿದೇವನ ಯಾವನದ ಬೆಳವಣಿಗೆಯು ಕಣ್ಣಿಗೆ ಮುದ ನೀಡುವಂತಿತ್ತು. ಪರಮಪುರುಷನ ಯೌವನದ ಸೊಬಗನ್ನು ತಂದೆ ನಾಭಿರಾಜನು ನೋಡಿ, "ಈತನಿಗೆ ಹರೆಯವು ಬಂದಿದೆ; ಹಾಗಾಗಿ ಇವನಿಗೆ ಮದುವೆಯನ್ನು ನೆರವೇರಿಸಬೇಕು' ಎಂದು ತನ್ನಲ್ಲಿಯೇ ಆಲೋಚಿಸಿ ಮಗನ ಬಳಿ ಹೋದ.

**ಶಾಂತಾತ್ಮಾ ಮದುವೆ ನಿಲ್ ನೀ**
**ನಿಂತೆನ್ನ ಗೃಹಸ್ಥಧರ್ಮದಿಂದಂ ನೀನೆಂ**
**ತಂತೆ ಸಲೆ ನೆಗಳ್ಚೆ ಜಗತೀ**
**ಸಂತತಿ ನಿಲೆ ನಿನ್ನ ಧರ್ಮಸಂತತಿ ನಿಲ್ಕುಂ** ೪೪

**ಪದವಿಭಾಗ–ಅನ್ವಯ–ಅರ್ಥ:** ಶಾಂತಾತ್ಮಾ ಮದುವೆ ನಿಲ್ ನೀನ್ = ಶಾಂತ ಮನಸ್ಸುಳ್ಳವನೇ ನೀನು ಮದುವೆಯಾಗು, ಇಂತು + ಎನ್ನ ಗೃಹಸ್ಥಧರ್ಮದಿಂದಂ ನೀನ್ + ಎಂತು + ಅಂತೆ ಸಲೆ ನೆಗಳ್ಚೆ = ಹೀಗೆ ನನ್ನಂತೆಯೇ ನೀನೂ ಗೃಹಸ್ಥಧರ್ಮವನ್ನು ಸ್ವೀಕರಿಸಿದರೆ, ಜಗತೀಸಂತತಿ ನಿಲೆ ನಿನ್ನ ಧರ್ಮಸಂತತಿ ನಿಲ್ಕುಂ = ಜಗತ್ತಿನ ಸಂತತಿಯೂ ನಿಲ್ಲುತ್ತದೆ ನಿನ್ನ ಧರ್ಮಸಂತತಿಯೂ ಮುಂದುವರಿಯುತ್ತದೆ.

**ಪದವಿಭಾಗ–ಅನ್ವಯ–ಅರ್ಥ:** ಶಾಂತ ಮನಸ್ಸುಳ್ಳವನೇ ಮದುವೆಯಾಗು, ಹೀಗೆ ನನ್ನಂತೆಯೇ ನೀನೂ ಗೃಹಸ್ಥಧರ್ಮವನ್ನು ಸ್ವೀಕರಿಸಿದರೆ ಜಗತ್ತಿನ ಸಂತತಿಯೂ ನಿಲ್ಲುತ್ತದೆ, ನಿನ್ನ ಧರ್ಮಸಂತತಿಯೂ ಮುಂದುವರಿಯುತ್ತದೆ.

**ಎನೆ ದೇವನ ದರಹಸಿತಾ**
**ನನದೊಳ್ ತನಗಿಂಬುಕೆಯ್ದು ಬಗೆಯಂ ಪದಿನಾ**
**ಲ್ಕನೆಯ ಮನು ಜಲಕನಜಿದಂ**
**ದನಿತುಂ ಭುವನಮುಮನಾಗಳಾಳ್ದಂತೊಸೆದಂ** ೪೫

**ಪದವಿಭಾಗ–ಅನ್ವಯ–ಅರ್ಥ:** ಎನೆ = ಎಂದು ಹೇಳಿದಾಗ, ದೇವನ ದರಹಸಿತ + ಆನನದೊಳ್ = ಮಗನ ಮುಗುಳ್ನಗೆಯ ಮುಖದಲ್ಲಿ, ತನಗೆ + ಇಂಬುಕೆಯ್ದು ಬಗೆಯಂ = ತನಗೆ ಒಪ್ಪಿಗೆ ದೊರೆತ ಕುರುಹನ್ನು, ಪದಿನಾಲ್ಕನೆಯ ಮನು ಜಲಕನೆ + ಅಜಿದು = ಹದಿನಾಲ್ಕನೆಯ ಮನುವಾದ ನಾಭಿರಾಜನು ತಕ್ಷಣವೇ

ತಿಳಿದು. ಅಂದು + ಅನಿತುಂ ಭುವನಮುಮನ್ + ಆಗಳ್ + ಅಳ್ದಂತೆ + ಒಸೆದಂ = ಆಗ ಇಡೀ ಲೋಕವನ್ನೇ ಗೆದ್ದಂತೆ ಸಂತಸಪಟ್ಟ.

**ಗದ್ಯಾನುಸರಣ:** ಎಂದು ಹೇಳಿದಾಗ, ಮಗನ ಮುಖದಲ್ಲಿ ಮುಗುಳ್ನಗೆ ಕಾಣಿಸಿತು; ಇದು ತನ್ನ ಸಲಹೆಗೆ ದೊರೆತ ಒಪ್ಪಿಗೆಯ ಕುರುಹು ಎಂಬುದನ್ನು ಹದಿನಾಲ್ಕನೆಯ ಮನುವಾದ ನಾಭಿರಾಜನು ತಕ್ಷಣವೇ ತಿಳಿದ; ಇಡೀ ಲೋಕವನ್ನೇ ತಾನು ಗೆದ್ದಂತೆ ಸಂಭ್ರಮಪಟ್ಟ.

**ವ। ಅಂತು ತನ್ನುಪರೋಧದೊಳಂ ಪ್ರಜಾನುಗ್ರಹ ಬುದ್ಧಿಯೊಳಂ ಪೋಗಲಾಜಿ ದೊಡಂಒಟ್ಟ ಆದಿಪುರುಷನೊಡಂಬಡನಜಿದು ನಿಶ್ಶಂಕನಾಗಿ ದಿವಿಜೇಂದ್ರನನುಮತದೊಳ್ ಕಚ್ಛಮಹಾಕಚ್ಛರ ತಂಗೆಯರಪ್ಪ ಯಶಸ್ವತೀಮಹಾದೇವಿಯುಂ ಸುನಂದಾದೇವಿಯುಮೆಂಬ ಕನ್ಯಾರತ್ನಂಗಳನೊಂದೆ ಪಸೆಯೊಳ್ ಪಾಣಿಗ್ರಹಣಂಗೆಯಿಸಿದಾಗಳ್,**

**ಪದವಿಭಾಗ–ಅನ್ವಯ–ಅರ್ಥ:** ಅಂತು ತನಉಪರೋಧದೊಳಂ = ಹೀಗೆ ತಾನು ಮಾಡಿದ ಒತ್ತಾಯದಿಂದಲೂ, ಪ್ರಜಾ + ಅನುಗ್ರಹಬುದ್ಧಿಯೊಳಂ = ಪ್ರಜೆಗಳಿಗೆ ಒಳಿತನ್ನು ಮಾಡುವ ಬುದ್ಧಿಯಿಂದಲೂ. ಪೋಗಲಾಜದೊಡಂ = ತಿರಸ್ಕರಿಸಲಾರದ್ದರಿಂದಲೂ, ಒಟ್ಟು + ಆದಿಪುರುಷನ + ಒಡಂಬಡನ್ + ಅಜಿದು = ಒಟ್ಟಾರೆ ಆದಿದೇವನ ಒಪ್ಪಿಗೆಯನ್ನು ತಿಳಿದು, ನಿಶ್ಶಂಕನಾಗಿ ದಿಪಿಜೇಂದ್ರನ + ಅನುಮತದೊಳ್ = ಅನುಮಾನವಿಲ್ಲದೆ ದೇವೇಂದ್ರನ ಸಹಮತಿಯಿಂದ, ಕಚ್ಛಮಹಾಕಚ್ಛರ ತಂಗೆಯರಪ್ಪ = ಕಚ್ಛಮಹಾಕಚ್ಛರ ತಂಗಿಯರಾದ, ಯಶಸ್ವತಿಮಹಾದೇವಿಯುಂ ಸುನಂದಾದೇವಿಯುಮೆಂಬ ಕನ್ಯಾರತ್ನಂಗಳಂ = ಯಶಸ್ವತಿ ಮತ್ತು ಸುನಂದಾದೇವಿ ಎಂಬ ಇಬ್ಬರು ಶ್ರೇಷ್ಠ ಕನ್ಯೆಯರನ್ನು, ಒಂದೆ ಪಸೆಯೊಳ್ ಪಾಣಿಗ್ರಹಣಂಗೆಯಿಸಿದಾಗಳ್ = ಒಂದೇ ಹಸೆಮಣೆಯ ಮೇಲೆ ಒಟ್ಟಿಗೆ ಮದುವೆ ನೆರವೇರಿಸಲು

**ಗದ್ಯಾನುಸರಣ:** ಹೀಗೆ ತಾನು ಮಾಡಿದ ಒತ್ತಾಯದಿಂದಲೂ, ಪ್ರಜೆಗಳಿಗೆ ಒಳಿತನ್ನು ಮಾಡುವ ಬುದ್ಧಿಯಿಂದಲೂ, ತನ್ನ ಮಾತನ್ನು ತಿರಸ್ಕರಿಸಲಾರದ್ದರಿಂದಲೂ – ಹೇಗೋ ಆದಿದೇವನು ಮದುವೆಗೆ ಒಪ್ಪಿಕೊಂಡದ್ದನ್ನು ನಾಭಿರಾಜನು ತಿಳಿದ: ಆ ಬಳಿಕ ಆತಂಕವಿಲ್ಲದೆ ಕಚ್ಛಮಹಾಕಚ್ಛರ ತಂಗಿಯರಾದ ಯಶಸ್ವತಿ ಮತ್ತು ಸುನಂದಾದೇವಿ ಎಂಬ ಇಬ್ಬರು ಶ್ರೇಷ್ಠ ಕನ್ಯೆಯರೊಡನೆ ಒಂದೇ ಹಸೆಮಣೆಯ ಮೇಲೆ ಒಟ್ಟಿಗೆ ಮದುವೆ ನೆರವೇರಿಸಿದ.

**ಆ ಪುಣ್ಯವತಿಯರಿರ್ಬರು**
**ಮಾ ಪರಮೇಶ್ವರನ ಮನಮನಿರ್ಕುಟಿಗೊಳೆ ಮ**
**ತ್ತಾ ಪೀನವೃಷಸ್ಕಂಧನು**
**ಮಾ ಪದ್ಮಾಸ್ಯೆಯರ ಮನಮನಿರ್ಕುಟಿಗೊಂಡಂ** ೪೬

**ಪದವಿಭಾಗ–ಅನ್ವಯ–ಅರ್ಥ:** ಆ ಪುಣ್ಯವತಿಯರ್ + ಇರ್ಬರುಂ = ಆ ಇಬ್ಬರೂ ಪುಣ್ಯವಂತೆಯರು. ಆ ಪರಮೇಶ್ವರನ ಮನಮನ್ + ಇರ್ಕುಳಿಗೊಳೆ

= ಆ ಒಡೆಯನ ಮನಸ್ಸನ್ನು ಬಂಧಿಸಿದರೆ, ಮತ್ತೆ + ಆ ಪೀನವೃಷಸ್ಕಂಧನುಂ = ಅದೇ ರೀತಿ ಆ ಪರಹಾದ ಭುಜಗಳವನೂ, ಆ ಪದ್ಮ + ಆಸ್ಯೆಯರ ಮನಮನ್ + ಇರ್ಕುಳಿಗೊಂಡಂ = ಆ ತಾವರೆಮೊಗದವರ ಮನಸ್ಸನ್ನು ಕಟ್ಟಿಹಾಕಿದ.

**ಗದ್ಯಾನುಸರಣ:** ಆ ಇಬ್ಬರೂ ಪುಣ್ಯವಂತೆಯರು ತಮ್ಮ ಆ ಒಡೆಯನ ಮನಸ್ಸನ್ನು ಬಂಧಿಸಿದರು; ಅದೇ ರೀತಿ ಆ ಹರಹಾದ ಭುಜಗಳವನು ಆ ತಾವರೆಮೊಗದವರ ಮನಸ್ಸನ್ನು ಕಟ್ಟಿಹಾಕಿದ.

**ವ॥ ಅಂತಾ ಲಲಿತಾಂಗಿಯರೊಳ್ ಆದಿಪುರುಷನಶೇಷ ಸಂಸಾರಸುಖ ಮನನುಭವಿಸುತ್ತಿರ್ಪಿನಂ, ಅನೇಕ ಸಂವತ್ಸರಂಗಳ್ ಏಕಸಂವತ್ಸರಸಮಾನಂಗಳಾಗಿ ಪೋಗೆ, ಯಶಸ್ವತಿಮಹಾದೇವಿ ಗರ್ಭಮಂ ತಾಳ್ದಿ ಸುಖ ಪ್ರಸೂತಿ ಸಮಯದೊಳ್,**

**ಪದವಿಭಾಗ-ಅನ್ವಯ-ಅರ್ಥ:** ಅಂತಾ ಲತಾಂಗಿಯರೊಳ್ ಆದಿಪುರುಷನ್ = ಹೀಗೆ ಹೆಂಡತಿಯರೊಡನೆ ಆದಿದೇವನು, ಅಶೇಷಸಂಸಾರಸುಖಮನ್ + ಅನುಭವಿಸುತ್ತೆ + ಇರ್ಪಿನಂ = ಎಲ್ಲ ಸಾಂಸಾರಿಕ ಸುಖವನ್ನೂ ಸವಿಯುತ್ತಿರಲು, ಅನೇಕ ಸಂವತ್ಸರಂಗಳ್ = ಅನೇಕ ವರ್ಷಗಳು, ಏಕಸಂವತ್ಸರಸಮಾನಂಗಳಾಗಿ ಪೋಗೆ = ಒಂದು ವರ್ಷದಂತೆ ಕಳೆದು ಹೋದುವು, ಯಶಸ್ವತಿಯು, ಗರ್ಭಮಂ ತಾಳ್ದಿ ಸುಖ ಪ್ರಸೂತಿ ಸಮಯದೊಳ್ = ಬಸಿರಾಗಿ ಸುಖವಾಗಿ ಹಡೆದು

**ಗದ್ಯಾನುಸರಣ:** ಹೀಗೆ ಹೆಂಡತಿಯರೊಡನೆ ಆದಿದೇವನು ಎಲ್ಲ ಸಾಂಸಾರಿಕ ಸುಖವನ್ನೂ ಸವಿಯುತ್ತಿರಲು ಅನೇಕ ವರ್ಷಗಳು ಗೊತ್ತಾಗದೆ ಸರಿಯುತ್ತ ಒಂದು ವರ್ಷದಂತೆ ಕಳೆದು ಹೋದುವು; ಕಾಲಕ್ರಮದಲ್ಲಿಲ ಯಶಸ್ವತಿಯು ಬಸಿರಾಗಿ ಸುಖವಾಗಿ ಹಡೆದಳು.

**ಮನುಗೋತ್ರಾಂಭೋಧಿಚಂದ್ರಂ ಮನುಕುಲಸರಸೀವಿಭ್ರಮೋತ್ತಂಸಹಂಸಂ**
**ಮನುವಂಶಪ್ರಾಚ್ಯಶೈಲದ್ಯುಮಣಿ ಮನುನೃಪಾಮ್ನಾಯದುರ್ಗಾದ್ರಿಸಿಂಹಂ**
**ಮನುಭೂಪಾಳಾನ್ವಯಶ್ರೀಭವನಕಳಶಮೆಂಬಂತು ವಿಖ್ಯಾತಪುಣ್ಯಂ**
**ಮನುಧಾತ್ರೀಪಾಲಚೂಡಾಮಣಿ ಜನಿಯಿಸಿದಂ ಚಕ್ರವರ್ತಿಪ್ರಧಾನಂ** ೪೭

**ಪದವಿಭಾಗ-ಅನ್ವಯ-ಅರ್ಥ:** ಮನುಗೋತ್ರ + ಅಂಭೋಧಿಚಂದ್ರಂ = ಮನುವಂಶವೆಂಬ ಕಡಲಿಗೆ ಚಂದ್ರನಾದವನೂ, ಮನುಕುಲಸರಸೀವಿಭ್ರಮ + ಉತ್ತಂಸಹಂಸಂ = ಮನುಕುಲವೆಂಬ ಕೊಳದಲ್ಲಿ ಸಡಗರದಿಂದ ವಿಹರಿಸುವ ಹಂಸವಾದವನೂ, ಮನುವಂಶಪ್ರಾಚ್ಯಶೈಲದ್ಯುಮಣಿ = ಮನುಕುಲವೆಂಬ ಮೂಡಲಗಿರಿಯ ನೇಸರದಂತಹವನೂ, ಮನುನೃಪ + ಆಮ್ನಾಯದುರ್ಗ + ಅದ್ರಿಸಿಂಹಂ = ಮನುಕುಲದ ರಾಜರ ವಂಶವೆಂಬ ಬೆಟ್ಟಕ್ಕೆ ಸಿಂಹದಂತಿರುವವನೂ, ಮನುಭೂಪಾಳ + ಅನ್ವಯಶ್ರೀಭವನಕಳಶಂ = ಮನುವಂಶದ ದೊರೆಗಳ ಸಂತತಿಯ ಅರಮನೆಯ ಕಳಶದಂತಿರುವವನೂ, ಎಂಬಂತು ವಿಖ್ಯಾತಪುಣ್ಯಂ = ಎಂಬಂತೆ ವಿಖ್ಯಾತಪುಣ್ಯನಾದ, ಮನುಧಾತ್ರೀಪಾಲಚೂಡಾಮಣಿ ಚಕ್ರವರ್ತಿಪ್ರಧಾನಂ ಜನಿಯಿಸಿದಂ = ಮನುಸಂತತಿಯ ದೊರೆಗಳಲ್ಲಿ ತಲೆವಣಿಯಾದ ಮೊದಲ ಚಕ್ರವರ್ತಿಯು ಜನಿಸಿದ.

**ಗದ್ಯಾನುಸರಣ:** ಮನುವಂಶವೆಂಬ ಕಡಲಿಗೆ ಚಂದ್ರನಾದ, ಮನುಕುಲವೆಂಬ ಕೊಳದಲ್ಲಿ ಸಡಗರದಿಂದ ವಿಹರಿಸುವ ಹಂಸವಾದ, ಮನುಕುಲವೆಂಬ ಮೂಡಲಗಿರಿಯ ನೇಸರದಂತಹ, ಮನುಕುಲದ ರಾಜರ ವಂಶವೆಂಬ ಬೆಟ್ಟಕ್ಕೆ ಸಿಂಹದಂತಿರುವ, ಮನುವಂಶದ ದೊರೆಗಳ ಸಂತತಿಯ ಅರಮನೆಯ ಕಳಸದಂತಿರುವ ವ್ಯಕ್ತಿ ಎಂಬಂತೆ ವಿಖ್ಯಾತಪುಣ್ಯನೂ ಮನುಸಂತತಿಯ ದೊರೆಗಳಲ್ಲಿ ತಲೆವಣಿಯೂ ಆದ ಮೊದಲ ಚಕ್ರವರ್ತಿಯು ಜನಿಸಿದ.

[**ವಿಶೇಷ ವಿಚಾರ:** ಮಗುವು ಎರಡೂ ತೋಳುಗಳಿಂದ ಭೂಮಿಯನ್ನು ಆಲಂಗಿಸಿಕೊಂಡು ಹುಟ್ಟಿದುದರಿಂದ ಜ್ಯೋತಿಷಿಗಳು ಅವನು ಚಕ್ರವರ್ತಿಯಾಗುವುದಾಗಿ ಭವಿಷ್ಯ ನುಡಿದರೆಂದು ಪೂರ್ವ ಪುರಾಣ ಹೇಳುತ್ತದೆ, ಪೂಪು, ೧೪. ೧೪೨]

**ಭಾವೀಭರತೇಶಪದಮುಮಿ**<br>**ಳಾವಿಪುಳಪ್ರೇಮಭರಮುಮೆರ್ದೆಗೊಂಡಿರೆ ಸ**<br>**ದ್ಭಾವದಿನಿಟ್ಟುದು ಬಂಧುಜ**<br>**ನಾವಳಿ ಕೂಸಿಂಗೆ ಭರತನೆಂಬೀ ಪೆಸರಂ** **೪೮**

**ಪದವಿಭಾಗ-ಅನ್ವಯ-ಅರ್ಥ:** ಭಾವೀಭರತೇಶಪದಮುಂ = ಮುಂದೆ ಬರುವ ಭರತೇಶ ಪದವಿಯೂ, ಇಳಾವಿಪುಳಪ್ರೇಮಭರಮುಂ = ತುಂಬಿದ ಪ್ರೇಮಾಧಿಕ್ಯವೂ, ಎರ್ದೆಗೊಂಡಿರೆ = ಮನಸೂರೆಗೊಂಡು, ಬಂಧುಜನ + ಆವಳಿ ಸದ್ಭಾವದಿನ್ ಕೂಸಿಂಗೆ ಭರತನೆಂಬೀ ಪೆಸರಂ ಇಟ್ಟುದು = ಬಂಧುಜನಸಮೂಹವು ಸೇರಿ ಒಳ್ಳೆಯ ಮನಸ್ಸಿನಿಂದ ಕೂಸಿಗೆ ಭರತ ಎಂಬ ಹೆಸರನ್ನು ಇಟ್ಟರು.

**ಗದ್ಯಾನುಸರಣ:** ಮುಂದೆ ಬರುವ ಭರತೇಶ ಪದವಿಯೂ, ತುಂಬಿದ ಪ್ರೇಮಾಧಿಕ್ಯವೂ ಮನಸೂರೆಗೊಂಡು ಬಂಧುಜನಸಮೂಹವು ಸೇರಿ ಒಳ್ಳೆಯ ಮನಸ್ಸಿನಿಂದ ಕೂಸಿಗೆ ಭರತ ಎಂಬ ಹೆಸರನ್ನಿಟ್ಟರು.

**ವ॥ ಭರತಕುಮಾರಂಬೆರಸು ನೂರ್ವರ್ ಕುಮಾರರುಮನಿಬರಿಂ ಕಿಱಿಯಳ್ ಬ್ರಾಹ್ಮಿಯೆಂಬ ಮಗಳುಮಂ ಪಡೆದು ಯಶಸ್ವತಿ ಪಿರಿದೊಂದು ಮೈಮೆಯಂ ಪಡೆದಳ್. ಸುನಂದಾದೇವಿಯ ಗರ್ಭದೊಳವತರಿಸಿ[ದ] ಬಾಳಕಂಗೆ ಬಾಹುಬಲಿಯೆಂಬನ್ವರ್ಥ ಅಭಿಧಾನಮನಿಟ್ಟು ಆತನ ಬಾಲ್ಯವಿಳಾಸಂಗಳಿಂದಮಾನಂದಿತ ಹೃದಯನಾಗಿ ನಾಭಿರಾಜನಂದನನಿರ್ಪನ್ನೆಗಂ, ಬಾಹುಬಲಿಕುಮಾರನಿಂ ನೇರ್ಗಿಱಿಯಳಾಗಿ ಸುಂದರಿಯೆಂಬ ನಂದನೆಯಾದಳ್. ಅಂತು ಭರತೇಶ್ವರಂ ಬಾಹುಬಲಿಕುಮಾರಂ ಮೊದಲಾಗೆ ನೂರ್ವರ್ ಕುಮಾರರುಮನಿರ್ವರ್ ಕನ್ನೆಯರುಮನಾದಿಪುರುಷಂ ನೋಡಿ ಮನದೊಳಾದಟ್ಟಿಱಿಂ ಕೂಡಿರ್ದಂ.**

**ಮತ್ತೊಂದು ದಿವಸಂ ವೃಷಭೇಶ್ವರಂ ಸಕಳ ವಿದ್ಯೋಪದೇಶೋತ್ಸುಕನಾಗಿ, ಬ್ರಾಹ್ಮಿಯುಂ ಸುಂದರಿಯುಂ ಪೊಡೆವಟ್ಟೆಯ್ದೆವಂದಿರ್ದಾಗಳ್, ನಿಮಗೆ ವಯಸಮೆಂಬುದು ವಿದ್ಯಾಭ್ಯಾಸ ಯೋಗ್ಯಮೆಂದು ವಿಶಾಲ ಹೇಮಪಟ್ಟಕದೊಳ್ ಆತ್ಮಹೃತ್ಪದ್ಮಸದ್ಮೆಯಂ ಸರಸ್ವತಿಯಂ ಪೂಜಾಪೂರ್ವಕಮಾರಾಧಿಸಿ ನಿಜತನೂಜೆಯರಿರ್ವರುಮನೆರಡುಂ ಕೆಲದೊಳಿರಿಸಿ,**

**ಪದವಿಭಾಗ–ಅನ್ವಯ–ಅರ್ಥ:** ಭರತಕುಮಾರಂಬೆರಸು ಏೞ್ಪಿರ್ ಕುಮಾರರ್ + ಆದಿಯಾಗಿ ನೂರ್ವರ್ ಕುಮಾರರುಂ = ಹೀಗೆ ಭರತನೂ ಸೇರಿದಂತೆ ಏಳು ಮಂದಿ ಗಂಡುಮಕ್ಕಳೇ ಮೊದಲಾದ ನೂರು ಮಂದು ಗಂಡುಮಕ್ಕಳು, ಅನಿಬರಿಂ ಕಿಱಿಯಳ್ ಬ್ರಹ್ಮಿಯೆಂಬ ಮಗಳುಮಂ ಪಡೆದು = ಎಲ್ಲರಿಗಿಂತ ಕಿರಿಯಳಾದ ಬ್ರಹ್ಮಿ ಎಂಬ ಮಗಳನ್ನೂ ಪಡೆದು, ಪಿರಿದೊಂದು ಮೈಮೆಯಂ ಪಡೆದಳ್ = ಹಿರಿದಾದ ಸೊಬಗನ್ನು ಹೊಂದಿದಳು. ಸುನಂದಾದೇವಿಯ ಗರ್ಭದೊಳವತರಿಸಿ[ದ] = ಸುನಂದಾದೇವಿಯ ಹೊಟ್ಟೆಯಲ್ಲಿ ಹುಟ್ಟಿದ, ಬಾಳಕಂಗೆ = ಮಗುವಿಗೆ, ಬಾಹುಬಲಿಯೆಂಬ + ಅನ್ವರ್ಥ + ಅಭಿಧಾನಮನ್ + ಇಟ್ಟು = ಬಾಹುಬಲಿ ಎಂಬ ಅನುಗುಣವಾದ ಹೆಸರನ್ನಿಟ್ಟು, ಆತನ ಬಾಲ್ಯವಿಳಾಸಂಗಳಿಂದಂ + ಆನಂದಿತ ಹೃದಯನಾಗಿ = ಅವನ ಎಳೆತನದ ಸೊಬಗಿನಿಂದ ಸಂತಸ ತುಂಬಿದ ಎದೆಯುಳ್ಳವನಾದ. ಬಾಹುಬಲಿಕುಮಾರನಿಂ ನೇರ್ಗಿಱಿಯಳಾಗಿ = ಬಾಹುಬಲಿಗಿಂತ ಕೊಂಚವೇ ಚಿಕ್ಕವಳಾಗಿ, ಸುಂದರಿಯೆಂಬ ನಂದನೆಯಾದಳ್ = ಸುಂದರಿ ಎಂಬ ಮಗಳು ಹುಟ್ಟಿದಳು. ಅಂತು ಭರತೇಶ್ವರಂ ಬಾಹುಬಲಿಕುಮಾರಂ ಮೊದಲಾಗೆ = ಹೀಗೆ ಭರತ ಬಾಹುಬಲಿ ಮೊದಲಾದ, ನೂರ್ವರ್ ಕುಮಾರರುಮನ್ = ನೂರು ಮಂದಿ ಗಂಡುಮಕ್ಕಳನ್ನೂ, ಇರ್ವರ್ ಕನ್ಯೆಯರುಮನ್ = ಇಬ್ಬರು ಹೆಣ್ಣುಮಕ್ಕಳನ್ನೂ, ಆದಿಪುರುಷಂ ನೋಡಿ ಮನದೊಳಾದ + ಅಚ್ಚಿಱಿಂ ಕೂಡಿರ್ದಂ = ಆದಿದೇವನು ನೋಡಿ ಮನಸ್ಸಿನಲ್ಲಾದ ಅಕ್ಕರೆಯಿಂದ ಕೂಡಿದವನಾದ.

ಮತ್ತೊಂದು ದಿವಸಂ = ಮುಂದೆ ಒಂದು ದಿನ, ವೃಷಭೇಶ್ವರಂ ಸಕಳ ವಿದ್ಯೋಪದೇಶ + ಉತ್ಸುಕನಾಗಿ = ಆದಿದೇವನು [ಮಕ್ಕಳಿಗೆ] ಎಲ್ಲ ವಿದ್ಯೆಗಳನ್ನೂ ಕಲಿಸಬೇಕೆಂಬ ಉತ್ಸಾಹದಿಂದ, ಬ್ರಾಹ್ಮಿಯುಂ ಸುಂದರಿಯುಂ ಪೊಡೆವಟ್ಟು + ಎಯ್ದೆವಂದಿರ್ದಾಗಳ್ = ಬಾಹ್ಮಿ ಮತ್ತು ಸುಂದರಿಯರು ಹತ್ತಿರ ಬಂದು ನಮಸ್ಕರಿಸಿದಾಗ, ನಿಮಗೆ ವಯಸಂ + ಎಂಬುದು ವಿದ್ಯಾಭ್ಯಾಸಯೋಗ್ಯಂ + ಎಂದು = ನಿಮ್ಮ ವಯಸ್ಸು ವಿದ್ಯೆ ಕಲಿಯಲು ತಕ್ಕುದಾದುದು ಎಂದು, ಆತ್ಮಹೃತ್ಪದ್ಮಸದ್ಮೆಯಂ ಸರಸ್ವತಿಯಂ = ತನ್ನ ಹೃದಯದಲ್ಲಿ ನೆಲಸಿದ್ದ ಸರಸ್ವತಿಯನ್ನು, ವಿಶಾಲ ಹೇಮಪಟ್ಟಕದೊಳ್ ಪೂಜಾಪೂರ್ವಕಂ ಆರಾಧಿಸಿ = ಅಗಲವಾದ ಚಿನ್ನದ ವೇದಿಕೆಯಲ್ಲಿ ಪೂಜೆಯೊಡನೆ ಸ್ಥಾಪನೆ ಮಾಡಿ, ನಿಜತನೂಜೆಯರ್ + ಇರ್ವರುಮನ್ + ಎರಡುಂ ಕೆಲದೊಳಿರಿಸಿ = ತನ್ನ ಇಬ್ಬರು ಮಗಳಂದಿರನ್ನು ತನ್ನ ಎರಡು ಪಕ್ಕಗಳಲ್ಲಿ ಕೂರಿಸಿಕೊಂಡ.

**ಗದ್ಯಾನುಸರಣ:** ಭರತನೂ ಸೇರಿದ ಹಾಗೆ ಏಳು ಮಂದಿ ಗಂಡುಮಕ್ಕಳೇ ಮೊದಲಾದ ನೂರು ಮಂದಿ ಗಂಡುಮಕ್ಕಳು ಹಾಗೂ ಎಲ್ಲರಿಗಿಂತ ಕಿರಿಯಳಾದ ಬ್ರಾಹ್ಮಿ ಎಂಬ ಮಗಳನ್ನೂ ಪುರುದೇವನು ಪಡೆದು ಯಶಸ್ವತಿಯು ಹಿರಿದಾದ ಸೊಬಗನ್ನು ಹೊಂದಿದಳು. ಸುನಂದಾದೇವಿಯು ಹೆತ್ತ ಮಗುವಿಗೆ ಬಾಹುಬಲಿ ಎಂಬ ಅನುಗುಣವಾದ ಹೆಸರನ್ನಿಟ್ಟು, ಮಗುವಿನ ಎಳೆತನದ ಸೊಬಗಿನಿಂದ

ನಾಭಿರಾಜನ ಎದೆ ಸಂತಸದಿಂದ ತುಂಬಿತು. ಬಾಹುಬಲಿಗಿಂತ ಕೊಂಚವೇ ಚಿಕ್ಕವಳಾಗಿ ಸುಂದರಿ ಎಂಬ ಮಗಳು ಹುಟ್ಟಿದಳು. ಹೀಗೆ ಭರತ ಬಾಹುಬಲಿ ಮೊದಲಾದ ನೂರು ಮಂದಿ ಗಂಡುಮಕ್ಕಳನ್ನೂ, ಇಬ್ಬರು ಹೆಣ್ಣುಮಕ್ಕಳನ್ನೂ ಆದಿದೇವನು ನೋಡಿ ಮನಸ್ಸಿನಲ್ಲಾದ ಅಕ್ಕರೆಯಿಂದ ಕೂಡಿದವನಾದ.

ಮುಂದೆ ಒಂದು ದಿನ, ಆದಿದೇವನು [ಮಕ್ಕಳಿಗೆ] ಎಲ್ಲ ವಿದ್ಯೆಗಳನ್ನೂ ಕಲಿಸಬೇಕೆಂಬ ಉತ್ಸಾಹದಿಂದ, ಬ್ರಾಹ್ಮಿ ಮತ್ತು ಸುಂದರಿಯರು ಹತ್ತಿರ ಬಂದು ನಮಸ್ಕರಿಸಿದಾಗ, 'ನಿಮ್ಮ ವಯಸ್ಸು ವಿದ್ಯೆ ಕಲಿಯಲು ತಕ್ಕುದಾದುದು' ಎಂದು, ತನ್ನ ಹೃದಯದಲ್ಲಿ ನೆಲಸಿದ್ದ ಸರಸ್ವತಿಯನ್ನು ಅಗಲವಾದ ಚಿನ್ನದ ವೇದಿಕೆಯಲ್ಲಿ ಪೂಜೆಯೊಡನೆ ಸ್ಥಾಪನೆ ಮಾಡಿ ತನ್ನ ಇಬ್ಬರು ಮಗಳಂದಿರನ್ನು ತನ್ನ ಎರಡು ಪಕ್ಕಗಳಲ್ಲಿ ಕೂರಿಸಿಕೊಂಡ.

[**ವಿಶೇಷ ವಿಚಾರ:** ಇದೇ ಕಾವ್ಯದ ಮೊದಲ ಆಶ್ವಾಸದ ಒಂಬತ್ತನೆಯ ಪದ್ಯದಲ್ಲಿ 'ಪರಮಜಿನೇಂದ್ರವಾಣಿಯೆ ಸರಸ್ವತಿ ಬೇಱದು ಪೆಣ್ಣರೂಪಮಂ ಧರಿಯಿಸಿ ನಿಂದುದಲ್ತು' ಎಂದು ಹೊಸ ಬಗೆಯಲ್ಲಿ ಹೇಳಿರುವ ಪಂಪನೇ ಇಲ್ಲಿ ಸರಸ್ವತಿಯ ವಿಗ್ರಹಸ್ಥಾಪನೆ ಮಾಡಿಸುತ್ತಿದ್ದಾನೆ!]

**ಮುನ್ನಂ ತ್ರಿಲೋಕಗುರು ಸಿ**
**ದ್ಧನ್ನಮಯೆಂದಱಿಪಿ ಮುಖ್ಯಮಂಗಳಪದಮಂ**
**ಕನ್ಯೆಗೆ ಪಿರಿಯಾಕೆಗೆ ಬೞಿ**
**ಯನ್ನಯದಿಂ ಬರೆದು ತೋಱಿದಂ ಲಿಪಿಗಳುಮಂ** ೪೯

**ಪದವಿಭಾಗ-ಅನ್ವಯ-ಅರ್ಥ:** ತ್ರಿಲೋಕಗುರು ಮುನ್ನಂ ಮುಖ್ಯಮಂಗಳ ಪದಮಂ ಸಿದ್ಧಂ + ನಮಃ + ಎಂದು = ಮೂಲೋಕಗುರುವು ಮೊದಲು ಮಂಗಳಶಬ್ದಗಳಾದ ಸಿದ್ಧನ್ನಮಃ ಎಂದು, ಪಿರಿಯಾಕೆಗೆ ಕನ್ಯೆಗೆ ಅಱಿಪಿ = ಮೊದಲ ಮಗಳಿಗೆ ಬೋಧಿಸಿ, ಬೞಿಯನ್ನಯದಿಂ ಬರೆದು ತೋಱಿದಂ ಲಿಪಿಗಳುಮಂ = ಆನಂತರ ಅದನ್ನು ಲಿಪಿಯಲ್ಲಿ ಬರೆದು ತೋರಿಸಿದ.

**ಗದ್ಯಾನುಸರಣ:** ಮೂಲೋಕಗುರುವು ಮೊದಲು ಮಂಗಳಶಬ್ದಗಳಾದ ಸಿದ್ಧನ್ನಮಃ ಎಂದು ಮೊದಲ ಮಗಳಿಗೆ ಬೋಧಿಸಿದ; ಆನಂತರ ಅದನ್ನೇ ಲಿಪಿಯಲ್ಲಿ ಬರೆದು ತೋರಿಸಿದ.

**ವ॥ ಅಂತು ಅಕಾರಾದಿ ಹಕಾರಾಂತಸ್ವರವ್ಯಂಜನಭೇದ ಭಿನ್ನಶುದ್ಧಾಕ್ಷರಂಗಳುಮಂ ಆಯೋಗವಾಹಚತುಷ್ಕಮುಮಂ ಸಂಯೋಗಾಕ್ಷರಂಗಳುಮಂ ಬ್ರಾಹ್ಮಿಗೆ ದಕ್ಷಿಣ ಹಸ್ತದೊಳುಪದೇಶಂಗೆಯ್ದು,**

**ಪದವಿಭಾಗ-ಅನ್ವಯ-ಅರ್ಥ:** ಅಂತು + ಅಕಾರ + ಆದಿ ಹಕಾರ + ಅಂತ = ಹೀಗೆ ಅ ಇಂದ ಮೊದಲುಗೊಂಡು ಹ ಇಂದ ಕೊನೆಯಾಗುವವರೆಗಿನ, ಸ್ವರವ್ಯಂಜನಭೇದಭಿನ್ನಶುದ್ಧಾಕ್ಷರಂಗಳುಮಂ = ಸ್ವರ ವ್ಯಂಜನ ವ್ಯತ್ಯಾಸಗಳ ಮೂಲಾಕ್ಷರಗಳನ್ನೂ, ಆಯೋಗವಾಹಚತುಷ್ಕಮುಮಂ = ನಾಲ್ಕು

ಯೋಗವಾಹಗಳನ್ನೂ, ಸಂಯೋಗ + ಅಕ್ಷರಂಗಳುಮಂ = ದ್ವಿತ್ವಗಳನ್ನೂ, ದಕ್ಷಿಣಹಸ್ತದೊಳ್ ಬ್ರಹ್ಮಿಗೆ ಉಪದೇಶಂಗೆಯ್ದು = ಬಲಗೈಯಿಂದ ಬ್ರಾಹ್ಮಿಗೆ ಹೇಳಿಕೊಟ್ಟು,

**ಗದ್ಯಾನುಸರಣ:** ಹೀಗೆ ಅ ಇಂದ ಮೊದಲುಗೊಂಡು ಹ ಇಂದ ಕೊನೆಯಾಗುವವರೆಗಿನ ಸ್ವರ ವ್ಯಂಜನ ವ್ಯತ್ಯಾಸಗಳ ಮೂಲಾಕ್ಷರಗಳನ್ನೂ, ನಾಲ್ಕು ಯೋಗವಾಹಗಳನ್ನೂ, ದ್ವಿತ್ವ (ಒತ್ತಕ್ಷರ=ಎರಡು ಅಥವಾ ಅದಕ್ಕಿಂತ ಹೆಚ್ಚು ವ್ಯಂಜನಗಳು ಸೇರಿ ಆಗುವ) ಗಳನ್ನೂ ಬಲಗೈಯಿಂದ ಬರೆದು ಬ್ರಾಹ್ಮಿಗೆ ಹೇಳಿಕೊಟ್ಟ.

[**ವಿಶೇಷ ವಿಚಾರ:** ಅ ದಿಂದ ಹವರೆಗಿನ ಅಕ್ಷರಗಳನ್ನು ಹೇಳಿಕೊಟ್ಟ ಎಂಬ ಮಾತು ಸಂಸ್ಕೃತ ವರ್ಣಮಾಲೆಗೆ ಸಂಬಂಧಿಸಿದ್ದು; ಕನ್ನಡದಲ್ಲಿ ಅ ದಿಂದ ಳವರೆಗಿನ ಎಂದು ಹೇಳಬೇಕು; ನಾಲ್ಕು ಯೋಗವಾಹಗಳೆಂದರೆ, ಅನುಸ್ವಾರ, ವಿಸರ್ಗ, ಜಿಹ್ವಾಮೂಲೀಯ ಮತ್ತು ಉಪಧ್ಮಾನೀಯ ಎಂಬಿವು; ಕನ್ನಡದಲ್ಲಿ ಈಗ ಅನುಸ್ವಾರ ಮತ್ತು ವಿಸರ್ಗಗಳು ಮಾತ್ರ ಬಳಕೆಯಲ್ಲಿವೆ. ಈ ಕಾರಣದಿಂದಲೇ ಇಲ್ಲಿನ ಮೂಲಲಿಪಿಗೆ ಬ್ರಾಹ್ಮಿ ಎಂಬ ಹೆಸರು ಬಂತೇ?]

**ಸುಂದರಿಗೆ ಗಣಿತಮಂ ದಳಿ**
**ತೇಂದೀವರನಯನೆಗೆಡದ ಕಯ್ಯೊಳ್ ಭವ್ಯಾ**
**ನಂದಕರಂ ಸ್ಥಾನಕ್ರಮ**
**ದಿಂದಂ ಪುರುದೇವನಱಿಯೆ ತೋಱಿದನಾಗಳ್** ೫೦

**ಪದವಿಭಾಗ–ಅನ್ವಯ–ಅರ್ಥ :** ಭವ್ಯಾನಂದಕರಂ ಪುರುದೇವನ್ = ಭವ್ಯಾನಂದಕರನಾದ ಪುರುದೇವನು, ದಳಿತೇಂದೀವರನಯನೆಗೆ ಸುಂದರಿಗೆ = ಅರಳಿದ ನೈದಿಲೆಯಂತಹ ಕಣ್ಣುಗಳುಳ್ಳ ಸುಂದರಿಗೆ, ಗಣಿತಮಂ ಸ್ಥಾನಕ್ರಮದಿಂದಂ ಅಱಿಯೆ = ಗಣಿತವನ್ನು ಬಿಡಿ ಹತ್ತು ನೂರು ಹೀಗೆ ಸಂಖ್ಯೆಯ ಸ್ಥಾನದಿಂದ ನಿಗದಿತವಾಗುವುದನ್ನು, ಆಗಳ್ ಎಡದ ಕಯ್ಯೊಳ್ ತೋಱಿದನ್ = ಆಗ ಎಡಗೈಯಿಂದ ಹೇಳಿಕೊಟ್ಟ.

**ಗದ್ಯಾನುಸರಣ:** ಭವ್ಯಾನಂದಕರನಾದ ಪುರುದೇವನು ಅರಳಿದ ನೈದಿಲೆಯಂತಹ ಕಣ್ಣುಗಳುಳ್ಳ ಸುಂದರಿಗೆ ಬಿಡಿ ಹತ್ತು ನೂರು ಹೀಗೆ ಸಂಖ್ಯೆಯ ಸ್ಥಾನದಿಂದ ನಿಗದಿತವಾಗುವ ಗಣಿತವನ್ನು ಆಗ ಎಡಗೈಯಿಂದ ಹೇಳಿಕೊಟ್ಟ.

**ವ। ನಿಜಾತ್ಮಜೆಯರಿರ್ವರುಮಂ ವಿದ್ಯಾಪರಿಪೂರ್ಣೆಯಪ್ಪರುಮಂತು ಮಾಡಿ, ಭರತಂಗೆ ಭರತಮುಮರ್ಥಶಾಸ್ತ್ರಮುಮಂ ವೃಷಭಸೇನಂಗೆ ಗೀತವಾದ್ಯಾರ್ಥಸಂಗ್ರಹಮಪ್ಪ ಗಾಂಧರ್ವ ಶಾಸ್ತ್ರಮುಮಂ ಅನಂತವಿಜಯಂಗೆ ವಿಚಿತ್ರ ಚಿತ್ರಕಳೆಯುಮಂ ವಾಸ್ತುವಿದ್ಯೆಯುಮಂ ಉಪದೇಶಂಗೆಯ್ದು ಬಾಹುಬಲಿಗೆ ಕಾಮತಂತ್ರ ಸಾಮುದ್ರಿಕಾಯುರ್ವೇದ ಧನುರ್ವೇದಹಸ್ತ್ಯಶ್ವತಂತ್ರ ರತ್ನಪರೀಕ್ಷೆಗಳುಮಂ ಮತ್ತಮಿವು ಮೊದಲಾಗೆ ಪೆಱವುಂ ಲೋಕೋಪಕಾರಿಗಳಪ್ಪ ಶಾಸ್ತ್ರಂಗಳೆನಿತೊಳವನಿತುಮಂ ಮತ್ತಿನ ತನೂಜವರ್ಗಕ್ಕೆಲ್ಲಮುಪದೇಶಂಗೆಯ್ದಂ.**

**ಪದವಿಭಾಗ–ಅನ್ವಯ–ಅರ್ಥ:** ನಿಜ + ಆತ್ಮಜೆಯರ್ + ಇರ್ವರುಮಂ = ತನ್ನ ಇಬ್ಬರೂ ಮಗಳಂದಿರನ್ನು, ಅಂತು ವಿದ್ಯಾಪರಿಪೂರ್ಣೆಯಪ್ಪರುಂ ಮಾಡಿ

= ಹೀಗೆ ವಿದ್ಯೆಯಲ್ಲಿ ಪರಿಪೂರ್ಣರನ್ನಾಗಿ ಮಾಡಿ, ಭರತಂಗೆ ಭರತಮುಂ + ಅರ್ಥಶಾಸ್ತ್ರಮುಮಂ = ಭರತನಿಗೆ ನಾಟ್ಯಶಾಸ್ತ್ರ ಮತ್ತು ಅರ್ಥಶಾಸ್ತ್ರಗಳನ್ನೂ, ವೃಷಭಸೇನಂಗೆ ಗಾಂಧರ್ವಶಾಸ್ತ್ರಮುಮಂ = ವೃಷಭಸೇನನಿಗೆ ಸಂಗೀತಶಾಸ್ತ್ರವನ್ನೂ, ಅನಂತವಿಜಯಂಗೆ ಚಿತ್ರಕಳೆಯುಮಮಂ ವಾಸ್ತುವಿದ್ಯೆಯುಮಮಂ ಉಪದೇಶಂಗೆಯ್ದು = ಅನಂತವಿಜಯನಿಗೆ ಚಿತ್ರಕಲೆಯನ್ನೂ, ವಾಸ್ತುಶಾಸ್ತ್ರವನ್ನೂ ಹೇಳಿಕೊಟ್ಟು, ಬಾಹುಬಲಿಗೆ ಕಾಮತಂತ್ರ ಸಾಮುದ್ರಿಕ + ಆಯುರ್ವೇದ ಧನುರ್ವೇದ ಹಸ್ತಿ + ಅಶ್ವತಂತ್ರ ರತ್ನಪರೀಕ್ಷೆಗಳುಮಂ = ಬಾಹುಬಲಿಗೆ ಕಾಮಶಾಸ್ತ್ರ ಹಸ್ತಸಾಮುದ್ರಿಕ ಆಯುರ್ವೇದ ಬಿಲ್ವಿದ್ಯೆ ಹಾಗೂ ಆನೆ ಮತ್ತು ಕುದುರೆಗಳಿಗೆ ಸಂಬಂಧಿಸಿದ ಶಾಸ್ತ್ರಗಳನ್ನೂ, ಮತ್ತಂ + ಇವು ಮೊದಲಾಗೆ ಪೆಜವುಂ ಲೋಕ + ಉಪಕಾರಿಗಳಪ್ಪ ಶಾಸ್ತ್ರಂಗಳ್ + ಎನಿತೊಳವು + ಅನಿತುಮಂ = ಜೊತೆಗೆ, ಇವುಗಳಲ್ಲದೆ ಜಗತ್ತಿಗೆ ಸಹಾಯಮಾಡಬಲ್ಲ ಇತರ ಶಾಸ್ತ್ರಗಳು ಏನೇನಿವೆಯೋ ಅವೆಲ್ಲವನ್ನೂ, ಮತ್ತಿನ ತನೂಜವರ್ಗಕ್ಕೆಲ್ಲಂ + ಉಪದೇಶಂಗೆಯ್ದಂ = ಇನ್ನಿತರ ಮಕ್ಕಳಿಗೆ ಹೇಳಿಕೊಟ್ಟ.

**ಗದ್ಯಾನುಸರಣ:** ತನ್ನ ಇಬ್ಬರೂ ಮಗಳಂದಿರನ್ನು ಹೀಗೆ ವಿದ್ಯೆಯಲ್ಲಿ ಪರಿಪೂರ್ಣರನ್ನಾಗಿ ಮಾಡಿ, ಭರತನಿಗೆ ನಾಟ್ಯಶಾಸ್ತ್ರ ಮತ್ತು ಅರ್ಥಶಾಸ್ತಗಳನ್ನೂ, ವೃಷಭಸೇನನಿಗೆ ಸಂಗೀತಶಾಸ್ತ್ರವನ್ನೂ, ಅನಂತವಿಜಯನಿಗೆ ಚಿತ್ರಕಲೆಯನ್ನೂ ವಾಸ್ತುಶಾಸ್ತ್ರವನ್ನೂ ಹೇಳಿಕೊಟ್ಟ; ಬಾಹುಬಲಿಗೆ ಕಾಮಶಾಸ್ತ್ರ ಹಸ್ತಸಾಮುದ್ರಿಕ ಆಯುರ್ವೇದ ಬಿಲ್ವಿದ್ಯೆ ಆನೆ ಮತ್ತು ಕುದುರೆಗಳಿಗೆ ಸಂಬಂಧಿಸಿದ ಶಾಸ್ತ್ರಗಳನ್ನೂ ಕಲಿಸಿದ; ಜೊತೆಗೆ, ಇವುಗಳಲ್ಲದೆ ಬೇರೆ ಜಗತ್ತಿಗೆ ಸಹಾಯಮಾಡಬಲ್ಲ ಶಾಸ್ತ್ರಗಳು ಏನೇನಿವೆಯೋ ಅವೆಲ್ಲವನ್ನೂ ಇನ್ನಿತರ ಮಕ್ಕಳಿಗೆ ಹೇಳಿಕೊಟ್ಟ.

[**ವಿಶೇಷ ವಿಚಾರ:** ಕೊನೆಯವರಾದರೂ ತನ್ನಿಬ್ಬರು ಮಗಳಂದಿರಿಗೆ ಮೊದಲು ಅಕ್ಷರಾಭ್ಯಾಸ ಮಾಡಿಸಿ, ಗಣಿತವನ್ನು ಹೇಳಿಕೊಟ್ಟು ಆನಂತರ ಅವರನ್ನು ವಿದ್ಯೆಯಲ್ಲಿ ಪರಿಪೂರ್ಣರಾಗಿ ಮಾಡಿದ್ದು ಗಮನಾರ್ಹ ವಿಷಯ. ಹೆಣ್ಣುಮಕ್ಕಳ ವಿದ್ಯೆ ಎಷ್ಟು ಮುಖ್ಯ ಎಂಬುದನ್ನಿದು ಸೂಚಿಸುವಂತಿದೆ; ಆದರೆ ವಿಪರ್ಯಾಸವೆಂಬಂತೆ, ಜೈನಮತದಲ್ಲಿ ಹೆಣ್ಣಿಗೆ ಎರಡನೆಯ ಸ್ಥಾನ; ಇದೇ ಕಾವ್ಯದಲ್ಲಿಯೇ ಲಲಿತಾಂಗನ ಜನ್ಮದಿಂದ ಆರ್ಯನಾಗುವವರೆಗಿನ ಮೂರು ಜನ್ಮಗಳಲ್ಲಿಯೂ ಸ್ವಯಂಪ್ರಭೆ–ಶ್ರೀಮತಿ–ಶ್ರೀಮತ್ಯಾರ್ಯೆಯು ಅವನು ಶ್ರೀಧರದೇವನಾದಾಗ ಆರ್ಯೆಯ ಜನ್ಮವಾದ ಬಳಿಕ 'ಶ್ರೀಮತ್ಯಾರ್ಯೆಯು ಸಮ್ಯಕ್ತ್ವಮಾಹಾತ್ಮ್ಯದಿಂ ಸ್ತ್ರೀರೂಪಮಂ ಪತ್ತುವಿಟ್ಟು ತತ್ಸ್ವಯಂಪ್ರಭಾವಿಮಾನದೊಳ್ ಶ್ರೀಧರಂಗೆ ಸಾಮಾನಿಕದೇವಂ ಸ್ವಯಂಪ್ರಭನೆಂಬ ದಿವಿಜನಾದಂ' – ಆಶ್ವಾಸ ೫, ಪದ್ಯ ೭೦ ರ ನಂತರದ ವಚನ – ಎಂಬ ವಿವರಣೆಯಿದೆ. ಅಂದರೆ ಹೆಣ್ಣು ಜನ್ಮವು ಹೋಗಿ ಗಂಡು ಜನ್ಮ ಬರುವುದರಿಂದಲೇ ಜೀವದ ಏಳಿಗೆ!]

ಆ ಪ್ರಸ್ತಾವದೊಳ್ ಫಳಪಾಕವಿರಾಮಂಗಳಪ್ಪ ಗರ್ಭಷಷ್ಟಿ ವ್ರೀಹಿ ಯವ ಗೋಧೂಮಾದಿ

**ಮಹೌಷಧಂಗಳುಂ ತಿಳಾತಸೀಕುಸುಂಭಾದಿ ದೀಪ್ರೌಷಧಿಗಳುಂ ಯಾವನಾಳ ಕಂಗು ಕೋದ್ರವಾದಿ ಸರ್ವೌಷಧಂಗಳುಂ ಮುನ್ನಮಪಕೃಷ್ಟಪಚ್ಯಂಗಳಪ್ಪುವಂದು ವಿರಳಂಗಳಾಗಿಯುಂ, ಅನಲ್ಪ ಕಲ್ಪಾವನಿಜಂಗಳ್ ಅಪೇತರಸವೀರ್ಯವಿಪಾಕಂಗಳಾಗಿಯುಂ ಅಧಿವ್ಯಾಧಿಬಾಧಿತಶರೀರರ್ ಮಾನವರ್ ಅಭಿಮಾನವಂ ಪತ್ತುವಿಟ್ಟು ನಾಭಿರಾಜನನುಮತದಿಂ ಬ್ರಹ್ಮನಲ್ಲಿಗೆ ವಂದು ಮೆಯ್ಯಿಕ್ಕಿ,**

**ಪದವಿಭಾಗ-ಅನ್ವಯ-ಅರ್ಥ:** ಆ ಪ್ರಸ್ತಾವದೊಳ್ = ಆ ಹೊತ್ತಿಗೆ, ಫಳಪಾಕವಿರಾಮಂಗಳ್ + ಅಪ್ಪ = ಕಾಳುಗಳು ಪಕ್ವವಾಗಿ ಒಣಗಿದ, ಗರ್ಭಷಷ್ಟಿಪ್ರೀಹಿ = ಅರುವತ್ತು ದಿನಗಳ ಬತ್ತ, ಯವ ಗೋಧೂಮ + ಆದಿ ಮಹಾ + ಔಷಧಂಗಳು = ಜವೆಗೋಧಿ ಮತ್ತು ಗೋಧಿಯಂತಹ ಸಸ್ಯಗಳೂ, ತಿಳ + ಅತಸೀ ಕುಸುಂಭಾ + ಆದಿ ದೀಪ್ರ + ಔಷಧಿಗಳುಂ = ಎಳ್ಳು ಅಗಸೆ ಕುಸುಬೆಯಂತಹ ಎಣ್ಣೆಕಾಳುಗಳೂ, ಯಾವನಾಳ ಕಂಗು ಕೋದ್ರವ + ಆದಿ ಸರ್ವ + ಔಷಧಂಗಳುಂ = ಜೋಳ ಅಡಕೆ ಹಾರಕ ಮುಂತಾಧ ಸಾಮಾನ್ಯ ಸಸ್ಯಗಳೂ, ಮುನ್ನಂ + ಅಪಕೃಷ್ಟಪಚ್ಯಂಗಳಪ್ಪುವು = ಈ ಮಂಚೆ ಬೇಸಾಯ ಮಾಡದೆ ಬೆಳೆಯುತ್ತಿದ್ದುವು, ಅಂದು ವಿರಳಂಗಳಾಗಿಯುಂ = ಈಗ ಅವು ಅಪರೂಪವಾಗಿ, ಅನಲ್ಪಕಲ್ಪ + ಅವನಿಜಂಗಳ್ + ಅಪೇತರಸವೀರ್ಯವಿಪಾಕಂಗಳಾಗಿಯುಂ = ಬಹುಪಾಲು ಕಲ್ಪವೃಕ್ಷಗಳು ರುಚಿ ಮತ್ತು ಪೌಷ್ಟಿಕತೆಗಳನ್ನು ಕಳೆದುಕೊಳ್ಳಲು, ಅಧಿವ್ಯಾಧಿಬಾಧಿತ ಶರೀರರ್ ಮಾನವರ್ = ರೋಗಗಳಿಗೊಳಗಾದ ಶರೀರವುಳ್ಳವರಾಗಿ, ಅಭಿಮಾನವಂ ಪತ್ತುವಿಟ್ಟು = ಸ್ವಾಭಿಮಾನವನ್ನು ತೊರೆದು, ನಾಭಿರಾಜನ + ಅನುಮತದಿಂದೆ + ಬ್ರಹ್ಮನಲ್ಲಿಗೆ ವಂದು = ನಾಭಿರಾಜನ ಅನುಮತಿಯಿಂದ ಪುರುದೇವನಲ್ಲಿಗೆ ಬಂದು, ಮೆಯ್ಯಿಕ್ಕಿ = ಸಾಷ್ಟಾಂಗ ನಮಸ್ಕಾರಮಾಡಿ,

**ಗದ್ಯಾನುಸರಣ:** ಆ ಹೊತ್ತಿಗೆ, ಕಾಳುಗಳು ಪಕ್ವವಾಗಿ ಒಣಗಿದ ಅರುವತ್ತು ದಿನಗಳ ಬತ್ತ, ಜವೆಗೋಧಿ ಮತ್ತು ಗೋಧಿಯಂತಹ ಸಸ್ಯಗಳೂ, ಎಳ್ಳು ಅಗಸೆ ಕುಸುಬೆಯಂತಹ ಎಣ್ಣೆಕಾಳುಗಳೂ, ಜೋಳ ಅಡಕೆ ಹಾರಕ ಮುಂತಾದ ಸಾಮಾನ್ಯ ಸಸ್ಯಗಳೂ, ಈ ಮಂಚೆ ಬೇಸಾಯ ಮಾಡದೆ ಬೆಳೆಯುತ್ತಿದ್ದುವು, ಆದರೀಗ ಅವು ಅಪರೂಪವಾಗಿ, ಬಹುಪಾಲು ಕಲ್ಪವೃಕ್ಷಗಳು ರುಚಿ ಮತ್ತು ಪೌಷ್ಟಿಕತೆಗಳನ್ನು ಕಳೆದುಕೊಂಡುಬಿಟ್ಟುವು; ಇದರಿಂದಾಗಿ ಶರೀರದಲ್ಲಿ ರೋಗಗಳುಂಟಾಗಿ ಜನರು ನಾಭಿರಾಜನ ಅನುಮತಿಯಿಂದ ಪುರುದೇವನಲ್ಲಿಗೆ ಬಂದು ಸಾಷ್ಟಾಂಗ ನಮಸ್ಕಾರಮಾಡಿ ಹೀಗೆ ಬಿನ್ನವಿಸಿಕೊಂಡರು.

**ವಿರಳಫಳಂಗಳಾದುವಖಿಳೌಷಧಿಗಳ್ ರಸವೀರ್ಯಪಾಕಮುಂ**
**ವಿರಳಮಿವೃಕ್ಷಜಾತಿಗಳೊಡಲ್ ಪಸಿವಾರ್ದಳುರ್ದಟ್ಟಿ ನಿಪ್ಪುಟಂ**
**ಕರಗಿದುದೆಮ್ಮ ಬಾಟ್ಟಿ ತೆಜಿನಾವುದು ದೇವ ಶರಣ್ಗೆ ವಂದೆವಾ**
**ದರದೆಮಗಪ್ಪುದಂ ಬೆಸಸಿ ಕಾವುದು ಲೋಕಮನಾದಿಪೂರುಷಾ** ೫೧

**ಪದವಿಭಾಗ-ಅನ್ವಯ-ಅರ್ಥ:** ಆದಿಪೂರುಷಾ = ಆದಿದೇವನೇ, ಅಖಿಳ + ಔಷಧಿಗಳ್ ವಿರಳಫಳಂಗಳ್ + ಆದುವು = ಎಲ್ಲ ಸಸ್ಯಗಳ ಫಲವೂ

ಅಪರೂಪವಾಗಿದೆ. ವೃಕ್ಷಜಾತಿಗಳೊಡಲ್ ರಸವೀರ್ಯಪಾಕಮುಂ ವಿರಳಮೆ = ಮರಗಳಲ್ಲಿಯೂ ರುಚಿ ಮತ್ತು ಪೌಷ್ಟಿಕತೆಗಳು ಅಪರೂಪ; ಪಸಿವು + ಅರ್ದು + ಅಳುರ್ದು + ಅಟ್ಟೆ ನಿಪ್ಪುಟಂ ಕರಗಿದುದು = ಹಸಿವು ಹೆಚ್ಚಾಗಿ ಪೀಡಿಸಿ ಸುಡಲು (ನಮ್ಮ ದೇಹಗಳು) ಪೂರ್ತಿ ಕೃಶವಾಗಿವೆ; ದೇವ ಎಮ್ಮ ಬಾಳ್ವ ತೆಱನಾವುದು = ದೇವರೇ. ನಾವು ಬದುಕುವ ರೀತಿಯಾವುದು. ಶರಣ್ಗೆ ವಂದೆವು = ಶರಣಾಗಿ ಬಂದಿದ್ದೇವೆ. ಅದರದೆ + ಎಮಗೆ + ಅಪ್ಪುದಂ ಬೆಸಸಿ ಲೋಕಮನ್ ಕಾವುದು = ಕರುಣೆಯಿಂದ ನಮಗೆ ಸಾಧ್ಯವಾಗುವುದನ್ನು ಹೇಳಿ ಜಗತ್ತನ್ನು ಕಾಪಾಡು.

ಗದ್ಯಾನುಸರಣ: ಆದಿದೇವನೇ, ಎಲ್ಲ ಸಸ್ಯಗಳ ಫಲವೂ ಅಪರೂಪವಾಗಿದೆ. ಮರಗಳಲ್ಲಿಯೂ ರುಚಿ ಮತ್ತು ಪೌಷ್ಟಿಕತೆಗಳು ಅಪರೂಪ; ಹಸಿವು ಹೆಚ್ಚಾಗಿ ಪೀಡಿಸಿ ಸುಡಲು (ನಮ್ಮ ದೇಹಗಳು) ಪೂರ್ತಿ ಕೃಶವಾಗಿವೆ; ದೇವರೇ. ನಾವು ಬದುಕುವ ರೀತಿಯಾವುದು. ಶರಣಾಗಿ ಬಂದಿದ್ದೇವೆ ಕರುಣೆಯಿಂದ ನಮಗೆ ಸಾಧ್ಯವಾಗುವುದನ್ನು ಹೇಳಿ ಜಗತ್ತನ್ನು ಕಾಪಾಡು,

**ವ। ಎಂಬುದುಂ ತತ್ಪ್ರಜಾಜೀವನೋಪಾಯಮಂ ಷಟ್ಕರ್ಮಂಗಳುಮಂ ವರ್ಣಾಶ್ರಮ ವಿಭಾಗಂಗಳುಮಂ ಗ್ರಾಮಗೃಹಾದಿಭೇದಂಗಳುಮಂ ಭೋಗಭೂಮಿವಿರಾಮದೊಳ್ ಈ ಕರ್ಮಭೂಮಿಪ್ರಾರಂಭದೊಳ್ ನಿಜೆಸಲ್ವೇೞ್ಕುಮೆಂದು ಮನದೊಳ್ ಬಗೆದು, ಅವರಂ 'ಅಂಜದಿರಿ' ಎಂದು ಸಂತಯಿಸಿ ತದನಂತರಂ ಭಗವದನುಸ್ಮರಣಮಾತ್ರದಿಂದಂ ಅಮರೇಂದ್ರಂ ಬಂದು, ಜಿನೇಂದ್ರ ಮಂದಿರಂಗಳಂ ನಿರ್ಮಿಸಿ, ಬೞಿಕಂ ತಜ್ಜನಪದ ಮಧ್ಯಂಗಳೊಳ್ ರಾಜಧಾನಿಗಳುಮಂ ಅಭಿರಾಮಜಲಾಶಯಂಗಳುಮಂ ನಿರ್ಮಿಸಿ, ಬೞಿಕಂ ದೇವಮಾತೃಕ ಸಾಧಾರಣ ಅನೂಪ ಜಾಂಗಳ ಭೇದಂಗಳುಮನ್ ಅಂತಪಾಳಪಾಳಿತ ದುರ್ಗಪರಿವೃತಾಂತಂಗಳಂ ಲುಬ್ಧಕ ಅರಣ್ಯಚರ ಪುಳಿಂದ ಶಬರ ಆದಿ ಪರಿರಕ್ಷಿತಮಪ್ಪ ವಿವಿಧ ವಿಷಯಂಗಳುಮಂ ಸಮಸ್ತಸಸ್ಯಸಂಪತ್ಸಂಪನ್ನ ಸುಕ್ಷೇತ್ರಂಗಳುಮಂ ಅವನಾಳ್ವ ತೆಱಗೊಳ್ವ ಬಿಟ್ಟಿಬೆಸಕೆಯಿಸಿಕೊಳ್ವ ಭೋಗಿಪ ನಿಯೋಗಂಗಳುಮಂ ಮಾಡಿದಂ. ಇಂತು ಪಲವುಂ ಪುರಂಗಳಂ ಸಮೆದು ದೇವನಿಡೆ ಪುರಂದರವೆಸರಂ ಧರಿಯಿಸಿ ಅಮರೇಂದ್ರನಮರಲೋಕಕ್ಕೊಗೆದಂ**

**ತದನಂತರಂ ಪ್ರಜಾಪತಿಯುಂ ಪ್ರಜೋಪಜೀವನನಿಮಿತ್ತಮಾಗೆ ಸೇವಾಧರ್ಮೋಚಿತ ವೆನಿಸುವ ಸುಕರ್ಮಂಗಳುಮಂ ಅನೇಕ ಲಿಪಿವಿಧಾನಂಗಳಪ್ಪ ಮಷಿಯುಮಂ ಕೃಷೀವಲ ಕುಲೋಚಿತಮಪ್ಪ ಕೃಷಿಯುಮಂ, ಶಾಸ್ತ್ರಾನುಗತಮಪ್ಪ ವಿದ್ಯೆಯುಮಂ, ವಣಿಗ್ವ್ಯವಹಾರಾನುಕಾರಿಯಪ್ಪ ವಾಣಿಜ್ಯಮುಮಂ, ಹಸ್ತಕೌಶಲಕಳಿತಮಪ್ಪ ಚಿತ್ರಕಳಾ ಪತ್ರಚ್ಛೇದ್ಯಾದಿಸಮನ್ವಿತಮಪ್ಪ ಶಿಲ್ಪಮುಮಂ ಪಡೆದು, ತನ್ನ ಪಡೆದ ಸಕಳಕ್ಷತ್ರಿಯವಣಿಕ್ಶೂದ್ರರೆಂಬ ಮೂಱುವರ್ಣಂಗಳೊಳಗೆ ಕ್ಷತ್ರತ್ರಾಣಾದಿ ಗುಣೋಪೇತಮಪ್ಪ ಅಖಿಳಕ್ಷತ್ರಿಯಸಮೂಹಕ್ಕೆ ಶಸ್ತ್ರಕರ್ಮಮುಮಂ ವಣಿಗ್ವಂಶಕ್ಕೆ ಪಾಶುಪಾಲ್ಯಕೃಷಿಪಣ್ಯಕರ್ಮಂಗಳುಮಂ ಮತ್ತಂ ಸ್ಪೃಶ್ಯಾಸ್ಪೃಶ್ಯಕಾರುಗಳಮೆಂಬಿರ್ತೆಱದ ಶೂದ್ರಸಂತತಿಗೆ ಶುಶ್ರೂಷಾನಿಯೋಗಂಗಳುಮಂ ಯಥಾಯೋಗ್ಯಮುಪದೇಶಂಗೆಯ್ದು ವರ್ಣಸಂಕರಮಾಗಲೀಯದೆ ತಮ್ಮ ತಮ್ಮ ಜಾತಿಗಳೊಳ್ ನಣ್ಪುಮಂ ಕೊಳ್ಕೊಡೆಯುಮಂ ನಿಯೋಜಿಸಿ[ದಂ].**

ಪದವಿಭಾಗ–ಅನ್ವಯ–ಅರ್ಥ: ಎಂಬುದುಂ = ಎಂದು ಬೇಡಿಕೊಳ್ಳಲು. ತತ್ + ಪ್ರಜಾಜೀವನ + ಉಪಾಯಮಂ = ಆ ಪ್ರಜೆಗಳ ಜೀವನ ನಿರ್ವಹಣೆಯ

ಉಪಾಯವನ್ನು, ಷಟ್ಕರ್ಮಂಗಳುಮಂ ವರ್ಣಾಶ್ರಮವಿಭಾಗಂಗಳುಮಂ = ಆರು ಬಗೆಯ ಕೆಲಸಗಳನ್ನೂ ವರ್ಣ ಮತ್ತು ಆಶ್ರಮಗಳ ವಿಭಾಗಗಳನ್ನೂ, ಗ್ರಾಮಗೃಹ + ಆದಿಭೇದಂಗಳುಮಂ = ಗ್ರಾಮ ಮತ್ತು ಮನೆಗಳ ಸ್ವರೂಪವ್ಯತ್ಯಾಸವನ್ನೂ, ಭೋಗಭೂಮಿವಿರಾಮದೊಳ್ ಈ ಕರ್ಮಭೂಮಿಪ್ರಾರಂಭದೊಳ್ = ಭೋಗಭೂಮಿಯ ಸ್ಥಿತಿ ಮುಗಿದು ಕರ್ಮಭೂಮಿಯ ಸ್ಥಿತಿ ಆರಂಭವಾಗುವ ಸಮಯದಲ್ಲಿ, ನಿಜೆಸಲ್ವೇಟ್ಕುಂ + ಎಂದು = ಸ್ಥಾಪಿಸಬೇಕೆಂದು. ಮನದೊಳ್ ಬಗೆದು = ಮನಸ್ಸಿನಲ್ಲಿ ಆಲೋಚನೆ ಮಾಡಿ. ಅವರಂ ಅಂಜದಿರಿಂ + ಎಂದು = ಅವರಿಗೆ ಹೆದರಬೇಡಿ ಎಂದು. ಸಂತಯಿಸಿ = ಸಮಾಧಾನಪಡಿಸಿ. ತತ್ + ಅನಂತರಂ ಭಗವತ್ + ಅನುಸ್ಮರಣಮಾತ್ರದಿಂದೆ + ಅಮರೇಂದ್ರಂ ಬಂದು = ಆ ಬಳಿಕ ಆದಿದೇವನು ಅಂದುಕೊಂಡ ಮಾತ್ರದಿಂದಲೇ ದೇವೇಂದ್ರನು ಬಂದು, ಜಿನೇಂದ್ರ ಮಂದಿರಂಗಳಂ ನಿರ್ಮಿಸಿ = ಜಿನಾಲಯಗಳನ್ನು ಕಟ್ಟಿ, ಬಟಿಕಂ ದೇವಮಾತೃಕ ಸಾಧಾರಣ + ಅನೂಪ ಜಾಂಗಳ ಭೇದಂಗಳುಮನ್ = ಮಳೆಯ ನೀರಿನಿಂದ ಬೇಸಾಯಯೋಗ್ಯವಾದುದು ಸಾಧಾರಣವಾದುದು ನೀರು ಸಮೃದ್ಧವಾದುದು ಹಾಗೂ ಬರಡಾದುದು ಎಂಬ ಕೃಷಿಪ್ರದೇಶಗಳನ್ನೂ, ಅಂತಪಾಳಪಾಳಿತ = ಗಡಿಕಾಪಿನವರಿಂದ ರಕ್ಷಿತವಾದ, ದುರ್ಗಪರಿವೃತಾಂತಂಗಳಂ = ದುರ್ಗಗಳಿಂದ ಕೂಡಿದ ಪ್ರದೇಶಗಳನ್ನೂ, ಲುಬ್ಧಕ + ಅರಣ್ಯಚರ ಪುಳಿಂದ ಶಬರ + ಆದಿ ಪರಿರಕ್ಷಿತಂ + ಅಪ್ಪ = ಬೇಡರು ಕಾಡುನಿವಾಸಿಗಳು ಬೇಟೆಗಾರರು ಶಬರ ಮುಂತಾದವರಿಂದ ಕಾಪಿಡಲಾದ, ವಿವಿಧ ವಿಷಯಂಗಳುಮಂ = ನಾನಾ ಬಗೆಯ ದೇಶಗಳನ್ನೂ, ಸಮಸ್ತ ಸಸ್ಯಸಂಪತ್‌ಸಂಪನ್ನ ಸುಕ್ಷೇತ್ರಂಗಳುಮಂ = ಎಲ್ಲ ಬಗೆಯ ಸಸ್ಯಸಂಪತ್ತಿನಿಂದ ಸಮೃದ್ಧವಾದ ಜಾಗಗಳನ್ನೂ ನಿರ್ಮಿಸಿ, ಅವನ್ + ಆಳ್ವ ತೆಱೆಗೊಳ್ವ ಬಿಟ್ಟಿಬೆಸಕೆಯಿಸಿಕೊಳ್ವ ಭೋಗಿಪ ನಿಯೋಗಂಗಳುಮಂ ಮಾಡಿದಂ = ಅವುಗಳನ್ನು ಆಡಳಿತಕ್ಕೊಳಪಡಿಸುವ ತೆರಿಗೆ ಸಂಗ್ರಹಿಸುವ ಬಿಟ್ಟಿ ಕೆಲಸ ಮಾಡಿಸಿಕೊಳ್ಳುವ ಸಂತೋಷಪಡುವ ರಾಜಪ್ರತಿನಿಧಿಗಳನ್ನೂ ಸೃಷ್ಟಿಸಿದ. ಸಮೆದು ಪಲವುಂ ಪುರಂಗಳಂ = ಹಲವಾರು ಪುರಗಳನ್ನು ನಿರ್ಮಿಸಿದ ದೇವೇಂದ್ರನು, ಪುರಂದರವೆಸರಂ ದೇವನ್ + ಇಡೆ = ಆದಿದೇವನು ಪುರಂದರ ಎಂಬ ಹೆಸರನ್ನಿಡಲು, ಧರಿಯಿಸಿ ಅಮರೇಂದ್ರನ್ ಅಮರಲೋಕಕ್ಕೆ + ಒಗೆದಂ = ಅದನ್ನು ಹೊಂದಿ ದೇವೇಂದ್ರನು ದೇವಲೋಕಕ್ಕೆ ಹೋದ.

ತತ್ + ಅನಂತರಂ = ಆ ಬಳಿಕ, ಪ್ರಜಾಪತಿಯುಂ ಪ್ರಜೋಪಜೀವನನಿಮಿತ್ತಂ + ಆಗೆ = ಆದಿಬ್ರಹ್ಮನು ಪ್ರಜೆಗಳ ಜೀವನನಿರ್ವಹಣೆಗೆ ಅನುಕೂಲವಾಗುವಂತೆ, ಸೇವಾಧರ್ಮ + ಉಚಿತವೆನಿಸುವ = ಸೇವೆಯನ್ನು ನಿರ್ವಹಿಸಲು ತಕ್ಕುವಾದ, ಸುಕರ್ಮಂಗಳುಮಂ = ಕೆಲಸಗಳನ್ನೂ ಅನೇಕಲಿಪಿವಿಧಾನಂಗಳಪ್ಪ ಮಷಿಯುಮಂ ಕೃಷೀವಲಕುಲೋಚಿತಮಪ್ಪ ಕೃಷಿಯುಮಂ ಶಾಸ್ತ್ರ + ಅನುಗತಮಪ್ಪ ವಿದ್ಯೆಯುಮಂ ವಣಿಕ್ + ವ್ಯವಹಾರ + ಅನುಕಾರಿಯಪ್ಪ ವಾಣಿಜ್ಯಮುಮಂ ಹಸ್ತಕೌಶಲಕಳಿತಮಪ್ಪ

ಚಿತ್ರಕಳಾ ಪತ್ರಚ್ಛೇದ + ಆದಿ ಸಮನ್ವಿತಮಪ್ಪ ಶಿಲ್ಪಮುಮಂ ಪಡೆದು = ಕತ್ತಿಯ ಕೆಲಸವನ್ನೂ, ವಿವಿಧ ಲಿಪಿಗಳನ್ನು ಬರೆಯುವ ವಿಧಾನವಾದ ಮಸಿಕರ್ಮವನ್ನೂ, ಶಾಸ್ತ್ರಕ್ಕನುಗುಣವಾದ ವಿದ್ಯೆಯನ್ನೂ, ವ್ಯಾಪಾರವ್ಯವಹಾರಗಳನ್ನು ನಡೆಸಬಹುದಾದ ವಾಣಿಜ್ಯವನ್ನೂ, ಕರಕುಶಲತೆಯಿಂದ ಮಾಡಬೇಕಾದ ಚಿತ್ರಕಲೆ ಪತ್ರಚ್ಛೇದ ಮುಂತಾದ ಶಿಲ್ಪಗಳನ್ನೂ ವಿಂಗಡಿಸಿಕೊಂಡ; ತನ್ನ ಪಡೆದ ಸಕಳಕ್ಷತ್ರಿಯವಣಿಕ್ + ಶೂದ್ರರೆಂಬ ಮೂಱುವರ್ಣಂಗಳೊಳಗೆ = ತಾನು ವಿಂಗಡಿಸಿಕೊಂಡ ಮೂರು ವರ್ಣಗಳವರಲ್ಲಿ, ಕ್ಷತ್ರತ್ರಾಣ + ಆದಿಗುಣ + ಉಪೇತಂ + ಅಪ್ಪ ಅಖಿಳಕ್ಷತ್ರಿಯಸಮೂಹಕ್ಕೆ ಶಸ್ತ್ರಕರ್ಮಮುಮಂ = ಏಟಿನಿಂದ ಕಾಪಾಡಬಲ್ಲ ಗುಣಗಳಿಂದ ಕೂಡಿದ ಕ್ಷತ್ರಿಯವರ್ಗಕ್ಕೆ ಆಯುಧವಿದ್ಯೆಯನ್ನೂ, ವಣಿಕ್ + ವಂಶಕ್ಕೆ ಪಾಶುಪಾಲ್ಯ ಕೃಷಿಪಣ್ಯಕರ್ಮಂಗಳುಮಂ = ವಣಿಕರಿಗೆ ಪಶುಪಾಲನೆ ಬೇಸಾಯ ಮತ್ತು ವ್ಯಾಪಾರಗಳನ್ನೂ, ಮತ್ತಂ ಸ್ಪೃಶ್ಯ + ಅಸ್ಪೃಶ್ಯಕಾರುಗಳಂ + ಎಂಬ + ಇತರ್ + ತೆಱದ ಶೂದ್ರಸಂತತಿಗೆ ಶುಶ್ರೂಷಾನಿಯೋಗಂಗಳುಮಂ = ಕೊನೆಯಲ್ಲಿ, ಸ್ಪೃಶ್ಯರು ಮತ್ತು ಅಸ್ಪೃಶ್ಯರು ಎಂಬ ಎರಡು ಬಗೆಯ ಶೂದ್ರವರ್ಗಕ್ಕೆ ಸೇವೆಮಾಡುವ ಕೆಲಸವನ್ನೂ, ಯಥಾಯೋಗ್ಯಂ + ಉಪದೇಶಂಗೆಯ್ದು = ಸೂಕ್ತವಾದ ಬಗೆಯಲ್ಲಿ ಹೇಳಿಕೊಟ್ಟು, ವರ್ಣಸಂಕರಂ + ಆಗಲೀಯದೆ ತಮ್ಮ ತಮ್ಮ ಜಾತಿಗಳೊಳ್ ನಣ್ಪುಮಂ ಕೊಳ್ಕೊಡೆಯುಮಂ ನಿಯೋಜಿಸಿ = ವರ್ಣಗಳ ಬೆರಕೆಯಾಗದ ಹಾಗೆ ಅವರವರ ಜಾತಿಗಳಲ್ಲಿಯೇ ನಂಟುತನ ಮತ್ತು ಹೆಣ್ಣು ಕೊಟ್ಟುಕೊಳ್ಳುವುದನ್ನೂ ಆಜ್ಞಾಪಿಸಿ,

**ಗದ್ಯಾನುಸರಣ:** ಎಂದು ಬೇಡಿಕೊಂಡರು; ಅವರ ಬಗೆಗಿನ ಕರುಣೆಯಿಂದ ಮನಸ್ಸು ತೊಯ್ದ ಆದಿದೇವನು ಪ್ರಜೆಗಳ ಜೀವನ ನಿರ್ವಹಣೆಯ ಉಪಾಯಗಳಾದ ಆರು ಬಗೆಯ ಕೆಲಸಗಳನ್ನೂ ವರ್ಣ ಮತ್ತು ಆಶ್ರಮಗಳ ವಿಭಾಗಗಳನ್ನೂ, ಗ್ರಾಮ ಮತ್ತು ಮನೆಗಳ ಸ್ವರೂಪವ್ಯತ್ಯಾಸವನ್ನೂ ಭೋಗಭೂಮಿಯ ಸ್ಥಿತಿ ಮುಗಿದು ಕರ್ಮಭೂಮಿಯ ಸ್ಥಿತಿ ಆರಂಭವಾಗುವ ಸಮಯದಲ್ಲಿ ಸ್ಥಾಪಿಸಬೇಕೆಂದು ಆಲೋಚನೆ ಮಾಡಿದ; 'ಹೆದರಬೇಡಿ' ಎಂದು ಜನಗಳನ್ನು ಸಮಾಧಾನಪಡಿಸಿದ; ಆ ಬಳಿಕ ಆದಿದೇವನು ದೇವೇಂದ್ರನನ್ನು ನೆನಸಿಕೊಂಡ ಮರುಕ್ಷಣವೇ ಅವನು ಬಂದ. ಅವನು ಮೊದಲಿಗೆ ಜಿನಾಲಯಗಳನ್ನು ಕಟ್ಟಿ, ಆನಂತರ ಮಳೆಯ ನೀರಿನಿಂದ ಬೇಸಾಯಯೋಗ್ಯವಾದುದು ಸಾಧಾರಣವಾದುದು ನೀರು ಸಮೃದ್ಧವಾದುದು ಹಾಗೂ ಬರಡಾದುದು ಎಂಬ ಕೃಷಿಪ್ರದೇಶಗಳನ್ನೂ, ದುರ್ಗಗಳಿಂದ ಕೂಡಿದ ಪ್ರದೇಶಗಳನ್ನೂ, ಬೇಡರು ಕಾಡುನಿವಾಸಿಗಳು ಬೇಟೆಗಾರರು ಶಬರ ಮುಂತಾದವರಿಂದ ಕಾಪಿಡಲಾದ ನಾನಾ ಬಗೆಯ ದೇಶಗಳನ್ನೂ ಆವನಾಳ್ವ ತೆಱೆಗೊಳ್ವ ಬಿಟ್ಟಿಬೆಸಕೆಯಿಸಿಕೊಳ್ವ ಭೋಗಿಪ ನಿಯೋಗಂಗಳುಮಂ ಮಾಡಿದಂ = ಅವುಗಳನ್ನು ಆಳುವ, ತೆರಿಗೆ ವಸೂಲು ಮಾಡುವ, ಬಿಟ್ಟಿ ಕೆಲಸಗಳನ್ನು ಮಾಡಿಸುವ, ಅದನ್ನು ಅನುಭವಿಸುವ ರಾಜಪ್ರತಿನಿಧಿಗಳನ್ನೂ ಮಾಡಿದ. ಹಲವಾರು

ಪುರಗಳನ್ನು ನಿರ್ಮಿಸಿದ ದೇವೇಂದ್ರನಿಗೆ ಆದಿದೇವನು ಪುರಂದರ ಎಂಬ ಹೆಸರನ್ನಿಡಲು, ಅದನ್ನು ಹೊಂದಿ ದೇವೇಂದ್ರನು ದೇವಲೋಕಕ್ಕೆ ಹೋದ.

ಆ ಬಳಿಕ, ಬ್ರಹ್ಮನು ಪ್ರಜೆಗಳ ಜೀವನನಿರ್ವಹಣೆಗೆ ಅನುಕೂಲವಾಗುವಂತೆ ಸೇವೆಗಳನ್ನು ನಿರ್ವಹಿಸಲು ತಕ್ಕುವಾದ ಕತ್ತಿಯ ಕೆಲಸ, ವಿವಿಧ ಲಿಪಿಗಳನ್ನು ಬರೆಯುವ ಪಿಧಾನವಾದ ಮಸಿಕರ್ಮ, ಶಾಸ್ತ್ರಕ್ಕನುಗುಣವಾದ ವಿದ್ಯೆ. ವ್ಯಾಪಾರವ್ಯವಹಾರಗಳನ್ನು ನಡೆಸಬಹುದಾದ ವಾಣಿಜ್ಯ, ಕರಕುಶಲತೆಯಿಂದ ಮಾಡಬೇಕಾದ ಚಿತ್ರಕಲೆ ಪತ್ರಚ್ಛೇದ ಮುಂತಾ ದಶಿಲ್ಪಗಳನ್ನೂ ವಿಂಗಡಿಸಿಕೊಂಡ; ತಾನು ವಿಭಜಿಸಿಕೊಂಡ ಮೂರು ವರ್ಣಗಳವರಲ್ಲಿ, ಏಟಿನಿಂದ ಕಾಪಾಡಬಲ್ಲ ಗುಣಗಳಿಂದ ಕೂಡಿದ ಕ್ಷತ್ರಿಯವರ್ಗಕ್ಕೆ ಆಯುಧವಿದ್ಯೆಯನ್ನೂ, ವಣಿಕರಿಗೆ ಪಶುಪಾಲನೆ ಬೇಸಾಯ ಮತ್ತು ವ್ಯಾಪಾರಗಳನ್ನೂ, ಕೊನೆಯಲ್ಲಿ. ಸ್ಪೃಶ್ಯರು ಮತ್ತು ಅಸ್ಪೃಶ್ಯರು ಎಂಬ ಎರಡು ಬಗೆಯ ಶೂದ್ರವರ್ಗಕ್ಕೆ ಸೇವೆಮಾಡುವ ಕೆಲಸವನ್ನೂ ಸೂಕ್ತವಾದ ಬಗೆಯಲ್ಲಿ ಹೇಳಿಕೊಟ್ಟ; ಅಲ್ಲದೆ, ವರ್ಣಗಳ ಬೆರಕೆಯಾಗದ ಹಾಗೆ ಅವರವರ ಜಾತಿಗಳಲ್ಲಿಯೇ ನಂಟುತನ ಮತ್ತು ಹೆಣ್ಣನ್ನು ಕೊಡುವುದು-ತರುವುದನ್ನೂ ಕಟ್ಟುಮಾಡಿದ.

[**ವಿಶೇಷ ವಿಚಾರ:** 'ಬ್ರಹ್ಮ' = ಬ್ರಹ್ಮ ಎಂದರೆ ಸೃಷ್ಟಿಕರ್ತ; ಆದರೆ ಆದಿದೇವನು ಸೃಷ್ಟಿಸಿದ್ದು ವಿಶ್ವವನ್ನಲ್ಲ, ವಿವಿಧ ವಿದ್ಯೆಗಳನ್ನು ಮತ್ತು ಸಮಾಜವಿಂಗಡಣೆಯನ್ನು ಎಂಬ ವಿವರಣೆ ಸಮಂಜಸವಾಗಿದೆ. ಇಲ್ಲಿನ ವರ್ಣವಿಂಗಡಣೆಯಲ್ಲಿ 'ಬ್ರಾಹ್ಮಣ' ಇಲ್ಲ; ಇದನ್ನು ಮುಂದೆ ಭರತ ಸೃಷ್ಟಿಸಿದ ಎಂಬುದು ನಿಜವಾದರೂ (ಆದರೆ ಆ ವರ್ಣವು ಬಹುಬೇಗ ಭ್ರಷ್ಟವಾಗುತ್ತದೆ ಎಂಬುದು ಆದಿದೇವನ ಭವಿಷ್ಯವಾಕ್ಕು), ಜೈನರಲ್ಲಿ ಬ್ರಾಹ್ಮಣನಿಗೆ ಅತ್ಯಂತ ಶ್ರೇಷ್ಠ ಸ್ಥಾನವಿಲ್ಲ, ಅದೇನಿದ್ದರೂ ಕ್ಷತ್ರಿಯನದು. ಜೈನಧರ್ಮದ ಪರಂಪರೆಯಲ್ಲಿಯೇ ಇದ್ದ ರಾಜತ್ವದ ಬಗೆಗಿನ ಅನನ್ಯ ಗೌರವ, ಮತ್ತೊಂದೆಡೆ ತನ್ನ ಕಾಲದ ಗಾಳಿಯಲ್ಲಿದ್ದ ರಾಜಭಕ್ತಿ ಇವುಗಳು ಪಂಪನ ವ್ಯಕ್ತಿತ್ವದ ಭಾಗವಾಗಿ ತನ್ನ ಕಾವ್ಯದಲ್ಲವನು ರಾಜತ್ವಕ್ಕೆ ಅಪಾರ ಗೌರವವನ್ನು ತೋರಿಸಲು ಕಾರಣವಾಗಿವೆ. ಹೀಗಾಗಿ ಪಂಪನಿಗೂ ರಾಜತ್ವಕ್ಕೂ ಎಲ್ಲಿಲ್ಲದ ನಂಟು. ಪಂಪನ ಎರಡೂ ಕಾವ್ಯಗಳು ರಾಜರನ್ನು ಕುರಿತವು. ಪಂಪನ ಮೊದಲ ಕಾವ್ಯವಾದ 'ಆದಿಪುರಾಣ'ವು ಮೊದಲನೆಯ ತೀರ್ಥಂಕರನ ಚರಿತೆ. ಜೈನಪರಂಪರೆಯ ಪ್ರಕಾರ ಎಲ್ಲ ತೀರ್ಥಂಕರರೂ ರಾಜರುಗಳೇ, ಮೊದಲನೆಯ ತೀರ್ಥಂಕರನೂ ಇದಕ್ಕೆ ಹೊರತಲ್ಲ. ಜೊತೆಗೆ 'ಭವಾವಳಿ'ಯಲ್ಲಿ ಚಿತ್ರಿತವಾಗಿರುವ ಹಿಂದಿನ ಜನ್ಮಗಳೆಲ್ಲದ ರಲ್ಲಿಯೂ ಅವನು ರಾಜನಾಗಿದ್ದವನನು. ಇನ್ನು ಎರಡನೆಯ ಕಾವ್ಯ ವಿಕ್ರಮಾರ್ಜುನವಿಜಯಂ'ನಲ್ಲಿ ತನ್ನ ಆಶ್ರಯದಾತ ರಾಜನನ್ನು ಕಥಾನಾಯಕನಾದ ಅರ್ಜುನನೊಡನೆ ಸಮೀಕರಿಸಿ ಅವನಿಗೆ ಅರೆದೈವತ್ವವನ್ನು ಒದಗಿಸಿದವನು. ಇದರಿಂದ ಉಭಯತ್ರರಿಗೂ ಲಾಭವಾಯಿತು. ಈ ಎಲ್ಲ ಪಾತ್ರಗಳೂ ತಮ್ಮ ವಿಶಿಷ್ಟ ಗುಣಗಳನ್ನು ಮೆರೆದದ್ದು ಯುದ್ಧಭೂಮಿಯಲ್ಲಿ, ತಮ್ಮ ಪ್ರಾಣಗಳನ್ನು ಒತ್ತೆಯಿಟ್ಟು (ಬೇರೊಂದು

ಸಂದರ್ಭದಲ್ಲಿ ಈ ಕಾವ್ಯದಲ್ಲಿಯೇ 'ಭಾರತಂ ಕಲಹಂ' ಎಂಬ ಮಾತಿದೆ). ಅಂದರೆ ಈ ಎಲ್ಲ ಪಾತ್ರಗಳ ಒರೆಗಲ್ಲು ಯುದ್ಧ, ಉಳಿದಂತೆ ಬದುಕಿನ ಬಗೆಯಲ್ಲ. ಯುದ್ಧ ರಾಜರ ಸುತ್ತ ತಾನೆ ಹೆಣೆದುಕೊಳ್ಳುವುದು? ಅಂದರೆ ಭಾರತವನ್ನು 'ಲೋಕಪೂಜ್ಯವಾಗಿಸುವ' ಈ ಗುಣಗಳೂ ಪೂಜ್ಯವಾದವು. ಅವೆಲ್ಲ ಯುದ್ಧಸಂಬಂಧಿ ಗುಣಗಳು, ರಾಜಪರವಾದ ಮೌಲ್ಯಗಳು. ಅಂದರೆ ಪಂಪ ಈ ಮೌಲ್ಯಗಳಿಂದಾಗಿ ಬದುಕು ಮೌಲಿಕವಾಗುತ್ತದೆ, ಅಂಥ ಬದುಕು ಲೋಕಪೂಜಿತವಾಗುತ್ತದೆ ಎಂಬ ಧ್ವನಿಯನ್ನು ಸೂಸುತ್ತಿದ್ದಾನೆ. ಪ್ರಾಯಃ ಪಂಪನ ಅಭಿಪ್ರಾಯದಲ್ಲಿ, ತನ್ನ ಕಾಲದ ಮನೋಭಾವಕ್ಕೆ ತಕ್ಕಂತೆ, ಒಬ್ಬ ವ್ಯಕ್ತಿಯ ಲೌಕಿಕ ಬದುಕು ಸಾರ್ಥಕವಾಗುವುದು ಈ ಮೌಲ್ಯಗಳಿಂದ, ಯುದ್ಧಸಂಬಂಧೀ ಮೌಲ್ಯಗಳ ಪಾಲನೆಯಿಂದ. ಹನ್ನೆರಡನೇ ಶತಮಾನದ ಬ್ರಹ್ಮಶಿವನಂತೂ ತನ್ನ 'ಸಮಯ ಪರೀಕ್ಷೆ'ಯಲ್ಲಿ ಕ್ಷತ್ರಿಯನ ಶ್ರೇಷ್ಠತೆಯನ್ನು ನೇರವಾಗಿ ಹೇಳುತ್ತಾನೆ: 'ಕ್ಷತ್ರಿಯನೆ ಧಾತ್ರಿಗೊಡೆಯಂ ಕ್ಷತ್ರಿಯನಾರ್ಗೇನನಿತ್ತನದು ದೆಯ್ವಕೃತಂ ಕ್ಷತ್ರಿಯನೆ ತೀರ್ಥಕರನಾ ಕ್ಷತ್ರಿಯನದಜಿಂದೆ ಪಿರಿಯನೆಲ್ಲಂದದೊಳಂ' ('ಸಮಯಪರೀಕ್ಷೆ, ೨. ೨೩).

**ಮತ್ತೊಂದು ಅಂಶ:** ಜೈನ-ಬೌದ್ಧಗಳೆರಡೂ ವೈದಿಕವನ್ನು ತೀವ್ರವಾಗಿ ವಿರೋಧಿಸಿದ ಮತಗಳು; ಆದರೆ ವೈದಿಕವನ್ನು ಕಟುವಾಗಿ ವಿರೋಧಿಸಿದ ಕಾರಣದಿಂದಾಗಿ ಬೌದ್ಧವು ಇಲ್ಲಿಂದ ಕಾಲ್ತೆಗೆಯಬೇಕಾಯಿತು; ಆದರೆ ಅದರೊಡನೆ ರಾಜಿಯಾಗಿ ಅಲ್ಲಿನ ಪೌರಾಣಿಕತೆ, ಮೂರ್ತಿಪೂಜೆ, ಧಾರ್ಮಿಕಾಚರಣೆ, ವರ್ಣವ್ಯವಸ್ಥೆ ಮುಂತಾದವುಗಳನ್ನು ಅನುಸರಿಸಿದ ಜೈನ ಉಳಿದುಕೊಂಡಿತು. ಮುಂದೆಯೂ ಅದು ವೈದಿಕ ಪ್ರಭಾವಕ್ಕೆ ಒಳಗಾಗುತ್ತಲೇ ಹೋಯಿತು. ಪಂಪನ 'ಆದಿಪುರಾಣ'ದಲ್ಲಿ ಎರಡು ಪ್ರಸಂಗಗಳಿವೆ: ಒಂದು, ಇಲ್ಲಿನ ಸನ್ನಿವೇಶ: ಆದಿದೇವನು ವರ್ಣವಿಂಗಡಣೆ ಮಾಡಿ ಅವರಿಗೆ ವೃತ್ತಿಗಳನ್ನು ನಿಗದಿಗೊಳಿಸಿ ವರ್ಣಸಂಕರಕ್ಕೆಡೆಯಾಗದಂತೆ ನಿಯೋಜಿಸಿದ ಸನ್ನಿವೇಶ. ಎರಡು, ಮುಂದೆ ಅವನ ಮಗನಾದ ಭರತನು ಸೂಕ್ಷ್ಮಮನಸ್ಸು ಹಾಗೂ ವಿವೇಚನೆಗಳನ್ನು ತೋರಿಸಿದ ಕೆಲವರನ್ನು 'ಮೆಚ್ಚಿ ದಾನಸನ್ಮಾನಯೋಗ್ಯರಪ್ಪರೆಂದು ಪದ್ಮನಿಧಿಯಂ ತರಿಸಿ ತಪನೀಯಸೂತ್ರ ದೊಳೇಕಾದಶೋತ್ತರದಶಾಂತಂಬರಂ ಅವರವರ ನೆಲೆಗಳೊಳ್ ಬ್ರಹ್ಮಸೂತ್ರಾಭಿಧಾನ ಯಜ್ಞೋಪವೀತದಿಂ ಪವಿತ್ರಗಾತ್ರರ್ಮಾಡಿ' ಅವರಿಗೆ ಆರು ಆರ್ಯ ಷಟ್ಕರ್ಮಗಳನ್ನು ನಿಗದಿಪಡಿಸಿದ ಸನ್ನಿವೇಶ ('ಆದಿಪುರಾಣಂ':. ೧೫. ೧೩ ವ). ಹೀಗೆ ಬ್ರಾಹ್ಮಣವೂ ಸೇರಿ ವೈದಿಕದಲ್ಲಿದ್ದಂತೆ ಚಾತುರ್ವರ್ಣ್ಯ ಅಲ್ಲಿಯೂ ಕಾಲಿಟ್ಟಿತು. ಅಂದರೆ ಮೂಲದಲ್ಲಿ ತಾನು ವಿರೋಧಿಸಿದ್ದ ವರ್ಣವ್ಯವಸ್ಥೆಯನ್ನು ಜೈನವು ಮತ್ತೆ ಸ್ವೀಕರಿಸಿತು, ವರ್ಣಸಂಕರವನ್ನು ನಿಷೇಧಿಸಿತು; ಅಸ್ಪೃಶ್ಯತೆಗೂ ಅವಕಾಶವುಂಟಾಯಿತು.]

**ವಿತತಾಷಾಢದ ಬಹುಳ**
**ಪ್ರತಿಪದ್ದಿನದಂದು ಕೀರ್ತಿ ನೆಗಟ್ಟಿರೆ ಭಗವ**
**ತ್ಕೃತಯುಗಮಾದುದಜೆಂದಂ**
**ಕೃತಯುಗಮೆಂಬರ್ ಪುರಾಣವಿದರಿದನೀಗಳ್** ೫೨

**ಪದವಿಭಾಗ-ಅನ್ವಯ-ಅರ್ಥ:** ವಿತತ + ಆಷಾಢದ ಬಹುಳ ಪ್ರತಿಪತ್ + ದಿನದಂದು = ಶ್ರೇಷ್ಠವಾದ ಆಷಾಢ ಮಾಸದ ಪಾಡ್ಯದಂದು. ಕೀರ್ತಿ ನೆಗಟ್ದಿರೆ = ಕೀರ್ತಿಯುಂಟಾಗಲು. ಭಗವತ್ + ಕೃತಯುಗಂ + ಆದುದಱಿಂದಂ = ಭಗವತನಿಂದ ಮಾಡಲ್ಪಟ್ಟುದರಿಂದ. ಪುರಾಣವಿದರ್ + ಇದನ್ + ಈಗಳ್ ಕೃತಯುಗಂ + ಎಂಬರ್ = ಪುರಾಣವನ್ನು ಬಲ್ಲವರು ಇದನ್ನೀಗ ಕೃತಯುಗ ಎಂದು ಕರೆಯುತ್ತಾರೆ.

**ಗದ್ಯಾನುಸರಣ:** ಶ್ರೇಷ್ಠವಾದ ಆಷಾಢ ಮಾಸದ ಪಾಡ್ಯದಂದು ಭಗವಂತನು ಯುಗವನ್ನು ಮಾಡಿದುದರಿಂದಾಗಿ ಇದನ್ನೀಗ ಪುರಾಣವನ್ನು ಬಲ್ಲವರು ಕೃತಯುಗ ಎಂದು ಕರೆಯುತ್ತಾರೆ.

**ವ॥ ಅಂತು ಕೃತಯುಗಾರಂಭಸೂತ್ರಧಾರನೆನಿಸಿದಾದಿಬ್ರಹ್ಮಂಗೆ ರಾಜ್ಯಾಭಿಷೇಕಂ ಗೆಯ್ವ ಬಗೆಯಂ ಬಗೆದು,**

**ಅರ್ಥ:** ಅಂತು ಕೃತಯುಗ + ಆರಂಭಸೂತ್ರಧಾರನ್ + ಎನಿಸಿದ + ಆದಿಬ್ರಹ್ಮಂಗೆ ರಾಜ್ಯಾಭಿಷೇಕಂ ಗೆಯ್ವ ಬಗೆಯಂ ಬಗೆದು = ಹೀಗೆ ಕೃತಯುಗವು ಆರಂಭಕ್ಕೆ ಸೂತ್ರಧಾರನಾದ ಆದಿದೇವನಿಗೆ ದೇವೇಂದ್ರನು ರಾಜ್ಯಾಭಿಷೇಕವನ್ನು ಮಾಡಲು ಯೋಚಿಸಿದ.

**ಸುರಕಾಂತಾನೃತ್ಯಮೆತ್ತಂ ಪಸರಿಸಿರೆ ನಭೋಭಾಗದೊಳ್ ದೇವತೂರ್ಯ**
**ಸ್ವರಮಾಶಾಚಕ್ರದೊಳ್ ಬಳ್ವಳಬಳೆದಿರೆ ನಾನಾವಿಮಾನಂಗಳೊಳ್ ಭಾ**
**ಸುರರತ್ನಜ್ಯೋತಿಗಳ್ ತಳ್ತಳಿಸಿರೆ ಸುರವೃಂದಾನ್ವಿತಂ ಬಂದನಾಗಳ್**
**ಸುರರಾಜಂ ರಾಜದೈರಾವತವಿಪುಳತರಸ್ಕಂಧದೇಶಾಭಿರಾಮಂ** ೫೩

**ಪದವಿಭಾಗ-ಅನ್ವಯ-ಅರ್ಥ:** ನಭೋಭಾಗದೊಳ್ ಎತ್ತಂ ಸುರಕಾಂತಾನೃತ್ಯಂ ಪಸರಿಸಿರೆ = ಆಕಾಶದಲ್ಲಿ ಎಲ್ಲೆಡೆಯೂ ದೇವವನಿತೆಯರ ನರ್ತನವು ನಡೆಯುತ್ತಿರಲು, ಆಶಾಚಕ್ರದೊಳ್ ದೇವತೂರ್ಯಸ್ವರಂ ಬಳ್ವಳಬಳೆದಿರೆ = ದಿಕ್ಕಿನ ಪ್ರದೇಶಗಳಲ್ಲಿ ದೇವದುಂದುಭಿಗಳ ದನಿಯು ತುಂಬಿಕೊಂಡಿರಲು. ಭಾಸುರರತ್ನಜ್ಯೋತಿಗಳ್ ನಾನಾವಿಮಾನಂಗಳೊಳ್ ತಳ್ತಳಿಸಿರೆ = ಕಾಂತಿಮಯವಾದ ರತ್ನಗಳ ಬೆಳಗು ಅನೇಕ ವಿಮಾನಗಳಲ್ಲಿ ಫಳಫಳ ಹೊಳೆಯುತ್ತಿರಲು, ರಾಜತ್ + ಐರಾವತವಿಪುಳತರಸ್ಕಂಧದೇಶ + ಅಭಿರಾಮಂ = ಶೋಭಿಸುವ ಐರಾವತದ ವಿಶಾಲ ಕತ್ತಿನ ಮೇಲೆ ವಿರಾಜಮಾನನಾದ, ಸುರರಾಜಂ ಸುರವೃಂದ + ಅನ್ವಿತಂ ಬಂದನಾಗಳ್ = ದೇವೇಂದ್ರನು ದೇವತೆಗಳ ಗುಂಪಿನೊಡನೆ ಆಗಮಿಸಿದ.

**ಗದ್ಯಾನುಸರಣ:** ಆಕಾಶದಲ್ಲಿ ಎಲ್ಲೆಡೆಯೂ ದೇವವನಿತೆಯರ ನರ್ತನವು ನಡೆಯುತ್ತಿತ್ತು, ದಿಕ್ಕಿನ ಪ್ರದೇಶಗಳಲ್ಲಿ ದೇವದುಂದುಭಿಗಳ ದನಿಯು ತುಂಬಿಕೊಂಡಿತ್ತು, ಕಾಂತಿಮಯವಾದ ರತ್ನಗಳ ಬೆಳಗು ಅನೇಕ ವಿಮಾನಗಳಲ್ಲಿ ಫಳಫಳ ಹೊಳೆಯುತ್ತಿತ್ತು, ಆಗ ಶೋಭಿಸುವ ಐರಾವತದ ವಿಶಾಲ ಕತ್ತಿನ ಮೇಲೆ ವಿರಾಜಮಾನನಾದ ದೇವೇಂದ್ರನು ದೇವತೆಗಳ ಗುಂಪಿನೊಡನೆ ಆಗಮಿಸಿದ.

**ವ॥ ಅಂತು ಬಂದು, ಭುವನತ್ರಯಚೂಡಾಮಣಿಯ ರಾಜ್ಯಾಭಿಷೇಕದೊಸಗೆಯಂ ನಾಭಿರಾರಾಜಾಧಿರಾಜಸಭೆಗಱಿಪಿ, ಮಹಾನದ್ಯುಭಯತಟ ಮೃದುಮೃತ್ಸ್ನಾವಿರಚಿತವೇದಿಕಾವಿರಾಜ**

ಮಾನದೊಳ್, ಗಂಧರ್ವಸಮಾರಬ್ಧಸಂಗೀತಕ ಮೃದು ಮೃದಂಗನಾದಪ್ರಮೋದಿತಾಶೇಷ ರಾಜದ್ರಾಜಭವನದೊಳ್, ಸಂಚರತ್ ಸುರವಿಳಾಸಿನೀ ಸಲೀಲ ಮೃದುಪದವಿನ್ಯಾಸ ಮಂಜು ಗುಂಜನ್ಮಂಜೀರಕ ಮನೋಹರ ಝುಂಕಾರ ಪ್ರವರ್ಧಮಾನ ಮದಾಳಿಕುಳ ಕೋಳಾಹಳದೊಳ್, ರಾಜಭವನಾಂಗಣಮಧ್ಯಸ್ಥಿತ ರಾಜ್ಯಾಭಿಷೇಕಮಂಟಪದೊಳ್,

**ಪದವಿಭಾಗ-ಅನ್ವಯ-ಅರ್ಥ:** ಅಂತು ಬಂದು, ಹಾಗೆ ಬಂದು. ಭುವನತ್ರಯಚೂಡಾಮಣಿಯ ರಾಜ್ಯಾಭಿಷೇಕದ + ಒಸಗೆಯಂ = ಈ ರೀತಿ ಮೂಲೋಕದ ತಲೆವಣಿಯ ಪಟ್ಟಾಭಿಷೇಕದ ಹಬ್ಬವನ್ನು, ನಾಭಿರಾರಾಜ + ಅಧಿರಾಜಸಭೆಗೆ + ಅಱಿಪಿ = ನಾಭಿರಾಜ ಮತ್ತವನ ಅಧೀನರಾಜರ ಸಭೆಗೆ ತಿಳಿಸಿ. ಮಹಾನದಿ + ಉಭಯತಟಮೃದುಮೃತ್ಸ್ನಾವಿಲಸಿತ = ಮಹಾನದಿಯ ಎರಡೂ ದಡಗಳಲ್ಲಿನ ನಯವಾದ ಮಣ್ಣಿನಿಂದ ಮಾಡಿದ. ವೇದಿಕಾವಿರಾಜ ಮಾನದೊಳ್ = ವೇದಿಕೆಯ ಹೊಳಪಿನಲ್ಲಿ, ಗಂಧರ್ವಸಮಾರಬ್ಧ ಸಂಗೀತಮೃದಂಗನಾದಪ್ರಮೋದಿತ = ಗಂಧರ್ವರು ಆರಂಭಿಸಿದ ಸಂಗೀತ ಮತ್ತು ಮೃದಂಗಗಳ ಇನಿದನಿಯ ಸೊಗಸಿನಿಂದ, ಅಶೇಷರಾಜತ್ + ರಾಜಭವನದೊಳ್ = ಬೆಳಗುವ ಅರಮನೆಯಲ್ಲಿ. ಸಂಚರತ್ + ಸುರವಿಳಾಸಿನೀಲಲಿತಮೃದುಪದವಿನ್ಯಾಸ = ಓಡಾಡುವ ದೇವವಿಲಾಸಿನಿಯರ ಕೋಮಲವೂ ನಯವೂ ಆದ ಹೆಜ್ಜೆಗಳಿಂದ, ಮಂಜುಗುಂಜತ್ + ಮಜೀರಕಮನೋಹರ = ಇಂಪಾದ ಸದ್ದಿನ ಕಾಲಂದುಗೆಗಳ ಚೆಲುವಿನೊಡನೆ, ಝುಂಕಾರಪ್ರವರ್ಧಮಾನಮದ + ಅಳಿಕುಳಕೋಳಾಹಳದೊಳ್ = ಝೇಂಕಾರ ಮಾಡುವ ಸೊಕ್ಕಿದ ದುಂಬಿವಿಂಡಿನ ಗದ್ದಲದಲ್ಲಿ, ರಾಜಭವನ + ಅಂಗಣಮಧ್ಯಸ್ಥಿತ ರಾಜ್ಯಾಭಿಷೇಕಮಂಟಪದೊಳ್ = ಅರಮನೆಯ ಅಂಗಳದ ಮಧ್ಯದಲ್ಲಿ ರಚಿತವಾಗಿದ್ದ ಪಟ್ಟಾಭಿಷೇಕ ಮಂಟಪದಲ್ಲಿ,

**ಗದ್ಯಾನುಸರಣ:** ಈ ರೀತಿ ಮೂಲೋಕದ ತಲೆವಣಿಯ ಪಟ್ಟಾಭಿಷೇಕದ ಸಂತಸವನ್ನು ದೇವೇಂದ್ರನು ನಾಭಿರಾಜ ಮತ್ತವನ ಅಧಿನರಾಜರ ಸಭೆಗೆ ತಿಳಿಸಿದ; ಮಹಾನದಿಯ ಎರಡೂ ದಡಗಳಲ್ಲಿನ ನಯವಾದ ಮಣ್ಣಿನಿಂದ ಮಾಡಿದ ಹೊಳಪಿನ ವೇದಿಕೆಯಿತು; ಗಂಧರ್ವರು ಆರಂಭಿಸಿದ ಸಂಗೀತ ಮತ್ತು ಮೃದಂಗಗಳ ಇನಿದನಿಯ ಸೊಗಸಿನಿಂದ, ಅರಮನೆಯು ಕೂಡಿತ್ತು; ಓಡಾಡುವ ದೇವವಿಲಾಸಿನಿಯರ ಕೋಮಲವೂ ನಯವೂ ಆದ ಹೆಜ್ಜೆಗಳಿಂದ ಹೊಮ್ಮುವ ಇಂಪಾದ ಸದ್ದಿನ ಕಾಲಂದುಗೆಗಳ ಚೆಲುವಿನೊಡನೆ ಝೇಂಕಾರ ಮಾಡುವ ಸೊಕ್ಕಿದ ದುಂಬಿಗಳ ಗದ್ದಲವು ಸೇರಿತ್ತು; ಹೀಗಿದ್ದ ಅರಮನೆಯ ಅಂಗಳದ ಮಧ್ಯದಲ್ಲಿ ಪಟ್ಟಾಭಿಷೇಕ ಮಂಟಪವು ರಚಿತವಾಗಿತ್ತು.

ಮುನ್ನಮೆ ನಿಜೆಸಿದ ಮಣಿಖಚಿ
ತೋನ್ನತಹರಿಪೀಠದೊಳ್ ಜಗತ್ಪತಿಯಂ ಮಾ
ನೋನ್ನತನಂ ಪ್ರಾಙ್ಮುಖದಿಂ
ದುನ್ನತಸುರಮೌಳಿಲಾಲಿತಾಂಘ್ರಿದ್ವಯನಂ ೫೪

**ಪದವಿಭಾಗ-ಅನ್ವಯ-ಅರ್ಥ:** ಮುನ್ನಮೆ ನಿಜೆಸಿದ = ಮುಂಚೆಯೇ ಇರಿಸಿದ್ದ, ಉನ್ನತ ಮಣಿಖಚಿತ ಹರಿಪೀಠದೊಳ್ = ಎತ್ತರವಾದ ಮಣಿಮಯ ಸಿಂಹಾಸನದಲ್ಲಿ, ಉನ್ನತಸುರಮೌಳಿಲಾಲಿತ + ಅಂಘ್ರಿದ್ವಯನಂ = ಶ್ರೇಷ್ಠ ದೇವತೆಗಳ ಕಿರೀಟಗಳಿಂದ ಬೆಳಗುವ ಪಾದದ್ವಯದಿಂದ ಕೂಡಿದವನಾದ, ಮಾನ + ಉನ್ನತನಂ ಜಗತ್ + ಪತಿಯಂ = ಹಾಗೂ ಉನ್ನತ ಗೌರವನೀಯನಾದ ಜಗದೊಡೆಯನನ್ನು, ಪ್ರಾಙ್ಮುಖದಿಂದೆ = ಪೂರ್ವಾಭಿಮುಖವಾಗಿ.

**ಗದ್ಯಾನುಸರಣ:** ಮುಂಚೆಯೇ ಇರಿಸಿದ್ದ ಎತ್ತರವಾದ ಮಣಿಮಯ ಸಿಂಹಾಸನದಲ್ಲಿ ಶ್ರೇಷ್ಠ ದೇವತೆಗಳ ಕಿರೀಟಗಳಿಂದ ಬೆಳಗುವ ಪಾದದ್ವಯದಿಂದ ಕೂಡಿದವನೂ ಉನ್ನತ ಗೌರವಾರ್ಹನೂ ಆದ ಜಗದೊಡೆಯನನ್ನು ಪೂರ್ವಾಭಿಮುಖವಾಗಿ ಕೂರಿಸಿದರು.

**ವ॥ ಇರಿಸಿ ಮಹಾಸರಿತ್ ಸರಸೀ ಸಮುದ್ರ ನಂದೀಶ್ವರದ್ವೀಪವಾಸಿಗಳಿಂದಂ ಬಂದ ತೀರ್ಥೋದಕಗಳಿಂದಂ ತೀವಿದ ಕಳಧೌತಕಳಶಂಗಳನ್, ಅಮರರಾಜಸಮಾಜಮುಂ ನಾಭಿರಾಜಂ ಬೆರಸೆತ್ತಿಕೊಂಡು, ನೀಳನಳಿನ ದ್ಯುತಿಪಟಳ ವಿಭ್ರಾಂತಿಯಂ ಪಡೆವ ಸಲಿಲಂಗಳಿಂದಂ, ಮಜ್ಜನಾವಸರಮಂಗಳಪಾಠಕಮಧುರನಿನದಮನಾಲಿಸುತ್ತುಂ, ಮಜ್ಜನಂಗೆಯ್ದು ನಿರ್ವರ್ತಿಸಿದಂ.**

**ಅಂತು ನಿಷ್ಪನ್ನ ಮಜ್ಜನನುಂ, ವಿಹಿತ ನೀರಾಜನನುಮಾಗಿ – ಸುರರಾಜ ಸಮರ್ಪಿತ ಸಂತಾನ ಕುಸುಮದಾಮಾಂಬರ ಭೂಷಣಪ್ರಸಾಧಿತಂ ಪುರುದೇವಂ ಮೃಗೇಂದ್ರವಿಷ್ಟರದೊಳಿರೆ ನಾಭಿರಾಜಂ ಸನಾಭಿಗಳ್ವೆರಸು ಬಂದು,**

**ಪದವಿಭಾಗ-ಅನ್ವಯ-ಅರ್ಥ:** ಇರಿಸಿ = ಕೂರಿಸಿ, ಮಹಾಸರಿತ್ ಸರಸೀ ಸಮುದ್ರ ನಂದೀಶ್ವರ ದ್ವೀಪವಾಸಿಗಳಿಂದಂ ಬಂದ = ದೊಡ್ಡ ಸರೋವರಗಳು ಸಮುದ್ರಗಳು ಹಾಗೂ ನಂದೀಶ್ವರದ ದ್ವೀಪದಲ್ಲಿ ವಾಸಿಸುವವರಿಂದ ಬಂದ, ತೀರ್ಥ + ಉದಕಗಳಿಂದಂ ತೀವಿದ = ಪಾವನ ಜಲದಿಂದ ತುಂಬಿದ, ಕಳಧೌತಕಳಶಂಗಳನ್ = ಚಿನ್ನದ ಬಿಂದಿಗೆಗಳನ್ನು, ಅಮರರಾಜಸಮಾಜಮುಂ = ದೇವೇಂದ್ರ ಸಂಕುಲವು, ನಾಭಿರಾಜಂ ಬೆರಸು + ಎತ್ತಿಕೊಂಡು = ನಾಭಿರಾಜನ ಜೊತೆಯಲ್ಲಿ ಎತ್ತಿಕೊಂಡು, ನೀಳನಳಿನದ್ಯುತಿಪಟಳವಿಭ್ರಾಂತಿಯಂ ಪಡೆವ = ಒಳಗಿಟ್ಟ ನೀಲೋತ್ಪಲದ ಕಾಂತಿಯ ಭ್ರಮೆಯನ್ನು ಉಂಟುಮಾಡುವ, ಸಲಿಲಂಗಳಿಂದಂ = ನೀರುಗಳಿಂದಲೂ, ಆಗಳ್ ಮಜ್ಜನ + ಅವಸರಮಂಗಳಪಾಠಕ ಮಧುರನಿನದಮನ್ + ಆಲಿಸುತ್ತುಂ = ಆಗ ಸ್ನಾನಸಮಯದಲ್ಲಿ ಮಂಗಳಪಾಠಕರು ಮಾಡುವ ಮಧುರಧ್ವನಿಯನ್ನು ಕೇಳುತ್ತ, ಮಜ್ಜನಂಗೆಯ್ದು ನಿರ್ವರ್ತಿಸಿದಂ = ಅಭಿಷೇಕ ಮಾಡಿ ಮುಗಿಸಿದ

ಅಂತು = ಹೀಗೆ. ನಿಷ್ಪನ್ನಮಜ್ಜನನುಂ = ಸ್ನಾನ ಮುಗಿಸಿದವನೂ, ವಿನಿಹಿತನೀರಾಜನನುಂ + ಆಗಿ = ಆರತಿಯನ್ನು ಬೆಳಗಿಸಿಕೊಂಡವನೂ ಆಗಿ, ಸುರರಾಜನ ಸಮರ್ಪಿತ = ದೇವೇಂದ್ರನಿಂದ ಅರ್ಪಿಸಲ್ಪಟ್ಟ, ಸಂತಾನಕುಸುಮದಾಮ + ಅಂಬರ ಭೂಷಣ ಪ್ರಸಾಧಿತಂ = ಸಂತಾನಕುಸುಮಗಳು ಬಟ್ಟೆಗಳು ಮತ್ತು

ಆಭರಣಗಳಿಂದ ಸಿಂಗರಿಸಲ್ಪಟ್ಟ. ಪುರುದೇವಂ ಮೃಗೇಂದ್ರಪಿಷ್ಟರದೊಳ್ + ಇರೆ = ಪುರುದೇವನು ಸಿಂಹಾಸನದಲ್ಲಿರಲು. ನಾಭಿರಾಜಂ ಸನಾಭಿಗಳ್ವೆರಸು ಬಂದು = ನಾಭಿರಾಜನು ತನ್ನ ನೆಂಟರೊಡನೆ ಬಂದು,

**ಗದ್ಯಾನುಸರಣ:** ದೊಡ್ಡ ಸರೋವರಗಳಿಂದ ಸಮುದ್ರಗಳಿಂದ ಹಾಗೂ ನಂದೀಶ್ವರದ ದ್ವೀಪದಲ್ಲಿ ವಾಸಿಸುವವರಿಂದ ಬಂದ ಪಾವನ ಜಲದಿಂದ ತುಂಬಿದ ಕಲ್ಪವೃಕ್ಷಗಳ ಚಿಗುರುಗಳಿಂದ ಸಿಂಗರಗೊಂಡ ಚಿನ್ನದ ಬಿಂದಿಗೆಗಳನ್ನು ದೇವೇಂದ್ರ ಸಂಕುಲವು ನಾಭಿರಾಜನ ಜೊತೆಯಲ್ಲಿ ಎತ್ತಿಕೊಂಡರು. ಸುರಿದಾಗ ಅದು ಇಂದ್ರನೀಲದ ಬಿಂದಿಗೆಗಳ ಕಿರಣಸಮೂಹದಿಂದ ಕೂಡಿ ಒಳಗಿಟ್ಟ ನೀಲೋತ್ಪಲದ ಕಾಂತಿಯ ಭ್ರಮೆಯನ್ನು ಉಂಟುಮಾಡುತ್ತಿತ್ತು. ಆಗ ಸ್ನಾನಸಮಯದಲ್ಲಿ ಮಂಗಳಪಾಠಕರು ಮಾಡುವ ಮಧುರಧ್ವನಿಯನ್ನು ಕೇಳುತ್ತ, ಅಭಿಷೇಕ ಮಾಡಿ ಮುಗಿಸಿದ.

ಹೀಗೆ, ಸ್ನಾನ ಮುಗಿಸಿ, ಎತ್ತಿದ ಆರತಿಯನ್ನು ಬೆಳಗಿಸಿಕೊಂಡು, ದೇವೇಂದ್ರನು ಅರ್ಪಿಸಿದ ಸಂತಾನಕುಸುಮಗಳು ಬಟ್ಟೆಗಳು ಮತ್ತು ಆಭರಣಗಳಿಂದ ಸಿಂಗರಗೊಂಡು ಪುರುದೇವನು ಸಿಂಹಾಸನದಲ್ಲಿ ಕುಳಿತ; ಆಗ ನಾಭಿರಾಜನು ನೆಂಟರ ಜೊತೆಗೆ ಬಂದ.

**ಸಕಲಮಕುಟಬದ್ಧಾಧೀಶನ್ನೈ ದೇವ ನೀನುಂ**
**ಮಕುಟಧರನುಮಾಗಲ್ಕೆವೇಟ್ಕುಮೆಂದಾಗಳಿಂದ್ರಂ**
**ಮಕುಟದೊಡನಲಂಪಿಂ ಪಟ್ಟಮಂ ಕಟ್ಟಿ ಲೋಕ**
**ಪ್ರಕಟಮನೆ ಪೊದಳ್ದತ್ತಾದಿದೇವಪ್ರಭಾವಂ** ೫೫

**ಪದವಿಭಾಗ-ಅನ್ವಯ-ಅರ್ಥ:** ದೇವ ನೀನುಂ ಸಕಲಮಕುಟಬದ್ಧ=ಆಧೀಶನ್ನೈ = ದೇವ ನೀನು ಕಿರೀಟವನ್ನು ಧರಿಸಿದವರ ಒಡೆಯ, ಮಕುಟಧರನುಂ + ಆಗಲ್ಕೆವೇಟ್ಕುಂ = (ಹೀಗಾಗಿ ನೀನೂ) ಕಿರೀಟಧಾರಿಯಾಗಬೇಕು, ಎಂದು ಆಗಳ್ + ಇಂದ್ರಂ ಮಕುಟದೊಡನೆ + ಅಲಂಪಿಂ ಪಟ್ಟಮಂ ಕಟ್ಟಿ = ಎಂದು ಇಂದ್ರನು ಆಗ ಕಿರೀಟದ ಸಮೇತ ಪ್ರೀತಿಯಿಂದ ಪಟ್ಟಕಟ್ಟಿ(ದಾಗ), ಆದಿದೇವಪ್ರಭಾವಂ ಲೋಕಪ್ರಕಟಮನೆ ಪೊದಳ್ದತ್ತು = ಆದಿದೇವನ ಪ್ರಭಾವವು ಜಗತ್ತಿಗೆಲ್ಲ ತಿಳಿಯುವಂತೆ ಹಬ್ಬಿತು.

**ಗದ್ಯಾನುಸರಣ:** 'ದೇವ, ನೀನೀಗ ಕಿರೀಟವನ್ನು ಧರಿಸಿದವರ ಒಡೆಯ, ಹೀಗಾಗಿ ನೀನೂ ಕಿರೀಟಧಾರಿಯಾಗಬೇಕು' ಎಂದು ಇಂದ್ರನು ಆಗ ಕಿರೀಟದ ಸಮೇತ ಪ್ರೀತಿಯಿಂದ ಪಟ್ಟಕಟ್ಟಿದ; ಆಗ ಆದಿದೇವನ ಪ್ರಭಾವವು ಜಗತ್ತಿಗೆಲ್ಲ ತಿಳಿಯುವಂತೆ ಹಬ್ಬಿತು.

**ವ॥ ಇಂತನೇಕಮಕುಟಬದ್ಧಮಣಿಕರ್ಷಣಮಸೃಣಿತಚರಣನ್, ಆವಾಪ್ತಿರಾಜ್ಯಂ ನಾಭಿರಾಜ ಸನ್ನಿಧಾನದೊಳ್, ಅಖಿಲ ಪ್ರಜಾಪಾಲನದೊಳ್, ಅತಿಪ್ರಯತ್ನಪರನಾಗಿ ತನ್ನ ಮುನ್ನ ಪಡೆದ ವರ್ಣತ್ರಯಕ್ಕಂ ಭರತನಿಂದಂ ಇನ್ನಪ್ಪ ವಿಪ್ರವರ್ಣಕ್ಕಂ ಯಥೋಚಿತವೃತ್ತಿಗಳನಜಿಪಿ, ಮತ್ತಂ**

**ದಂಡಧರರಿಲ್ಲದಂದು ಪ್ರಜೆಗಳತಿಕ್ರಮಿಸಿ ನಡೆಗುಮೆಂದುಂ, ಮತ್ಸ್ಯನ್ಯಾಯಂ ಪ್ರವರ್ತಿಸುಗುಮೆಂದುಂ, ಯಥೋಚಿತಧರಣೀಧರರಪ್ಪ ಭೂಪಾಳಕರನವರವರ ಪದವಿಯೊಳ್ [ಆದಿಬ್ರಹ್ಮಂ] ನಿಜೆಸಿದಂ. ಆದಿದೇವನಿಕ್ಷುರಸಸಂಗ್ರಹಣಸಮಯಾಹೂತಭೂತಳನಪ್ಪುದಜೆಂದಂ ಇಕ್ಷ್ವಾಕುಕುಳತಿಳಕನುಂ ಪ್ರಜಾಜೀವನೋಪಾಯಮನನನಾದುದಜೆಂ ಪ್ರಜಾಪತಿಯುಂ, ನಿಜಕುಲೋದ್ಧರಣದಿಂ ಕುಲಧರನುಂ ಕೃತಯುಗಾರಂಭಕ್ಕಾದಿಯಾದುದಜೆಂದಂ ಆದಿಬ್ರಹ್ಮನುಂ ಎಂಬ ಅನ್ವರ್ಥನಾಮಂಗಳುಂ ಲೋಕಪ್ರಸಿದ್ಧಮಾಗಿರಲ್ ಅಜುಪತ್ತುಮೂಜುಲಕ್ಕೆ ಪುಬ್ಬಂ ರಾಜ್ಯಕಾಲಂ ಸಲೆ, ಸಾಕೇತಸಿಂಹಾಸನಾಸೀನಂ ಪಾಲಿಸಿದಂ ಮಹೀವಳಯಮಂ.**

**ಪದವಿಭಾಗ–ಅನ್ವಯ–ಅರ್ಥ:** ಇಂತು + ಅನೇಕಮಕುಟಬದ್ಧ = ಹೀಗೆ ಅನೇಕ ಕಿರೀಟಧಾರಿಗಳ, ಮಣಿಮಕುಟಮಣಿಕರ್ಷಣಮಸೃಣಿತಚರಣಂ = ಮಣಿಮಯ ಕಿರೀಟಗಳ ರತ್ನಗಳ ತೀಡುವಿಕೆಯಿಂದ ಹೊಳಪುಗೊಂಡ ಪಾದಗಳವನು. ಆವಾಪ್ತಿ + ರಾಜ್ಯಂ = ಅಧಿರಾಜನಾಗಿ. ನಾಭಿರಾಜಸನ್ನಿಧಾನದೊಳ್ = ನಾಭಿರಾಜನ ಇರುವಿಕೆಯಲ್ಲಿ, ಅಖಿಲಪ್ರಜಾಪಾಲನದೊಳ್ + ಅತಿಪ್ರಯತ್ನಪರನಾಗಿ = ಎಲ್ಲ ಪ್ರಜೆಗಳ ರಕ್ಷಣೆಮಾಡುವುದರಲ್ಲಿ ತುಂಬ ಯತ್ನಶೀಲನಾಗಿ, ತನ್ನ ಮುನ್ನ ಪಡೆದ ವರ್ಣತ್ರಯಕ್ಕಂ = ತಾನು ಈ ಮುಂಚೆ ವಿಭಾಗೀಕರಿಸಿದ್ದ ಮೂರು ವರ್ಣಗಳವರಿಗೂ, ಭರತನಿಂದಂ + ಅಪ್ಪ ವಿಪ್ರವರ್ಣಕ್ಕಂ = ಭರತನಿಂದ ಆಗಲಿರುವ ಬ್ರಾಹ್ಮಣವರ್ಣಕ್ಕೂ, ಯಥಾ + ಉಚಿತವೃತ್ತಿಗಳನ್ + ಅಜೆಪಲ್ + ಎಂದು = ಯಾವುದು ತಕ್ಕುದೋ ಅಂತಹ ವೃತ್ತಿಗಳನ್ನು ವಿವರಿಸಿ ಹೇಳಿ, ಮತ್ತಂ ದಂಡಧರರ್ + ಇಲ್ಲದಂದು = ಅಲ್ಲದೆ ದಂಡಧರರು ಇಲ್ಲದಿದ್ದರೆ, ತಂತಮ್ಮ ವೃತ್ತಿಗಳಂ ಅತಿಕ್ರಮಿಸಿ ನಡೆಗುಂ + ಎಂದುಂ = ತಮಗೆ ನಿಯೋಜಿತವಾದ ವೃತ್ತಿಗಳನ್ನು ಬಿಟ್ಟು ನಡೆಯುತ್ತಾರೆಂದೂ, ಮತ್ಸ್ಯನ್ಯಾಯಂ ಪ್ರವರ್ತಿಸುಗುಂ + ಎಂದುಂ = ಮತ್ಸ್ಯನ್ಯಾಯದಿಂದಲುಂಟಾಗುವುದೆಂದೂ, ಯಥಾ + ಉಚಿತಧರಣೀಧರರಪ್ಪ ಭೂಪಾಳಕರನ್ + ಅವರವರ ಪದವಿಯೊಳ್ [ಆದಿಬ್ರಹ್ಮಂ] ನಿಜೆಸಿದಂ = ಸಮರ್ಥರಾದ ರಾಜರನ್ನು ಅವರವರ ಪದವಿಯಲ್ಲಿ ನೆಲೆಗೊಳಿಸಿದ. ಆದಿದೇವನ್ = ಆದಿದೇವನು, ಇಕ್ಷುರಸಸಂಗ್ರಹಣ ಸಮಯಾಹೂತಭೂತಳನ್ + ಅಪ್ಪುಜೆಂದಂ = ಕಬ್ಬಿನ ರಸವನ್ನು ತೆಗೆಯುವ ಪದ್ಧತಿಯನ್ನಾರಂಭಿಸಿದ್ದರಿಂದಾಗಿ, ಇಕ್ಷ್ವಾಕುಕುಳತಿಳಕನುಂ = ಇಕ್ಷ್ವಾಕುಕುಲತಿಲಕ, ಪ್ರಜಾಜೀವನೋಪಾಯಮನನದಿಂದೆ ಪ್ರಜಾಪತಿಯುಂ = ಪ್ರಜೆಗಳ ಜೀವನೋಪಾಯವನ್ನು ಆಲೋಚಿಸಿದ್ದರಿಂದಾಗಿ ಪ್ರಜಾಪತಿ, ನಿಜಕುಲ + ಉದ್ಧರಣದಿಂ ಕುಲಧರನುಂ = ತನ್ನ ಕುಲವನ್ನು ಉದ್ಧಾರಮಾಡಿದ್ದರಿಂದಾಗಿ ಕುಲಧರ, ಕೃತಯುಗ + ಆರಂಭಕ್ಕೆ + ಆದಿಯಾದುದಜೆಂದಂ ಆದಿಬ್ರಹ್ಮನುಂ = ಕೃತಯುಗದ ಆರಂಭಕ್ಕೆ ಕಾರಣನಾದುದರಿಂದ ಆದಿಬ್ರಹ್ಮ, ಎಂಬ ಅಪೂರ್ವ + ಅಭಿಧಾನಮಂ ಪ್ರಯೋಗಿಪ್ಪ + ಅನ್ವರ್ಥನಾಮಂಗಳುಂ ಲೋಕಪ್ರಸಿದ್ಧಮಾಗಿರಲ್ = ಎನ್ನುವ ಅರ್ಥಕ್ಕನುಗುಣವಾಗಿ ಬಳಕೆಗೊಂಡು ಜಗತ್ತಿನಲ್ಲಿ ಪ್ರಸಿದ್ಧವಾಗಿ,

ಅಱುವತ್ತುಮೂಱುಲಕ್ಕೆ ಪುಬ್ಬಂ ರಾಜ್ಯಕಾಲಂ ಸಲೆ = ಹೀಗೆ ಅರುವತ್ತುಮೂರು ಲಕ್ಷ ಪೂರ್ವಗಳ ಕಾಲ ರಾಜ್ಯಭಾರ ನಡೆಯಲು, ಸಾಕೇತಸಿಂಹಾಸನಾಸೀನಂ ಮಹೀವಳಯಮಂ ಪಾಲಿಸಿದಂ = ಸಾಕೇತದ ಸಿಂಹಾಸವನ್ನೇರಿ ಭೂಮಿಯನ್ನು ಪಾಲಿಸಿದ.

**ಗದ್ಯಾನುಸರಣ:** ಹೀಗೆ ಅನೇಕ ಕಿರೀಟಧಾರಿಗಳ ಮಣಿಮಯ ಕಿರೀಟಗಳ ರತ್ನಗಳ ತೀಡುಪಿಕೆಯಿಂದ ಪಾದಗಳು ಹೊಳಪಾಗುತ್ತಿತ್ತು; ಅಧಿರಾಜನಾಗಿ ನಾಭಿರಾಜನ ಸನ್ನಿಧಿಯಲ್ಲಿ ಎಲ್ಲ ಪ್ರಜೆಗಳ ರಕ್ಷಣೆಮಾಡುವುದರಲ್ಲಿ ಯತ್ನಶೀಲನಾದ; ತಾನು ಈ ಮುಂಚೆ ವಿಭಾಗೀಕರಿಸಿದ್ದ ಮೂರು ವರ್ಣಗಳವರಿಗೂ ಭರತನಿಂದ ಆಗಲಿರುವ ಬ್ರಾಹ್ಮಣವರ್ಣಕ್ಕೂ ಯಾವುದು ತಕ್ಕುದೋ ಅಂತಹ ವೃತ್ತಿಗಳನ್ನು ವಿವರಿಸಿ ಹೇಳಿ, ದಂಡಧರರು ಇಲ್ಲದಿದ್ದರೆ ತಮಗೆ ನಿಯೋಜಿತವಾದ ವೃತ್ತಿಗಳನ್ನು ಬಿಟ್ಟು ನಡೆಯುತ್ತಾರೆಂದೂ, ಮತ್ಸ್ಯನ್ಯಾಯದಿಂದಉಂಟಾಗುವುದೆಂದೂ ಸಮರ್ಥರಾದ ರಾಜರನ್ನು ಆದಿಬ್ರಹ್ಮನು ಅವರವರ ಪದವಿಯಲ್ಲಿ ನೆಲೆಗೊಳಿಸಿದ. ಆದಿದೇವನು ಕಬ್ಬಿನ ರಸವನ್ನು ತೆಗೆಯುವ ಪದ್ಧತಿಯನ್ನಾರಂಭಿಸಿದ್ದರಿಂದಾಗಿ, ಇಕ್ಷ್ವಾಕುಕುಲತಿಲಕ, ಪ್ರಜೆಗಳ ಜೀವನೋಪಾಯವನ್ನು ಆಲೋಚಿಸಿದ್ದರಿಂದಾಗಿ ಪ್ರಜಾಪತಿ, ತನ್ನ ಕುಲವನ್ನು ಉದ್ಧಾರಮಾಡಿದ್ದರಿಂದಾಗಿ ಕುಲಧರ, ಕೃತಯುಗದ ಆರಂಭಕ್ಕೆ ಕಾರಣನಾದುದರಿಂದ ಆದಿಬ್ರಹ್ಮ – ಎನ್ನುವ ಅರ್ಥಕ್ಕನುಗುಣವಾಗಿ ಬಳಕೆಗೊಂಡು ಜಗತ್ತಿನಲ್ಲಿ ಪ್ರಸಿದ್ಧನಾದ; ಹೀಗೆ ಆತನು ಅರುವತ್ತುಮೂರು ಲಕ್ಷ ಪೂರ್ವಗಳ ಕಾಲ ರಾಜ್ಯಭಾರ ನಡೆಸಿದ.

**ಎರಡೋಳಿಯೊಳಂ ಮೊದಲೊಳ್**
**ಭರತೇಶ್ವರಬಾಹುಬಲಿಗಳಿರೆ ಮತ್ತಿನ ಪು**
**ತ್ರರುಮವರ ಕೆಲದೊಳಿರೆ ಸುರ**
**ಶರಾಸನಂ ನೆಗೞ್ದುದವರ ಮಕುಟಪ್ರಭೆಯೊಳ್** ೫೬

**ಪದವಿಭಾಗ–ಅನ್ವಯ–ಅರ್ಥ:** ಎರಡು + ಓಳಿಯೊಳಂ = ಎರಡೂ ಕಡೆಗಳಲ್ಲಿ, ಮೊದಲೊಳ್ ಭರತೇಶ್ವರಬಾಹುಬಲಿಗಳ್ + ಇರೆ, ಮೊದಲಿಗೆ ಭರತ ಮತ್ತು ಬಾಹುಬಲಿಗಳು ಕೂತಿರಲು, ಮತ್ತಿನ ಪುತ್ರರುಂ + ಅವರ ಕೆಲದೊಳಿರೆ = ಇತರ ಮಕ್ಕಳೂ ಅವರ ಪಕ್ಕದಲ್ಲಿ ಕುಳಿತಿರಲು, ಅವರ ಮಕುಟಪ್ರಭೆಯಲ್ಲಿ ಸುರಶರಾಸನಂ ನೆಗೞ್ದುದು = ಅವರ ಕಿರೀಟಗಳ ಕಾಂತಿಯು ಕಾಮನಬಿಲ್ಲಿನಂತಾಯಿತು.

**ಗದ್ಯಾನುಸರಣ:** ಎರಡೂ ಕಡೆಗಳ ಮೊದಲಲ್ಲಿ ಭರತ ಮತ್ತು ಬಾಹುಬಲಿಗಳು ಕೂತಿದ್ದರೆ, ಅವರ ಪಕ್ಕದಲ್ಲಿ ಇತರ ಮಕ್ಕಳೂ ಕುಳಿತಿದ್ದರು; ಅವರ ಕಿರೀಟಗಳ ಕಾಂತಿಯು ಕಾಮನಬಿಲ್ಲಿನಂತೆ ಶೋಭಿಸಿತು.

**ವ॥ ಮತ್ತಂ ಸಿಂಹಾಸನಾಸನ್ನಸ್ಥಿತಮಣಿಮಯಪೀಠದೊಳ್ ನಾಭಿರಾಜನುಂ, ಕನಕಮಣಿ ಪೀಠದೊಳ್ ಕಚ್ಛಮಹಾಕಚ್ಛರುಂ ಸೋಮವಂಶಲಲಾಮಂ ಸೋಮಪ್ರಭನುಂ, ಹರಿವಂಶಾಗ್ರಗಣ್ಯಂ ಹರಿಕಾಂತನುಂ, ನಾಥವಂಶನಾಯಕನ್ ಅಕಂಪನನುಂ, ಉಗ್ರವಂಶಾಗ್ರಣಿ ಕಾಶ್ಯಪನುಂ ಇರೆ, ಪೆಜರುಂ ಅಜೆಕೆಯ ನಾಯಕರುಂ ಮಣಿಮುಕುಟಬದ್ಧರಾತ್ಮೋಚಿತ**

**ಪ್ರದೇಶಾಸನಂಗಳೊಳ್ ಇರ್ದು ಓಲಗಿಸುತ್ತಿರ್ದನ್ನೆಗಂ, ಆದಿದೇವನ ಪರಿನಿಷ್ಕ್ರಮಣಕಲ್ಯಾಣಂ ಅತ್ಯಾಸನ್ನಮೆಂಬುದಂ ನಿಜಾವಧಿಬೋಧದಿಂದಮಱಿದು ಸಂಗೀತಪ್ರಸಂಗದಿಂದಮೋಲಗಿಸಲೆಂದು, ಸುರರಾಜಂ ಬಂದು ಅವನತಮಣಿಕಿರೀಟ ರತ್ನಪ್ರದೀಪಂಗಳಿಂದಮರ್ಚಿಸಿ ಕನಕಪೀಠದೊಳ್ ಕುಳ್ಳಿರ್ದು,**

**ಪದವಿಭಾಗ–ಅನ್ವಯ–ಅರ್ಥ:** ಮತ್ತಂ ಸಿಂಹಾಸನ + ಆಸನ್ನಸ್ಥಿತಮಣಿಮಯ ಪೀಠದೊಳ್ ನಾಭಿರಾಜನುಂ = ಸಿಂಹಾಸನದ ಹತ್ತಿರವಿದ್ದ ರತ್ನಖಚಿತ ಪೀಠದಲ್ಲಿ ನಾಭಿರಾಜನೂ, ಕನಕಪೀಠದೊಳ್ ಕಚ್ಛಮಹಾಕಚ್ಛರುಂ = ಚಿನ್ನದ ಪೀಠಗಳಲ್ಲಿ ಕಚ್ಛ ಮತ್ತು ಮಹಾಕಚ್ಛರೂ, ಸೋಮವಂಶಲಲಾಮಂ ಸೋಮಪ್ರಭನುಂ = ಸೋಮವಂಶಶ್ರೇಷ್ಠನಾದ ಸೋಮಪ್ರಭ, ಹರಿವಂಶ + ಅಗ್ರಗಣ್ಯಂ ಹರಿಕಾಂತನುಂ = ಹರಿವಂಶದ ನಾಯಕ ಹರಿಕಾಂತ, ನಾಥವಂಶನಾಯಕನ್ + ಅಕಂಪನಂ = ನಾಥವಂಶದ ತಲೆವಣಿಯಾದ ಅಕಂಪನ ಮತ್ತು, ಉಗ್ರವಂಶ + ಅಗ್ರಗಣ್ಯಂ ಕಾಶ್ಯಪನುಂ ಇರೆ = ಉಗ್ರವಂಶದ ಮುಂದಾಳು ಕಾಶ್ಯಪನೂ ಕುಳಿತಿರಲು, ಮತ್ತಂ ಪೆಱರುಂ + ಅಱಿಕೆಯ ನಾಯಕರುಂ ಮಣಿಮಕುಟಬದ್ಧರ್ = ಜೊತೆಗೆ ಇತರ ಪ್ರಮುಖ ನಾಯಕರುಗಳೂ ಮಣೀಕಿರೀಟಧಾರಿಗಳೂ, ಆತ್ಮ + ಉಚಿತ ಪ್ರದೇಶ + ಆಸನಂಗಳೊಳ್ + ಇರ್ದು = ತಮಗೆ ತಕ್ಕುದಾದ ಜಾಗ ಮತ್ತು ಪೀಠಗಳಲ್ಲಿದ್ದು, ಓಲಗಿಸುತ್ತಿರ್ದ + ಅನ್ನೆಗಂ = ಸೇವೆಗೈಯುತ್ತಿರಲು, ಆದಿದೇವನ ಪರಿನಿಷ್ಕ್ರಮಣಕಲ್ಯಾಣಂ + ಅತಿ + ಆಸನ್ನಂ + ಎಂಬುದಂ = ಆದಿದೇವನ ಪರಿನಿಷ್ಕ್ರಮಣಕಲ್ಯಾಣವು ತುಂಬ ಹತ್ತಿರದಲ್ಲಿದೆ ಎಂಬುದನ್ನು, ನಿಜ + ಅವಧಿಬೋಧದಿಂದಂ + ಅಱಿದು = ತನ್ನ ಅವಧಿಜ್ಞಾನದಿಂದ ತಿಳಿದುಕೊಡು, ಸಂಗೀತಪ್ರಸಂಗದಿಂದಂ + ಓಲಗಿಸಲ್ + ಎಂದು = ಸಂಗೀತ ಕಾರ್ಯಕ್ರಮದ ಮೂಲಕ ಸೇವೆಗೈಯಲೆಂದು, ಸುರರಾಜಂ ಬಂದು ಅವನತಮಣಿಕಿರೀಟ ರತ್ನಪ್ರದೀಪಂಗಳಿಂದಂ + ಅರ್ಚಿಸಿ = ದೇವೇಂದ್ರನು ಬಂದು ರತ್ನಗಳ ದೀಪಗಳಿಂದ ಪೂಜೆಗೈದು, ಕನಕಪೀಠದೊಳ್ ಕುಳ್ಳಿರ್ದು = ಚಿನ್ನದ ಆಸನದಲ್ಲಿ ಕುಳಿತುಕೊಂಡು,

**ಗದ್ಯಾನುಸರಣ:** ಸಿಂಹಾಸನದ ಹತ್ತಿರವಿದ್ದ ರತ್ನಖಚಿತ ಪೀಠದಲ್ಲಿ ನಾಭಿರಾಜನು ಕುಳಿತಿದ್ದ; ಚಿನ್ನದ ಪೀಠಗಳಲ್ಲಿ ಕಚ್ಛ ಮತ್ತು ಮಹಾಕಚ್ಛರಿದ್ದರು; ಸೋಮವಂಶಶ್ರೇಷ್ಠನಾದ ಸೋಮಪ್ರಭ, ಹರಿವಂಶದ ನಾಯಕ ಹರಿಕಾಂತ, ನಾಥವಂಶದ ತಲೆವಣಿಯಾದ ಅಕಂಪನ ಮತ್ತು ಉಗ್ರವಂಶದ ಮುಂದಾಳು ಕಾಶ್ಯಪನೂ ಕುಳಿತಿದ್ದರು; ಜೊತೆಗೆ, ಇತರ ಪ್ರಮುಖ ನಾಯಕರುಗಳೂ ಮಣೀಕಿರೀಟಧಾರಿಗಳೂ ತಮಗೆ ತಕ್ಕುದಾದ ಜಾಗ ಮತ್ತಿ ಪೀಠಗಳಲ್ಲಿ ಆಸೀನರಾಗಿದ್ದರು; ಹೀಗೆ ಅವರು ಆದಿದೇವನ ಸೇವೆಗೈಯುತ್ತಿರಲು ಆತನ ಪರಿನಿಷ್ಕ್ರಮಣಕಲ್ಯಾಣವು ತುಂಬ ಹತ್ತಿರದಲ್ಲಿದೆ ಎಂಬುದನ್ನು ಇಂದ್ರನು ತನ್ನ ಅವಧಿಜ್ಞಾನದಿಂದ ತಿಳಿದುಕೊಂಡು, ಸಂಗೀತದಕಾರ್ಯಕ್ರಮದ ಮೂಲಕ ಆತನ ಸೇವೆಗೈಯಲು ಆಲೋಚಿಸಿದ. ಅದಕ್ಕನುಗುಣವಾಗಿ ದೇವೇಂದ್ರನು ಬಂದು ರತ್ನಗಳ ದೀಪಗಳಿಂದ ಪೂಜೆಗೈದು ಚಿನ್ನದ ಆಸನವೊಂದರಲ್ಲಿ ಕುಳಿತುಕೊಂಡ.

**ಪರಮನನೋಲಗಿಸಿ ಕೃತಾ**
**ರ್ಥರೆಮಪ್ಪೆವಮೋಘವವಸರಂಗುಡಿಸುವುದೆಂ**
**ದಿರದೆನ್ನನಧಿಕಭಕ್ತಿಯೆ**
**ತರೆ ಬಂದುದು ದೇವ ದಿವಿಜಪೇಟಕಮನಿತುಂ** ೫೭

**ಪದವಿಭಾಗ-ಅನ್ವಯ-ಅರ್ಥ:** ಪರಮನನ್ + ಓಲಗಿಸಿ = ಆದಿದೇವನನ್ನು ಪೂಜಿಸಿ, ಕೃತಾರ್ಥರೆಂ + ಅಪ್ಪೆವು = ನಾವು ಕೃತಕೃತ್ಯರಾಗುತ್ತೇವೆ, ಅಮೋಘ + ಅವಸರಂ + ಕುಡಿಸುವುದು + ಎಂದು = ಅವಕಾಶವನ್ನು ಕೊಡಿಸಿ ಎಂದು, ದೇವ ಇರದೆ ಎನ್ನನ್ ಅಧಿಕಭಕ್ತಿಯೆ ತರೆ ದಿವಿಜಪೇಟಕಂ + ಅನಿತುಂ ಬಂದುದು = ದೇವ, ಅತೀವ ಭಕ್ತಿಯಿಂದ ದೇವತಾಸಮೂಹವೆಲ್ಲ ನನ್ನೊಡನೆ ಬಂದಿದೆ

**ಗದ್ಯಾನುಸರಣ:** ದೇವ, ಆದಿದೇವನನ್ನು ಪೂಜಿಸಿ ನಾವು ಕೃತಕೃತ್ಯರಾಗುತ್ತೇವೆ, ದಯವಿಟ್ಟು ಅವಕಾಶವನ್ನು ಕೊಡಿಸಿ ಎಂದು ಕೇಳಿಕೊಂಡು ಅತೀವ ಭಕ್ತಿಯಿಂದ ದೇವತಾಸಮೂಹವೆಲ್ಲ ನನ್ನೊಡನೆ ಬಂದಿದೆ.

**ಸಮನಿಸಲಿವರ ಮನೋರಥ**
**ಮಮರೀನೃತ್ಯಪ್ರಸಂಗಮಕ್ಕಭವ ಭವ**
**ತ್ಕ್ರಮಕಮಳಸೇವೆಯಿಂದೆಂ**
**ತುಮನಂತಂ ಗೀತವಾದಿತಂ ಫಲಮಲ್ತೇ** ೫೮

**ಪದವಿಭಾಗ-ಅನ್ವಯ-ಅರ್ಥ:** ಇವರ ಮನೋರಥಂ ಸಮನಿಸಲಿ = ಇವರೆಲ್ಲರ ಇಷ್ಟವು ನೆರವೇರಲಿ, ಅಭವ ಅಮರೀನೃತ್ಯಪ್ರಸಂಗಂ + ಅಕ್ಕೆ = ಐಹಿಕತೆಯಿಲ್ಲದವನೇ ದೇವವನಿತೆಯರ ನರ್ತನ ಕಾರ್ಯಕ್ರಮವು ನಡೆಯಲಿ, ಎಂತುಂ ಭವತ್ + ಕ್ರಮಕಮಳಸೇವೆಯಿಂದೆ = ಹೇಗಾದರೂ ನಿನ್ನ ಪಾದಕಮಲಸೇವನೆಯಿಂದಾಗಿ, ಗೀತವಾದಿತಂ ಅನಂತಂ ಫಲಂ + ಅಲ್ತೇ = ಗಾಯನವಾದನಗಳು ನಿರಂತರಫಲವಾದುವಲ್ಲವೇ?

**ಗದ್ಯಾನುಸರಣ:** ಐಹಿಕತೆಯಿಲ್ಲದವನೇ, ಇವರೆಲ್ಲರ ಇಷ್ಟವು ನೆರವೇರಲಿ, ದೇವವನಿತೆಯರ ನರ್ತನ ಕಾರ್ಯಕ್ರಮವು ನಡೆಯಲಿ, ಹೇಗಾದರೂ ನಿನ್ನ ಪಾದಕಮಲಸೇವನೆಯಿಂದಾಗಿ ಗಾಯನವಾದನಗಳು ನಿರಂತರಫಲವಾಗಿ ದೊರಕುವುದಲ್ಲವೇ?

**ಎಂದಿಂದ್ರಂ ಬಿನ್ನವಿಸಲೊ**
**ಡಂ ದರಹಸಿತಾನನಾಬ್ಜನಾವುದು ನಿಮಗಾ**
**ನಂದಮದಕ್ಕೆನೆ ನುತಸುರ**
**ವೃಂದಂ ಸಂಗೀತಕ್ಕೊಡರ್ಚಲೆವೇಟ್ಟಿಂ** ೫೯

**ಪದವಿಭಾಗ-ಅನ್ವಯ-ಅರ್ಥ:** ಎಂದು + ಇಂದ್ರಂ ಬಿನ್ನವಿಸಲ್ + ಒಡಂ = ಎಂದು ಇಂದ್ರನು ಬಿನ್ನವಿಸಿಕೊಂಡ ಕೂಡಲೆ, ದರಹಸಿತ + ಆನನ + ಅಬ್ಜನ್ = ಮುಗುಳ್ನಗೆಯಿಂದ ಕೂಡಿದ ತಾವರೆಮೊಗದವನು, ಆವುದು ನಿಮಗೆ + ಆನಂದಂ + ಅದು + ಅಕ್ಕೆ + ಎನೆ = ಯಾವುದು ನಿಮಗೆ ಸಂತಸವೀಯುತ್ತದೋ

ಅದು ಆಗಲಿ ಎನ್ನಲು, ನುತಸುರವೃಂದಂ ಸಂಗೀತಕ್ಕೆ + ಒಡರ್ಚಲೆ + ಪೇೞ್ದಂ = ತಲೆ ಬಾಗಿದ ದೇವೇಂದ್ರನು ಸಂಗೀತವನ್ನು ಆರಂಭಿಸಲು ಸೂಚಿಸಿದ.

**ಗದ್ಯಾನುಸರಣ:** ಎಂದು ಇಂದ್ರನು ಬಿನ್ನವಿಸಿಕೊಳ್ಳಲು ಪರಮನ ಮೊಗದಾವರೆಯು ಮುಗುಳ್ನಗೆಯಿಂದ ಅರಳಿತು; ಯಾವುದು ನಿಮಗೆ ಸಂತಸವೀಯುತ್ತದೋ ಅದು ಆಗಲಿ ಎಂದು ಹೇಲಲು. ತಲೆ ಬಾಗಿದ ದೇವೇಂದ್ರನು ಸಂಗೀತವನ್ನು ಆರಂಭಿಸಲು ಸೂಚಿಸಿದ.

**ಅಮರ್ದಿನ ಮೞೆಯೊಳಗೆಸೆದಪು**
**ದಮೃತಾಂಬುನಿನದಮೆನಿಸೆ ಸಭೆಯಿನಹೋ ಗೀ**
**ತಮಹೋ ವಾದಿತಮೆನಿಸಿದು**
**ದಮರೀಜನಗೀತಮಮರವಾದಿತಮಾಗಳ್** ೬೦

**ಪದವಿಭಾಗ–ಅನ್ವಯ–ಅರ್ಥ:** ಅಮರ್ದಿನ ಮೞೆಯೊಳಗೆ = ಅಮೃತದ ಮಳೆಯಲ್ಲಿ, ಅಮೃತಾಂಬುನಿನದಂ ಎಸೆದಪುದು ಎನಿಸೆ = ಅಮೃತದ ನೀರಿನ ದನಿಯು ಸೇರಿತು ಎಂಬಂತೆ, ಅಮರೀಜನಗೀತಂ + ಅಮರವಾದಿತಂ ಆಗಳ್‌ಸಭೆಯಿನ್ = ದೇವವನಿತೆಯರ ಗಾಯನ ಮತ್ತು ದೇವವಾದಕರ ವಾದನಗಳು ಆಗ, ಅಹೋ ಗೀತಂ + ಅಹೋ ವಾದಿತಂ = ಸಭೆಯಲ್ಲಿದ್ದವರಿಂದ ಭೇಷಾದ ಹಾಡಿಕೆ ಭೇಷಕ್ಕಾದ ವಾದನ. ಎನಿಸಿದುದು = ಎಂಬ ಉದ್ಗಾರ ಹೊಮ್ಮಂತೆ ಮಾಡಿತು.

**ಗದ್ಯಾನುಸರಣ:** ಅಮೃತದ ಮಳೆಯಲ್ಲಿ ಅಮೃತದ ನೀರಿನ ದನಿಯು ಸೇರಿತು ಎಂಬಂತೆ ದೇವವನಿತೆಯರ ಗಾಯನ ಮತ್ತು ದೇವವಾದಕರ ವಾದನಗಳು ಆಗ ಸಭೆಯಲ್ಲಿದ್ದವರಿಂದ ಭೇಷಾದ ಹಾಡಿಕೆ ಭೇಷಕ್ಕಾದ ವಾದನ ಎಂಬ ಉದ್ಗಾರ ಹೊಮ್ಮಂತೆ ಮಾಡಿತು.

**ಕಳಗೀತಂ ವಾದ್ಯಂ ನೃ**
**ತ್ಯಲೀಳೆ ಪೆಜಿರ್ಗೊಪ್ಪದೀಕೆಗಲ್ಲದೆ ಗಣಿಕಾ**
**ತಿಳಕಮಿವಳ್ ನರ್ತನರಸ**
**ದೊಳೆ ನಿಚ್ಚಂ ಮೆಚ್ಚುಗೊಳ್ವಳಿಂದ್ರನ ಕೈಯೊಳ್** ೬೧

**ಪದವಿಭಾಗ–ಅನ್ವಯ–ಅರ್ಥ:** ಕಳಗೀತಂ ವಾದ್ಯಂ ನೃತ್ಯಲೀಳೆ = ಇಂಪಾದ ಹಾಡಿಕೆ ವಾದ್ಯ ಮತ್ತು ನರ್ತನದ ಸೊಬಗು, ಈಕೆಗಲ್ಲದೆ ಪೆಜಿರ್ಗೆ + ಒಪ್ಪದು = ಇವಳಿಗಲ್ಲದೆ ಬೇರೆಯವರಿಗೆ ಸೊಗಸದು, ಇವಳ್ ಗಣಿಕಾತಿಳಕಂ = ಇವಳು ಗಣಿಕೆರಲ್ಲಿ ಶ್ರೇಷ್ಠಳು, ನರ್ತನರಸದೊಳೆ ಇಂದ್ರನ ಕೈಯೊಳ್ ನಿಚ್ಚಂ ಮೆಚ್ಚುಗೊಳ್ವಳ್ = ನರ್ತನಜಾಣ್ಮೆಯಲ್ಲಿ ಇಂದ್ರನ ಕೈಯಿಂದ ನಿತ್ಯವೂ ಮೆಚ್ಚಿಕೆಯನ್ನು ಪಡೆಯುತ್ತಾಳೆ.

**ಗದ್ಯಾನುಸರಣ:** ಇಂಪಾದ ಹಾಡಿಕೆ ವಾದ್ಯ ಮತ್ತು ನರ್ತನದ ಸೊಬಗು ಇವಳಿಗಲ್ಲದೆ ಬೇರೆಯವರಿಗೆ ಸೊಗಸದು, ಇವಳು ಗಣಿಕೆರಲ್ಲಿ ಶ್ರೇಷ್ಠಳು, ನರ್ತನಜಾಣ್ಮೆಯಲ್ಲಿ ಇಂದ್ರನ ಕೈಯಿಂದ ನಿತ್ಯವೂ ಮೆಚ್ಚಿಕೆಯನ್ನು ಪಡೆಯುತ್ತಾಳೆ.

**ಎನಿಸಿದ ನೀಳಾಂಜನೆ ಕ**
**ರ್ಬಿನ ಬಿಲ್ಲಿಂ ಮಸೆದ ಮದನನಲರ್ಗಣೆ ಬರ್ದುಕಿ**
**ತ್ತೆನಿಸುತ್ತೊಳಪೊಕ್ಕಳ್ ಭೋಂ**
**ಕೆನೆ ನಿಖಿಳಜನಾಂತರಂಗಮಂ ರಂಗಮುಮಂ** ೬೨

**ಪದವಿಭಾಗ-ಅನ್ವಯ-ಅರ್ಥ:** ಎನಿಸಿದ ನೀಳಾಂಜನೆ = ಎನಿಸಿಕೊಂಡ ನೀಳಾಂಜನೆಯು, ಕರ್ಬಿನ ಬಿಲ್ಲಿಂ ಮಸೆದ ಮದನನ + ಅಲರ್ಗಣೆ = ಕಬ್ಬಿನ ಬಿಲ್ಲಿನಿಂದ ಬಿಟ್ಟ ಕಾಮನ ಹೂಬಾಣವು, ಬರ್ದುಕಿತ್ತು + ಎನಿಸುತ್ತೆ = ತಪ್ಪಿಸಿಕೊಂಡು ಬಂತು ಎನ್ನುವಂತೆ, ನಿಖಿಳಜನಾಂತರಂಗಮಂ ರಂಗಮುಮಂ ಭೋಂಕೆನೆ ಒಳಪೊಕ್ಕಳ್ = ಸೇರಿದ್ದ ಎಲ್ಲ ಜನರ ಅಂತರಂಗವನ್ನೂ ರಂಗಭೂಮಿಯನ್ನೂ ಮಿಂಚಿನಂತೆ ಒಳಹೊಕ್ಕಳು.

**ಗದ್ಯಾನುಸರಣ:** ಇಂತಹ ನೀಳಾಂಜನೆಯು ಕಬ್ಬಿನ ಬಿಲ್ಲಿನಿಂದ ಬಿಟ್ಟ ಕಾಮನ ಹೂಬಾಣವು ತಪ್ಪಿಸಿಕೊಂಡು ಬಂತು ಎನ್ನುವಂತೆ ಸೇರಿದ್ದ ಎಲ್ಲ ಜನರ ಅಂತರಂಗವನ್ನೂ ರಂಗಭೂಮಿಯನ್ನೂ ಮಿಂಚಿನಂತೆ ಹೊಕ್ಕಳು.

**ನಿಲ್ತುವು ರಸಂಗಳಲ್ಲಿ ಮ**
**ಡಲ್ತೆನೆ ಭಂಗಿಯೊಳನಂಗಜಂಗಮಲತೆವೊಲ್**
**ನಿಲ್ತು ಜವನಿಕೆಯ ಮಱೆಯೊಳ್**
**ಪೋಲ್ತಳವಳ್ ಮುಗಿಲ ಮಱೆಯ ವಿದ್ಯುಲ್ಲತೆಯಂ** ೬೩

**ಪದವಿಭಾಗ-ಅನ್ವಯ-ಅರ್ಥ:** ರಸಂಗಳ್ + ಅಲ್ಲಿ ಮಡಲ್ತು ನಿಲ್ತುವು ಎನೆ = ಎಲ್ಲ ರಸಗಳು ಅಲ್ಲಿ ಹಬ್ಬಿ ನಿಂತುವು ಎನಿಸುವಂತೆ, ಜವನಿಕೆಯ ಮಱೆಯೊಳ್ = ತೆರೆಯ ಹಿಂದೆ, ಅನಂಗಜಂಗಮಲತೆವೊಲ್ ಭಂಗಿಯೊಳ್ ನಿಲ್ತು = ಓಡಾಡುವ ಮನ್ಮಥನ ಬಳ್ಳಿ ಎಂಬಂತೆ ನಿಂತು, ಅವಳ್ ಮುಗಿಲ ಮಱೆಯ ವಿದ್ಯುಲ್ಲತೆ(ವಿದ್ಯುತ್ + ಲತೆ)ಯಂ ಪೋಲ್ತಳ್ = ಅವಳು ಮೋಡದ ಮರೆಯಲ್ಲಿನ ಮಿಂಚನ್ನು ಹೋತಳು.

**ಗದ್ಯಾನುಸರಣ:** ಎಲ್ಲ ರಸಗಳು ಅಲ್ಲಿ ಮಡುಗಟ್ಟಿ ನಿಂತುವು ಎನಿಸುವಂತೆ, ತೆರೆಯ ಹಿಂದೆ ಓಡಾಡುವ ಮನ್ಮಥನ ಬಳ್ಳಿಯಂತೆ ನಿಂತ ಅವಳು ಮೋಡದ ಮರೆಯಲ್ಲಿನ ಮಿಂಚನ್ನು ಹೋಲಿದಳು.

**ಓಸರಿಸಿದ ಜವನಿಕೆಯೊಡ**
**ನೋಸರಿಸಿದನಿಸಲೆ ಕಂತು ಪುಷ್ಪಾಂಜಳಿಯಂ**
**ಸೂಸಿದ ಪದದೊಳೆ ಸಭೆಗಂ**
**ಸೂಸಿದನೊಡನೊಡನೆ ನನೆಯ ಮೊನೆಯಂಬುಗಳಂ** ೬೪

**ಪದವಿಭಾಗ-ಅನ್ವಯ-ಅರ್ಥ:** ಓಸರಿಸಿದ ಜವನಿಕೆಯೊಡನೆ = ಪಕ್ಕಕ್ಕೆ ಸರಿಸಿದ ತೆರೆಯ ಜೊತೆಯಲ್ಲಿಯೇ, ಇಸಲೆ ಕಂತು ಓಸರಿಸಿದನ್ = ಬಾಣಬಿಡಲು ಮನ್ಮಥನು ಸಿದ್ಧನಾದ; ಸಭೆಗಂ ಪುಷ್ಪಾಂಜಳಿಯಂ ಸೂಸಿದ ಪದದೊಳೆ = ಅವಳು ಸಭೆಗೆ ಬೊಗಸೆಯ ಹೂವನ್ನು ಎರಚಿದಾಗ, ನನೆಯ ಮೊನೆಯ + ಅಂಬುಗಳಂ

ಒಡನೊಡನೆ ಸೂಸಿದನ್ = ಹೂವಿನ ಹರಿತವಾದ ಬಾಣಗಳನ್ನು ಜೊತೆಯಲ್ಲಿಯೇ ಬಿಟ್ಟ..

**ಗದ್ಯಾನುಸರಣ:** ಪಕ್ಕಕ್ಕೆ ಸರಿಸಿದ ತೆರೆಯ ಜೊತೆಯಲ್ಲಿಯೇ ಬಾಣಬಿಡಲು ಮನ್ಮಥನು ಸಿದ್ಧನಾದ; ಅವಳು ಸಭೆಗೆ ಬೊಗಸೆಯ ಹೂವನ್ನು ಎರಚಿದ ಕ್ಷಣದಲ್ಲಿ ಜೊತೆಯಲ್ಲಿಯೇ ಅವನು ಹೂವಿನ ಹರಿತವಾದ ಬಾಣಗಳನ್ನು ಬಿಟ್ಟ.

**ಭಾವದನುಭಾವದೆಸೆವ ವಿ**
**ಭಾವದ ಪಸುಗೆಗಳೊಳೊಸರ್ವ ರಸದಭಿನಯಮಂ**
**ಭಾವಿಸುವೊಡಾದಿದೇವನ**
**ದೇವೇಂದ್ರನ ಬಗೆಗಮಸದಳಂ ನರ್ತಕಿಯಾ** ೬೫

**ಪದವಿಭಾಗ-ಅನ್ವಯ-ಅರ್ಥ:** ನರ್ತಕಿಯಾ ಭಾವದ + ಅನುಭಾವದ + ಎಸೆವ ವಿಭಾವದ ಪಸುಗೆಗಳೊಳ್ = ನೀಲಾಂಜನೆಯ ಭಾವ ಅನುಭಾವ ವಿಭಾವಗಳ ವಿಂಗಡಣೆಯಲ್ಲಿ, ಒಸರ್ವ ರಸತ್ + ಅಭಿನಯಮಂ ಭಾಪಿಸುವೊಡೆ = ಸೂಸುವ ರಸಮಯ ಅಭಿನಯವನ್ನು ಕಲ್ಪಿಸಿಕೊಳ್ಳಲು, ಆದಿದೇವನ ದೇವೇಂದ್ರನ ಬಗೆಗಂ + ಅಸದಳಂ = ಆದಿದೇವನ ಮತ್ತು ದೇವೇಂದ್ರನ ಬುದ್ಧಿಗೂ ಅಸಾಧ್ಯ.

**ಗದ್ಯಾನುಸರಣ:** ನೀಲಾಂಜನೆಯ ಭಾವ ಅನುಭಾವ ವಿಭಾವಗಳ ವಿಂಗಡಣೆಯಲ್ಲಿ ಸೂಸುವ ರಸಮಯ ಅಭಿನಯವನ್ನು ಕಲ್ಪಿಸಿಕೊಳ್ಳುವುದು ಆದಿದೇವನ ಮತ್ತು ದೇವೇಂದ್ರನ ಬುದ್ಧಿಗೂ ಅಸಾಧ್ಯ.

[**ವಿಶೇಷ ವಿಚಾರ:** ಭಾವ ವಿಭಾವ ಅನುಭಾವ = ಭಾವ ಎನ್ನುವುದು ಪ್ರತಿವ್ಯಕ್ತಿಯಲ್ಲಿನ ಚಿತ್ತಸ್ಥಿತಿವಿಶೇಷವನ್ನು ಸೂಚಿಸುತ್ತದೆ; ಪ್ರಶಾಂತ ಕೊಳದಂತಿರುವ ಮನಸ್ಸಿನಲ್ಲಿ ಏನಾದರೊಂದು ಕಾರಣದಿಂದ ಉಂಟಾಗುವ ಸ್ಪಂದನವೇ ಭಾವ; ಇದರಲ್ಲಿ ಎರಡು ಬಗೆ: ಸ್ಥಾಯಿಭಾವ ಮತ್ತು ಸಂಚಾರಿಭಾವ, ಅಂದರೆ ಮೂಲಭಾವ ಮತ್ತು ಅದನ್ನು ಅನುಸರಿಸುವ ಉಪಭಾವಗಳು; ವಿಭಾವ ಎಂದರೆ ಭಾವಸ್ಫುರಣೆಯ ಕಾರಣ; ಅನುಭಾವವೆಂದರೆ ಭಾವಕ್ಕನುಗುಣವಾದ ದೇಹಚೇಷ್ಟೆ.]

**ಪುಗುವ ಪೊಱಮಡುವ ತೆಱನೆರ್ದೆ**
**ವುಗುವಳ್ ಪೊಱಮಡುವಳೆನಿಸೆ ಪೊಸತಮರ್ದಂ ಮೇ**
**ಗುಗುಟ್ದಿಪಳೆನಿಸೆ ಮುಗುಳ್ನಗೆ**
**ನಗೆಮೊಗದ ಬೆಡಂಗವಳ್ಗದೇನೊಪ್ಪಿದುದೋ** ೬೬

**ಪದವಿಭಾಗ-ಅನ್ವಯ-ಅರ್ಥ:** ಪುಗುವ ಪೊಱಮಡುವ ತೆಱನ್ = (ರಂಗವನ್ನು) ಪ್ರವೇಶಿಸುವ ಮತ್ತು ಹೊರಹೋಗುವ ರೀತಿಯಲ್ಲಿ, ಎರ್ದೆ + ಪುಗುವಳ್ ಪೊಱಮಡುವಳ್ + ಎನಿಸೆ = (ನೋಡುಗರ) ಎದೆಯನ್ನು ಹೊಗುವಳು ಹೊರಬರುವಳು ಎನಿಸುವಂತೆ, ಮೇಗೆ ಪೊಸತು + ಅಮರ್ದಂ ಉಗುಟ್ದಿಪಳ್ + ಎನಿಸೆ = ಅದರ ಮೇಲೆ ಹೊಸತಾದ ಅಮೃತವನ್ನು ಉಗುಳುತ್ತಾಳೆಯೋ ಎಂಬಂತೆ, ಮುಗುಳ್ನಗೆ ನಗೆಮೊಗದ ಬೆಡಂಗು + ಅವಳ್ಗೆ + ಅದೇನು +

ಒಪ್ಪಿದುದೋ = ಮುಗುಳ್ನಗುವಿನಿಂದ ಅವಳ ನಗುಮುಖದ ಬೆಡಗು ದೇನು ಶೋಭಿಸಿತು.

**ಪದವಿಭಾಗ-ಅನ್ವಯ-ಅರ್ಥ:** ರಂಗವನ್ನು ಪ್ರವೇಶಿಸುವ ಮತ್ತು ಹೊರಹೋಗುವ ರೀತಿಯಲ್ಲಿ, ನೋಡುಗರ ಎದೆಯನ್ನು ಹೊಗುವಳು ಹೊರಬರುವಳು ಎನಿಸುವಂತೆ ಅವಳ ಪ್ರವೇ-ನಿರ್ಗಮನಗಳಿದ್ದುವು; ಅದರ ಮೇಲೆ, ಹೊಸತಾದ ಅಮೃತವನ್ನು ಉಗುಳುತ್ತಾಳೆಯೋ ಎಂಬಂತೆ ಮುಗುಳ್ನಗುವಿನಿಂದ ಕೂಡಿದ ಅವಳ ನಗುಮುಖದ ಬೆಡಗು ಶೋಭಿಸಿತು.

**ಪೊಸವೆಳ್ದಿಂಗಳ್ ದೆಸೆದೆಸೆ**
**ಗೆಸೆದುದು ಕುಮುದವನಮಲರ್ದುದೆಂಬಂತಿರದೇ**
**ನೆಸೆದುದೊ ಕಟಾಕ್ಷಮಾಲಾ**
**ಪ್ರಸರಂ ಭ್ರೂಲಾಸ್ಯಸೌಂದರಂ ನರ್ತಕಿಯಾ** ೬೭

**ಪದವಿಭಾಗ-ಅನ್ವಯ-ಅರ್ಥ:** ಕುಮುದವನಂ + ಅಲರ್ದುದು + ಎಂಬಂತೆ = ನೈದಿಲೆಗಳ ಗುಂಪು ಅರಳಿತೋ ಎನ್ನುವ ಹಾಗೆ, ದೆಸೆದೆಸೆಗೆ ಪೊಸ + ಬೆಳ್ದಿಂಗಳ್ ಎಸೆದುದು = ದಿಕ್ಕುದಿಕ್ಕಿನಲ್ಲಿಯೂ ಹೊಸ ಬೆಳುದಿಂಗಳು ಶೋಭಿಸಿತು; ನರ್ತಕಿಯಾ ಕಟಾಕ್ಷಮಾಲಾಪ್ರಸರಂ ಭ್ರೂಲಾಸ್ಯಸೌಂದರಂ ಇರದೆ + ಏನೆಸೆದುದೊ = ನರ್ತಕಿಯ ಕುಡಿನೋಟಗಳ ಮಾಲೆ ಹರಡುವಿಕೆ ಮತ್ತು ಹುಬ್ಬುಗಳ ಒನಪು ಅದೇನು ಚೆಲುವಾದುವೋ!

**ಗದ್ಯಾನುಸರಣ:** ನರ್ತಕಿಯ ಕುಡಿನೋಟಗಳ ಮಾಲೆ ಹರಡುವಿಕೆ ಮತ್ತು ಹುಬ್ಬುಗಳ ಒನಪುಗಳಿಂದ ನೈದಿಲೆಗಳ ಗುಂಪು ಅರಳಿತೋ ಎನ್ನುವ ಹಾಗೆ ದಿಕ್ಕುದಿಕ್ಕಿನಲ್ಲಿಯೂ ಹೊಸ ಬೆಳುದಿಂಗಳು ಶೋಭಿಸುವಂತೆ ಕಾಣಿಸಿತು; ಅಂತಹ ಚೆಲುವು ಸೊಗಯಿಸಿತು!

**ಅವಯವದಿಂದಮೆ ದೇವಾಂ**
**ಗವಸ್ತ್ರದುಳ್ಳುಡೆಯನಾಕೆಯೋಸರಿಸುವ ಸೂ**
**ಸುವ ಹಾರಲತೆಯನಳವಡಿ**
**ಸುವ ಭಂಗಿಯೆ ಮದನರಾಜರಾಜ್ಯವಿಳಾಸಂ** ೬೮

**ಪದವಿಭಾಗ-ಅನ್ವಯ-ಅರ್ಥ:** ಆಕೆ ಅವಯವದಿಂದಮೆ ದೇವಾಂಗವಸ್ತ್ರದ + ಉಳ್ಳುಡೆಯನ್ ಓಸರಿಸುವ = ಅವಳು ತನ್ನ ಅಂಗಾಂಗಗಳಿಂದ ರೇಷ್ಮೆಯ ಒಳಉಡುಪನ್ನು ಸರಿಸುವ, ಸೂಸುವ ಹಾರಲತೆಯನ್ + ಅಳವಡಿಸುವ ಭಂಗಿಯೆ = ಓಲಾಡುವ ಹಾರವೆಂಬ ಬಳ್ಳಿಯನ್ನು ಸರಿಪಡಿಸಿಕೊಳ್ಳುವ ನಿಲವೇ, ಮದನರಾಜರಾಜ್ಯವಿಳಾಸಂ = ಕಾಮರಾಜನ ಬೆಡಗಿನ ರಾಜ್ಯವೆನಿಸಿತು!

**ಗದ್ಯಾನುಸರಣ:** ಅವಳು ತನ್ನ ಅಂಗಾಂಗಗಳಿಂದ ರೇಷ್ಮೆಯ ಒಳಉಡುಪನ್ನು ಸರಿಸುವ ಹಾಗೂ ಓಲಾಡುವ ಹಾರವೆಂಬ ಬಳ್ಳಿಯನ್ನು ಸರಿಪಡಿಸಿಕೊಳ್ಳುವ ನಿಲವೇ ಕಾಮರಾಜನ ಬೆಡಗಿನ ರಾಜ್ಯವೆನಿಸಿತು!

**ಸುರಗಣಿಕಾನಾಟ್ಯರಸಂ**
**ಪರಮನ ಚಿತ್ತಮುಮನೆಯ್ದೆ ರಂಜಿಸಿದುದು ವಿ**
**ಸ್ಫುರಿತಸ್ಫಟಿಕಂ ಶುದ್ಧಾಂ**
**ತರಂಗಮೇಸನ್ಯರಾಗದಿಂ ರಂಜಿಸದೇ** ೬೯

**ಪದವಿಭಾಗ–ಅನ್ವಯ–ಅರ್ಥ** : ಸುರಗಣಿಕಾನಾಟ್ಯರಸಂ ಪರಮನ ಚಿತ್ತಮುಮನ್ + ಎಯ್ದೆ ರಂಜಿಸಿದುದು = ದೇವಗಣಿಕೆಯ ನಾಟ್ಯದ ಚೆಲುವು ಆದಿದೇವನ ಮನಸ್ಸನ್ನೂ ತುಂಬ ಸಂತಸಗೊಳಿಸಿತು; ವಿಸ್ಫುರಿತಸ್ಫಟಿಕಂ ಶುದ್ಧಾಂತರಂಗಂ + ಏನ್ + ಅನ್ಯರಾಗದಿಂ ರಂಜಿಸದೇ = ಸ್ಫಟಿಕಶುದ್ಧವಾದ ನಿರ್ಮಲ ಮನಸ್ಸು ಇತರ ಬಣ್ಣಗಳಿಂದ ಹೊಳೆಯುವುದಿಲ್ಲವೇ?

**ಗದ್ಯಾನುಸರಣ:** ದೇವಗಣಿಕೆಯ ನಾಟ್ಯದ ಚೆಲುವು ಆದಿದೇವನ ಮನಸ್ಸನ್ನೂ ತುಂಬ ಸಂತಸಗೊಳಿಸಿತು; ಸ್ಫಟಿಕಶುದ್ಧವಾದ ನಿರ್ಮಲ ಮನಸ್ಸು ಇತರರ ಭಾವನೆಗಳಿಂದ ಮಿಡುಕುವುದಿಲ್ಲವೇ?

**ಆ ಮಧುರಾಕಾರಲತಾ**
**ಕೋಮಳೆ ತನಗಾಗಳಾಯುರಂತಂ ಬರೆ ಸೌ**
**ದಾಮಿನಿವೊಲ್ ಭೋಂಕನೆ ಸುರ**
**ಕಾಮಿನಿ ರಂಗದೊಳದೃಶ್ಯೆಯಪ್ಪುದುಮಾಗಳ್** ೭೦

**ಪದವಿಭಾಗ–ಅನ್ವಯ–ಅರ್ಥ:** ಆ ಮಧುರ + ಆಕಾರಲತಾಕೋಮಳೆ = ಆ ಮಧುರ ಆಕಾರದ ಬಳ್ಳಿಯಂತಹ ಕೋಮಲೆಯು, ಆಗಳ್ ತನಗೆ ಆಯುರ್ + ಅಂತಂ ಬರೆ = ಆಗ ತನ್ನ ಆಯುಸ್ಸಿನ ಕೊನೆ ಬರಲು, ಸುರಕಾಮಿನಿ ಸೌದಾಮಿನಿವೊಲ್ ಭೋಂಕನೆ = ಆ ದೇವವನಿತೆಯು ಮಿಂಚಿನ ಹಾಗೆ ಇದ್ದಕಿದ್ದಂತೆಯೇ, ರಂಗದೊಳ್ + ಅದೃಶ್ಯೆ + ಅಪ್ಪುದುಮ್ + ಆಗಳ್ = ರಂಗದಿಂದ ಕಣ್ಮರೆಯಾಗಲು, ಆಗ

**ಗದ್ಯಾನುಸರಣ:** ಆ ಮಧುರ ಆಕಾರದ ಬಳ್ಳಿಯಂತಹ ಕೋಮಲೆಯ ಆಯುಸ್ಸಿನ ಕೊನೆ ಬಂತು; ಆಗ ಆ ದೇವವನಿತೆಯು ಮಿಂಚಿನ ಹಾಗೆ ಇದ್ದಕಿದ್ದಂತೆಯೇ ರಂಗದಿಂದ ಕಣ್ಮರೆಯಾದಳು: ಆಗ

**ರಸಭಂಗಭಯದಿನಿಂದ್ರಂ**
**ಪೊಸತೊಂದಾ ದೊರೆಯ**
**ಪಾತ್ರಮಂ ತಂದನುಸಂಧಿಸುವುದನಣಮಱಿಯ**
**ಲ್ಕೆ ಸುರಾಸುರಸಮಿತಿಗಾದುದಿಲ್ಲಾ ಕ್ಷಣದೊಳ್** ೭೧

**ಪದವಿಭಾಗ–ಅನ್ವಯ–ಅರ್ಥ:** ಇಂದ್ರಂ ರಸಭಂಗಭಯದಿನ್ = ಎಲ್ಲಿ ರಸಭಂಗವಾಗುತ್ತದೋ ಎಂಬ ಆತಂಕದಿಂದ ಇಂದ್ರನು, ಆ ದೊರೆಯ ಪೊಸತೆ + ಒಂದು ಪಾತ್ರಮಂ ತಂದು = ಅವಳಂತಹುದೇ ಒಂದು ಹೊಸ ಪಾತ್ರವನ್ನು ತಂದು, ಅನುಸಂಧಿಸುವುದನ್ = ಇರಿಸುವುದನ್ನು, ಅಣಂ + ಅಱಿಯಲ್ಕೆ =

ಕೊಂಚವಾದರೂ ತಿಳಿಯಲು, ಆ ಕ್ಷಣದೊಳ್ ಸುರ + ಅಸುರಸಮಿತಿಗೆ + ಆದುದಿಲ್ಲ = ಆ ಕ್ಷಣದಲ್ಲಿ ಸುರ ಮತ್ತು ಅಸುರ ದೇವತೆಗಳಿಗೆ ಸಾಧ್ಯವಾಗಲಿಲ್ಲ.

**ಗದ್ಯಾನುಸರಣ:** ಎಲ್ಲಿ ರಸಭಂಗವಾಗುತ್ತದೋ ಎಂಬ ಆತಂಕದಿಂದ ಇಂದ್ರನು ತಂದು ಅವಳಂತಹುದೇ ಒಂದು ಹೊಸ ಪಾತ್ರವನ್ನು ಸೃಷ್ಟಿಸಿ ಇರಿಸಿದ; ಅದನ್ನು ತಿಳಿಯಲು ಆ ಕ್ಷಣದಲ್ಲಿ ಸುರ ಮತ್ತು ಅಸುರ ದೇವತೆಗಳಿಗೆ ಸ್ವಲ್ಪವೂ ಸಾಧ್ಯವಾಗಲಿಲ್ಲ.

**ಆ ನೀಲಾಂಜನೆಯೆಂದೆ ಮ**
**ನೋನಯನೋದಿತವಿಮೋಹದಿಂದಿರೆ ಸಭೆ ವಿ**
**ದ್ಯಾನಿಳಯನಜಿದದಂ ದೇ**
**ಹಾನಿತ್ಯತೆಗಿಂತು ನಾಡೆ ಚೋದ್ಯಂಬಟ್ಟಂ** ೭೨

**ಪದವಿಭಾಗ–ಅನ್ವಯ–ಅರ್ಥ:** ಸಭೆ ಆ ನೀಲಾಂಜನೆ + ಎಂದೆ = ಸಭೆಯು ಆ ನೀಲಾಂಜನೆಯೇ ಎಂದು, ಮನೋನಯನ + ಉದಿತವಿಮೋಹದಿಂದೆ + ಇರೆ = ಮನಸ್ಸಿನಲ್ಲುಂಟಾದ ಭ್ರಮೆಯಿಂದ ಭಾವಿಸಿರಲು, ಅದಂ ವಿದ್ಯಾನಿಳಯನ್ + ಅಜಿದು = ವಿದ್ಯೆಯ ಆಗರವಾದ ಆದಿದೇವನು ಸತ್ಯವನ್ನರಿತು, ದೇಹ + ಅನಿತ್ಯತೆಗೆ + ಇಂತು ನಾಡೆ ಚೋದ್ಯಂಬಟ್ಟಂ = ದೇಹದ ನಶ್ವರತೆಯ ಬಗ್ಗೆ ತೀವ್ರ ವಿಸ್ಮಯಕ್ಕೊಳಗಾದ

**ಗದ್ಯಾನುಸರಣ:** ಸಭೆಯು ಆ ನೀಲಾಂಜನೆಯೇ ಎಂದು ಮನಸ್ಸಿನಲ್ಲುಂಟಾದ ಭ್ರಮೆಯಿಂದ ಭಾವಿಸಿದರು; ಆದರೆ ವಿದ್ಯೆಯ ಆಗರವಾದ ಆದಿದೇವನಿಗೆ ಸತ್ಯ ಗೋಚರಿಸಿತು; ಆಗ ಮಾನವ ದೇಹದ ನಶ್ವರತೆಯ ಬಗ್ಗೆ ಆತನು ತೀವ್ರ ವಿಸ್ಮಯಕ್ಕೊಳಗಾದ.

[**ವಿಶೇಷ ವಿಚಾರ:** ನೀಲಾಂಜನೆಯ ಪ್ರಸಂಗ ಪೂರ್ವಪುರಾಣದಲ್ಲಿ ೧೭ ನೆಯ ಪರ್ವದ ಆರಂಭದಲ್ಲಿ ಕೇವಲ ಹತ್ತು ಶ್ಲೋಕಗಳಲ್ಲಿ ಮುಗಿದಿದೆ.]

**ನಾರೀರೂಪದ ಯಂತ್ರಂ**
**ಚಾರುತರಂ ನೋಡೆ ನೋಡೆ ಕರಗಿದುದೀ ಸಂ**
**ಸಾರದನಿತ್ಯತೆ ಮನದೊಳ್**
**ಬೇರೂಜಿದುದೀಗಳೆಂತಿದಂ ಕಡೆಗಣಿಪೆಂ** ೭೩

**ಪದವಿಭಾಗ–ಅನ್ವಯ–ಅರ್ಥ:** ನಾರೀರೂಪದ ಚಾರುತರಂ ಯಂತ್ರಂ = ಹೆಣ್ಣಿನ ಆಕಾರದ ಸುಂದರ ಯಂತ್ರವು, ನೋಡೆ ನೋಡೆ ಕರಗಿದುದು = ನೋಡು ನೋಡುತ್ತಿರುವಂತೆಯೇ ಕಣ್ಮರೆಯಾಯಿತು, ಈ ಸಂಸಾರದ + ಅನಿತ್ಯತೆ ಮನದೊಳ್ ಬೇರೂಜಿದುದು = ಈ ಐಹಿಕತೆಯ ನಶ್ವರತೆ ಮನಸ್ಸಿನಲ್ಲಿ ದೃಢವಾಯಿತು, ಈಗಳ್ ಇದಂ ಎಂತು ಕಡೆಗಣಿಪೆಂ = ಇದನ್ನೀಗ ಹೇಗೆ ತಾನೇ ಕಡೆಗಣಿಸಲಿ.

**ಗದ್ಯಾನುಸರಣ:** ಹೆಣ್ಣಿನ ಆಕಾರದ ಆ ಸುಂದರ ಯಂತ್ರವು ಇದ್ದಕ್ಕಿದ್ದಂತೆಯೇ ಕಣ್ಮರೆಯಾಯಿತು; ಈ ಐಹಿಕತೆಯ ನಶ್ವರತೆ ಆದಿದೇವನ ಮನಸ್ಸಿನಲ್ಲಿ ದೃಢವಾಯಿತು; ಇದನ್ನೀಗ ಹೇಗೆ ತಾನೇ ಕಡೆಗಣಿಸಲಿ ಎಂದು ಚಿಂತಿಸಿದ.

**ಕೋಟಿತೆಱದಿಂದಮೆಸೆವೀ**
**ನಾಟಕಮಂ ತೋಱಿ ಮಾಣ್ದಳಿಲ್ಲಳ್ ಬಗೆಯೊಳ್**
**ನಾಟುವಿನಮಮರಿ ಸಂಸೃತಿ**
**ನಾಟಕಮುಮನೆನಗೆ ನೆಱೆಯೆ ತೋಱಿದಳೀಗಳ್** ೭೪

**ಪದವಿಭಾಗ–ಅನ್ವಯ–ಅರ್ಥ:** ಕೋಟಿತೆಱದಿಂದಮೆಸೆವ + ಈ ನಾಟಕಮಂ ತೋಱಿ ಮಾಣ್ದಳ್ + ಇಲ್ಲಳ್ = ಇವಳು ಕೋಟಿ ಬಗೆಯಲ್ಲಿ ಕಾಣಿಸುವ ನಾಟಕವನ್ನು ತೋರಿಸಿ ಅಷ್ಟಕ್ಕೇ ನಿಲ್ಲಲಿಲ್ಲ, ಬಗೆಯೊಳ್ ನಾಟುವಿನಂ = ಮನಸ್ಸಿನಲ್ಲಿ ನೆಲೆಯೂರುವ ಹಾಗೆ, ಅಮರಿ ಈಗಳ್ ಸಂಸೃತಿನಾಟಕಮುಮನ್ ಎನಗೆ ನೆಱೆಯೆ ತೋಱಿದಳ್ = ದೇವವನಿತೆಯು ಈಗ ಸಂಸಾರದ ನಾಟಕವನ್ನೂ ನನಗೆ ಸಮರ್ಥವಾಗಿ ನಿರೂಪಿಸಿದಳು.

**ಗದ್ಯಾನುಸರಣ:** ಅಸಂಖ್ಯ ಬಗೆಯಲ್ಲಿ ಕಾಣಿಸುವ ನಾಟಕವನ್ನು ತೋರಿಸಿದಳು ಅಷ್ಟಕ್ಕೇ ಸುಮ್ಮನಾಗಲಿಲ್ಲ; ಮನಸ್ಸಿನಲ್ಲಿ ನೆಲೆಯೂರುವ ಹಾಗೆ ಈ ದೇವವನಿತೆಯು ಈಗ ಸಂಸಾರದ ನಾಟಕವನ್ನೂ ನನಗೆ ಸಮರ್ಥವಾಗಿ ನಿರೂಪಿಸಿದಳು.

**ತನುರೂಪವಿಭವಯೌವನ**
**ಧನಸೌಭಾಗ್ಯಾಯುರಾದಿಗಳ್ಗೆಣೆ ಕುಡುಮಿಂ**
**ಚಿನ ಪೊಳೆಪು ಮುಗಿಲ ನೆೞಲಿಂ**
**ದ್ರನ ಬಿಲ್ ಬೊಬ್ಬುಳಿಕೆಯುಬ್ಬು ಪರ್ಬಿದ ಭೋಗಂ** ೭೫

**ಪದವಿಭಾಗ–ಅನ್ವಯ–ಅರ್ಥ:** ತನುರೂಪ ವಿಭವ ಯೌವನ ಧನ ಸೌಭಾಗ್ಯ + ಆಯುಸ್ ಆದಿಗಳ್ಗೆ = ದೇಹದ ಚೆಲುವು, ವೈಭವ, ಹರೆಯ, ಹಣ, ಆಯುಸ್ಸು, ಮುಂತಾದವುಗಳಿಗೆ, ಎಣೆ ಕುಡುಮಿಂಚಿನ ಪೊಳೆಪು ಮುಗಿಲ ನೆೞಲ್ + ಇಂದ್ರನ ಬಿಲ್ = ಸಮಾನವಾದುವೆಂದರೆ ಮಿಂಚಿನ ಹೊಳೆಪು, ಮೋಡದ ನೆರಳು, ಕಾಮನ ಬಿಲ್ಲುಗಳು; ಪರ್ಬಿದ ಭೋಗಂ ಬೊಬ್ಬುಳಿಕೆಯ + ಉಬ್ಬು = ಆಳವಾದ ಭೋಗಾಕಾಂಕ್ಷೆಯೂ ನೀರಗುಳ್ಳೆಯ ಉಬ್ಬಿನ ಹಾಗೆ.

**ಗದ್ಯಾನುಸರಣ:** ದೇಹದ ಚೆಲುವು, ವೈಭವ, ಹರೆಯ, ಹಣ, ಆಯುಸ್ಸು, ಮುಂತಾದವುಗಳು ಮಿಂಚಿನ ಹೊಳೆಪು, ಮೋಡದ ನೆರಳು, ಕಾಮನ ಬಿಲ್ಲುಗಳಂತೆಯೇ; ಆಳವಾದ ಭೋಗಾಕಾಂಕ್ಷೆಯಂತೂ ನೀರಗುಳ್ಳೆಯ ಉಬ್ಬಿನ ಹಾಗೆ.

[**ವಿಶೇಷ ವಿಚಾರ:** ಈ ಮನಕಲಕುವ ಪದ್ಯಕ್ಕೆ ಕ್ರಿಶ. ಸುಮಾರು ಏಳುನೂರರ ಶ್ರವಣಬೆಳುಗೊಳದ ಶಾಸನವೊಂದರಲ್ಲಿನ ನಂದಿಸೇನ ಮುನಿಪ್ರವರನನ್ನು ಬಣ್ಣಿಸುವ ಪದ್ಯ ಪ್ರೇರಕವಾಗಿದೆಯೇ? ಆ ಪದ್ಯ ಹೀಗಿದೆ: 'ಸುರಚಾಪಂಬೋಲೆ ವಿದ್ಯುಲ್ಲತೆಗಳ ತೆಱವೋಲ್ ಮಂಜುವೋಲ್ ತೋಱಿ ಬೇಗಂ ಪರಿಗುಂ ಶ್ರೀರೂಪಲೀಲಾಧನ ವಿಭವ ಮಹಾರಾಶಿಗಳ್ ನಿಲ್ಲವಾರ್ಗ್ಗಂ ಪರಮಾರ್ಥಂ ಮೆಚ್ಚೆ ನಾನೀ ಧರಿಣಿಯುಳಿರವಾನೆಂದು ಸನ್ಯಾಸನಂಗೆಯ್ದುರುಸತ್ವನ್ ನಂದಿಸೇನಪ್ರವರ ಮುನಿವರನ್ ದೇವಲೋಕಕ್ಕೆ ಸಂದಾಂ']

ಎನಿತೊಡಲಂ ತಾಳ್ದಿದುದಿ
ಲ್ಲೆನಿತೊಡಲಂ ಬಿಸುಟುದಿಲ್ಲ ವಿಷಯಾನಳನಿಂ
ದೆನಿತೆನಿತಂ ಮಜುಗಿದುದಿ
ಲ್ಲನಂತಸಂಸಾರಗಹನದೊಳ್ ಜೀವಂಗಳ್ ೭೬

**ಪದವಿಭಾಗ–ಅನ್ವಯ–ಅರ್ಥ:** ಜೀವಂಗಳ್ ಎನಿತು + ಒಡಲಂ ತಾಳ್ದಿದುದಿಲ್ಲ = ಜೀವಗಳು ಎಷ್ಟು ದೇಹಗಳನ್ನು ಹೊಂದಲಿಲ್ಲ, ಎನಿತು + ಒಡಲಂ ಬಿಸುಟುದಿಲ್ಲ = ಎಷ್ಟು ದೇಹಗಳನ್ನು ತೊರೆಯಲಿಲ್ಲ, ವಿಷಯ + ಅನಳನಿಂದೆ ಅನಂತ ಸಂಸಾರಗಹನದೊಳ್ ಎನಿತೆನಿತಂ ಮಜುಗಿದುದಿಲ್ಲ = ಇಂದ್ರಿಯಸುಖವೆಂಬ ಇಹದ ಕೊನೆಯಿರದ ಕಾಡಿನಲ್ಲಿ ಎಷ್ಟೆಷ್ಟು ನೋವನ್ನನುಭವಿಸಲಿಲ್ಲ!

**ಗದ್ಯಾನುಸರಣ:** ಜೀವಗಳು ಎಷ್ಟು ದೇಹಗಳನ್ನು ಹೊಂದಲಿಲ್ಲ, ಎಷ್ಟು ದೇಹಗಳನ್ನು ತೊರೆಯಲಿಲ್ಲ, ಇಂದ್ರಿಯಸುಖವೆಂಬ ಇಹದ ಕೊನೆಯಿರದ ಕಾಡಿನಲ್ಲಿ ಎಷ್ಟೆಷ್ಟು ನೋವನ್ನನುಭವಿಸಲಿಲ್ಲ!

**ಬಗೆದೀಡಾಡೆ ದುರಂತದುಃಖತತಿಗಳ್ ಬೆನ್ನಟ್ಟೆ ದುರ್ಮೋಹಮ**
**ತ್ಸ್ಯಗಣಂಗಳ್ ಕಡಿದಿಕ್ಕೆ ಲೋಭಮಕರಾನೀಕಂಗಳಾಟಂದು ನು**
**ಣ್ಣಗೆ ನುಂಗುತ್ತಿರೆ ಮಾರರಾಗಶಿಶುಮಾರಂಗಳ್ ಮಹೋಗ್ರಂಗಳಿ**
**ನ್ನೆಗಮೋರಂತೆ ತೋಟಲ್ದೆನಿಂ ತಿರಿಯಲಾನಾಜೆಂ ಭವಾಂಬೋಧಿಯೊಳ್** ೭೭

**ಪದವಿಭಾಗ–ಅನ್ವಯ–ಅರ್ಥ:** ದುರಂತದುಃಖತತಿಗಳ್ ಬಗೆದೀಡಾಡೆ = ದುರಂತಕರವಾದ ದುಃಖ(ವೆಂಬ ಅಲೆ)ಗಳು ಕೊಚ್ಚಿಕೊಂಡು ಹೋಗಲು, ದುರ್ಮೋಹಮತ್ಸ್ಯಗಣಂಗಳ್ ಬೆನ್ನಟ್ಟೆ = ಕೆಟ್ಟ ಆಸೆಗಳೆಂಬ ಮೀನುಗಳ ಹಿಂಡು ಹಿಂಬಾಲಿಸಲು, ಲೋಭಮಕರ + ಅನೀಕಂಗಳ್ ಕಡಿದಿಕ್ಕೆ = ಲೋಭವೆಂಬ ಮೊಸಳೆಗಳು ಕಚ್ಚಿಹಾಕಲು, ಮಾರರಾಗಶಿಶುಮಾರಂಗಳ್ ಮಹೋಗ್ರಂಗಳ್ ಆಟಂದು ನುಣ್ಣಗೆ ನುಂಗುತ್ತಿರೆ = ಕಾಮವೆಂಬ ಮೊಸಳೆಗಳೂ ಹೆಬ್ಬಾವುಗಳೂ ಮೇಲೆ ಬಿದ್ದು ನುಂಗಿ ಹಾಕುತ್ತಿರಲು, ಇನ್ನೆಗಂ + ಓರಂತೆ ಭವ + ಅಂಬೋಧಿಯೊಳ್ ತೋಳಲ್ದೆನ್ = ಇಲ್ಲಿಯವರೆಗೆ ಒಂದೇ ಸಮನೆ ಸಂಸಾರಸಾಗರದಲ್ಲಿ ಸುತ್ತಾಡಿದೆ, ಇಂ ತಿರಿಯಲಾಜೆಂ = ಇನ್ನು ತೊಳಲಲಾರೆ.

**ಗದ್ಯಾನುಸರಣ:** ದುರಂತಕರವಾದ ದುಃಖದ ಅಲೆಗಳು ಕೊಚ್ಚಿಕೊಂಡು ಹೋಗಲು, ಕೆಟ್ಟ ಆಸೆಗಳೆಂಬ ಮೀನುಗಳ ಹಿಂಡು ಹಿಂಬಾಲಿಸಲು, ಲೋಭವೆಂಬ ಮೊಸಳೆಗಳು ಕಚ್ಚಿಹಾಕಲು, ಕಾಮವೆಂಬ ಮೊಸಳೆಗಳೂ ಹೆಬ್ಬಾವುಗಳೂ ಮೇಲೆ ಬಿದ್ದು ನುಂಗುತ್ತಿರಲು, ಇಲ್ಲಿಯವರೆಗೆ ಸಂಸಾರಸಾಗರದಲ್ಲಿ ಒಂದೇ ಸಮನೆ ಸುತ್ತಾಡಿದೆ; ಇನ್ನು ತೊಳಲಲಾರೆ.

[**ವಿಶೇಷ ವಿಚಾರ:** ಮೇಲಿನ ಎರಡು ಪದ್ಯಗಳು ಪ್ರಕ್ಷಿಪ್ತವೆಂದು ಬಸವರಾಜು ಅವರ ತೀರ್ಮಾನ. ಆದಿಪುರಾಣದ ಅತ್ಯಂತ ಪ್ರಾಚೀನ ಹಸ್ತಪ್ರತಿಯಲ್ಲೇ ಇದು ಸಿಕ್ಕುವುದರಿಂದ ೧೪೦೦ ಕ್ಕೆ ಮುಂಚೆಯೇ ಈ ಪದ್ಯಗಳು ನುಸುಳಿರಬೇಕೆಂಬುದು ಅವರ ಭಾವನೆ.]

**ವ॥ ಎಂದು ಸಂಸಾರಶರೀರಭೋಗವಿರಕ್ತಾಂತರಂಗನುಂ ಮುಕ್ತಿಕಾಂತಾನುರಕ್ತಚಿತ್ತನು ಮಾಗಿರ್ಪನ್ನೆಗಂ, ಪೂರ್ವಭವಾಭ್ಯಸ್ತಸಮಸ್ತ ಆಗಮಾರ್ಥರುಂ ಉಚಿತ ಶುಭಭಾವನಾಧ್ಯಾಸಿತ ಅಂತಃಕರಣರುಂ ತ್ರಿಭುವನಗುರು ಪರಿನಿಷ್ಕ್ರಮಣಕಲ್ಯಾಣ ಪ್ರತೀಕ್ಷಣರುಂ, ಬ್ರಹ್ಮಕಲ್ಪಾಂತ ನಿವಾಸಿಗಳುಮಪ್ಪ ಎಣ್ಬರುಂ ಲೋಕಾಂತಿಕದೇವರ್ ಬಂದು,**

**ಪದವಿಭಾಗ-ಅನ್ವಯ-ಅರ್ಥ:** ಎಂದು ಸಂಸಾರಶರೀರಭೋಗವಿರಕ್ತ + ಅಂತರಂಗಂ = ಎಂಬುದಾಗಿ ಐಹಿಕಭೋಗಗಳಲ್ಲಿ ಜಿಹಾಸೆ ತಾಳಿದ ಮನಸ್ಸಿನವನೂ, ಮುಕ್ತಿಕಾಂತಾ + ಅನುರಕ್ತಚಿತ್ತನುಂ = ಮುಕ್ತಿವನಿತೆಯಲ್ಲಿ ಪ್ರೇಮವುಳ್ಳ ಮನಸ್ಸಿನವನೂ, ಆಗಿರ್ಪ + ಅನ್ನೆಗಂ = ಆಗಿರುವಾಗ, ಪೂರ್ವಭವ + ಅಭ್ಯಸ್ತಸಮಸ್ತ + ಆಗಮ + ಅರ್ಥರುಂ = ಹಿಂದಿನ ಜನ್ಮದಲ್ಲಿ ಅವನಿಂದ ಕಲಿತ ಎಲ್ಲ ಶಾಸ್ತ್ರಗಳ ಅರ್ಥವನ್ನು ಬಲ್ಲವರೂ, ಉಪಚಿತ ಶುಭಭಾವನಾ + ಅಧ್ಯಾಸಿತ + ಅಂತಃಕರಣರುಂ = ಒಳ್ಳೆಯ ಭಾವನೆಗಳು ಒಗ್ಗೂಡಿದ ಮನಸ್ಸಿನವರೂ, ತ್ರಿಭುವನಗುರು ಪರಿನಿಷ್ಕ್ರಮಣಕಲ್ಯಾಣ = ಮೂಲೋಕಗುರುವಿನ ಪರಿನಿಷ್ಕ್ರಮಣಕಲ್ಯಾಣಕ್ಕಾಗಿ, ಪ್ರತೀಕ್ಷಣರುಂ = ಎದುರು ನೋಡುವವರೂ, ಬ್ರಹ್ಮಕಲ್ಪಾಂತನಿವಾಸಿಗಳುಂ + ಅಪ್ಪ = ಬ್ರಹ್ಮಕಲ್ಪದ ತುದಿಯಲ್ಲಿ ವಾಸಿಸುವವರೂ ಆದ, ಎಣ್ಬರುಂ ಲೋಕಾಂತಿಕದೇವರ್ ಬಂದು = ಎಂಟು ಮಂದಿ ಲೋಕಾಂತಿಕದೇವರು ಬಂದು,

**ತಾತ್ಪರ್ಯ:** ಹೀಗಾಗಿ ಆದಿದೇವನು ಐಹಿಕಭೋಗಗಳಲ್ಲಿ ಜಿಹಾಸೆ ತಾಳಿ ಮುಕ್ತಿವನಿತೆಯಲ್ಲಿ ಪ್ರೇಮವುಳ್ಳ ಮನಸ್ಸಿನವನಾದ; ಆಗ ಹಿಂದಿನ ಜನ್ಮದಲ್ಲಿ ಅವನಿಂದ ಎಲ್ಲ ಶಾಸ್ತ್ರಗಳ ಅರ್ಥವನ್ನು ಕಲಿತವರೂ, ಒಳ್ಳೆಯ ಭಾವನೆಗಳು ಒಗ್ಗೂಡಿದ ಮನಸ್ಸಿನವರೂ, ಮೂಲೋಕಗುರುವಿನ ಪರಿನಿಷ್ಕ್ರಮಣಕಲ್ಯಾಣಕ್ಕಾಗಿ ಎದುರು ನೋಡುವವರೂ, ಬ್ರಹ್ಮಕಲ್ಪದ ತುದಿಯಲ್ಲಿ ವಾಸಿಸುವವರೂ ಆದ ಎಂಟು ಮಂದಿ ಲೋಕಾಂತಿಕದೇವರು ಬಂದರು.

[**ವಿಶೇಷ ವಿಚಾರ:** ಲೋಕಾಂತಿಕದೇವ = ಬ್ರಹ್ಮಸ್ವರ್ಗದ ಕೊನೆಯ ಪಟಲದಲ್ಲಿರುವ ಅಷ್ಟವಿಧ ದೇವತೆಗಳು (ಅವರ ಹೆಸರುಗಳು ಪದ್ಯದಲ್ಲಿಯೇ ಇವೆ); ಇವರು ವಿಷಯವಿರಕ್ತರು, ಚತುರ್ದಶಪೂರ್ವಧರರು, ತೀರ್ಥಂಕರನಿಗೆ ವೈರಾಗ್ಯವುಂಟಾದಾಗ ಅವನ ಪ್ರಶಂಸೆಗಾಗಿ ಭೂಲೋಕಕ್ಕೆ ಬರುವವರು.]

**ಪರಮಾರ್ಹಂತ್ಯಮನೆಯ್ದಲಿರ್ದುದಿದಜೆಂ ಮೇಲುಂಟೆ ಸತ್ತ್ವಂ ಚರಾ**
**ಚರಮಂ ನೆಟ್ಟನೆ ಪರ್ವಲಿರ್ದುದಜೆಂ ಮೇಲುಂಟೆ ವಿಜ್ಞಾನಮಿಂ**
**ತೆರಡರ್ಕಂ ನೆಲೆಯಾಗಿಯುಂ ವಸುಮತೀಸಾಮ್ರಾಜ್ಯದೊಳ್ ನೀಂ ನಿರಾ**
**ದರನಾಗಿರ್ದುದೆ ತತ್ಸುಖಾನುಗುಣಮಂ ಪೇಳ್ಗುಂ ಗುಣಾಂಭೋನಿಧೀ** ೭೮

**ಪದವಿಭಾಗ-ಅನ್ವಯ-ಅರ್ಥ:** ಗುಣ + ಅಂಭೋನಿಧೀ = ಗುಣಗಳ ಸಾಗರನೇ, ಪರಮ + ಅರ್ಹಂತ್ಯಮನ್ + ಎಯ್ದಲಿರ್ದುದುಜೆಂ ಸತ್ತ್ವಂ ಮೇಲುಂಟೆ = ಅತ್ಯಂತ ಶ್ರೇಷ್ಠ ಅರ್ಹಂತಪದವಿಯನ್ನು ಪಡೆಯುವುದಕ್ಕಿಂತಲೂ ಮಿಗಿಲಾದ ಸತ್ತ್ವವಿದೆಯೇ? ಚರ + ಅಚರಮಂ ನೆಟ್ಟನೆ ಪರ್ವಲಿರ್ದುದಜೆಂ ವಿಜ್ಞಾನಂ ಮೇಲುಂಟೆ

= ಎಲ್ಲ ಜೀವ-ಅಜೀವ ವಸ್ತುಗಳನ್ನೂ ವ್ಯಾಪಿಸುವುದಕ್ಕೂ ಮಿಗಿಲಾದ ವಿಜ್ಞಾನವಿದೆಯೇ? ಇಂತು + ಎರಡರ್ಕಂ ನೆಲೆಯಾಗಿಯುಂ = ಇವೆರಡಕ್ಕೂ ನೀನು ನೆಲೆಯಾಗಿದ್ದರೂ. ವಸುಮತೀಸಾಮ್ರಾಜ್ಯದೊಳ್ ನೀಂ ನಿರ್ + ಆದರನಾಗಿರ್ದುದೆ ತತ್ + ಸುಖ + ಅನುಗುಣಮಂ ಪೇೞ್ಗುಂ = ಭೂಮಂಡಲದ ಒಡೆತನದಲ್ಲಿ ನೀನು ಒಲವನ್ನು ಹೊಂದದಿರುವುದೇ ಅದರ ಸುಖದ ಸ್ವರೂಪವನ್ನು ತಿಳಿಸುತ್ತದೆ.

**ಗದ್ಯಾನುಸರಣ:** 'ಗುಣಗಳ ಸಾಗರನೇ, ಅತ್ಯಂತ ಶ್ರೇಷ್ಠ ಅರ್ಹಂತಪದವಿಯನ್ನು ಪಡೆಯುವುದಕ್ಕಿಂತಲೂ ಮಿಗಿಲಾದ ಸತ್ವವಿದೆಯೇ? ಎಲ್ಲ ಜೀವ-ಅಜೀವ ವಸ್ತುಗಳನ್ನೂ ವ್ಯಾಪಿಸಬಲ್ಲ ವಿಜ್ಞಾನಕ್ಕೆ ಮಿಗಿಲಾದುದಿದೆಯೇ? ಇವೆರಡಕ್ಕೂ ನೀನು ನೆಲೆಯಾಗಿದ್ದರೂ ಭೂಮಂಡಲದ ಒಡೆತನದಲ್ಲಿ ನೀನು ಒಲವನ್ನು ಹೊಂದಿಲ್ಲ, ಇದೇ ಅದರ ಸುಖದ ಸ್ವರೂಪವನ್ನು ತಿಳಿಸುತ್ತದೆ.'

**ವ॥ ಅದು ಕಾರಣದಿಂದೀ ವಸುಂಧರಾರಾಜ್ಯಮೋಹಮೆಂಬ ವಜ್ರಲೋಹನಿಗಳಮಂ ಪಱಿಯೆ ಪೊಯ್ವ ರಾಜಕುಂಜರಂಗೆ ನಿನಗಪವರ್ಗಮಾರ್ಗಂ ನಿರರ್ಗಳಮೆ ವಲಂ, ಎಂದು ಪ್ರತಿಬೋಧಿಸಿ ಪೋಗಲೊಡಂ, ಅಮರರಾಜಂ ಪರಿನಿಷ್ಕ್ರಮಣಕಲ್ಯಾಣೋತ್ಸುಕನಾಗಿ ಪಂಚಮಾಂಬುಧಿ ಪವಿತ್ರಜಳಪರಿಪೂರ್ಣಸುವರ್ಣಕಲಶಂಗಳಿಂದಮಭಿಷೇಕಂಗೆಯ್ದು, ತದನಂತರಂ ಭರತರಾಜನಂ ಬರಿಸಿ ರಾಜ್ಯಾಭಿಷೇಕಂಗೆಯ್ದು, ಬಾಹುಬಲಿಗಂ ಯುವರಾಜಪದವಿಯಂ ದಯೆಗೆಯ್ದಯೋಧ್ಯಾ ಪೌದನಪುರಾಧಿಪತ್ಯದೊಳಿರ್ವರುಮಂ ನಿಱಿಸಿ, ಉೞಿದಪತ್ಯವರ್ಗಕ್ಕೆಲ್ಲಮಿಳಾತಳ ವಿಭಾಗಮಂ ಪಚ್ಚುಕೊಟ್ಟು ಪರಿನಿಷ್ಕ್ರಮಣೋದ್ಯುಕ್ತಚಿತ್ತನುಮಾಗಿ ನಾಭಿರಾಜಾದಿಗಳಂ ಬೀೞ್ಕೊಂಡು, ಸೌಧರ್ಮೇಂದ್ರದತ್ತ ಹಸ್ತಾವಲಂಬಂ ಸುದರ್ಶನವೆಂಬ ಶಿಬಿಕೆಯನೇಱಿದಾಗಳ್, ಅಯೋಧ್ಯಾಪುರಕ್ಕತಿದೂರಮುಮತ್ಯಾಸನ್ನಮುಮಲ್ಲದ ಸಿದ್ಧಾರ್ಥವನದ ನಡುವಣ ನಿರಂತರನಿಚಿತತರುನಿಕರವಿಗಳಿತ ಪುಷ್ಪೋಪಹಾರಶೋಭಿತದೊಳ್ ಇಂದ್ರಾಣೀ ಹಸ್ತವಿನ್ಯಸ್ತಮರಕತಚೂರ್ಣರಂಗವಲ್ಲೀವಿರಾಜಿತದೊಳ್ ಅಮರವಾರಾಂಗನಾರಬ್ಧ ಮಂಗಳ ಗೀತಂಗಳೊಳ್ ದೇವಾಂಗವಸ್ತ್ರವಿರಚಿತವಿಚಿತ್ರಮಂಟಪದೊಳ್ ಪರ್ಯಂತನಿವೇಶಿತವಿವಿಧ ಮಂಗಳ ದ್ರವ್ಯಪರಿಕರ ಪರಿಪೂರ್ಣದೊಳ್ ಪಾಂಡುಕಶಿಲಾತಲವಿಳಾಸೋಪಹಾಸಿಚಂದ್ರಕಾಂತ ಶಿಳಾತಳದೊಳ್ ಶಿಬಿಕೆಯನಿೞಿಸಿ ಸುರಾಸುರಸಭೆಯಂ ದೂರೋತ್ಸಾರಿತಂಮಾಡಿ ಜನದ ಕಳಕಳಮಂ ಬಾರಿಸಿ ತನ್ಮಧ್ಯದೊಳ್ ಜಗನ್ನಾಥನನಿೞಿಸಿ ಪರಿಚಾರಕಭೃತ್ಯಮಂ ದೇವೇಂದ್ರಂ ಮಾಡಲ್ ಶುಭಭಾವನೆವೆರಸು ಸಮಸ್ತವಸ್ತುಗಳೊಳ್ ಸಮತೆಯಂ ಭಾವಿಸಿ ಬಾಹ್ಯಾಭ್ಯಂತರಪರಿಗ್ರಹಪರಿತ್ಯಾಗೋನ್ಮುಖಮಾನಸಂ ತ್ರಿಸಾಕ್ಷಿಕನಾಗಿ ವಸ್ತ್ರಾಭರಣಮಾಲ್ಯಾದಿಗಳಂ ಮೆಯ್ಯಿಂ ತೊಲಗಿಸಿ ಪೂರ್ವಾಭಿಮುಖನುಂ ನಿಬಿಡಬದ್ಧಪಲ್ಯಂಕಾಸನನುಮಾಗಿ,**

**ಪದವಿಭಾಗ-ಅನ್ವಯ-ಅರ್ಥ:** ಅದು ಕಾರಣದಿಂದೆ + ಈ ವಸುಂಧರಾರಾಜ್ಯಮೋಹಮೆಂಬ = ಆದ್ದರಿಂದ ಭೂಮಿಯ ಒಡೆತನದ ಆಸೆ ಎಂಬ, ವಜ್ರಲೋಹನಿಗಳಮಂ ಪಱಿಯೆ ಪೊಯ್ವ ರಾಜಕುಂಜರಂಗೆ ನಿನಗೆ = ಗಟ್ಟಿಯಾದ ಲೋಹದ ಸಂಕೋಲೆಯನ್ನು ಹರಿದು ಹಾಕಬಲ್ಲ ಮದ್ದಾನೆಯಾದ ನಿನಗೆ. ಅಪವರ್ಗಮಾರ್ಗಂ ನಿರರ್ಗಳಮೆ ವಲಂ = ಮೋಕ್ಷದ ದಾರಿಯು

ಸಲೀಸು, ಎಂದು ಪ್ರತಿಬೋಧಿಸಿ ಪೋಗಲೊಡಂ = ಎಂದು ಲೋಕಾಂತಿಕದೇವರು ಹೇಳಿ ಹೋಗಲು, ಅಮರರಾಜಂ ಪರಿನಿಷ್ಕ್ರಮಣಕಲ್ಯಾಣೋತ್ಸುಕನಾಗಿ = ದೇವೇಂದ್ರನು ಪರಿನಿಷ್ಕ್ರಮಣ ಕಲ್ಯಾಣವನ್ನು ನಡೆಸಲು ಸಡಗರದಿಂದ ಪಂಚಮ + ಅಂಬುಧಿಪವಿತ್ರಜಳಪರಿಪೂರ್ಣ = ಐದನೆಯದಾದ ಹಾಲುಡಲಿನ ಪಾವನವಾದ ನೀರು ತುಂಬಿದ, ಸುವರ್ಣಕಲಶಂಗಳಿಂದಂ + ಅಭಿಷೇಕಕಂಗೆಯ್ದು = ಚಿನ್ನದ ಕೊಡಗಳಿಂದ ಅಭಿಷೇಕ ಮಾಡಿ, ತತ್ + ಅನಂತರಂ = ಆ ಬಳಿಕ, ಭರತರಾಜನಂ ಬರಿಸಿ ರಾಜ್ಯಾಭಿಷೇಕಂಗೆಯ್ದು = ಆ ಬಳಿಕ ಭರತನನ್ನು ಬರಮಾಡಿಕೊಂಡು ಅವನಿಗೆ ಪಟ್ಟ ಕಟ್ಟಿ, ಬಾಹುಬಲಿಗಂ ಯುವರಾಜಪದವಿಯಂ ದಯೆಗೆಯ್ದು ಅಯೋಧ್ಯಾ ಪೌದನಪುರಾಧಿಪತ್ಯದೊಳ್ + ಇರ್ವರುಮಂ ನಿಜೆಸಿ = ಬಾಹುಬಲಿಗೆ ಯುವರಾಜಪದವಿಯನ್ನಿತ್ತು, ಅಯೋಧ್ಯೆ ಮತ್ತು ಪೌದನಪುರಗಳ ಆಡಳಿತವನ್ನು ನೀಡಿ ಅವರಿಬ್ಬರನ್ನೂ ನೆಲೆಗೊಳಿಸಿ, ಉಟೆದ + ಅಪತ್ಯವರ್ಗಕ್ಕೆಲ್ಲಂ = ಮಿಕ್ಕ ತನ್ನ ಮಕ್ಕಳೆಲ್ಲರಿಗೂ, ಇಳಾತಳವಿಭಾಗಮಂ ಪಚ್ಚುಕೊಟ್ಟು = ಭೂಭಾಗವನ್ನು ಹಂಚಿಕೊಟ್ಟು, ಪರಿನಿಷ್ಕ್ರಮಣ + ಉದ್ಯುಕ್ತಚಿತ್ತನುಂ + ಆಗಿ = ಪರಿನಿಷ್ಕ್ರಮಣಕಾರ್ಯದಲ್ಲಿ ಮನಸ್ಸನ್ನು ತೊಡಗಿಸಿಕೊಂಡು, ನಾಭಿರಾಜ + ಆದಿಗಳಂ ಬೀಟ್ಕೊಂಡು = ನಾಭಿರಾಜನೇ ಮುಂತಾದವರಿಂದ ಬೀಳ್ಕೊಂಡು, ಸೌಧರ್ಮೇಂದ್ರದತ್ತ ಹಸ್ತಾವಲಂಬಂ ಸುದರ್ಶನವೆಂಬ ಶಿಬಿಕೆಯನೇಜಿದಾಗಳ್ = ಸೌಧಮೇಂದ್ರನು ನೀಡಿದ ಕೈಯನ್ನು ಹಿಡಿದುಕೊಂಡು ಸುದರ್ಶನ ಎಂಬ ಮೇನೆಯನ್ನು ಹತ್ತಿ, ಅಯೋಧ್ಯಾಪುರಕ್ಕೆ + ಅತಿದೂರಮುಂ + ಅತಿ + ಆಸನ್ನಮುಂ + ಅಲ್ಲದ = ಅಯೋಧ್ಯಾನಗರಕ್ಕೆ ಹೆಚ್ಚು ದೂರವೂ ತೀರ ಹತ್ತಿರವೂ ಅಲ್ಲದ, ಸಿದ್ಧಾರ್ಥವನದ ನಡುವಣ = ಸಿದ್ಧಾರ್ಥವನದ ಮಧ್ಯದಲ್ಲಿನ, ನಿರಂತರನಿಚಿತತರುನಿಕರವಿಗಳಿತ = ದಟ್ಟವಾಗಿ ತುಂಬಿದ ಮರಗಳ ಗುಂಪಿನಿಂದ ಬಿದ್ದ, ಪುಷ್ಪ + ಉಪಹಾರಶೋಭಿತದೊಳ್ = ಹೂಗಳಿಂದ ಸೊಗಸುವ, ಇಂದ್ರಾಣೀಹಸ್ತವಿನ್ಯಸ್ತಮರಕತಚೂರ್ಣರಂಗವಲ್ಲೀವಿರಾಜಿತದೊಳ್ = ಶಚೀದೇವಿಯ ಕೈಗಳಿಂದ ಬಿಡಿಸಲ್ಪಟ್ಟ ಪಚ್ಚೆಯ ಹುಡಿಯ ರಂಗವಲ್ಲಿಯಿಂದ ಶೋಭಾಯಮಾನವಾದ, ಅಮರವಾರಾಂಗನಾ + ಆರಬ್ಧಮಂಗಳಗೀತಂಗಳೊಳ್ = ದೇವಗಣಿಕೆಯರಿಂದ ಆರಂಭವಾದ ಮಂಗಳ ಹಾಡುಗಳ ಮಧ್ಯೆ, ದೇವಾಂಗವಸ್ತ್ರವಿರಚಿತವಿಚಿತ್ರ ಮಂಟಪದೊಳ್ = ರೇಷ್ಮೆಬಟ್ಟೆಯಿಂದ ರಚಿತವಾದ ಆಕರ್ಷಕ ಮಂಟಪದಲ್ಲಿ, ಪರ್ಯಂತನಿವೇಶಿತವಿವಿಧಮಂಗಳದ್ರವ್ಯಪರಿಕರಪರಿಪೂರ್ಣದೊಳ್ = ಅದರೊಳಗೆ ಇರಿಸಿದ ನಾನಾ ಮಂಗಳಸಾಮಗ್ರಿಗಳಿಂದ ಕೂಡಿದ, ಪಾಂಡುಕಶಿಲಾತಲವಿಳಾಸ + ಉಪಹಾಸಿಚಂದ್ರಕಾಂತಶಿಳಾತಳದೊಳ್ = ಪಾಂಡುಕಶಿಲೆಯನ್ನೇ ಅಣಕಿಸುವ ಚಂದ್ರಕಾಂತಶಿಲೆಯ ಮೇಲ್ಭಾಗದಲ್ಲಿ, ಶಿಬಿಕೆಯನ್ + ಇರಿಸಿ = ಪಲ್ಲಕ್ಕಿಯನ್ನು ಇಳಿಸಿ, ಸುರ + ಅಸುರಸಭೆಯಂ ದೂರ + ಉತ್ಸಾರಿತಂಮಾಡಿ = ಸುರರ ಮತ್ತು ಅಸುರರ ಗುಂಪನ್ನು ದೂರಕ್ಕೆ ಚದುರಿಸಿ, ಜನದ ಕಳಕಳಮಂ ಬಾರಿಸಿ =

ಜನರ ಗದ್ದಲವನ್ನು ನಿಲ್ಲಿಸಿ, ತತ್ + ಮಧ್ಯದೊಳ್ ಜಗನ್ನಾಥನನ್ + ಇರಿಸಿ = ಅದರ ನಡುವೆ ಜಗದೊಡೆಯನನ್ನು ಕುಳ್ಳಿರಿಸಿ, ಪರಿಚಾರಕಭೃತ್ಯಮಂ ದೇವೇಂದ್ರಂ ಮಾಡಲ್ = ಸೇವಕನಂತೆ ಅವನ ಸೇವೆಯನ್ನು ದೇವೇಂದ್ರನೇ ಮಾಡಿ, ಶುಭಭಾವನೆ + ಬೆರಸು ಸಮಸ್ತವಸ್ತುಗಳೊಳ್ ಸಮತೆಯಂ ಭಾವಿಸಿ = ಒಳ್ಳೆಯ ಮನಸ್ಸಿನಿಂದ ಎಲ್ಲ ವಸ್ತುಗಳಲ್ಲಿಯೂ ಸಮಾನತೆಯನ್ನು ಚಿಂತಿಸುತ್ತ, ಬಾಹ್ಯ + ಅಭ್ಯಂತರಪರಿಗ್ರಹಪರಿತ್ಯಾಗ + ಉನ್ಮುಖಮಾನಸಂ = ಹೊರಗಿನ ಮತ್ತು ಒಳಗಿನ ಸಂಪತ್ತನ್ನು ತೊರೆಯುವುದರೆಡೆಗೆ ಮನಸ್ಸುಳ್ಳವನಾಗಿ, ತ್ರಿಸಾಕ್ಷಿಕನಾಗಿ = ತ್ರಿಸಾಕ್ಷಿಕನಾಗಿ, ವಸ್ತ್ರ + ಆಭರಣಮಾಲ್ಯಾದಿಗಳಂ ಮೆಯ್ಯಿಂ ತೊಲಗಿಸಿ = ಬಟ್ಟೆ ಒಡವೆ ಗಳನ್ನು ಮೆಯ್ಯಿನಿಂದ ತೆಗೆದು ಹಾಕಿ, ಪೂರ್ವಾಭಿಮುಖನುಂ = ಪೂರ್ವಕ್ಕೆ ಮುಖ ಮಾಡಿದವನೂ, ನಿಬಿಡಬದ್ಧಪಲ್ಯಂಕ + ಆಸನನುಂ + ಆಗಿ = ಬಿಗಿಯಾದ ಪಲ್ಯಂಕಾಸನದವನೂ ಆಗಿ,

**ಗದ್ಯಾನುಸರಣ:** ಆದ್ದರಿಂದ ಭೂಮಿಯ ಒಡೆತನದ ಆಸೆ ಎಂಬ ಗಟ್ಟಿಯಾದ ಲೋಹದ ಸಂಕೋಲೆಯನ್ನು ಹರಿದು ಹಾಕಬಲ್ಲ ಮದ್ದಾನೆಯಾದ ನಿನಗೆ, ಮೋಕ್ಷದ ದಾರಿಯ ಸಲೀಸೆಂಬುದು ನಿಜವೇ ಎಂದು ಲೋಕಾಂತಿಕದೇವರು ಹೇಳಿ ಹೋದರು. ದೇವೇಂದ್ರನು ಪರಿನಿಷ್ಕ್ರಮಣ ಕಲ್ಯಾಣವನ್ನು ನಡೆಸಲು ಸಡಗರದಿಂದ [ಸಪ್ತ ಸಮುದ್ರಗಳಲ್ಲಿ] ಐದನೆಯದಾದ ಹಾಲುಡಲಿನ ಪಾವನವಾದ ನೀರು ತುಂಬಿದ ಚಿನ್ನದ ಕೊಡಗಳಿಂದ ಅಭಿಷೇಕ ಮಾಡಿದ. ಆ ಬಳಿಕ, ಭರತರಾಜನಂ ಬರಿಸಿ ರಾಜ್ಯಾಭಿಷೇಕಂಗೆಯ್ದು = ಆ ಬಳಿಕ ಭರತನನ್ನು ಬರಮಾಡಿಕೊಂಡು ಅವನಿಗೆ ಪಟ್ಟ ಕಟ್ಟಿ, ಬಾಹುಬಲಿಗೆ ಯುವರಾಜಪದವಿಯನ್ನಿತ್ತು, ಅಯೋಧ್ಯೆ ಮತ್ತು ಪೌದನಪುರಗಳ ಆಡಳಿತವನ್ನು ನೀಡಿ ಅವರಿಬ್ಬರನ್ನೂ ನೆಲೆಗೊಳಿಸಿದ, ಮಿಕ್ಕ ತನ್ನ ಮಕ್ಕಳೆಲ್ಲರಿಗೂ ಭೂಭಾಗವನ್ನು ಹಂಚಿಕೊಟ್ಟು ನಾಭಿರಾಜನೇ ಮುಂತಾದವರಿಂದ ಬೀಳ್ಕೊಂಡ. ನಂತರ ಸೌಧರ್ಮೇಂದ್ರನು ನೀಡಿದ ಕೈಯನ್ನು ಹಿಡಿದುಕೊಂಡು ಸುದರ್ಶನ ಎಂಬ ಮೇನೆಯನ್ನು ಹತ್ತಿ ಕುಳಿತ. ಅಯೋಧ್ಯಾನಗರಕ್ಕೆ ಹೆಚ್ಚು ದೂರವೂ ತೀರಹತ್ತಿರವೂ ಅಲ್ಲದ ಸಿದ್ಧಾರ್ಥವನದ ಮಧ್ಯದಲ್ಲಿನ ಪಾಂಡುಕಶಿಲೆಯನ್ನೇ ಅಣಕಿಸುವ ಚಂದ್ರಕಾಂತಶಿಲೆಯ ಮೇಲ್ಭಾಗದಲ್ಲಿ ಪಲ್ಲಕ್ಕಿಯನ್ನು ಇಳಿಸಿದರು; ವನವು ದಟ್ಟವಾಗಿ ತುಂಬಿದ ಮರಗಳ ಗುಂಪಿನಿಂದ ಬಿದ್ದ ಹೂಗಳಿಂದ ಸೊಗಸುತ್ತಿತ್ತು, ಶಿಲೆಯ ಮೇಲೆ ಶಚೀದೇವಿಯು ತನ್ನ ಕೈಗಳಿಂದಲೇ ಪಚ್ಚೆಯ ಹುಡಿಯ ರಂಗವಲ್ಲಿಯನ್ನು ಸೊಗಸಾಗಿ ಹಾಕಿದ್ದಳು; ದೇವಗಣಿಕೆಯರು ಮಂಗಳಗೀತಗಳನ್ನು ಹಾಡುತ್ತಿದ್ದರು; ಶಿಲೆಯ ನಡುವೆ ರೇಷ್ಮೆಬಟ್ಟೆಯಿಂದ ರಚಿತವಾದ ಆಕರ್ಷಕ ಮಂಟಪದಲ್ಲಿ ನಾನಾ ಮಂಗಳಸಾಮಗ್ರಿಗಳನ್ನಿರಿಸಲಾಗಿತ್ತು; ಆಗ ಸುರರ ಮತ್ತು ಅಸುರರ ಗುಂಪನ್ನು ದೂರಕ್ಕೆ ಚದುರಿಸಿ, ಜನರ ಗದ್ದಲವನ್ನು ನಿಲ್ಲಿಸಲಾಯಿತು; ಪಾಂಡುಕಶಿಲೆಯ ನಡುವೆ ಜಗದೊಡೆಯನನ್ನು ಕುಳ್ಳಿರಿಸಿದರು; ದೇವೇಂದ್ರನೇ ಸೇವಕನಂತೆ ಅವನ ಸೇವೆಯನ್ನು ಮಾಡಿದ; ಆಗ ವೃಷಭದೇವನು ಒಳ್ಳೆಯ

ಮನಸ್ಸಿನಿಂದ ಎಲ್ಲ ವಸ್ತುಗಳಲ್ಲಿಯೂ ಸಮಾನತೆಯನ್ನು ಚಿಂತಿಸುತ್ತ, ಹೊರಗಿನ ಮತ್ತು ಒಳಗಿನ ಸಂಪತ್ತನ್ನು ತೊರೆಯುವುದರೆಡೆಗೆ ಮನಸ್ಸುಳ್ಳವನಾಗಿ ತ್ರಿಸಾಕ್ಷಿಕನಾಗಿ ಬಟ್ಟೆ ಒಡವೆಗಳನ್ನು ಮೈಯ್ಯಿನಿಂದ ತೆಗೆದು ಹಾಕಿದ; ಪೂರ್ವಕ್ಕೆ ಮುಖ ಮಾಡಿ ಪಲ್ಯಂಕಾಸನದಲ್ಲಿ ಕುಳಿತ.

[**ವಿಶೇಷ ವಿಚಾರ:** ತ್ರಿಸಾಕ್ಷಿಕ = ಆತ್ಮ ಇಂದ್ರ ಸಿದ್ಧರೆಂಬ ಮೂರು ಸಾಕ್ಷಿಗಳ ಸಮ್ಮುಖದಲ್ಲಿ, ಪಲ್ಯಂಕಾಸನ = ಪಲ್ಯಂಕ + ಆಸನ, ಎಡಪಾದವನ್ನು ಬಲದೊಡೆಯ ಮೇಲೆಯೂ, ಬಲಪಾದವನ್ನು ಎಡತೊಡೆಯ ಮೇಲೆಯೂ ಇರಿಸಿ ಕುಳಿತುಕೊಳ್ಳುವ ಧ್ಯಾನಭಂಗಿ.]

**ಮನದ ಪರಿಚ್ಛೇದದಿನಂ**
**ದು ನಮಸ್ಸಿದ್ಧೇಭ್ಯ ಎಂದು ಕರ್ಮಂಗಳ ಬೇ**
**ರನೆ ಪಱಿವ ತೆಱದೆ ಪಱಿದಂ**
**ಮನಸ್ವಿ ಚಳದಳಿನಿನೀಳಕೇಶಾವಳಿಯಂ** ೭೯

**ಪದವಿಭಾಗ–ಅನ್ವಯ–ಅರ್ಥ:** ಮನದ ಪರಿಚ್ಛೇದದಿನ್ + ಅಂದು ಸಮಸ್ಸಿದ್ಧೇಭ್ಯ ಎಂದು = ಮನಸ್ಸಿನ ನಿರ್ಧಾರದಿಂದ ಆಗ ನಮಸ್ಸಿದ್ಧೇಭ್ಯಃ ಎಂದು, ಕರ್ಮಂಗಳ ಬೇರನೆ ಪಱಿವ ತೆಱದೆ = ಕರ್ಮದ ಬೇರುಗಳನ್ನೇ ಕಿತ್ತೆಸೆಯುವ ಹಾಗೆ, ಮನಸ್ವಿ ಚಳತ್ + ಅಳಿನಿನೀಳಕೇಶ + ಆವಳಿಯಂ ಪಱಿದಂ = ಆ ದೃಢಚಿತ್ತನಾಗಿ ಹಾರುವ ಕಪ್ಪುದುಂಬಿಗಳಂತಿದ್ದ ತನ್ನ ತಲೆಗೂದಲನ್ನೆಲ್ಲ ಕಿತ್ತು ಹಾಕಿದ.

**ಗದ್ಯಾನುಸರಣ:** ನಿರ್ಧಾರ ಮಾಡಿ ನಮಸ್ಸಿದ್ಧೇಭ್ಯಃ (ಸಿದ್ಧರಿಗೆ ನಮಸ್ಕಾರ) ಎಂದು ಜಪಿಸಿ, ತನ್ನ ಕರ್ಮದ ಬೇರುಗಳನ್ನೇ ಕಿತ್ತೆಸೆಯುವ ಹಾಗೆ ಆ ದೃಢಚಿತ್ತನಾಗಿ ದುಂಬಿಗಳಂತೆ ಕಪ್ಪಗಿದ್ದ ತನ್ನ ತಲೆಗೂದಲನ್ನೆಲ್ಲ ಕಿತ್ತು ಹಾಕಿದ.

[**ವಿಶೇಷ ವಿಚಾರ:** ಈ ಕ್ರಿಯೆಯನ್ನು ಜೈನ ಪರಿಭಾಷೆಯಲ್ಲಿ ಲೋಚು ಅಥವಾ ಲುಂಛನ ಎನ್ನುತ್ತಾರೆ.]

**ಬರೆ ಚೈತ್ರ ಕೃಷ್ಣಪಕ್ಷಂ**
**ದೊರೆಕೊಳೆ ನವಮಿಯೊಳಮುತ್ತರಾಷಾಢಂ ದು**
**ರ್ಧರಜಿನದೀಕ್ಷೆಯನಘಕುಳ**
**ಕರಚಂಡಂ ಮೂಱುಜಾವದಾಗಳ್ ಕೊಂಡಂ** ೮೦

**ಪದವಿಭಾಗ–ಅನ್ವಯ–ಅರ್ಥ:** ಚೈತ್ರ ಕೃಷ್ಣಪಕ್ಷಂ ಬರೆ = ಚೈತ್ರ ಮಾಸದ ಕೃಷ್ಣಪಕ್ಷವು ಬರಲು, ನವಮಿಯೊಳಂ + ಉತ್ತರಾಷಾಢಂ ದೊರೆಕೊಳೆ = ನವಮಿ ತಿಥಿಯೂ ಉತ್ತರಾಷಾಢ ನಕ್ಷತ್ರವೂ ಸೇರಿರಲು, ಮೂಱುಜಾವದಾಗಳ್ = ಮೂರನೆ ಜಾವ ಅಂದರೆ ಬೆಳಗಿನ ಜಾವದಲ್ಲಿ, ಅಘಕುಳ ಕರಚಂಡಂ = ಪಾಪಸಮೂಹಕ್ಕೆ ಸೂರ್ಯನಂತಿದ್ದ ವೃಷಭನಾಥನು, ದುರ್ಧರಜಿನದೀಕ್ಷೆಯನ್ ಕೊಂಡಂ = ಕಷ್ಟಕರವಾದ ಜಿನದೀಕ್ಷೆಯನ್ನು ಕೈಗೊಂಡ.

**ಗದ್ಯಾನುಸರಣ:** ಚೈತ್ರ ಮಾಸದ ಕೃಷ್ಣಪಕ್ಷದಲ್ಲಿ ನವಮಿ ತಿಥಿಯೂ ಉತ್ತರಾಷಾಢ ನಕ್ಷತ್ರವೂ ಸೇರಿದ ದಿನದಂದು ಬೆಳಗಿನ ಜಾವದಲ್ಲಿ ಪಾಪಸಮೂಹಕ್ಕೆ ಸೂರ್ಯನಂತಿದ್ದ ವೃಷಭನಾಥನು ಕಷ್ಟಕರವಾದ ಜಿನದೀಕ್ಷೆಯನ್ನು ಕೈಗೊಂಡ.

[**ವಿಶೇಷ ವಿಚಾರ:** ಜಾವ = ಯಾಮ ಎಂಬ ಶಬ್ದದ ತದ್ಭವ; ಮೂರು ಗಂಟೆಯ ಅವಧಿ; ಮೂಜುಜಾವ = ಮೂರನೆಯ ಜಾವ, ರಾತ್ರಿಯ ಮೂರು ಗಂಟೆಗಳ ನಾಲ್ಕು ಅವಧಿಯ ಮೂರನೆಯ ಭಾಗ ಎಂದರೆ ಬೆಳಗಿನ ಜಾವ ಎಂದರ್ಥ.]

**ಸುರದುಂದುಭಿರವಮೆಸೆದಿರೆ**
**ಸುರಪತಿ ತಳಮಾರೆ ಕೆದಱೆ ಹರಿನೀಲಮಣಿ**
**ಸ್ಫುರಿತದ ತೆರೆಗಳ ಕೆಲದೊಳ್**
**ಪರಭಾಗಂಬಡೆದುವವು ಪಯೋಂಭೋನಿಧಿಯೊಳ್** ೮೧

**ಪದವಿಭಾಗ–ಅನ್ವಯ–ಅರ್ಥ:** ಸುರದುಂದುಭಿರವಂ + ಎಸೆದಿರೆ = ದೇವದುಂದುಭಿಗಳು ಶಬ್ದಗೈಯಲು, ಸುರಪತಿ ಪಯೋಂಭೋನಿಧಿಯೊಳ್ ತಳಂ + ಆರೆ ಕೆದಜ್ = ದೇವೇಂದ್ರನು ಸಮುದ್ರದದಲ್ಲಿ ಕೈಬೆರಳುಗಳಿಂದ ಕೆದರಿದಾಗ, ಅವು ಹರಿನೀಲಮಣಿಸ್ಫುರಿತದ ತೆರೆಗಳ ಕೆಲದೊಳ್ = ಅವು ಇಂದ್ರನೀಲದಂತೆ ಹೊಳೆಯುತ್ತಿದ್ದ ಅಲೆಗಳಲ್ಲಿ, ಪರಭಾಗಂ + ಪಡೆದುವು = ಶೋಭಿಸಿದುವು.

**ಗದ್ಯಾನುಸರಣ:** ದೇವದುಂದುಭಿಗಳು ಶಬ್ದಗೈಯುತ್ತಿರಲು ದೇವೇಂದ್ರನು ಸಮುದ್ರದದಲ್ಲಿ ಕೈಬೆರಳುಗಳಿಂದ ಕೆದರಿದಾಗ ಅವು ಇಂದ್ರನೀಲದಂತೆ ಹೊಳೆಯುತ್ತಿದ್ದ ಅಲೆಗಳಲ್ಲಿ ಶೋಭಿಸಿದುವು.

**ವ॥ ಅಂತು ದೇವೇಂದ್ರಂ ಪರಿನಿಷ್ಕ್ರಮಣಕಲ್ಯಾಣಮಂ ಮನ್ನಿಸಿ ತನ್ಮುನೀಂದ್ರಪದ ಪಯೋಜಂಗಳ್ಗೆಱಗಿ ಪೊಡೆವಟ್ಟು ಪೋಗಿ ತದನಂತರದೊಳ್ ಭರತನವನತಭಕ್ತಿಭರನಿರತಂ ತ್ರಿಲೋಕಗುರುಚರಣಸರಸಿಜಂಗಳನರ್ಚಿಸಿ ನಿಜಪರಿಜನಂಬೆರಸು ರಾಜಧಾನಿಗೆ ಪೋದಂ; ಅನ್ನೆಗಮಿತ್ತ ಕಚ್ಛಮಹಾಕಚ್ಛರುಂ ಭರತನ ಮಗಂ ಮರೀಚಿಯುಂ ಬೆರಸು ನಾಲ್ಸಾಸಿರ್ವರ್ ಮಕುಟಬದ್ಧರಪ್ಪರಸುಮಕ್ಕಳ್ ಪೋಗಲೊಲ್ಲದೆ ಭಕ್ತಿಯ ಭರದಿಂ ಜಾತರೂಪಮಂ ಕೈಕೊಂಡರ್. ಆಗಳಾ ತ್ರೈಲೋಕ್ಯವಲ್ಲಭಂ,**

**ಪದವಿಭಾಗ–ಅನ್ವಯ–ಅರ್ಥ:** ಅಂತು ದೇವೇಂದ್ರಂ = ಹೀಗೆ ದೇವೇಂದ್ರನು, ಪರಿನಿಷ್ಕ್ರಮಣಕಲ್ಯಾಣಮಂ ಮನ್ನಿಸಿ = ಪರಿನಿಷ್ಕ್ರಮಣಕಲ್ಯಾಣವನ್ನು ನೆರವೇರಿಸಿ, ತತ್ + ಮುನೀಂದ್ರಪದಪಯೋಜಂಗಳ್ಗೆ + ಎಱಗಿ ಪೊಡೆವಟ್ಟು ಪೋಗಿ = ಆ ಮುನಿಶ್ರೇಷ್ಠನ ಪಾದಕಮಲಗಳಿಗೆ ನೆಲಕ್ಕೊರಗಿ ನಮಸ್ಕರಿಸಿ ಹೋಗಿ, ತತ್ + ಅನಂತರದೊಳ್ ಭರತನ್ = ಆ ಬಳಿಕ ಭರತನು, ಅವನತಭಕ್ತಿಭರನಿರತಂ = ತಲೆ ಬಾಗಿ ಭಕ್ತಿಯಿಂದ ಕೂಡಿ, ತ್ರಿಲೋಕಗುರುಚರಣಸರಸಿಜಂಗಳನ್ + ಅರ್ಚಿಸಿ = ಮೂಲೋಕಗುರುವಿನ ಅಡಿದಾವರೆಗಳನ್ನು ಪೂಜಿಸಿ, ನಿಜಪರಿಜನಂಬೆರಸು ರಾಜಧಾನಿಗೆ ಪೋದಂ = ತನ್ನ ಪರಿವಾರದ ಜೊತೆ ರಾಜಧಾನಿಗೆ ಹೋದ; ಅನ್ನೆಗಂ + ಇತ್ತ ಕಚ್ಛಮಹಾಕಚ್ಛರುಂ ಭರತನ ಮಗಂ ಮರೀಚಿಯುಂ ಬೆರಸು

= ಈ ನಡುವೆ ಕಚ್ಛಮಹಾಕಚ್ಛರೂ ಭರತನ ಮಗ ಮರೀಚಿಯೂ ಸೇರಿದಂತೆ. ನಾಲ್ಸಾಸಿರ್ವರ್ ಮಕುಟಬದ್ಧರಪ್ಪ + ಅರಸುಮಕ್ಕಳ್ = ನಾಲ್ಕು ಸಾವಿರ ಮಂದು ಕಿರೀಟಧಾರಿಗಳಾದ ರಾಜಕುವರರು. ಪೋಗಲ್ + ಒಲ್ಲದೆ = ಹೋಗಲು ಒಪ್ಪದೆ. ಭಕ್ತಿಯ ಭರದಿಂ ಜಾತರೂಪಮಂ ಕೈಕೊಂಡರ್ = ಭಕ್ತಿಯ ಆಧಿಕ್ಯದಿಂದ ದಿಗಂಬರದೀಕ್ಷೆಯನ್ನು ಪಡೆದರು. ಆಗಳಾ ತ್ರೈಲೋಕ್ಯವಲ್ಲಭಂ = ಆಗ ಮೂಲೋಕದೊಡೆಯನು

**ಗದ್ಯಾನುಸರಣ:** ಹೀಗೆ ದೇವೇಂದ್ರನು ಪರಿನಿಷ್ಕ್ರಮಣಕಲ್ಯಾಣವನ್ನು ನೆರವೇರಿಸಿ ಆ ಮುನಿಶ್ರೇಷ್ಠನ ಪಾದಕಮಲಗಳಿಗೆ ನೆಲಕ್ಕೊರಗಿ ನಮಸ್ಕರಿಸಿ ಹೋದ; ಆ ಬಳಿಕ ಭರತನು ತಲೆ ಬಾಗಿ ಭಕ್ತಿಯಿಂದ ಕೂಡಿ ಮೂಲೋಕಗುರುವಿನ ಅಡಿದಾವರೆಗಳನ್ನು ಪೂಜಿಸಿ ತನ್ನ ಪರಿವಾರದ ಜೊತೆ ರಾಜಧಾನಿಗೆ ಹೋದ; ಈ ನಡುವೆ ಕಚ್ಛಮಹಾಕಚ್ಛರೂ ಭರತನ ಮಗ ಮರೀಚಿಯೂ ಸೇರಿದಂತೆ ನಾಲ್ಕು ಸಾವಿರ ಮಂದು ಕಿರೀಟಧಾರಿಗಳಾದ ರಾಜಕುವರರು ಹೋಗಲು ಒಪ್ಪದೆ ಭಕ್ತಿಯ ಆಧಿಕ್ಯದಿಂದ ದಿಗಂಬರದೀಕ್ಷೆಯನ್ನು ಪಡೆದರು. ಆಗ ಮೂಲೋಕ ದೊಡೆಯನು

**ಇಂದಿಂಗಱುದಿಂಗಳ್ ನೆಱೆ**
**ದಂದಲ್ಲದೆ ಕಯ್ಯನೆತ್ತೆನೆಂದನಶನದಿಂ**
**ನಿಂದಂ ಯೋಗದೊಳತಿನಿ**
**ಷ್ಪಂದಂ ಮಂದರನಗಂಬೊಲಚಳಿತಧೈರ್ಯಂ** ೮೨

**ಪದವಿಭಾಗ–ಅನ್ವಯ–ಅರ್ಥ:** ಇಂದಿಂಗೆ + ಅಱುದಿಂಗಳ್ ನೆಱೆದಂದು + ಅಲ್ಲದೆ ಕಯ್ಯನೆತ್ತೆನ್ = ಇಂದಿಗೆ ಆರು ತಿಂಗಳು ಮುಗಿಯುವವರೆಗೂ ಕೈಯನ್ನೆತ್ತುವುದಿಲ್ಲ, ಎಂದು ಅಚಳಿತಧೈರ್ಯಂ ಮಂದರನಗಂಬೊಲ್ ನಿಷ್ಪಂದಂ = ಎಂದು ಗಟ್ಟಿಯಾದ ಧೈರ್ಯದಿಂದ ಮಂದರಪರ್ವತದ ಹಾಗೆ ಅಲ್ಲಾಡದೆ, ಅನಶನದಿಂ ಯೋಗದೊಳ್ ನಿಂದಂ = ಉಪವಾಸದಿಂದ ಯೋಗದಲ್ಲಿ ನಿಂತ.

**ಗದ್ಯಾನುಸರಣ:** ಇಂದಿಗೆ ಆರು ತಿಂಗಳು ಮುಗಿಯುವವರೆಗೂ ನನ್ನ ಕೈಯನ್ನೆತ್ತುವುದಿಲ್ಲ ಎಂದು ಹೇಳಿ, ಎಂದು ಗಟ್ಟಿಯಾದ ಧೈರ್ಯದಿಂದ ಮಂದರಪರ್ವತದ ಹಾಗೆ ಉಪವಾಸದಿಂದ ಯೋಗದಲ್ಲಿ ನಿಂತ.

**ಸ್ತಿಮಿತೇಕ್ಷಣಮಭ್ರೂಭಂ**
**ಗಮನಾಪಾಂಗಾವಲೋಕನಂ ಸುಶ್ಲಿಷ್ಟೋ**
**ತ್ತಮದಶನಚ್ಛದಮಾನನ**
**ಮಮರ್ದುದು ಯೋಗಪ್ರಯೋಗದೊಳ್ ಮುನಿಪತಿಯಾ** ೮೩

**ಪದವಿಭಾಗ–ಅನ್ವಯ–ಅರ್ಥ:** ಸ್ತಿಮಿತ + ಈಕ್ಷಣ + ಅಭ್ರೂಭಂಗಂ = ನಿಶ್ಚಲ ನೋಟಹುಬ್ಬುಗಳ ಚಲನೆಯಿಲ್ಲದಿರುವವಿಕೆ, ಅನ್ + ಅಪಾಂಗ + ಅವಳೋಕನಂ = ಕಡೆಗಣ್ಣೋಟ ಇರದ, ಸುಶ್ಲಿಷ್ಟ + ಉತ್ತಮದಶನಚ್ಛದಂ = ಮುಚ್ಚಿಕೊಂಡ ತುಟಿಗಳು, ಆನನಂ = ಇವುಗಳಿಂದ ಕೂಡಿದ ಮುಖವು,

ಮುನಿಪತಿಯಾ ಯೋಗಪ್ರಯೋಗದೊಳ್ ಅಮರ್ದುದು = ಮುನಿಶ್ರೇಷ್ಠನ ಯೋಗಪ್ರಯೋಗದಲ್ಲಿ ಉಂಟಾದವು.

**ಗದ್ಯಾನುಸರಣ:** ಆ ಮುನಿಶ್ರೇಷ್ಠನ ಯೋಗಪ್ರಯೋಗದಲ್ಲಿನ ಅವನ ಮುಖದಲ್ಲಿ ನಿಶ್ಚಲ ನೋಟ, ಅಲುಗಾಡದ ಹುಬ್ಬುಗಳು, ಕಡೆಗಣ್ಣೋಟವಿರದೆ ತುಟಿಗಳು ಮುಚ್ಚಿದ್ದವು.

**ನೆಗಟ್ಟುದು ದೀಕ್ಷಾನಂತರ**
**ಮಗಣಿತಪುಣ್ಯೋದಯಂ ಮನಃಪರ್ಯಯಮಂ**
**ತೊಗೆದ ಚತುರ್ಜ್ಞಾನದೊಳಾ**
**ವಗಮೆಸೆದಂ ಜ್ಞಾನರೂಪನಾದಿಬ್ರಹ್ಮಂ** ೮೪

**ಪದವಿಭಾಗ-ಅನ್ವಯ-ಅರ್ಥ:** ದೀಕ್ಷಾ + ಅನಂತರಂ + ಅಗಣಿತಪುಣ್ಯ + ಉದಯಂ ಮನಃಪರ್ಯಯಂ ನೆಗಟ್ಟುದು = ಜಿನದೀಕ್ಷೆಯ ಬಳಿಕ ಕೊನೆಯಿಲ್ಲದ ಪುಣ್ಯದ ಮನಃಪರ್ಯಯಜ್ಞಾನವು ಉಂಟಾಯಿತು, ಅಂತು + ಒಗೆದ ಚತುರ್ಜ್ಞಾನದೊಳ್ ಜ್ಞಾನರೂಪನ್ + ಆದಿಬ್ರಹ್ಮಂ ಆವಗಂ + ಎಸೆದಂ = ಹಾಗೆ ಉಂಟಾದ ಚತುರ್ಜ್ಞಾನದಲ್ಲಿ ಜ್ಞಾನರೂಪನಾದ ಆದಿಬ್ರಹ್ಮನು ನಿರಂತರವಾಗಿ ಶೋಭಿಸಿದ.

**ಗದ್ಯಾನುಸರಣ:** ಜಿನದೀಕ್ಷೆಯ ಬಳಿಕ ಕೊನೆಯಿಲ್ಲದ ಪುಣ್ಯದಂತೆ ಮನಃಪರ್ಯಯಜ್ಞಾನವು ಉಂಟಾಯಿತು, ಹಾಗೆ ಉಂಟಾದ ಚತುರ್ಜ್ಞಾನದಲ್ಲಿ ಜ್ಞಾನರೂಪನಾದ ಆದಿಬ್ರಹ್ಮನು ನಿರಂತರವಾಗಿ ಶೋಭಿಸಿದ.

**ವ॥ ಆದಿ ತೀರ್ಥಕರ್ತಾರನ್ ಅಮರಗಿರಿಯಂತೆ ಅಚಳಿತನುಂ, ಪಾರಾವಾರದಂತೆ ಅಕಲುಷಿತನುಂ, ಅನಿಲನಂತೆ ನಿಸ್ಸಂಗನುಂ, ಅಂಬರದಂತೆ ನಿರ್ಲೇಪನುಮಾಗಿ ನಿಲೆ, ಆ ಮುನೀಂದ್ರನ ತಪಃಪ್ರಭಾವದೊಳ್ ಅನ್ಯೋನ್ಯ ವೈರಂಗಳಂ ಮಱೆದು,**

**ಪದವಿಭಾಗ-ಅನ್ವಯ-ಅರ್ಥ:** ಆದಿ ತೀರ್ಥಕರ್ತಾರನ್ + ಅಮರಗಿರಿಯಂತೆ + ಅಚಳಿತನುಂ = ಆದಿಬ್ರಹ್ಮನು ಮೇರುಪರ್ವತದಂತೆ ಚಲನೆಯಿಲ್ಲದೆ, ಪಾರಾವಾರದಂತೆ + ಅಕಲುಷಿತನುಂ = ಸಮುದ್ರದಂತೆ ಕಲ್ಮಷರಹಿತನಾಗಿ. ಅನಿಲನಂತೆ ನಿಸ್ಸಂಗನುಂ = ಗಾಳಿಯಂತೆ ಯಾವುದಕ್ಕೂ ಜೊತೆಯಾಗದೆ, ಅಂಬರದಂತೆ ನಿರ್ಲೇಪನುಮಾಗಿ ನಿಲೆ = ಆಗಸದಂತೆ ಅಂಟಿಕೊಳ್ಳದೆ ತಪಸ್ಸಿನಲ್ಲಿ ನಿಂತಿರಲು, ಆ ಮುನೀಂದ್ರನ ತಪಃಪ್ರಭಾವದೊಳ್ ಅನ್ಯೋನ್ಯ ವೈರಂಗಳಂ ಮಱೆದು = ಆ ಮುನಿಶ್ರೇಷ್ಠನ ತಪಸ್ಸಿನ ಮಹಿಮೆಯಿಂದ ಪರಸ್ಪರ ದ್ವೇಷವನ್ನು ಮರೆತು

**ಗದ್ಯಾನುಸರಣ:** ಆದಿಬ್ರಹ್ಮನು ಮೇರುಪರ್ವತದಂತೆ ಚಲನೆಯಿಲ್ಲದೆ, ಸಮುದ್ರದಂತೆ ಕಲ್ಮಷರಹಿತನಾಗಿ, ಗಾಳಿಯಂತೆ ಯಾವುದಕ್ಕೂ ಜೊತೆಯಾಗದೆ, ಆಗಸದಂತೆ ಅಂಟಿಕೊಳ್ಳದೆ ತಪಸ್ಸಿನಲ್ಲಿ ನಿಂತಿರಲು, ಆ ಮುನಿಶ್ರೇಷ್ಠನ ತಪಸ್ಸಿನ ಮಹಿಮೆಯಿಂದ ಪರಸ್ಪರ ದ್ವೇಷವನ್ನು ಮರೆತು

**ಕರಿಗಳ್ ಕೇಸರಿಗಳ್ಗೆ ಪುಷ್ಕರಧೃತಸ್ವಚ್ಛಾಂಬುವಂ ನೀಡೆ ಭೀ**
**ಕರಶಾರ್ದೂಲಕುಳಂ ಕುರಂಗಕುಲದೊಳ್ ತಳ್ಪೊಯ್ದು ಬಂದಾಡೆ ಕೇ**

**ಸರಿಣೀಸ್ತನ್ಯಮನನ್ಯವನ್ಯಗಜಪೋತಾನೀಕಮುಂಡಾಡೆ ಶಾಂ**
**ತರಸಂ ಪೊಂಪುಟೆವೋದುದಾ ಮುನಿಪನಿಂ ತತ್ಕಾಂತಕಾಂತಾರದೊಳ್** ೮೫

ಪದವಿಭಾಗ–ಅನ್ವಯ–ಅರ್ಥ: ಕರಿಗಳ್ ಪುಷ್ಕರಧೃತಸ್ವಚ್ಛ + ಅಂಬುವಂ ಕೇಸರಿಗಳ್ಗೆ ನೀಡೆ = ಆನೆಗಳು ತಮ್ಮ ಸೊಂಡಿಲುಗಳಲ್ಲಿ ತುಂಬಿಕೊಂಡು ತಂದ ತಿಳಿನೀರನ್ನು ಸಿಂಹಗಳಿಗೆ ನೀಡುವ ಹಾಗೆ, ಭೀಕರಶಾರ್ದೂಲಕುಳಂ ಕುರಂಗಕುಲದೊಳ್ ತಳ್ಪೊಯ್ದು ಬಂದು + ಆಡೆ = ಭಯಂಕರವಾದ ಹುಲಿಗಳು ಜಿಂಕೆಗಳ ಗುಂಪಿನೊಡನೆ ಸೇರಿಕೊಂಡು ಆಟವಾಡುವ ಹಾಗೆ, ಕೇಸರಿಣೀಸ್ತನ್ಯಮನ್ + ಅನ್ಯವನ್ಯಗಜಪೋತಾನೀಕಂ + ಉಂಡು + ಆಡೆ = ಹೆಣ್ಣು ಸಿಂಹಗಳ ಮೊಲೆಯನ್ನು ಇತರ ಕಾಡಿನ ಆನೆಮರಿಗಳು ಉಂಡು ಆಟವಾಡುವ ಹಾಗೆ, ಆ ಮುನಿಪನಿಂ ತತ್ + ಕಾಂತಕಾಂತಾರದೊಳ್ = ಆ ಮುನಿವರನಿಂದಾಗಿ ಆ ಚೆಲುವಾದ ಕಾಡಿನಲ್ಲಿ, ಶಾಂತರಸಂ ಪೊಂಪುಟೆ + ಪೋದುದು = ಶಾಂತಸವು ಹರಡಿತು.

**ಗದ್ಯಾನುಸರಣ:** ಆ ಮುನಿವರನಿಂದಾಗಿ ಆ ಚೆಲುವಾದ ಕಾಡಿನಲ್ಲಿ ಶಾಂತಸವು ಎಷ್ಟರಮಟ್ಟಿಗೆ ಹರಡಿತೆಂದರೆ, ಆನೆಗಳು ತಮ್ಮ ಸೊಂಡಿಲುಗಳಲ್ಲಿ ತಿಳಿನೀರನ್ನು ತುಂಬಿಕೊಂಡು ತಂದು ಸಿಂಹಗಳಿಗೆ ನೀಡಿದುವು; ಳ್ಪೊಯ್ದು ಬಂದು + ಆಡೆ = ಭಯಂಕರವಾದ ಹುಲಿಗಳು ಜಿಂಕೆಗಳ ಗುಂಪಿನೊಡನೆ ಸೇರಿಕೊಂಡು ಆಟವಾಡಿದುವು; ಹೆಣ್ಣು ಸಿಂಹಗಳ ಮೊಲೆಯನ್ನು ಇತರ ಕಾಡಿನ ಆನೆಮರಿಗಳು ಉಂಡು ತಣಿದುವು.

**ವ॥ ಆ ಪ್ರಸ್ತಾವದೊಳ್ ತತ್ತಪೋನಿಧಿಯ ಸನ್ನಿಧಿಗೆ ಕಚ್ಛಮಹಾಕಚ್ಛರ ತನಯರಪ್ಪ ನಮಿವಿನಮಿಗಳಭಿನವಯೌವನಾರಂಭ ಪ್ರೇರಿತೇಂದ್ರಿಯವಿಷಯಸುಖಾನುಭವೋನ್ಮುಖಮಾನಸರ್ ಕೃಪಾಣಖೇಟಕವ್ಯಗ್ರಪಾಣಿಗಳ್ ಬಂದು ಮಹೀತಳಾಲಿಂಗಿತ ಲಲಾಟಪಟ್ಟರತಿಸುರಭಿಕುಸುಮ ಫಲಪವಿತ್ರಜಲಂಗಳಿಂದಮಾದಿಪುರುಷನ ಪದಪಯೋಜಂಗಳನರ್ಚಿಸಿ ಯುಕ್ತಾಯುಕ್ತವಿಚಾರ ದೂರಮತಿಗಳಾಗಿ,**

ಪದವಿಭಾಗ–ಅನ್ವಯ–ಅರ್ಥ: ಆ ಪ್ರಸ್ತಾವದೊಳ್ = ಆ ಸಂದರ್ಭದಲ್ಲಿ, ತತ್ + ತಪೋನಿಧಿಯ ಸನ್ನಿಧಿಗೆ = ತಪಸ್ಸಿನ ನಿಧಿಯಾದ ಆದಿದೇವನ ಬಳಿಗೆ, ಕಚ್ಛಮಹಾಕಚ್ಛರ ತನಯರ್ + ಅಪ್ಪ = ಕಚ್ಚ ಮಹಾಕಚ್ಛರ ಮಕ್ಕಳಾದ, ನಮಿವಿನಮಿಗಲ್ = ನಮಿವಿನಮಿ ಎಂಬುವವರು, ಅಭಿನವಯೌವನ + ಆರಂಭಪ್ರೇರಿತ = ಹೊಸತಾಗಿ ಮೊದಲಿಟ್ಟಿರುವ ಹರೆಯದಿಂದ ಉತ್ತೇಜಿತವಾದ, ಇಂದ್ರಿಯವಿಷಯಸುಖ + ಅನುಭವ + ಉನ್ಮುಖಮಾನಸರ್ = ಇಂದ್ರಿಯ ಸುಖಗಳ ಅನುಭವವನ್ನು ಹೊಂದುವ ಮನಸ್ಸುಳ್ಳವರಾಗಿ, ಕೃಪಾಣಖೇಟಕವ್ಯಗ್ರ ಪಾಣಿಗಳ್ ಬಂದು = ಕಿರುಗತ್ತಿ ಗುರಾಣಿಗಳನ್ನು ಉದ್ವೇಗದಿಂದ ಹಿಡಿದು ಬಂದು, ಮಹೀತಳ + ಆಲಿಂಗಿತಲಲಾಟಪಟ್ಟರ್ = ಭೂಮಿಯನ್ನು ಅಪ್ಪಿಕೊಂಡ ಹಣೆಯುಳ್ಳವರಾಗಿ, ಅತಿಸುರಭಿಕುಸುಮಫಲಪವಿತ್ರಜಲಂಗಳಿಂದಂ = ಬಹು

ಸುಗಂಧದ ಹೂಗಳು ಹಣ್ಣುಗಳು ಮತ್ತು ಶುದ್ಧನೀರುಗಳಿಂದ. ಆದಿಪುರುಷನ ಪದಪಯೋಜಂಗಳನ್ + ಅರ್ಚಿಸಿ = ಆದಿದೇವನ ಪಾದಕಮಲಗಳನ್ನು ಪೂಜಿಸಿ. ಯುಕ್ತ + ಅಯುಕ್ತವಿಚಾರದೂರಮತಿಗಳಾಗಿ = ಸರಿ ತಪ್ಪುಗಳ ವಿವೇಚನೆಯಿಲ್ಲದ ಬುದ್ಧಿಯಿಂದ.

**ಗದ್ಯಾನುಸರಣ:** ಆ ಸಂದರ್ಭದಲ್ಲಿ, ತಪಸ್ಸಿನ ನಿಧಿಯಾದ ಆದಿದೇವನ ಬಳಿಗೆ ಕಚ್ಛ ಮಹಾಕಚ್ಛರ ಮಕ್ಕಳಾದ, ನಮಿವಿನಮಿಗಲ್ ನಮಿವಿನಮಿ ಎಂಬುವವರು ಬಂದರು; ಅವರು ಹೊಸತಾಗಿ ತಮ್ಮ ಮೊದಲಿಟ್ಟಿರುವ ಹರೆಯದಿಂದ ಉತ್ತೇಜಿತರಾಗಿ ಇಂದ್ರಿಯ ಸುಖಗಳ ಅನುಭವವನ್ನು ಹೊಂದುವ ಬಯಕೆಯಿಂದ ಕೂಡಿದ್ದರು; ಅವರು ಉದ್ವೇಗದಿಂದ ಕಿರುಗತ್ತಿ ಗುರಾಣಿಗಳನ್ನು ಉದ್ವೇಗದಿಂದ ಹಿಡಿದು ಬಂದಿದ್ದರು; ಬಂದವರೇ ಅವರು ಭೂಮಿಗೆ ಹಣೆ ತಾಕುವಂತೆ ಸಾಷ್ಟಾಂಗ ನಮಸ್ಕಾರ ಮಾಡಿ, ಸುಗಂಧಭರಿತ ಹೂಗಳು ಹಣ್ಣುಗಳು ಮತ್ತು ಶುದ್ಧನೀರುಗಳಿಂದ ಆದಿದೇವನ ಪಾದಕಮಲಗಳನ್ನು ಪೂಜಿಸಿದರು; ಆನಂತರ ಸರಿ ತಪ್ಪುಗಳ ವಿವೇಚನೆಯಿಲ್ಲದೆ ಹೀಗೆಂದರು:

**ಕಡಲತಡಿಯೆಯ್ದೆ ನೆಲನಂ**
**ಪಡೆದರ್ ಭವದೀಯಪುತ್ರರುಳ್ಳಳವಿಗಳೊಳ್**
**ಪಡೆದುದು ಬಂಧುಜನಂ ನಿ**
**ಮ್ಮಡಿಗಾವೇಂ ಪೋಷ್ಯವರ್ಗದಿಂದಂ ಪೊಱಗೇ** ೮೬

**ಪದವಿಭಾಗ-ಅನ್ವಯ-ಅರ್ಥ:** ಭವದೀಯ ಪುತ್ರರ್ ಕಡಲತಡಿ + ಎಯ್ದೆ ನೆಲನಂ ಪಡೆದರ್ = ತಮ್ಮ ಮಕ್ಕಳು ಕಡಲಕರೆಯವರೆಗಿನ ಭೂಮಿಯನ್ನು ಪಡೆದರು; ಉಳ್ಳ + ಅಳವಿಗಳೊಳ್ ಬಂಧುಜನಂ ಪಡೆದುದು = ತಮ್ಮ ಯೋಗ್ಯತೆಗನುಗುಣವಾಗಿ ನಂಟರುಗಳೂ (ಉಡುಗೊರೆಗಳನ್ನು) ಪಡೆದರು; ನಿಮ್ಮಡಿಗೆ ಆವೇಂ ಪೋಷ್ಯವರ್ಗದಿಂದಂ ಪೊಱಗೇ = ತಮ್ಮ ಪಾದಕ್ಕೆ ನಾವು ರಕ್ಷಿತವರ್ಗದಿಂದ ಹೊರಗಿನವರೇ?

**ಗದ್ಯಾನುಸರಣ:** ತಾವು ತಪಸ್ಸಿಗೆ ಹೊರಡುವಾಗ ಕಡಲಕರೆಯವರೆಗಿನ ಭೂಮಿಯನ್ನು ತಮ್ಮ ಮಕ್ಕಳಿಗೆ ಕೊಟ್ಟಿರಿ; ಬಂಧುಗಳೂ ತಮ್ಮ ಯೋಗ್ಯತೆಗನುಗುಣವಾಗಿ ಉಡುಗೊರೆಗಳನ್ನು ಪಡೆದರು; ಆದರೆ ನಾವು ಮಾತ್ರ ತಮ್ಮ ರಕ್ಷಿತವರ್ಗದಿಂದ ದೂರದವರೇ?

**ವ॥ ಎಂದು ತಮ್ಮ ಭೋಗಾಕಾಂಕ್ಷೆಯನೆ ಬಗೆದು ಯೋಗವ್ಯಾಘಾತಮಂ ಮಾಡುವುದುಂ ಪ್ರಕಂಪಿತಾಸನನುತ್ಪನ್ನಾವಧಿಬೋಧಂ ಧರಣೇಂದ್ರನಱಿದು ಭೋಂಕೆನೆ ಬಂದು ತ್ರಿಭುವನಗುರುಗೆ ಪೊಡೆವಟ್ಟು ನಮಿವಿನಮಿಗಳ ಮೊಗಮಂ ನೋಡಿ, "ಪರಿವರ್ಜಿತಭೋಗನೊಳ್ ಭೋಗಾಕಾಂಕ್ಷೆಯಿಂ ಭೋಗಪರಂಪರೆಯನಱಸುವುದೆ? ಇನಿತು ಬಯಕೆಯುಳ್ಳೊಡೆ ನಿಮ್ಮಿರ್ಬರುಮಿಂ ಭರತನನೋಲಗಿಸಿ ವಾಂಛಿತಮಂ ಪಡೆಯಿಂ"** [ಎನೆ]

**ಪದವಿಭಾಗ-ಅನ್ವಯ-ಅರ್ಥ:** ಎಂದು ತಮ್ಮ ಭೋಗಕಾಂಕ್ಷೆಯನೆ ಬಗೆದು = ಹೀಗೆಂದು ತಮ್ಮ ಇಂದ್ರಿಯಸುಖವನ್ನೇ ಮನಸ್ಸಿನಲ್ಲಿಟ್ಟುಕೊಂಡು.

ಯೋಗವ್ಯಾಘಾತಮಂ ಮಾಡುವುದುಂ = ಯೋಗಕ್ಕೆ ಅಡ್ಡಿಯುಂಟುಮಾಡಲು. ಪ್ರಕಂಪಿತ + ಆಸನನ್ + ಉತ್ಪನ್ನ + ಅವಧಿಬೋಧಂ = ಆಸನಕಂಪದಿಂದ ಉಂಟಾದ ಅವಧಿಜ್ಞಾನದಿಂದ ಧರಣೇಂದ್ರನಱಿದು ಭೋಂಕನೆ ಬಂದು = ಧರಣೇಂದ್ರ ಎಂಬ ಭವನವಾಸಿ ದೇವನು ತಿಳಿದು ತಕ್ಷಣವೇ ಬಂದು. ತ್ರಿಭುವನಗುರುಗೆ ಪೊಡೆವಟ್ಟು = ಮೂಲೋಕದ ಗುರುವಿಗೆ ನಮಸ್ಕರಿಸಿ. ನಮಿವಿನಮಿಗಳ ಮೊಗಮಂ ನೋಡಿ = ನಮಿವಿನಮಿಯರ ಮುಖದೆಡೆ ತಿರುಗಿ. "ಪರಿವರ್ಜಿತಭೋಗನೊಳ್ = ಭೋಗವನ್ನು ತೊರೆದಿರುವವನಲ್ಲಿ. ಭೋಗಪರಂಪರೆಯನ್ + ಅಱಸುವುದೆ? = ಭೋಗಪರಂಪರೆಯನ್ನು ಹುಡುಕುತ್ತಿದ್ದೀರಲ್ಲ! ಇನಿತು ಬಯಕೆ + ಉಳ್ಳೊಡೆ = ಅಷ್ಟೊಂದು ಆಸೆಯಿರುವುದಾದರೆ. ನಿಮ್ಮಿರ್ಬರುಂ = ನೀವಿಬ್ಬರೂ. ಆ ಭರತನನ್ + ಓಲಗಿಸಿ ವಾಂಛಿತಮಂ ಪಡೆಯಿಂ = ಭರತನನ್ನು ಮನವೊಲಿಸಿ ಅಭೀಷ್ಟವನ್ನು ಈಡೇರಿಸಿಕೊಳ್ಳಿ" ಎನ್ನಲು.

**ಗದ್ಯಾನುಸರಣ:** ಹೀಗೆದು ತಮ್ಮ ಇಂದ್ರಿಯಸುಖವನ್ನೇ ಮನಸ್ಸಿನಲ್ಲಿಟ್ಟುಕೊಂಡು ಮಾತನಾಡಿ ಆ ಮಹಾಯೋಗಿಯ ಯೋಗಕ್ಕೆ ಅಡ್ಡಿಯುಂಟುಮಾಡಿದರು; ಆಗ ಆಸನಕಂಪದಿಂದ ಉಂಟಾದ ಅವಧಿಜ್ಞಾನದಿಂದ ತಿಳಿದ ಧರಣೇಂದ್ರ ಎಂಬ ಭವನವಾಸಿ ದೇವನು ತಕ್ಷಣವೇ ಬಂದ. ಮೂಲೋಕದ ಗುರುವಿಗೆ ನಮಸ್ಕರಿಸಿ ನಮಿವಿನಮಿಯರ ಮುಖದೆಡೆ ತಿರುಗಿ "ಭೋಗವನ್ನು ತೊರೆದಿರುವವನಲ್ಲಿ ಭೋಗಪರಂಪರೆಯನ್ನು ಹುಡುಕುತ್ತಿದ್ದೀರಲ್ಲ! ಅಷ್ಟೊಂದು ಆಸೆಯಿರುವುದಾದರೆ. ನೀವಿಬ್ಬರೂ ಭರತನನ್ನು ಮನವೊಲಿಸಿ ಅಭೀಷ್ಟವನ್ನು ಈಡೇರಿಸಿಕೊಳ್ಳಿ" ಎಂದು ಹೇಳಿದ.

**ಕುಡುವಂ ಗುರು ಪಡೆವರ್ ಪೆಱ**
**ರೆಡೆಯೊಳ್ ನೀಮಾರ್ಗೆದೇಕೆ ಕಿಡೆನುಡಿದಪಿರಿ**
**ಟ್ಟೆಡೆಪೆರ್ಗಡೆತನದೊಳಿದೇ**
**ಪಡೆವಿರ್ ನಿಮಗೆಮ್ಮ ಕಜ್ಜದೊಳ್ ಪೊರೆಯುಂಟೇ** ೮೭

**ಪದವಿಭಾಗ-ಅನ್ವಯ-ಅರ್ಥ:** ಕುಡುವಂ ಗುರು ಪಡೆವರ್ ಪೆಱರ್ = ಕೊಡುವವನು ಜಗದ್ಗುರು ಪಡೆಯುವವರು ಬೇರೆ; ಎಡೆಯೊಳ್ ನೀಮಾರ್ಗೆ = ಮಧ್ಯದಲ್ಲಿ ನೀವು ಯಾರು. ಇದೇಕೆ ಕಿಡೆನುಡಿದಪಿರಿ ಇದೇಕೆ ಕೆಲಸ ಕೆಡಿಸುತ್ತಿದ್ದೀರಿ. ಇಟ್ಟ + ಎಡೆ + ಪೆರ್ಗಡೆತನದೊಳಿದೇ(ಂ) + ಪಡೆವಿರ್ = ನೀವು ತೋರುತ್ತಿರುವ ಹೆಗ್ಗಡೆತನದಿಂದ ನೀವೇನು ಪಡೆಯುತ್ತೀರಿ? ಎಮ್ಮ ಕಜ್ಜದೊಳ್ ನಿಮಗೆ ಪೊರೆ + ಉಂಟೇ = ನಮ್ಮ ಕೆಲಸದಲ್ಲಿ ನಿಮಗೆ ಹೊಣೆಯಿದೆಯೇ?

**ಗದ್ಯಾನುಸರಣ:** ಕೊಡುವವನು ಜಗದ್ಗುರು. ಪಡೆಯುವವರು ಬೇರೆ; ಮಧ್ಯದಲ್ಲಿ ನೀವು ಯಾರು. ಇದೇಕೆ ಕೆಲಸ ಕೆಡಿಸುತ್ತಿದ್ದೀರಿ? ನೀವು ತೋರುತ್ತಿರುವ ಹೆಗ್ಗಡೆತನದಿಂದ ನಿಮಗೇನು ಲಾಭ? ನಮ್ಮ ಕೆಲಸದಲ್ಲಿ ನಿಮ್ಮದೇನು ಪಾತ್ರ?

**ಸುರಭೂರುಹಮಿರೆ ಮತ್ತಿನ**
**ಮರಮಂ ಜಳರಾಸಿಯಿರೆ ಕುಳುಂಪೆಯ ನೀರಂ**
**ಎರೆವೆಮೆ ಪುರುಪರಮೇಶ್ವರ**
**ನಿರೆ ಭರತನನೆಮ್ಮ ಮಹಿಮೆಗಂತದು ದೊರೆಯೇ** ೮೮

**ಪದವಿಭಾಗ-ಅನ್ವಯ-ಅರ್ಥ:** ಸುರಭೂರುಹಂ + ಇರೆ ಮತ್ತಿನ ಮರಮಂ = ಕಲ್ಪವೃಕ್ಷವಿರಬೇಕಾದರೆ ಇನ್ನಾವುದೋ ಮರವನ್ನು, ಜಳರಾಸಿಯಿರೆ ಕುಳುಂಪೆಯ ನೀರಂ = ಸಮುದ್ರವೇ ಇರಬೇಕಾದರೆ ಕುಂಟೆಯ ನೀರನ್ನು, ಪುರುಪರಮೇಶ್ವರನ್ + ಇರೆ ಭರತನನ್ ಎರೆವೆಮ = ಪುರುದೇವನಿರಬೇಕಾದರೆ ಭರತನನ್ನು ಕೇಳೋಣವೇ? ಎಮ್ಮ ಮಹಿಮೆಗೆ + ಅಂತದು ದೊರೆಯೇ = ನಮ್ಮ ಗೌರವಕ್ಕೆ ಅದು ತಕ್ಕುದೇ?

**ಗದ್ಯಾನುಸರಣ:** ಕಲ್ಪವೃಕ್ಷವಿರಬೇಕಾದರೆ ಇನ್ನಾವುದೋ ಮರವನ್ನು, ಸಮುದ್ರವೇ ಇರಬೇಕಾದರೆ ಕುಂಟೆಯ ನೀರನ್ನು, ಪುರುದೇವನಿರಬೇಕಾದರೆ ಭರತನನ್ನು ಕೇಳೋಣವೇ? ನಮ್ಮ ಗೌರವಕ್ಕೆ ಅದು ತಕ್ಕುದೇ?

**ವ॥ ಎಂಬುದುಂ ಧರಣೇಂದ್ರನವರ ಮಹಾನುಭಾವಮುಮನಾದಿದೇವನೊಳಾದ ನಿರ್ಭರಭಕ್ತಿಯುಮಂ ಮೆಚ್ಚಿ ನಿಜರೂಪಮಂ ತೋಱಿದಾಗಳ್,**

**ಪದವಿಭಾಗ-ಅನ್ವಯ-ಅರ್ಥ:** ಎಂಬುದುಂ = ಎನ್ನಲು, ಧರಣೇಂದ್ರನ್ + ಅವರ ಮಹಾನುಭಾವಮುಮನ್ = ಧರಣೇಂದ್ರನು ಅವರ ಹಿರಿಯ ವ್ಯಕ್ತಿತ್ವವನ್ನೂ, ಆದಿದೇವನೊಳ್ + ಆದ ನಿರ್ಭರಭಕ್ತಿಯುಮಂ ಮೆಚ್ಚಿ = ಪುರುದೇವನ ಬಗೆಗಿನ ತುಂಬು ಭಕ್ತಿಯನ್ನೂ ಮೆಚ್ಚಿಕೊಂಡು, ನಿಜರೂಪಮಂ ತೋಱಿದಾಗಳ್ = ತನ್ನ ಸ್ವಸ್ವರೂಪವನ್ನು ತೋರಿದಾಗ,

**ಗದ್ಯಾನುಸರಣ:** ಎನ್ನಲು, ಧರಣೇಂದ್ರನು ಅವರ ಹಿರಿಯ ವ್ಯಕ್ತಿತ್ವವನ್ನೂ, ಪುರುದೇವನ ಬಗೆಗಿನ ತುಂಬು ಭಕ್ತಿಯನ್ನೂ ಮೆಚ್ಚಿಕೊಂಡು ತನ್ನ ಸ್ವಸ್ವರೂಪವನ್ನು ತೋರಿಸಿದ.

**ಧರಣೇಂದ್ರನೆನಭವನ ಕಿಂ**
**ಕರನೆಂ ನಿಮಗಪ್ಪ ಭಾಗಮಂ ಕುಡಲೆನ್ನಂ**
**ಗುರು ಮುನ್ನಂ ಬೆಸಸಿದನಿ**
**ನ್ನಿರದೆನ್ನೊಡವನ್ನಿಮೆನ್ನ ಪೇೞ್ದುದು ಗೆಯ್ಯಿಂ** ೮೯

**ಪದವಿಭಾಗ-ಅನ್ವಯ-ಅರ್ಥ:** ಧರಣೇಂದ್ರನೆನ್ = ನಾನು ಧರಣೇಂದ್ರ, ಅಭವನ ಕಿಂಕರನೆಂ = ಆದಿಬ್ರಹ್ಮನ ಸೇವಕ, ನಿಮಗೆ + ಅಪ್ಪ ಭಾಗಮಂ ಕುಡಲ್ = ನಿಮಗೆ ಸಲ್ಲಬೇಕಾದ ಭಾಗವನ್ನು ಕೊಡಲು, ಎನ್ನಂ ಗುರು ಮುನ್ನಂ ಬೆಸಸಿದನ್ = ನನಗೆ ದೇವನು ಮುಂಚೆಯೇ ಆಜ್ಞಾಪಿಸಿದ್ದಾನೆ, ಇನ್ನು + ಇರದೆ + ಎನ್ನೊಡವನ್ನಿಂ = ಇನ್ನು ತಡಮಾಡದೆ ನನ್ನ ಜೊತೆ ಬನ್ನಿ, ಎನ್ನ ಪೇೞ್ದುದು ಗೆಯ್ಯಿಂ = ನಾನು ಹೇಳಿದಂತೆ ಮಾಡಿ.

**ಗದ್ಯಾನುಸರಣ:** ನಾನು ಧರಣೇಂದ್ರ, ಆದಿಬ್ರಹ್ಮನ ಸೇವಕ, ನಿಮಗೆ ಸಲ್ಲಬೇಕಾದ ಭಾಗವನ್ನು ಕೊಡಲು ನನಗೆ ದೇವನು ಮುಂಚೆಯೇ ಆಜ್ಞಾಪಿಸಿದ್ದಾನೆ; ಇನ್ನು ತಡಮಾಡದೆ ನನ್ನ ಜೊತೆ ಬಂದು ನಾನು ಹೇಳಿದಂತೆ ಮಾಡಿ.

ವ॥ **ಎಂಬುದುಂ "ಅಧಿಪಂ ಸಂಮುಖದಿಂ ಬೆಸಸಿದೊಡಲ್ಲದೊಲ್ಲೆವು" ಎನೆ ವಿಕ್ರಿಯೆಯಿಂ ಬೆಸಸುವಂತೆ ಮಾಡಿ ನಮಿಯುಮಂ ವಿನಮಿಯುಮಂ ನಿಜವಿಮಾನಮನೇಜೆಸಿಕೊಂಡು ಪೋಗಿ ರಜತಾಚಲಮನೆಯ್ದಿ, ವಿಜಯಾರ್ಧದೊಳ್ ನಿಂದು ಅವರನಲ್ಲಿಗೆ ವಾಸ್ತವ್ಯರ್ ಮಾಡಿ ದಕ್ಷಿಣೋತ್ತರ ಶ್ರೇಣಿಗಳೊಳಿರ್ಪ ವಿದ್ಯಾಧರಾಧೀಶ್ವರರಂ ಬರಿಸಿ ಗಗನವಲ್ಲಭರಥನೂಪುರ ಚಕ್ರವಾಳಂಗಳಂ ರಾಜಧಾನಿಗಳಾಗಿ ನೆಗಟ್ದಿ ನೂಱಪತ್ತುಂ ಪೊೞಲ್ಗಳನೊಳಕೊಂಡ ದಕ್ಷಿಣೋತ್ತರಶ್ರೇಣಿಗಳಂ ನಮಿವಿನಮಿಗಳ್ಗೆ ಕೊಟ್ಟು ಗಾಂಧಾರಪನ್ನಗವಿದ್ಯೆಗಳನವರ್ಗೆ ವಿಧಿಪೂರ್ವಕಮಿತ್ತು, ಧರಣೇಂದ್ರನ್ ಅವರಂ ಅಂಬರಚರೇಂದ್ರಪದವಿಯೊಳ್ ನಿಜೆಸಿ ನಿಜಾಮರಲೋಕಕ್ಕೆ ಪೋದಂ, ಅನ್ನೆಗಮಿತ್ತಲ್,**

**ಪದವಿಭಾಗ–ಅನ್ವಯ–ಅರ್ಥ:** ಎಂಬುದುಂ = ಎಂದು ಹೇಳಲು, ಅಧಿಪಂ ಸಂಮುಖದಿಂ ಬೆಸಸಿದೊಡಲ್ಲದೆ + ಒಲ್ಲೆವು + ಎನೆ = ದೇವನು ತನ್ನ ಬಾಯಿಂದಲೇ ಹೇಳುವವರೆಗೆ ಒಪ್ಪುವುದಿಲ್ಲ ಎನ್ನಲು. ವಿಕ್ರಿಯೆಯಿಂದಂ ಬೆಸಸುವಂತೆ ಮಾಡಿ = ತನ್ನ ವಿಕ್ರಿಯಾಸಾಮರ್ಥ್ಯದಿಂದ ದೇವನು ಆಜ್ಞಾಪಿಸುವಂತೆ ಮಾಡಿ, ನಮಿಯುಮಂ ವಿನಮಿಯುಮಂ = ನಮಿವಿನಮಿಯರನ್ನು, ನಿಜವಿಮಾನಮನ್ + ಏಜೆಸಿಕೊಂಡು ಪೋಗಿ ರಜತ + ಅಚಲಮನ್ + ಎಯ್ದಿ = ತನ್ನ ವಿಮಾನದಲ್ಲಿ ಅವರನ್ನೂ ಹತ್ತಿಸಿಕೊಂಡು ಬೆಳ್ಳಿಬೆಟ್ಟವನ್ನು ತಲುಪಿದ. ವಿಜಯಾರ್ಧದೊಳ್ ನಿಂದು ಅವರನಲ್ಲಿಗೆ ವಾಸ್ತವ್ಯರ್ ಮಾಡಿ = ಕೈವಶಮಾಡಿಕೊಳ್ಳಬೇಕೆಂದು ಅವರನ್ನು ಅಲ್ಲಿ ನೆಲೆಗೊಳಿಸಿ, ದಕ್ಷಿಣ + ಉತ್ತರಶ್ರೇಣಿಗಳೊಳ್ + ಇರ್ಪ ವಿದ್ಯಾಧರಾಧೀಶ್ವರರಂ ಬರಿಸಿ = ದಕ್ಷಿಣ ಮತ್ತು ಉತ್ತರ ಶ್ರೇಣಿಗಳಲ್ಲಿ ಇರುವ ವಿದ್ಯಾಧರ ರಾಜರುಗಳನ್ನು ಬರಮಾಡಿಕೊಂಡು, ಗಗನವಲ್ಲಭ ರಥನೂಪುರಚಕ್ರವಾಳಂಗಳ್ + ಎಂಬ = ಗಗನವಲ್ಲಭಪುರ ಮತ್ತು ರಥನೂಪುರಚಕ್ರವಾಳ ಎಂಬ, ರಾಜಧಾನಿಗಳಾಗಿ ನೆಗಟ್ದಿ = ರಾಜಧಾನಿಗಳಾಗಿ ಮಾಡಿ, ನೂಱಪತ್ತುಂ ಪೊೞಲ್ಗಳನ್ + ಒಳಕೊಂಡ = ನೂರಹತ್ತು ನಗರಗಳು ಸೇರಿರುವ, ದಕ್ಷಿಣ + ಉತ್ತರಶ್ರೇಣಿಗಳಂ ನಮಿವಿನಮಿಗಳ್ಗೆ ಕೊಟ್ಟು = ದಕ್ಷಿಣ ಮತ್ತು ಉತ್ತರಶ್ರೇಣಿಗಳನ್ನು ಕ್ರಮವಾಗಿ ನಮಿ ಮತ್ತು ವಿನಮಿಗಳಿಗೆ ನೀಡಿ, ಗಾಂಧಾರಪನ್ನಗವಿದ್ಯೆಗಳನ್ + ಅವರ್ಗೆ ವಿಧಿಪೂರ್ವಕಂ + ಇತ್ತು = ಗಾಂಧಾರ ಮತ್ತು ಪನ್ನಗವಿದ್ಯೆಗಳನ್ನು ಕ್ರಮಬದ್ಧವಾಗಿ ಹೇಳಿಕೊಟ್ಟು, ಧರಣೇಂದ್ರನ್ ಅವರಂ ಅಂಬರಚರೇಂದ್ರಪದವಿಯೊಳ್ ನಿಜೆಸಿ = ಧರಣೇಂದ್ರನು ಅವರನ್ನು ಅಂಬರರಾಜಪದವಿಯಲ್ಲಿ ನೆಲೆಗೊಳಿಸಿ, ನಿಜ+ಅಮರಲೋಕಕ್ಕೆ ಪೋದಂ = ತನ್ನ ದೇವಲೋಕಕ್ಕೆ ಹೋದ, ಅನ್ನೆಗಂ + ಇತ್ತಲ್ = ಈ ಮಧ್ಯೆ ಈ ಕಡೆ,

**ಗದ್ಯಾನುಸರಣ:** ಎಂದು ಹೇಳಲು, 'ದೇವನು ತನ್ನ ಬಾಯಿಂದಲೇ ಹೇಳುವವರೆಗೆ ಒಪ್ಪುವುದಿಲ್ಲ' ಎಂದವರು ಉತ್ತರಿಸಿದರು; ಆಗ ಧರಣೇಂದ್ರನು

ತನ್ನ ವಿಕ್ರಿಯಾಸಾಮರ್ಥ್ಯದಿಂದ ದೇವನು ಆಜ್ಞಾಪಿಸುವಂತೆ ಮಾಡಿದ; ಆ ಬಳಿಕ ನಮಿವಿನಮಿಯರನ್ನು ತನ್ನ ವಿಮಾನದಲ್ಲಿ ಅವರನ್ನೂ ಹತ್ತಿಸಿಕೊಂಡು ಬೆಳ್ಳಿಬೆಟ್ಟವನ್ನು ತಲುಪಿದ. ವಿಜಯಾರ್ಧದಲ್ಲಿ ಅವರನ್ನು ನೆಲೆಗೊಳಿಸಿದ; ಅನಂತರ ದಕ್ಷಿಣ ಮತ್ತು ಉತ್ತರ ಶ್ರೇಣಿಗಳಲ್ಲಿ ಇರುವ ವಿದ್ಯಾಧರ ರಾಜರುಗಳನ್ನು ಬರಮಾಡಿಕೊಂಡು ಅವರ ಸಮ್ಮುಖದಲ್ಲಿ ಗಗನವಲ್ಲಭಪುರ ಮತ್ತು ರಥನೂಪುರಚಕ್ರವಾಳ ಎಂಬ ರಾಜಧಾನಿಗಳ ವ್ಯಾಪ್ತಿಯಲ್ಲಿನ ನೂರಹತ್ತು ನಗರಗಳಿಂದ ಕೂಡಿದ ದಕ್ಷಿಣ ಮತ್ತು ಉತ್ತರಶ್ರೇಣಿಗಳನ್ನು ಕ್ರಮವಾಗಿ ನಮಿ ಮತ್ತು ವಿನಮಿಗಳಿಗೆ ನೀಡಿದುದಲ್ಲದೆ, ಗಾಂಧಾರ ಮತ್ತು ಪನ್ನಗವಿದ್ಯೆಗಳನ್ನೂ ಅವರಿಗೆ ಕ್ರಮಬದ್ಧವಾಗಿ ಹೇಳಿಕೊಟ್ಟ. ಧರಣೇಂದ್ರನು ಅವರನ್ನು ಅಂಬರರಾಜಪದವಿಯಲ್ಲಿ ನೆಲೆಗೊಳಿಸಿ, ತನ್ನ ದೇವಲೋಕಕ್ಕೆ ಹೋದ, ಈ ಮಧ್ಯೆ ಈ ಕಡೆ.

[**ವಿಶೇಷ ವಿಚಾರ:** ದೇವನು ತನ್ನ ವಿಕ್ರಿಯಾ ಸಾಮರ್ಥ್ಯದಿಂದ ಈ ಕಾರ್ಯ ಮಾಡಿದನೆಂದು ಪಂಪನ ವಿವರಣೆಯಾದರೆ, ಪೂರ್ವಪುರಾಣದಲ್ಲಿ ದೇವನು ಹೇಳಿದ ಮಾತನ್ನು ನಮಿವಿನಮಿಯರು ನಂಬುತ್ತಾರೆ; ಧರಣೇಂದ್ರ ಉಪಾಯದಿಂದ ಹಾಗೆ ಮಾಡುತ್ತಾನೆ: ಪೂಪು, ೧೮.೧೪೫.]

**ಪರಮಂ ಪೂಣ್ದಱುದಿಂಗಳಂ ನೆಱಪಿ ಚರ್ಯಾಮಾರ್ಗದೊಂದಂದಮಂ**
**ಧರೆಯೊಳ್ ಮಾರ್ಗವಿಬೋಧನಾರ್ಥಮಱಿಯಲ್ಕೆಂದೆತ್ತಿ ಕಯ್ಯಂ ಸುರೇ**
**ಶ್ವರಶೈಳಂ ತಳರ್ವಂತೆವೊಲ್ ತಳರ್ದನೀರ್ಯಾಗೋಚರಂ ಶುದ್ಧಿ ತ**
**ಳ್ತಿರೆ ತನ್ನೊಳ್ ಧರೆಯಂ ಪದಾಂಬುಜರಜಂಗಳ್ ನೀರಜಂ ಮಾಟ್ಪಿನಂ ೯೦**

**ಪದವಿಭಾಗ–ಅನ್ವಯ–ಅರ್ಥ:** ಪರಮಂ ಪೂಣ್ದ + ಅಱುದಿಂಗಳಂ ನೆಱಪಿ = ಪರಮನು ಪ್ರತಿಜ್ಞೆ ಮಾಡಿದ್ದ ಆರು ತಿಂಗಳನ್ನು ಮುಗಿಸಿ, ಚರ್ಯಾಮಾರ್ಗದ + ಒಂದು + ಅಂದಮಂ ಧರೆಯೊಳ್ ಮಾರ್ಗವಿಬೋಧನ + ಅರ್ಥಂ = ಚರ್ಯಾಮಾರ್ಗದ ಒಂದು ಬಗೆಯನ್ನು ಜಗತ್ತಿನಲ್ಲಿ ಬೋಧಿಸಿ, ಅಱಿಯಲ್ಕೆ + ಎಂದು ಕಯ್ಯಂ ಎತ್ತಿ = ತಿಳಿಯಲಿ ಎಂದು ತನ್ನ ಕೈಯನ್ನೆತ್ತಿಕೊಂಡು, ಧರೆಯಂ ಪದಾಂಬುಜರಜಂಗಳ್ ನೀರಜಂ ಮಾಟ್ಪಿನಂ = ಭೂಮಿಯನ್ನು ತನ್ನ ಅಡಿದಾವರೆಗಳ ಧೂಳಿನಿಂದ ಕೊಳೆರಹಿತವನ್ನಾಗಿ ಮಾಡಲು, ಸುರೇಶ್ವರಶೈಳಂ ತಳರ್ವಂತೆವೊಲ್ = ಮೇರು ಪರ್ವತವು ಹೊರಡುವ ಹಾಗೆ, ತನ್ನೊಳ್ ಶುದ್ಧಿ ತಳ್ತಿರೆ ಈರ್ಯಾಗೋಚರಂ ತಳರ್ದನ್ = ತನ್ನಲ್ಲಿ ಶುದ್ಧಿಯನ್ನು ಹೊಂದಿ ಈರ್ಯಾಗೋಚರನಾಗಿ ನಡೆದ.

**ಗದ್ಯಾನುಸರಣ:** ಪರಮನು ಪ್ರತಿಜ್ಞೆ ಮಾಡಿದ್ದ ಆರು ತಿಂಗಳನ್ನು ಮುಗಿಸಿ, ಚರ್ಯಾಮಾರ್ಗದ ಒಂದು ಬಗೆಯನ್ನು ಜಗತ್ತಿನಲ್ಲಿ ಬೋಧಿಸಿ ತಿಳಿಯುವಂತೆ ಮಾಡಲು ತನ್ನ ಕೈಯನ್ನೆತ್ತಿಕೊಂಡು ಭೂಮಿಯನ್ನು ತನ್ನ ಅಡಿದಾವರೆಗಳ ಧೂಳಿನಿಂದ ಕೊಳೆರಹಿತವನ್ನಾಗಿ ಮಾಡಲು ಮೇರು ಪರ್ವತವು ಹೊರಡುವ ಹಾಗೆ ತನ್ನಲ್ಲಿ ಶುದ್ಧಿಯನ್ನು ಹೊಂದಿ ಈರ್ಯಾಗೋಚರನಾಗಿ ನಡೆದ.

**ವ। ಅಂತು ತಳರ್ದು ಗ್ರಾಮ ನಗರ ಖೇಡ ಖರ್ವಡಮಡಂಬಗಳೊಳೆಡಂಬಡಿಲ್ಲದೆ ಚರ್ಯಾಮಾರ್ಗದೊಳ್ ನಡೆವಲ್ಲಿ ಜನಪದ ಪುರ ಸನಾಭಿಜನಂಗಳ್ ಕಂಡು ಮುಸುಱಿಕೊಂಡು ಕೆಲಬರ್ ಅತಿಜಡಮತಿಗಳ್ 'ಮಿಂದುಂಡು ಈಗಳೆ ಬಿಜಯಂಗೆಯ್' ಎಂದಿರೆ ಕುಳಾದ್ರಿಧೈರ್ಯಂಗೆ ಚರಿಗೆ ಮಾಣ್ದತ್ತಿನಿಸುಂ. ಅಂತಾ ಮುನೀಶ್ವರಂಗೆ ನಿಖಿಳಜಗಜ್ಜನಾಶ್ಚರ್ಯಚರ್ಯಾ ಪರ್ಯಟನದೊಳ್ ಮತ್ತಮಱುದಿಂಗಳ್ ಪೋಗೆ ಸಂವತ್ಸರಂ ನೆಱೆದಂದು ಕುರುಜಾಂಗಣ ವಿಷಯವಿಶೇಷಕಮಪ್ಪ ಹಸ್ತಿನಾಪುರಮನಾಳ್ವ ಕುರುವಂಶಶಿಖಾಮಣಿ ಸೋಮಪ್ರಭಂಗೆ ತತ್ಸ್ವಯಂಪ್ರಭಾಶ್ರೀಮತ್ಯಾರ್ಯಾ ಸ್ವಯಂಪ್ರಭದೇವ ಕೇಶವಮಹೀಶಾಚ್ಯುತಪ್ರತೀಂದ್ರಂ ಧನದೇವಚರಂ ಸರ್ವಾರ್ಥಸಿದ್ಧಿಯಿಂ ಬಂದು ಪರಮಶ್ರೇಯೋನಿಧಾನಂ ಶ್ರೇಯಾಂಸನೆಂಬೊಂ ಪ್ರಿಯಾನುಜನಾಗಿರ್ದಾತಂ ಅಂದಿನ ಬೆಳಗಪ್ಪ ಜಾವದೊಳ್,**

**ಪದವಿಭಾಗ-ಅನ್ವಯ-ಅರ್ಥ:** ಅಂತು ತಳರ್ದು = ಹಾಗೆ ಹೊರಟು. ಗ್ರಾಮ ನಗರ ಖೇಡ ಖರ್ವಡಂಗಳೊಳ್ + ಎಡಂಬಡಿಲ್ಲದೆ ಚರ್ಯಾಮಾರ್ಗದೊಳ್ ನಡೆವಲ್ಲಿ = ಗ್ರಾಮ ನಗರ ಖೇಡ ಖರ್ವಡಮಡಂಬಗಳಲ್ಲಿ ತೊಂದರೆಯಿಲ್ಲದೆ ಸಂಚರಿಸುತ್ತಿರಲು, ಜನಪದಪುರಸನಾಭಿಜನಂಗಳ್ ಕಂಡರ್ = ಜನಪದಪುರವೆಂಬ ಊರಿನಲ್ಲಿ ನೆಂಟರು ಕಂಡು ಸುತ್ತುವರಿದು, ಅತಿ ಜಡಮತಿಗಳ್ ಕೆಲರ್ = ತೀರ ಮಂದಬುದ್ಧಿಯ ಕೆಲವರು ಮಿಂದು + ಉಂಡು + ಈಗಳೆ ಬಿಜಯಂಗೆಯ್ ಎಂದಿರೆ = ಸ್ನಾನ ಮಾಡಿ ಊಟಮಾಡಿಕೊಂಡು ಹೊರಡಿರಿ ಎಂದು ಹೇಳಲು, ಕುಳ + ಅದ್ರಿಧೈರ್ಯಂಗೆ ಚರಿಗೆ ಇನಿಸುಂ ಮಾಣ್ದತ್ತು = ಕುಲಪರ್ವತದಂತೆ ಧೈಯರ್ಸ್ಥನಾದ ಸ್ವಾಮಿಗೆ ಚರಿಗೆ ಕೊಂಚ ನಿಂತಿತು. ಅಂತು ಆ ಮುನೀಶ್ವರಂಗೆ = ಹೀಗೆ ಆ ಮುನಿಪತಿಗೆ, ನಿಖಿಳಜಗತ್ + ಜನ + ಆಶ್ಚರ್ಯಚರ್ಯಾ ಪರ್ಯಟನದೊಳ್ = ಇಡೀ ಜಗತ್ತಿನ ಜನಕ್ಕೆ ಆಶ್ಚರ್ಯಕಾರಕವೆನಿಸಿದ ಚರ್ಯೆಯ ಸುತ್ತಾಟದಲ್ಲಿ, ಮತ್ತಂ + ಅಱುದಿಂಗಳ್ ಪೋಗೆ = ಇನ್ನೂ ಆರು ತಿಂಗಳು ಸರಿಯದು, ಸಂವತ್ಸರಂ ನೆಱೆದಂದು = ಒಂದು ವರ್ಷ ಮುಗಿದಾಗ, ಕುರುಜಾಂಗಣವಿಷಯವಿಶೇಷಕಂ + ಅಪ್ಪ = ಕುರುಜಾಂಗಣ ನಾಡಿನ ತಿಲಕದಂತಿದ್ದ, ಹಸ್ತಿನಾಪುರಮನ್ + ಆಳ್ವ ಕುರುವಂಶಶಿಖಾಮಣಿ ಸೋಮಪ್ರಭಂಗೆ = ಹಸ್ತಿನಾಪುರವನ್ನು ಆಳುವ ಕುರುವಂಶಶ್ರೇಷ್ಠನಾದ ಸೋಮಪ್ರಭನಿಗೆ, ತತ್ + ಸ್ವಯಂಪ್ರಭಾ ಶ್ರೀಮತಿ + ಆರ್ಯಾ ಸ್ವಯಂಪ್ರಭದೇವ ಕೇಶವಮಹೀಶ + ಅಚ್ಯುತಪ್ರತೀಂದ್ರಂ ಧನದೇವಚರಂ = ಹಿಂದಿನ ಸ್ವಯಂಪ್ರಭೆ ಶ್ರೀಮತಿ ಆರ್ಯೆ, ಸ್ವಯಂಪ್ರಭದೇವ ಕೇಶವಮಹೀಶ ಅಚ್ಯುತ್ರತೀಂದ್ರ ಧನದೇವಚರ ಎಂದು ಅನುಕ್ರಮವಾಗಿ ಜನ್ಮಗಳನ್ನೆತ್ತಿ, ಸರ್ವಾರ್ಥಸಿದ್ಧಿಯಿಂ ಬಂದು = ಸರ್ವಾರ್ಥಸಿದ್ಧಿಯಿಂದ ಇಳಿದು ಬಂದು, ಪ್ರಿಯ + ಅನುಜನಾಗಿರ್ದಾತಂ = ಪ್ರೀತಿಯ ತಮ್ಮನಾಗಿ(ಹುಟ್ಟಿ)ದ್ದ, ಪರಮಶ್ರೇಯೋನಿಧಾನಂ ಶ್ರೇಯಾಂಸನೆಂಬೊಂ = ಅತೀವ ಶ್ರೇಯಸ್ಸಿಗೆ ಆಶ್ರಯವೆನಿಸಿದ್ದ ಶ್ರೇಯಾಂಸನೆಂಬುವನು, ಅಂದಿನ ಬೆಳಗಪ್ಪ ಜಾವದಾಗಳ್ = ಆವತ್ತು ಬೆಳಗಿನ ಜಾವದಲ್ಲಿ,

**ಗದ್ಯಾನುಸರಣ:** ಹಾಗೆ ಹೊರಟು ಗ್ರಾಮ ನಗರ ಖೇಡ ಖರ್ವಡಗಳಲ್ಲಿ ಎಡರುತೊಡರುಗಳಿಲ್ಲದೆ ಸಂಚರಿಸುತ್ತಿರಲು ಜನಪದಪುರವೆಂಬ ಊರಿನಲ್ಲಿ ಅವನನ್ನು ನೆಂಟರು ಕಂಡು ಸುತ್ತುವರಿದರು. ತೀರ ಮಂದಬುದ್ಧಿಯ ಕೆಲವರು ಆತನಿಗೆ ಹೂವು ವಸ್ತ್ರ ಗಂಧ ಆಭರಣಗಳನ್ನು ಕೊಟ್ಟರು. 'ಸ್ನಾನ ಮಾಡಿ ಊಟಮಾಡಿಕೊಂಡು ಹೊರಡಿರಿ' ಎಂದು ಹೇಳಿ ತಡೆದರು; ಹೀಗಾಗಿ ಕುಲಪರ್ವತದಂತೆ ಧೈರ್ಯಸ್ಥನಾದ ಸ್ವಾಮಿಯ ಚರಿಗೆ ಕೊಂಚ ಕಾಲ ನಿಂತಿತು. ಹೀಗೆ ಆ ಮುನಿಪತಿಗೆ ಇಡೀ ಜಗತ್ತಿನ ಜನಕ್ಕೆ ಆಶ್ಚರ್ಯಕಾರಕವೆನಿಸಿದ ಚರ್ಯೆಯ ಸುತ್ತಾಟದಲ್ಲಿ ಇನ್ನೂ ಆರು ತಿಂಗಳು ಸರಿದು ಒಂದು ವರ್ಷ ಕಳೆಯಿತು; ಅಷ್ಟು ಹೊತ್ತಿಗೆ, ಕುರುಜಾಂಗಣ ನಾಡಿನ ತಿಲಕದಂತಿದ್ದ ಹಸ್ತಿನಾಪುರವನ್ನು ಆಳುತ್ತಿದ್ದ ಕುರುವಂಶಶ್ರೇಷ್ಠನಾದ ಸೋಮಪ್ರಭನಿಗೆ – ಹಿಂದೆ ಸ್ವಯಂಪ್ರಭೆ ಶ್ರೀಮತಿ ಆರ್ಯೆ, ಸ್ವಯಂಪ್ರಭದೇವ ಕೇಶವಮಹೀಶ ಅಚ್ಯುತ್ರತೀಂದ್ರ ಧನದೇವಚರ ಎಂದು ಅನುಕ್ರಮವಾಗಿ ಜನ್ಮಗಳನ್ನೆತ್ತಿ ಸರ್ವಾರ್ಥಸಿದ್ಧಿಯಿಂದ ಇಳಿದು ಬಂದು – ಈಗ ಪ್ರೀತಿಯ ತಮ್ಮನಾಗಿ ಹುಟ್ಟಿದ್ದವನು ಅತೀವ ಶ್ರೇಯಸ್ಸಿಗೆ ಆಶ್ರಯವೆನಿಸಿದ್ದ ಶ್ರೇಯಾಂಸನೆಂಬುವನು; ಆತನು ಅವತ್ತು ಬೆಳಗಿನ ಜಾವ,

**ಸುರಶೈಲಂ ಕಲ್ಪವೃಕ್ಷಪ್ರಕರಪರಿವೃತಂ ರಾಜಗೇಹಾಂಗಣಾಳಂ**
**ಕರಣಂ ಬಂದಿರ್ದುದಂ ಕಂಡಮರಗಿರಿನಿಭಂ ಪ್ರಾರ್ಥಿತಾರ್ಥಪ್ರದಂ ಮಾ**
**ಣ್ದಿರದಾದಿಬ್ರಹ್ಮನೆಟ್ಟಿರ್ಪುದನೆ ಕನಸುವೇೞ್ದಪ್ಪುದೆಂದಗ್ರಜಂಗಾ**
**ದರದಿಂದಂ ಪೇೞ್ದು ಕಾಣ್ಬುತ್ಸವದೊಳೆ ಪರಮಾನಂದಮಂ ತಾಳ್ದಿ ನಿಂದಂ** ೯೧

**ಪದವಿಭಾಗ–ಅನ್ವಯ–ಅರ್ಥ:** ಕಲ್ಪವೃಕ್ಷಪ್ರಕರಪರಿವೃತಂ = ಕಲ್ಪವೃಕ್ಷಗಳ ಗುಂಪಿನಿಂದ ಸುತ್ತುವರಿದ, ರಾಜಗೇಹ + ಅಂಗಣ + ಅಳಂಕರಣಂ = ಅರಮನೆಗೆ ಅಲಂಕಾರವಾದ, ಸುರಶೈಲಂ = ಮೇರುಪರ್ವತವು, ಬಂದು + ಇರ್ದುದಂ ಕಂಡು ಬಂದಿರುವುದನ್ನು ಕನಸಿನಲ್ಲಿ ನೋಡಿ, ಪ್ರಾರ್ಥಿತ + ಅರ್ಥಪ್ರದಂ = ಕೇಳಿಕೊಂಡ ಇಷ್ಟಾರ್ಥವನ್ನು ನೆರವೇರಿಸುವ, ಅಮರಗಿರಿನಿಭಂ = ದೇವಗಿರಿಸಮಾನನಾದ, ಆದಿಬ್ರಹ್ಮನ್ = ಆದಿದೇವನು, ಮಾಣ್ದು + ಇರದೆ + ಎಟ್ಟಿರ್ಪುದನೆ ಕನಸು + ಪೇೞ್ದಪ್ಪುದು + ಎಂದು = ಖಂಡಿತ ಬರುತ್ತಿದ್ದಾನೆ ಎಂದು ತನ್ನ ಕನಸು ಸೂಚಿಸುತ್ತಿದೆ ಎಂದು, ಅಗ್ರಜಂಗೆ + ಆದರದಿಂದಂ ಪೇೞ್ದು = ತನ್ನ ಅಣ್ಣನಿಗೆ ಉತ್ಸಾಹದಿಂದ ತಿಳಿಸಿ, ಕಾಣ್ಬ + ಉತ್ಸವದೊಳೆ ಪರಮ + ಆನಂದಮಂ ತಾಳ್ದಿ ನಿಂದಂ = ಆತನನ್ನು ಕಾಣುವ ಮಹಾಸಂತಸಕ್ಕಾಗಿ ಕಾದು ನಿಂತ.

**ಗದ್ಯಾನುಸರಣ:** ಕಲ್ಪವೃಕ್ಷಗಳ ಗುಂಪಿನಿಂದ ಸುತ್ತುವರಿದ ಹಾಗೂ ಅರಮನೆಗೆ ಅಲಂಕಾರಪ್ರಾಯವಾದ ಮೇರುಪರ್ವತವು, ಬಂದಿರುವುದನ್ನು ಕನಸಿನಲ್ಲಿ ನೋಡಿದ; ಕೇಳಿಕೊಂಡ ಇಷ್ಟಾರ್ಥವನ್ನು ನೆರವೇರಿಸುವ ದೇವಗಿರಿಸಮಾನನಾದ ಆದಿದೇವನು ಖಂಡಿತ ಬರುತ್ತಿದ್ದಾನೆ ಎಂದು ತನ್ನ ಕನಸು ಸೂಚಿಸುತ್ತಿದೆ ಎಂದು ತನ್ನ ಅಣ್ಣನಿಗೆ ಉತ್ಸಾಹದಿಂದ ತಿಳಿಸಿ ಆತನನ್ನು ಕಾಣುವ ಮಹಾಸಂತಸ ಕ್ಷಣಕ್ಕಾಗಿ ಕಾದು ನಿಂತ.

ವ॥ ಅನ್ನೆಗಂ ಆದಿಮುನೀಶ್ವರನುಂ ಆ ಪುರಾಂತರಾಳದೊಳ್ ಸಂವೇಗವೈರಾಗ್ಯಾಭಿವೃದ್ಧ್ಯರ್ಥಮಾಗೆ ಜಗತ್ಕಾಯಸ್ವಭಾವ ಭಾವನಾಪರಂ ಸಕಳಶರೀರಗುಣಾಧಿಕದುಃಖಾರ್ದಿತಾವಿನೀತರೊಳ್ ಮೈತ್ರಿಪ್ರಮೋದಕಾರುಣ್ಯಮಾಧ್ಯಸ್ಥವೃತ್ತಿಗಳಂ ಭಾವಿಸುತ್ತುಂ ಯುಗಪ್ರಮಾಣಕ್ಷೋಣೀನಿರೀಕ್ಷಣ ನಿರುತಮತಿದ್ರುತವಿಲಂಬಿಗತಿವ್ಯಪೇತನುಮಾಗಿ ನಗರಾರಣ್ಯನಿರ್ವಿಶೇಷನುತ್ತಮಮಧ್ಯಮಜಘನ್ಯಾಗಾರಂಗಳೊಳ್ ಚಂದ್ರಗತಿಯಿಂ ಸಲುತ್ತುಮಾಳೋಕಸಂಭ್ರಮೋಪೇತ ಪುರಜನಾನುಗಮ್ಯಮಾನಂ ಸೋಮಪ್ರಭ ರಾಜಮಂದಿರಾಭಿಮುಖನಾಗಿ ಬರ್ಪನ್ನೆಗಂ ದ್ವಾರಪಾಳಕಂ ಸಿದ್ಧಾರ್ಥನೆಂಬಂ ಪರಿತಂದು ಭಗವದ್ವೃತ್ತಪ್ರಸಕ್ತ ವಚನರಚನಾಮುಖರಮುಖಸರಸೀರುಹನಾಗಿರ್ದ ಸೋಮಪ್ರಭಂಗಂ ಶ್ರೇಯಾಂಸಂಗಮಱಿಪಿದಾಗಳ್, ಅತಿಪ್ರಮೋದಪ್ರೀಣಿತಾತಂತರಃಕರಣನಾಗಿ,

**ಪದವಿಭಾಗ-ಅನ್ವಯ-ಅರ್ಥ:** ಅನ್ನೆಗಂ = ಅಷ್ಟರಲ್ಲಿ, ಆದಿಮುನೀಶ್ವರನುಂ = ಆದಿಜಿನನು, ಆ ಪುರ + ಅಂತರಾಳದೊಳ್ = ಆ ನಗರದ ಮಧ್ಯೆ, ಸಂವೇಗವೈರಾಗ್ಯ + ಅಭಿವೃದ್ಧಿ + ಅರ್ಥಮಾಗೆ = ವೈರಾಗ್ಯವನ್ನು ಬೆಳೆಸುವ ದೃಢಸಂಕಲ್ಪದಿಂದ, ಜಗತ್ + ಕಾಯಸ್ವಭಾವಭಾವನಾಪರಂ = ಬದುಕು ಮತ್ತು ದೇಹಗಳ ಸ್ವಭಾವವನ್ನು ಕುರಿತು ಆಲೋಚಿಸುತ್ತ, ಸಕಳಶರೀರಗುಣ + ಅಧಿಕದುಃಖಾರ್ದಿತ + ಅಪಿನೀತರೊಳ್ = ಕೇವಲ ದೇಹಗುಣಗಳನ್ನೇ ಹೊಂದಿ ಅತೀವ ದುಃಖವನ್ನು ಹೊಂದಿದ ಅವಿಧೇಯರಲ್ಲಿ, ಮೈತ್ರಿ ಪ್ರಮೋದ ಕಾರುಣ್ಯ ಮಾಧ್ಯಸ್ಥವೃತ್ತಿಗಳಂ ಭಾವಿಸುತ್ತುಂ = ಸ್ನೇಹ ಆನಂದ ಕರುಣೆಗಳಿಂದ ಮಾಧ್ಯಸ್ಥವೃತ್ತಿಗಳನ್ನು ತಾಳೀ, ಯುಗಪ್ರಮಾಣಕ್ಷೋಣೀನಿರೀಕ್ಷಣನಿರುತಮತಿ = ಒಂದು ನೊಗದಷ್ಟು ದೂರವನ್ನು ನೋಡುವುದರಲ್ಲಿ ನಿರತನಾಗಿ, ದ್ರುತವಿಲಂಬಿಗತಿವ್ಯಪೇತನುಂ + ಆಗಿ = ತೀರ ಬೇಗ ಅಥವಾ ತೀರ ನಿಧಾನವಾಗಿ ನಡೆಯದೆ, ನಗರ + ಅರಣ್ಯನಿರ್ವಿಶೇಷನ್ = ಊರು ಅಥವಾ ಕಾಡುಗಳ ಭೇದವಿಲ್ಲದೆ, ಉತ್ತಮಮಧ್ಯಮಜಘನ್ಯ + ಆಗಾರಂಗಳೊಳ್ = ಶ್ರೇಷ್ಠ ಮಧ್ಯಮ ಹಾಗೂ ಸಾಮಾನ್ಯ ಮನೆಗಳಲ್ಲಿ, ಚಂದ್ರಗತಿಯಿಂ ಸಲುತ್ತುಂ = ಚಂದ್ರಗತಿಯಿಂದ ಸಾಗುತ್ತ, ಆಳೋಕಸಂಭ್ರಮ + ಉಪೇತ = ನೋಡಲು ಸಡಗರಪಡುವ, ಪುರಜನ + ಅನುಗಮ್ಯಮಾನಂ = ಊರ ಜನರಿಂದ ಹಿಂಬಾಲಿಸಲ್ಪಟ್ಟು, ಸೋಮಪ್ರಭರಾಜಮಂದಿರ + ಅಭಿಮುಖನಾಗಿ ಬರ್ಪನ್ನೆಗಂ = ಸೋಮಪ್ರಭನ ಅರಮನೆಗೆ ಎದುರಾಗಿ ಬರುತ್ತಿರಲು, ಸಿದ್ಧಾರ್ಥನೆಂಬಂ ದ್ವಾರಪಾಳಕಂ ಪರಿತಂದು = ಸಿದ್ಧಾರ್ಥನೆಂಬ ಬಾಗಿಲು ಕಾಯುವವನು ಓಡಿ ಬಂದು, ಭಗವತ್ + ವೃತ್ತಪ್ರಸಕ್ತವಚನರಚನಾ = ಭಗವಂತನ ವಿಚಾರವನ್ನು ಕೇಳಲು. ಮುಖರಮುಖಸರಸೀರುನಾಗಿ + ಇರ್ದ = ಕಾತರರಾಗಿದ್ದ ಮೊಗದಾವರೆಗಳಿಂದ ಕೂಡಿದ್ದ, ಸೋಮಪ್ರಭಂಗಂ ಶ್ರೇಯಾಂಸಂಗಂ + ಅಱಿಪಿದಾಗಳ್ = ಸೋಮಪ್ರಭ ಮತ್ತು ಶ್ರೇಯಾಂಸನಿಗೆ ತಿಳಿಸಿದಾಗ, ಅತಿಪ್ರಮೋದಪ್ರೀಣಿತ + ಅಂತರಃಕರಣನಾಗಿ = ಅತಿಪ್ರಮೋದಪ್ರೀಣಿತ + ಅಂತಃಕರಣನಾಗಿ = ಅತೀವ ಸಂತಸದಿಂದ ಕೂಡಿದ ಮನಸ್ಸುಳ್ಳವನಾಗಿ,

**ಗದ್ಯಾನುಸರಣ:** ಅಷ್ಟರಲ್ಲಿ, ಆದಿಜಿನನು ಆ ನಗರದ ಮಧ್ಯೆ ವೈರಾಗ್ಯವನ್ನು ಬೆಳೆಸುವ ದೃಢಸಂಕಲ್ಪದಿಂದಲೂ, ಬದುಕು ಮತ್ತು ದೇಹಗಳ ಸ್ವಭಾವವನ್ನು ಕುರಿತು ಆಲೋಚಿಸುತ್ತಲೂ. ಕೇವಲ ದೇಹಗುಣಗಳನ್ನೇ ಹೊಂದಿ ಅತೀವ ದುಃಖವನ್ನು ಹೊಂದಿದ ಅವಿಧೇಯರಲ್ಲಿ ಸ್ನೇಹ ಆನಂದ ಕರುಣೆಗಳಿಂದ ಮಾಧ್ಯಸ್ಥವೃತ್ತಿಗಳನ್ನು ತಾಳಿಯೂ, ಒಂದು ನೊಗದಷ್ಟು ದೂರವನ್ನು ನೋಡುವುದರಲ್ಲಿ ನಿರತನಾಗಿ. ತೀರ ಬೇಗ ಅಥವಾ ತೀರ ನಿಧಾನವಾಗಿ ನಡೆಯದೆ. ಊರು ಅಥವಾ ಕಾಡುಗಳ ಭೇದವಿಲ್ಲದೆ, ಶ್ರೇಷ್ಠ ಮಧ್ಯಮ ಹಾಗೂ ಸಾಮಾನ್ಯ ಮನೆಗಳಲ್ಲಿ ವ್ಯತ್ಯಾಸ ಮಾಡದೆ, ಚಂದ್ರಗತಿಯಿಂದ ಸಾಗುತ್ತ ಬರುತ್ತಿದ್ದ; ನೋಡಲು ಸಡಗರಪಡುತ್ತ ಊರ ಜನರು ಆತನನ್ನು ಹಿಂಬಾಲಿಸುತ್ತಿದ್ದರು; ಹೀಗೆ ಆತನು ಸೋಮಪ್ರಭನ ಅರಮನೆಗೆ ಎದುರಾಗಿ ಬರುತ್ತಿರಲು ಸಿದ್ಧಾರ್ಥನೆಂಬ ಬಾಗಿಲು ಕಾಯುವವನು ಆತನನ್ನು ನೋಡಿ. ಓಡಿ ಬಂದ; ಭಗವಂತನ ವಿಚಾರವನ್ನು ಕೇಳಲು ಕಾತರವಾದ ಮೊಗದಾವರೆಗಳಿಂದ ಕೂಡಿದ್ದ ಸೋಮಪ್ರಭ ಮತ್ತು ಶ್ರೇಯಾಂಸನಿಗೆ ಈ ವಿಷಯ ತಿಳಿಸಿದ. ಅತೀವ ಆದಿದೇವನು ಸಂತಸದಿಂದ ಕೂಡಿದ ಮನಸ್ಸುಳ್ಳವನಾಗಿ,

**ಇದಿರೊಳ್ ಮಂಗಳಗೀತತೂರ್ಯನಿನದಂ ಕೈಗಣ್ಮೆ ಮಾಂಗಲ್ಯವೇ**
**ಷದ ಕಾಂತಾತತಿ ಮಂಗಳೋಪಕರಣದ್ರವ್ಯಂಗಳಿಂದೊಪ್ಪೆ ಪೆ**
**ರ್ಚಿದ ತನ್ನುತ್ತಮಭಕ್ತಿಯಿಂ ನಿಲಿಪುದುಂ ಶ್ರೇಯೋಗೃಹದ್ವಾರದೊಳ್**
**ನಿಧಿ ನಿಲ್ವಂತಿರೆ ನಿಂದನೂರ್ಜಿತಗುಣಂ ಸಂಸಾರಸಾರೋದಯಂ** ೯೨

**ಪದವಿಭಾಗ–ಅನ್ವಯ–ಅರ್ಥ:** ಇದಿರೊಳ್ ಮಂಗಳಗೀತತೂರ್ಯನಿನದಂ ಕೈಗಣ್ಮೆ = ಎದುರಲ್ಲಿ ಮಂಗಳವಾದ್ಯಗಳ ದನಿಯು ಮೊರೆಯಲು, ಮಾಂಗಲ್ಯವೇಷದ ಕಾಂತಾತತಿ = ಶುಭಕರ ವೇಷದಿಂದ ಕೂಡಿದ ವನಿತಾಸಮೂಹವು, ಮಂಗಳ + ಉಪಕರಣದ್ರವ್ಯಂಗಳಿಂದೆ + ಒಪ್ಪೆ = ಮಂಗಳಕರವಾದ ವಸ್ತುಗಳಿಂದಲೂ ಸಾಮಗ್ರಿಗಳಿಂದ ಶೋಭಿಸಲು, ಪೆರ್ಚಿದ ತನ್ನುತ್ತಮಭಕ್ತಿಯಿಂ ನಿಲಿಪುದುಂ = ಅಸೀಮವಾದ ತನ್ನ ಶ್ರೇಷ್ಠ ಭಕ್ತಿಯು ನಿಲ್ಲಿಸಲು, ಶ್ರೇಯೋಗೃಹದ್ವಾರದೊಳ್ ನಿಧಿ ನಿಲ್ವಂತಿರೆ = ಶ್ರೇಯಸ್ಸಿನ ಬಾಗಿಲಲ್ಲಿ ನಿಧಿಯು ನಿಲ್ಲುವ ಹಾಗೆ, ಊರ್ಜಿತಗುಣಂ ಸಂಸಾರಸಾರೋದಯಂ ನಿಂದನ್ = ಉನ್ನತ ಗುಣಗಣಿಯೂ ಸಂಸಾರಸಾರವನ್ನು ಹೆಚ್ಚಿಸುವವನೂ ಆದ ಆದಿದೇವ ಚರಿಗೆಗಾಗಿ ನಿಂತ.

**ಗದ್ಯಾನುಸರಣ:** ಎದುರಲ್ಲಿ ಮಂಗಳವಾದ್ಯಗಳ ದನಿಯು ಮೊರೆಯುತ್ತಿತ್ತು; ಶುಭಕರ ವೇಷದಿಂದ ಕೂಡಿದ ವನಿತಾಸಮೂಹವು ಮಂಗಳಕರವಾದ ವಸ್ತುಗಳನ್ನೂ ಸಾಮಗ್ರಿಗಳನ್ನೂ ಹಿಡಿದು ನಿಂತಿತ್ತು; ಶ್ರೇಯಾಂಸನು ಅಸೀಮವಾದ ಭಕ್ತಿಯಿಂದ ಚರಿಗೆಗೆ ನಿಲ್ಲಲು ಬೇಡಿಕೊಂಡಾಗ, ಶ್ರೇಯಸ್ಸಿನ ಬಾಗಿಲಲ್ಲಿ ನಿಧಿಯು ನಿಲ್ಲುವ ಹಾಗೆ ಉನ್ನತ ಗುಣಗಣಿಯೂ ಸಂಸಾರಸಾರವನ್ನು ಹೆಚ್ಚಿಸುವವನೂ ಆದ ಆದಿದೇವ ಚರಿಗೆಗಾಗಿ ನಿಂತ.

**ಆದಿತೀರ್ಥಕರ್ತಾರಸಂ ಶ್ರದ್ಧಾದಿಸಪ್ತಗುಣಸಂಪನ್ನನಂ ಪ್ರತಿಗ್ರಹಾದಿನವವಿಧಪುಣ್ಯ ಪುರಸ್ಸರನುಮಾಗಿ ನಿಜೆಸಿ ಕರ್ಮಭೂಮಿಯ ಮೊದಲೊಳಾದಿದಾನತೀರ್ಥಪ್ರವರ್ತಕಂ ಶ್ರೇಯಾಂಸಂ ನಿಜಾಗ್ರಜನಪ್ಪ ಸೋಮಪ್ರಭಂ ಬೆರಸು ಕನಕಕಳಶದೊಳ್ ತೀವಿದಮೃತರಸಸಮಾನ ಧವಳೇಕ್ಷುರಸಧಾರೆ ಪುಣ್ಯಧಾರೆಯಂತೆ ಸೊಗಯಿಸುವಿನಂ ಸಮುತ್ತಾನೀಕೃತವಿಶಾಲ ಪಾಣಿಪಾತ್ರದೊಳೆಜಿವುದುಂ,**

**ಪದವಿಭಾಗ–ಅನ್ವಯ–ಅರ್ಥ:** ಆದಿತೀರ್ಥಕರ್ತಾರಸಂ = ಆದಿದೇವನನ್ನು, ಶ್ರದ್ಧಾ + ಆದಿಸಪ್ತಗುಣಸಂಪನ್ನನಂ = ಶ್ರದ್ಧೆಯೇ ಮೊದಲಾದ ಸಪ್ತಗುಣಗಳೆಂಬ ಸಂಪತ್ತನ್ನು ಹೊಂದಿದವನೂ, ಪ್ರತಿಗ್ರಹ + ಆದಿನವವಿಧಪುಣ್ಯಪುರಸ್ಸರನುಂ + ಆಗಿ = ಪ್ರತಿಗ್ರಹವೇ ಮುಂತಾದ ನವವಿಧಪುಣ್ಯದಿಂದ ಕೂಡಿದವನೂ, ಶ್ರೇಯಾಂಸಂ = (ಆದ) ಶ್ರೇಯಾಂಸನು. ನಿಜ + ಅಗ್ರಜನಪ್ಪ ಸೋಮಪ್ರಭಂ ಬೆರಸು = ತನ್ನ ಅಣ್ಣನಾದ ಸೋಮಪ್ರಭನೊಡನೆ ಕೂಡಿ, ನಿಜೆಸಿ = (ಚರಿಗೆಗೆ) ನಿಲ್ಲಿಸಿಕೊಂಡು, ಕರ್ಮಭೂಮಿಯ ಮೊದಲೊಳ್ = ಕರ್ಮಭೂಮಿಯ ಆರಂಭದಲ್ಲಿ, ಆದಿದಾನತೀರ್ಥಪ್ರವರ್ತಕಂ = ಮೊದಲ ದಾನಪ್ರವರ್ತಕನಾಗಿ. ಕನಕಕಳಶದೊಳ್ ತೀವಿದ = ಚಿನ್ನದ ಗಿಂಡಿಯಲ್ಲಿ ತುಂಬಿದ್ದ, ಅಮೃತರಸಸಮಾನ = ಅಮೃತರಸಕ್ಕೆ ಸಮಾನವಾದ, ಧವಳ + ಇಕ್ಷುರಸಧಾರೆ = ಬೆಳ್ಳಗಿನ ಕಬ್ಬಿನ ರಸದ ಎರೆಯುವಿಕೆಯು, ಪುಣ್ಯಧಾರೆಯಂತೆ ಸೊಗಯಿಸುವಿನಂ = ಪುಣ್ಯದ ಸೋನೆಯಂತೆ ಸೊಗಸುವ ಹಾಗೆ, ಸಮುತ್ತಾನೀಕೃತವಿಶಾಲ ಪಾಣಿಪಾತ್ರದೊಳ್ + ಎಜಿವುದುಂ = ಮೇಲ್ಮುಖವಾಗಿ ಎತ್ತಿ ಹಿಡಿದ ಅಗಲವಾದ (ಆದಿದೇವನ) ಬೊಗಸೆಯಲ್ಲಿ ಸುರಿಯಲು,

**ಗದ್ಯಾನುಸರಣ:** ಶ್ರದ್ಧೆಯೇ ಮೊದಲಾದ ಸಪ್ತಗುಣಗಳೆಂಬ ಸಂಪತ್ತನ್ನು ಹೊಂದಿದವನೂ, ಪ್ರತಿಗ್ರಹವೇ ಮುಂತಾದ ನವವಿಧಪುಣ್ಯದಿಂದ ಕೂಡಿದವನೂ ಆದ ಶ್ರೇಯಾಂಸನು ತನ್ನ ಅಣ್ಣನಾದ ಸೋಮಪ್ರಭನೊಡನೆ ಆದಿದೇವನನ್ನು ಚರಿಗೆಗೆ ನಿಲ್ಲಿಸಿಕೊಂಡು ಕರ್ಮಭೂಮಿಯ ಆರಂಭದಲ್ಲಿ ಮೊದಲ ದಾನಪ್ರವರ್ತಕನೆನಿಸಿದ; ಅಮೃತರಸಕ್ಕೆ ಸಮಾನವಾದ ಬೆಳ್ಳಗಿನ ಕಬ್ಬಿನ ರಸವನ್ನು ಚಿನ್ನದ ಗಿಂಡಿಯಲ್ಲಿ ತುಂಬಿಕೊಂಡು ಮೇಲ್ಮುಖವಾಗಿ ಎತ್ತಿ ಹಿಡಿದ ಅಗಲವಾದ ಆದಿದೇವನ ಬೊಗಸೆಯಲ್ಲಿ ಪುಣ್ಯದ ಸೋನೆಯಂತೆ ಸುರಿದ.

[**ವಿಶೇಷ ವಿಚಾರ:** ಶ್ರೇಯಾಂಸನು ಆದಿದೇವನಿಗೆ ಕಬ್ಬಿನ ರಸವನ್ನು ಧಾರೆ ಎರೆದಾಗ ಜೊತೆಯಲ್ಲಿ ಅಣ್ಣ ಸೋಮಪ್ರಭನೊಡನೆ ಅತ್ತಿಗೆ ಲಕ್ಷ್ಮೀಮತಿಯೂ ಇದ್ದುದಾಗಿ ಪೂರ್ವಪುರಾಣದಲ್ಲಿದೆ: ಪೂಪು. ೨೦. ೧೦೦]

**ವಸುಧಾರೆ ನಾಡೆಯುಂ ಕ**
**ಣ್ಣಸದಳಮಾಯ್ತಮರಕರಪರಿಚ್ಯುತಮೆತ್ತಂ**
**ಪೊಸಪೂವಿನ ಸರಿ ಪಿರಿದಾ**
**ಯ್ತಸದಳಮೆಸೆಪಲರದೊಂದು ಮೇಲ್ವಾಯ್ತಾಗಳ್** ೯೩

**ಪದವಿಭಾಗ–ಅನ್ವಯ–ಅರ್ಥ:** ಆಗಳ್ = ಆ ಹೊತ್ತಿಗೆ. ಅಮರಕರಪರಿಚ್ಯುತಂ ವಸುಧಾರೆ = ದೇವತೆಗಳ ಕೈಗಳಿಂದ ಬಿದ್ದ ರತ್ನಗಳ ಮಳೆಯು. ಕಣ್ಗೆ ನಾಡೆಯುಂ ಅಸದಳಂ + ಆಯ್ತು = = ನೋಡುವವರ ಕಣ್ಣುಗಳಿಗೆ ವಿಶೇಷವಾಗಿ ತೋರಿತು. ಪೊಸಪೂವಿನ ಸರಿ ಎತ್ತಂ ಪಿರಿದಾಯ್ತು = ಹೊಸ ಹೂಗಳ ಮಳೆಯು ಎಲ್ಲೆಲ್ಲಿಯೂ ಸುರಿಯಿತು. ಅಸದಳಂ ಎಸೆಪ + ಅಲರ್ + ಅದೊಂದು ಮೇಲ್ + ವಾಯ್ತು = ವಿಶೇಷವಾಗಿ ಹಿತಕರವೆನಿಸುವ ಗಾಳಿಯು ಬೀಸಿತು.

**ಗದ್ಯಾನುಸರಣ:** ಆ ಹೊತ್ತಿಗೆ, ದೇವತೆಗಳು ಸುರಿಸಿದ ರತ್ನಗಳ ಮಳೆಯು ನೋಡುವವರ ಕಣ್ಣುಗಳಿಗೆ ವಿಶೇಷವಾಗಿ ತೋರಿತು. ಹೊಸ ಹೂಗಳ ಮಳೆಯು ಎಲ್ಲೆಲ್ಲಿಯೂ ಸುರಿಯಿತು. ವಿಶೇಷ ಹಿತಕರವೆನಿಸುವ ಗಾಳಿಯು ಬೀಸಿತು.

**ಆನಂದದುಂದುಭಿಧ್ವನಿ**
**ತಾನೊಡನೊಡನೆಸೆಯೆ ನಬದೊಳೊಡನೆಸೆದುದಹೋ**
**ದಾನಿಯಹೋ ಪಾತ್ರಮಹೋ**
**ದಾನಮಹೋ ದೇಯಮೆಂಬ ದಿವ್ಯಧ್ವನಿಗಳ್** ೯೪

**ಪದವಿಭಾಗ–ಅನ್ವಯ–ಅರ್ಥ:** ಒಡನೆ + ಒಡನೆ ಆನಂದದುಂದುಭಿಧ್ವನಿ ತಾನ್ ಎಸೆಯೆ = ಅವುಗಳ ಜೊತೆಗೆ ತಕ್ಷಣವೇ ಆನಂದದುಂದುಭಿಯ ಧ್ವನಿಯೂ ಉಂಟಾಗಲು. ಒಡನೆ ಅಹೋ ದಾನಿ + ಅಹೋ ಪಾತ್ರಂ + ಅಹೋದಾನಂ + ಅಹೋ ದೇಯಂ + ಎಂಬ ದಿವ್ಯಧ್ವನಿಗಳ್ ನಭದೊಳ್ ಎಸೆದುದು = ಅವಲ್ಲದೆ ಆಹಾ ದಾನಿಯೇ ಆಹಾ ದಾನಿಯೇ ಆಹಾ ದಾನವೇ ಅಹಾ ದಾನವಸ್ತುವೇ ಎಂಬ ದೇವತೆಗಳ ಉದ್ಗಾರಗಳು ಆಗಸದಲ್ಲಿ ಹೊಮ್ಮಿದುವು.

**ಗದ್ಯಾನುಸರಣ:** ಅವುಗಳ ಜೊತೆಗೆ ತಕ್ಷಣವೇ ಆನಂದದುಂದುಭಿಯ ಧ್ವನಿಯೂ ಉಂಟಾಯಿತು; ಅಲ್ಲದೆ 'ಭಲೇ ದಾನಿಯೇ ಭಲೇ ದಾನಿಯೇ ಭಲೆ ದಾನವೇ ಭಲೇ ದಾನವಸ್ತುವೇ' ಎಂಬ ದೇವತೆಗಳ ಉದ್ಗಾರಗಳು ಆಗಸದಲ್ಲಿ ಹೊಮ್ಮಿದುವು.

**ವ॥ ಅಂತು ಕಾಯಸ್ಥಿತಿಯಂ ನಿರ್ವರ್ತಿಸಿ ತದನಂತರಮೆ, ಸೋಮಪ್ರಭ ಶ್ರೇಯಾಂಸರ್ ಭಕ್ತಿಯಿಂದೆಱಗಿದರ್ ತತ್ಪಾದಪದ್ಮಂಗಳೊಳ್. ಆಗಳ್**

**ಅರ್ಥ:** ಅಂತು ಕಾಯಸ್ಥಿತಿಯಂ ನಿರ್ವರ್ತಿಸಿ ತತ್ + ಅನಂತರಮೆ = ಹೀಗೆ ಶ್ರೇಯಾಂಸನು ದೇಹಸ್ಥಿತಿ (ದೇಹಪೋಷಣೆಗಾಗಿ ಆಹಾರದಾನ) ಯನ್ನು ಪೂರೈಸಿದ. ಸೋಮಪ್ರಭ ಶ್ರೇಯಾಂಸರ್ = ಆ ಅಣ್ಣತಮದಿರು. ತತ್ ಪಾದಪದ್ಮಂಗಳೊಳ್ = ಅವನ ಅಡಿದಾವರೆಗಳಲ್ಲಿ ಭಕ್ತಿಯಿಂದೆ + ಎಱಗಿದರ್ = ಭಕ್ತಿಯಿಂದ ನಮಸ್ಕರಿಸಿದರು. ಆಗಳ್ + ಆಗ

**ಅಕ್ಷಯದಾನಂ ನಿಮಗ**
**ಕ್ಕಕ್ಷುಣ್ಣಮಿದೆಂದು ಪರಮಮುನಿ ಪರಸೆ ಬೞಿ**
**ಕ್ಕಕ್ಷಯತೃತೀಯೆಯೆಂದಱಿ**
**ಳಕ್ಷಿತಿಜಂ ನೆಗೞ್ದುದಲ್ತೆ ತತ್ಪುಣ್ಯದಿಂ** ೯೫

ಪದವಿಭಾಗ-ಅನ್ವಯ-ಅರ್ಥ: ನಿಮಗೆ ಇದು ಅಕ್ಷಯದಾನಂ ಅಕ್ಷುಣ್ಣಂ ಅಕ್ಕೆ = ನಿಮ್ಮ ಈ ದಾನವು ಕೊರತೆಯಿಲ್ಲದ್ದಾಗಲಿ. ಎಂದು = ಪರಮಮುನಿ ಪರಸೆ = ಎಂದು ಆ ಮುನಿಶ್ರೇಷ್ಠನು ಹರಸಲು. ತತ್ + ಪುಣ್ಯದಿಂ ಅಖಿಳಕ್ಷಿತಿಜಂ ಬಜೆಕ್ಕೆ ಅಕ್ಷಯತೃತೀಯೆ + ಎಂದು ನೆಗಟ್ಟುದು + ಅಲ್ತೆ = ಈ ಪುಣ್ಯದಿಂದಾಗಿ ಮುಂದೆ ಇಡೀ ಜಗತ್ತು ಈ ದಿನವು ಅಕ್ಷಯ ತೃತೀಯೆ ಎಂದು ಪ್ರಸಿದ್ಧವಾಗಲಿದೆ.

**ಗದ್ಯಾನುಸರಣ:** 'ನಿಮ್ಮ ಈ ದಾನವು ಕೊರತೆಯಿಲ್ಲದ್ದಾಗಲಿ' ಎಂದು ಆ ಮುನಿಶ್ರೇಷ್ಠನು ಹರಸಿದ; ಅಲ್ಲದೆ. ಈ ಪುಣ್ಯದಿಂದಾಗಿ ಮುಂದೆ ಇಡೀ ಜಗತ್ತಿನಲ್ಲಿ ಈ ದಿನವು ಅಕ್ಷಯ ತೃತೀಯೆ ಎಂದು ಪ್ರಸಿದ್ಧವಾಗುತ್ತದೆ.

[**ವಿಶೇಷ ವಿಚಾರ:** ಪೂರ್ವಪುರಾಣದಲ್ಲಿ ಅಕ್ಷಯ ತೃತೀಯೆಯ ವಿಶೇಷದ ಪ್ರಸ್ತಾಪವಿಲ್ಲ.]

**ವ॥ ಅಂತು ಪರಸಿ ಪೋಜಿಮಟ್ಟು ಪೋಪ ಯತಿಪತಿಯಂ ಕ್ಷಿತಿಪತಿಗಳಿರ್ವರು ಮಗಲಲಾಜಿದೊಡನೊಡನೆ ಪೋಗಿ, ಕಿಜಿದಂತರಮಂ ಕಟೆಪಿ ಮಗುಟ್ದು ಬಂದು, ದಿವಿಜಕರೋನ್ಮುಕ್ತಮುಕ್ತಾದಿರತ್ನಂಗಳಂ ಪೊಟಿಲ್ಗೆಲ್ಲಂ ಗೋಸನೆವಿಡಿಸಿ ಕುಡೆ, ಭರತೇಶ್ವರನಕಂಪನಾದಿ ನೃಪಸಮೂಹಂ ಬೆರಸು ಬಂದು, ಆದಿ ದಾನ ಪ್ರವರ್ತಕನ್ನೆ ಪುಣ್ಯಭಾಜನನ್ನೆ ನೀನೆಯೆಂದು ಪೊಗಟ್ದು ಪೂಜಿಸಿ ಪೋದಂ.**

**ಅನ್ನೆಗಮಿತ್ತ ವೃಷಭಯೋಗೀಂದ್ರನುಂ ಸಕಳ ಜಿನಕಲ್ಪಿತಮೆಂಬಾಚರಣಮಂ ಕೈಕೊಂಡು ಯೋಗ ಯೋಗ್ಯಂಗಳೊಳ್ ಅವಹಿತ ಧ್ಯಾನಾಧೀನಮಾನಸನಾಗಿ ವಿಹಾರಿಸುತ್ತುಂ ಸಂವತ್ಸರಸಹಸ್ರಂಗಳಂ ಕಟೆಪಿ ಪುರಿಮತಾಳಪುರ ಬಹಿರ್ಭಾಗ ಶಕಟೋದ್ಯಾನವಟವಿಟಪಿಯ ಕೆಳಗೆ ವಿಶಾಳ ನಿರಾಕುಳ ನಿರ್ಜಂತುಕ ನಿರ್ಮಲ ಶಿಲಾಪಟ್ಟದ ಮೇಲೆ ನಿಬಿಡಬದ್ಧ ಪಲ್ಯಂಕಾಸನನುಂ ಪೂರ್ವಾನುಮುಖನುಮಾಗಿರ್ದಾಗಳ್,**

**ಪದವಿಭಾಗ-ಅನ್ವಯ-ಅರ್ಥ:** ಅಂತು ಪರಸಿ ಪೋಜಿಮಟ್ಟು ಪೋಪ ಯತಿಪತಿಯಂ ಕ್ಷಿತಿಪತಿಗಳ್ + ಇರ್ವರುಂ + ಅಗಲಲಾಜಿದೆ + ಒಡನೊಡನೆ ಪೋಗಿ = ಹಾಗೆ ಆಶೀರ್ವದಿಸಿ ಹೊರಟು ಹೋಗುವ ಆ ಯತಿಶ್ರೇಷ್ಠನನ್ನು ರಾಜರಿಬ್ಬರೂ ಬಿಟ್ಟಿರಲಾರದೆ ಅವನ ಜೊತೆಯಲ್ಲಿಯೇ ಹೋದರು. ಅಂತು ಮುನಿವೃಷಭನಂ ಕಿಜಿದು + ಅಂತರಮಂ ಕಟೆಪಿ = ಹೀಗೆ ಮುನಿಶ್ರೇಷ್ಠನನ್ನು ಸ್ವಲ್ಪ ದೂರ ಕಳುಹಿಸಿ, ಮಗುಟ್ದು ಬಂದು = ವಾಪಸು ಬಂದು, ದಿವಿಜಕರ + ಉನ್ಮುಕ್ತಮುಕ್ತಾ + ಆದಿರತ್ನಂಗಳಂ = ದೇವತೆಗಳ ಕೈಗಳಿಂದ ಚೆಲ್ಲಲ್ಪಟ್ಟ ಮುತ್ತು ಮುಂತಾದ ರತ್ನಗಳೆಲ್ಲವನ್ನೂ, ಪೊಟಿಲ್ಗೆಲ್ಲಂ ಗೋಸನೆವಿಡಿಸಿ ಕುಡೆ = ಊರಿನಲ್ಲೆಲ್ಲ ಡಂಗುರ ಹೊಡೆಸಿ ದಾನಮಾಡಲು, ಭರತೇಶ್ವರನ್ = ಭರತಚಕ್ರವರ್ತಿಯು, ಅಕಂಪನ + ಆದಿನೃಪಸಮೂಹಂ ಬೆರಸು ಬಂದು ಪೂಜಿಸಿ = ಅಕಂಪನ ಮುಂತಾದ ರಾಜರುಗಳೊಡನೆ ಬಂದು, ಆದಿ ದಾನಪ್ರವರ್ತಕನ್ನೆ = ನೀನು ಮೊದಲು ಆಹಾರದಾನವನ್ನು ಮಾಡಿದವನು, ನೀನೆ ಪುಣ್ಯಭಾಜನನ್ನೆ = ನೀನು ಪುಣ್ಯಕ್ಕೆ ಭಾಜನನಾಗಿದ್ದೀಯೆ. ಎಂದು ಪೊಗಟ್ದು ಪೂಜಿಸಿ ಪೋದಂ = ಎಂದು ಶ್ರೇಯಾಂಸನನ್ನು ಹೊಗಳಿ ಗೌರವ ತೋರಿಸಿ ಹೋದ.

ಅನ್ನೆಗಂ + ಇತ್ತ ವೃಷಭಯೋಗೀಂದ್ರನುಂ = ಆ ಹೊತ್ತಿಗೆ ಈ ಕಡೆ ವೃಷಭಯೋಗಿಯು. ಸಕಳ ಸಾವದ್ಯ + ಅತಿದೂರಂ + ಅಪ್ಪ = ಎಲ್ಲ ಪಾಪಗಳಿಂದ ಹೊರತಾದ. ಜಿನಕಲ್ಪಿತಂ + ಎಂಬ + ಆಚರಣಮಂ ಕೈಕೊಂಡು = ಜಿನಕಲ್ಪಿತ ಎಂಬ ವ್ರತವನ್ನು ಹಿಡಿದು. ಯೋಗಯೋಗ್ಯಂಗಳೊಳ್ ಅವಹಿತಧ್ಯಾನ + ಅಧೀನಮಾನಸನಾಗಿ = ಯೋಗ್ಯ ವಿಷಯಗಳನ್ನು ಕುರಿತ ಆಲೋಚನೆಯಲ್ಲಿ ಮನಸ್ಸನ್ನು ತೊಡಗಿಸಿ. ವಿಹಾರಿಸುತ್ತುಂ ಸಂವತ್ಸರಸಹಸ್ರಂಗಳಂ ಕಟಿಪಿ = ಪರ್ಯಟಣವನ್ನು ಕೈಗೊಂಡು ಸಾವಿರ ವರ್ಷಗಳನ್ನು ಕಳೆದು. ಪುರಿಮತಾಳಪುರಬಹಿರ್ಭಾಗ = ಪುರಿಮತಾಳ ಎಂಬ ಊರಿನ ಹೊರವಲಯದ. ಶಕಟ + ಉದ್ಯಾನವಟವಿಟಪಿಯ ಕೆಳಗೆ = ಶಕಟವೆಂಬ ಉದ್ಯಾನವನದಲ್ಲಿನ ಆಲದ ಮರದ ಕೆಳಗೆ. ವಿಶಾಳ ನಿರಾಕುಳ ನಿರ್ಜಂತುಕ ನಿರ್ಮಲ ಶಿಲಾಪಟ್ಟದ ಮೇಲೆ = ವಿಶಾಲವಾಗಿದ್ದ ಪ್ರಶಾಂತವೂ ಕೀಟರಹಿತವೂ ನಿರ್ಮಲವೂ ಆಗಿದ್ದ ಬಂಡೆಗಲ್ಲಿನ ಮೇಲೆ. ನಿಬಿಡಬದ್ಧಪಲ್ಯಂಕ + ಆಸನನುಂ ಪೂರ್ವಾನುಮುಖನುಂ + ಆಗಿರ್ದಾಗಳ್ = ಬಿಗಿಯಾದ ಪಲ್ಯಂಕಾಸನಲ್ಲಿ ಪೂರ್ವಕ್ಕೆ ಮುಖಮಾಡಿಕೊಂಡು ಕುಳಿತಿರುವಾಗ,

**ಗದ್ಯಾನುಸರಣ:** ಹಾಗೆ ಆಶೀರ್ವದಿಸಿ ಹೊರಟು ಹೋಗುವ ಆ ಯತಿಶ್ರೇಷ್ಠನನ್ನು ರಾಜರಿಬ್ಬರೂ ಬಿಟ್ಟಿರಲಾರದೆ ಅವನ ಜೊತೆಯಲ್ಲಿಯೇ ಹೋದರು. ಹೀಗೆ ಮುನಿಶ್ರೇಷ್ಠನನ್ನು ಸ್ವಲ್ಪ ದೂರ ಕಳುಹಿಸಿ ವಾಪಸು ಬಂದು, ದೇವತೆಗಳ ಕೈಗಳಿಂದ ಚೆಲ್ಲಲ್ಪಟ್ಟ ಮುತ್ತು ಮುಂತಾದ ರತ್ನಗಳೆಲ್ಲವನ್ನೂ ಊರಿನಲ್ಲೆಲ್ಲ ಡಂಗುರ ಹೊಡೆಸಿ ದಾನಮಾಡಲು, ಭರತಚಕ್ರವರ್ತಿಯು ಅಕಂಪನ ಮುಂತಾದ ರಾಜರುಗಳೊಡನೆ ಬಂದು, "ನೀನು ಮೊದಲು ಆಹಾರದಾನವನ್ನು ಮಾಡಿದವನು, ನೀನು ಪುಣ್ಯಕ್ಕೆ ಭಾಜನನಾಗಿದ್ದೀಯೆ" ಎಂದು ಶ್ರೇಯಾಂಸನನ್ನು ಹೊಗಳಿ ಗೌರವ ತೋರಿಸಿ ಹೋದ.

ಆ ಹೊತ್ತಿಗೆ ಈ ಕಡೆ, ವೃಷಭಯೋಗಿಯು ಎಲ್ಲ ಪಾಪಗಳಿಂದ ಹೊರತಾದ ಜಿನಕಲ್ಪಿತ ಎಂಬ ವ್ರತ ತೊಟ್ಟು ಯೋಗ್ಯ ವಿಷಯಗಳನ್ನು ಕುರಿತ ಆಲೋಚನೆಯಲ್ಲಿ ಮನಸ್ಸನ್ನು ತೊಡಗಿಸಿಕೊಂಡು ಪರ್ಯಟಣ ಮಾಡುತ್ತ ಸಾವಿರ ವರ್ಷಗಳನ್ನು ಕಳೆದ; ಆ ಬಳಿಕ, ಪುರಿಮತಾಳ ಎಂಬ ಊರಿನ ಹೊರವಲಯಕ್ಕೆ ಹತ್ತಿರವಿದ್ದ ಶಕಟವೆಂಬ ಉದ್ಯಾನವನದಲ್ಲಿನ ಆಲದ ಮರದ ಕೆಳಗಿನ ವಿಶಾಲವಾಗಿದ್ದ ಪ್ರಶಾಂತವೂ ಕೀಟರಹಿತವೂ ನಿರ್ಮಲವೂ ಆಗಿದ್ದ ಬಂಡೆಗಲ್ಲಿನ ಮೇಲೆ ಬಿಗಿಯಾದ ಪಲ್ಯಂಕಾಸನದಲ್ಲಿ ಪೂರ್ವಕ್ಕೆ ಮುಖಮಾಡಿಕೊಂಡು ಕುಳಿತುಕೊಂಡ.

**ಕರಣಗಣಂ ಕುಸುಂಗಿರೆ ಮನಂ ನೊಸಲಲ್ಲಿರೆ ಲೋಚನಂಗಳು**
**ಳ್ಳರೆಮುಗುಟ್ಟಿಂಬುವೆತ್ತಿರೆ ಕರದ್ವಯಪಲ್ಲವಮಂಕದೊಳ್ ಮರ**
**ಲ್ದಿರೆ ತನು ನಿಷ್ಪ್ರಕಂಪಮಿರೆ ದಂತಚಯಂ ಸಮನಾಗಿ ತನ್ನೊಳೊಂ**
**ದಿರೆ ಸಮಸಂದುದಾ ಪರಮಯೋಗಿಗೆ ಯೋಗನಿಯೋಗಭಾವನಂ** ೯೬

**ಪದವಿಭಾಗ-ಅನ್ವಯ-ಅರ್ಥ:** ಕರಣಗಣಂ ಕುಸುಂಗಿ + ಇರೆ = ಇಂದ್ರಿಯಗಳೆಲ್ಲ ಕುಗ್ಗಿರಲು, ಮನಂ ಸೊಸಲಲ್ಲಿ + ಇರೆ = ಮನಸ್ಸು ಹಣೆಯಲ್ಲಿ ಕೇಂದ್ರೀಕೃತವಾಗಿರಲು, ಲೋಚನಂಗಳ್ + ಉಳ್ + ಅಲರೆ ಮಗುಬ್ಬು + ಇಂಬುವೆತ್ತಿರೆ = ಕಣ್ಣುಗಳು ಸ್ವಲ್ಪವೇ ತೆರೆದುಕೊಂಡು ಮೊಗ್ಗಿನಂತೆ ಶೋಭಿಸಲು, ಕರದ್ವಯಪಲ್ಲವಂ + ಅಂಕದೊಳ್ ಮರಲ್ಬು + ಇರೆ = ಎರಡೂ ಕೈಗಳ ಬೆರಳುಗಳು ತೊಡೆಯ ಮೇಲೆ ಬಿಡಿಯಾಗಿರಲು, ತನು ನಿಃಪ್ರಕಂಪಂ + ಇರೆ = ದೇಹವು ಅಲುಗಾಡದೆ ಇರಲು, ದಂತಚಯಂ ಸಮನಾಗಿ ತನ್ನೊಳ್ + ಒಂದಿರೆ = ಹಲ್ಲುಸಾಲುಗಳು ಒಂದೇ ಸಮನೆ ಹೊಂದಿಕೆಯಾಗಿರಲು, ಆ ಪರಮಯೋಗಿಗೆ ಯೋಗನಿಯೋಗಭಾವನಂ ಸಮಸಂದುದು = ಆ ಶ್ರೇಷ್ಠ ಯೋಗಿಗೆ ಯೋಗದಲ್ಲಿ ತೊಡಗಿಕೊಳ್ಳುವ ಮನೋಭಾವವು ಉಂಟಾಯಿತು.

**ಗದ್ಯಾನುಸರಣ:** ಇಂದ್ರಿಯಗಳೆಲ್ಲ ಕುಗ್ಗಿ, ಮನಸ್ಸು ಹಣೆಯಲ್ಲಿ ಕೇಂದ್ರೀಕೃತವಾಗಿತ್ತು; ಕಣ್ಣುಗಳು ಸ್ವಲ್ಪವೇ ತೆರೆದುಕೊಂಡು ಮೊಗ್ಗಿನಂತೆ ಶೋಭಿಸುತ್ತಿರಲು, ಎರಡೂ ಕೈಗಳ ಬೆರಳುಗಳು ತೊಡೆಯ ಮೇಲೆ ಬಿಡಿಯಾಗಿ ನೆಲೆಸಿದ್ದುವು; ದೇಹವು ಕೊಂಚವೂ ಅಲುಗಾಡದಂತಿದ್ದು; ಹಲ್ಲುಸಾಲುಗಳು ಹೊಂದಿಕೆಯಾಗಿದ್ದುವು - ಇದರಿಂದಾಗಿ ಆ ಶ್ರೇಷ್ಠ ಯೋಗಿಗೆ ಯೋಗದಲ್ಲಿ ತೊಡಗಿಕೊಳ್ಳುವ ಮನೋಭಾವವು ಉಂಟಾಯಿತು.

**ವ॥ ಅಂತು ಯೋಗಯೋಗ್ಯಬಾಹ್ಯಸಾಮಗ್ರಿಯೊಳ್ ಮುನ್ನಮೆ ನೆಱೆದು ಪರಮಪದಮನೆ ಮನದೊಳ್ ನಿಱಿಸಿ ಸಿದ್ಧಪರಮೇಷ್ಠಿಗಳಷ್ಟಗುಣಂಗಳಂ ನೆನೆಯುತ್ತುಂ ಅಧ್ರುವಾದಿದ್ವಾದಶಾನುಪ್ರೇಕ್ಷಾಭಾವನಾಭಾವಿತಾಂತಃಕರಣನಾಗಿ ದರ್ಶನಮೋಹನೀಯತ್ರಿಕದ ನಿರ್ಮೂಲನದಿಂ ಕ್ಷಾಯಿಕಸಮ್ಯಗ್ದೃಷ್ಟಿಯಾಗಿ ಶುಕ್ಲಧ್ಯಾನಪರಿಣತನಾಗಿರ್ದು ಆಯುಃಕರ್ಮಮನುೞಿಪಿ ಮತ್ತಿನುೞಿದ ಕರ್ಮಂಗಳಂ ಅನುಕ್ರಮಂ ಕಿಡಿಸುತ್ತುಂ ಚರಮಸಮಯದೊಳ್ ಜ್ಞಾನಾವರಣಪಂಚಕಮುಮಂ ನಿರ್ಮೂಳಮಪ್ಪಂತೊರ್ಮೊದಲೆ ಕಿಡಿಸಿ ತದನಂತರ ಸಮಯದೊಳ್, ಫಾಲ್ಗುನ ಬಹುಳೈಕಾದಶಿಯೊಳಂ ಅನಂತಸುಖನಿಲಯಮಂ ಉತ್ತರಾಷಾಢದೊಳಂ,**

**ಪದವಿಭಾಗ-ಅನ್ವಯ-ಅರ್ಥ:** ಅಂತು ಯೋಗಯೋಗ್ಯಬಾಹ್ಯಸಾಮಗ್ರಿಯೊಳ್ = ಈ ಬಗೆಯಲ್ಲಿ ಯೋಗಕ್ಕೆ ಅನುಕೂಲಕರವಾದ ಬಾಹ್ಯವಸ್ತುಗಳಲ್ಲಿ, ಮುನ್ನಮೆ ನೆಱೆದು ಪರಮಪದಮನೆ ಮನದೊಳ್ ನಿಱಿಸಿ = ಮೊದಲು ಕೂಡಿ ಪರಮಪದವನ್ನೇ ಮನಸ್ಸಿನಲ್ಲಿ ನೆಲೆಗೊಳಿಸಿ, ಸಿದ್ಧಪರಮೇಷ್ಠಿಗಳ + ಅಷ್ಟಗುಣಂಗಳಂ ನೆನೆಯುತ್ತುಂ = ಸಿದ್ಧಪರಮೇಷ್ಠಿಗಳ ಎಂಟು ಗುಣಗಳನ್ನು ನೆನೆದು, ಅಧ್ರುವ + ಆದಿ ದ್ವಾದಶ + ಅನುಪ್ರೇಕ್ಷಾಭಾವನಾಭಾವಿತ + ಅಂತಃಕರಣನಾಗಿ = ಅಧ್ರುವ ಮುಂತಾದ ಹನ್ನೆರಡು ಅನುಪ್ರೇಕ್ಷೆಗಳ ಭಾವನೆಯಿಂದ ಮನಸ್ಸಿನಲ್ಲಿ ಯೋಚಿಸುತ್ತ, ದರ್ಶನ ಮೋಹನೀಯತ್ರಿಕದ ನಿರ್ಮೂಲನದಿಂ = ಮೂರು ದರ್ಶನಮೋಹನೀಯವನ್ನು ನಿರ್ಮೂಲಮಾಡಿ, ಕ್ಷಾಯಿಕಸಮ್ಯಕ್ + ದೃಷ್ಟಿಯಾಗಿ = ನಿರ್ಮಲವಾದ ದೃಷ್ಟಿಯನ್ನು ಹೊಂದಿ, ಶುಕ್ಲಧ್ಯಾನಪರಿಣತನಾಗಿರ್ದು = ಶುಕ್ಲಧ್ಯಾನದಲ್ಲಿ ನಿಷ್ಣಾತನಾಗಿದ್ದುಕೊಂಡು,

ಆಯುಃಕರ್ಮಮನ್ + ಉಟೆಪಿ = ಆಯುಸ್ಸಿನ ಕರ್ಮವನ್ನು ಉಳಿಸಿಕೊಂಡು, ಮತ್ತಿನ + ಉಟೆದ ಕರ್ಮಂಗಳಂ = ಹೆಚ್ಚಿನ ಉಳಿದ ಕರ್ಮಗಳನ್ನು, ಅನುಕ್ರಮಂ ಕಿಡಿಸುತ್ತುಂ = ಕ್ರಮಕ್ರಮವಾಗಿ ನಾಶಮಾಡುತ್ತ, ಚರಮಸಮಯದೊಳ್ ಜ್ಞಾನಾವರಣ ಪಂಚಕಮುಮಂ = ಕೊನೆಯ ಕ್ಷಣದಲ್ಲಿ ಮತಿ ಶ್ರುತ ಅವಧಿ ಮನಃಪರ್ಯಯ ಮತ್ತು ಕೇವಲ ಎಂಬ ಐದು ಜ್ಞಾನಗಳೆಂಬ ಐದು ಜ್ಞಾನಾವರಣಗಳನ್ನೂ, ಅಂತರಾಯಪಂಚಕಮುಂ = ದಾನ ಲಾಭ ಭೋಗ ಉಪಭೋಗ ಮತ್ತು ವೀರ್ಯ ಎಂಬ ಐದು ಅಂತರಾಯಗಳನ್ನೂ, ನಿರ್ಮೂಳಂ + ಅಪ್ಪಂತು + ಒರ್ಮೊದಲೆ ಕಿಡಿಸಿ ತದನಂತರ ಸಮಯದೊಳ್ = ಬುಡಸಮೇತ ನಾಶವಾಗುವಂತೆ ಮಾಡಿಕೊಂಡು ಆ ಸಮಯದ ಬಳಿಕ, ಫಾಲ್ಗುನ ಬಹುಳ +ಏ ಕಾದಶಿಯೊಳಂ ಅನಂತಸುಖನಿಲಯಮಂ ಉತ್ತರಾಷಾಢದೊಳಂ = ಫಾಲ್ಗುಣ ಮಾಸದ ಕೃಷ್ಣಪಕ್ಷದ ಏಕಾದಶಿಯ ಅನಂತಸುಖಕ್ಕೆ ಆಗರವಾದ ಉತ್ತರಾಷಾಢ ನಕ್ಷತ್ರದಲ್ಲಿ,

**ಗದ್ಯಾನುಸರಣ:** ಈ ಬಗೆಯಲ್ಲಿ ಯೋಗಕ್ಕೆ ಅನುಕೂಲಕರವಾದ ಬಾಹ್ಯವಸ್ತುಗಳಲ್ಲಿ ಮೊದಲು ಕೂಡಿ ಪರಮಪದವನ್ನೇ ಮನಸ್ಸಿನಲ್ಲಿ ನೆಲೆಗೊಳಿಸಿಕೊಂಡ; ಸಮ್ಯಕ್ತ್ವ ಸಮ್ಯಕ್‌ಜ್ಞಾನ ಸಮ್ಯಕ್‌ದರ್ಶನ ಅನಂತವೀರ್ಯ ಸೂಕ್ಷ್ಮತ್ವ ಗುರುಲಘುತ್ವ ಅವಗಾಹ ವ್ಯಾಬಾಧ ಎನ್ನುವ ಸಿದ್ಧಪರಮೇಷ್ಠಿಗಳ ಎಂಟು ಗುಣಗಳನ್ನು ನೆನೆದು. ಅಧ್ರುವ ಮುಂತಾದ ಹನ್ನೆರಡು ಅನುಪ್ರೇಕ್ಷೆಗಳ ಭಾವನೆಯಿಂದ ಮನಸ್ಸಿನಲ್ಲಿ ಯೋಚಿಸುತ್ತ, ಕ್ರಮವಾಗಿ ಮಿಥ್ಯಾತ್ವ ಸಮ್ಯಕ್‌ಮಿಥ್ಯಾತ್ವ ಮತ್ತು ಸಮ್ಯಕ್ತ್ವಪ್ರಕೃತಿ ಎಂಬ ಮೂರು ದರ್ಶನಮೋಹನೀಯವನ್ನು ನಿರ್ಮೂಲಮಾಡಿದ; ನಿರ್ಮಲವಾದ ದೃಷ್ಟಿಯನ್ನು ಹೊಂದಿ, ಶುಕ್ಲಧ್ಯಾನದಲ್ಲಿ ನಿಷ್ಣಾತನಾಗಿದ್ದುಕೊಂಡು, ಆಯುಸ್ಸಿನ ಕರ್ಮವನ್ನು ಉಳಿಸಿಕೊಂಡು ಹೆಚ್ಚಿನ ಉಳಿದ ಕರ್ಮಗಳನ್ನು, ಕ್ರಮಕ್ರಮವಾಗಿ ನಾಶಮಾಡಿದ; ಚರಮಸ್ಥಿತಿಯಲ್ಲಿ ಕೊನೆಯ ಕ್ಷಣದಲ್ಲಿ ಮತಿ ಶ್ರುತ ಅವಧಿ ಮನಃಪರ್ಯಯ ಮತ್ತು ಕೇವಲ ಎಂಬ ಐದು ಜ್ಞಾನಾವರಣಗಳನ್ನೂ, ಚಕ್ಷು ಅಚಕ್ಷು ಅವಧಿ ಮತ್ತು ಕೇವಲ ಎಂಬ ನಾಲ್ಕು ದರ್ಶನಾವರಣಗಳನ್ನೂ, ದಾನ ಲಾಭ ಭೋಗ ಉಪಭೋಗ ಮತ್ತು ವೀರ್ಯ ಎಂಬ ಐದು ಅಂತರಾಯಗಳನ್ನೂ, ಬುಡಸಮೇತ ನಾಶಮಾಡಿಕೊಂಡ; ಆ ಬಳಿಕ, ಫಾಲ್ಗುಣ ಮಾಸದ ಕೃಷ್ಣಪಕ್ಷದ ಏಕಾದಶಿಯ ಅನಂತಸುಖಕ್ಕೆ ಆಗರವಾದ ಉತ್ತರಾಷಾಢ ನಕ್ಷತ್ರದಲ್ಲಿ,

**ಅಳಜೆ ಕಿಡೆ ಘಾತಿಗಳ್ ದಾ**
**ನಲಾಭಭೋಗೋಪಭೋಗವೀರ್ಯಂಗಳೊಳ**
**ಗ್ಗಳಿಸಿದನಂತಚತುಷ್ಟಯ**
**ವಿಳಾಸಿ ಕೈವಲ್ಯಲಕ್ಷ್ಮಿಯಂ ಯತಿ ಪಡೆದಂ** ೯೭

**ಪದವಿಭಾಗ–ಅನ್ವಯ–ಅರ್ಥ:** ಘಾತಿಗಳ್ ಅಳಜೆ ಕಿಡೆ = ಘಾತಿ ಕರ್ಮಗಳು ಭಯದಿಂದ ನಾಶವಾಗಲು, ದಾನ ಲಾಭ ಭೋಗ + ಉಪಭೋಗವೀರ್ಯಂಗಳೊಳ್ = ದಾನ ಲಾಭ ಭೋಗ ಉಪಭೋಗ ಮತ್ತು ವೀರ್ಯಗಳೆಂಬ

(ಅಂತರಾಯಗಳನ್ನು), ಅಗ್ಗಳಿಸಿದ + ಅನಂತಚತುಷ್ಟಯ ವಿಳಾಸಿ = ಮೀರಿದ ಅನಂತಚತುಷ್ಟಯಗಳ ವೈಭವದಿಂದ ಕೂಡಿ. ಕೈವಲ್ಯಲಕ್ಷ್ಮಿಯಂ ಯತಿ ಪಡೆದಂ = ಕೈವಲ್ಯಸಂಪತ್ತನ್ನು ಮುನಿವರನು ಹೊಂದಿದ.

**ಗದ್ಯಾನುಸರಣ:** ಘಾತಿ ಕರ್ಮಗಳು ಭಯದಿಂದ ಓಡಿಹೋದುವು, ದಾನ ಲಾಭ ಭೋಗ ಉಪಭೋಗ ಮತ್ತು ವೀರ್ಯಗಳೆಂಬ ಅಂತರಾಯಗಳನ್ನು ಮೀರಿ ಮುನಿವರನು ಅನಂತಚತುಷ್ಟಯಗಳ ವೈಭವದಿಂದ ಕೂಡಿದ ಕೈವಲ್ಯಸಂಪತ್ತನ್ನು ಹೊಂದಿದ.

[**ವಿಶೇಷ ವಿಚಾರ:** ಈ ಭಾಗದ ವರ್ಣನೆ ಪೂರ್ವಪುರಾಣದಲ್ಲಿ ಐವತ್ತಮೂರು ಶ್ಲೋಕಗಳಲ್ಲಿದೆ; ಪೂಪು, ೨೦. ೨೨೧-೨೭೩. ಅಲ್ಲದೆ ಮುಂದಿನ ಪರ್ವದ ಆರಂಭದಲ್ಲಿ ಶ್ರೇಣಿಕನು ಗೌತಮಮುನಿಯನ್ನು ಕುರಿತು 'ಭಗವನ್ ಬೋದ್ಧುಮಿಚ್ಛಾಮಿ ತ್ವತ್ತೋಧ್ಯಾನಸ್ಯ ವಿಸರಂ' (ಪೂಪು, ೨೧. ೧) ಎಂದು ಕೇಳಿದುದಾಗಿಯೂ ಮುನಿಯು ಅದಕ್ಕೆ ೨೬೮ ಶ್ಲೋಕಗಳಲ್ಲಿ ಉತ್ತರಿಸಿದುದಾಗಿಯೂ ಇದೆ; ಆದರೆ ಅದನ್ನೆಲ್ಲ ಪಂಪ ಕೈಬಿಟ್ಟಿದ್ದಾನೆ. ನಮ್ಮ ಕವಿ 'ಹಿತಮಿತಮೃದುವಚನ'ನಲ್ಲವೇ!]

**ಧ್ಯಾನಮರೀಚಿಯಿಂ ಬೆದಱೆ ಘಾತಿತಮಸ್ತಮಮೆಯ್ದೆ ಭವ್ಯಸಂ**
**ತಾನಸರೋಜರಾಜಿಗಲರ್ವಾದರಮಾದಮಳುಂಬಮಾಗೆ ವೈ**
**ಮಾನಿಕಚಕ್ರವಾಕದೊಲವುಣ್ಮಿರೆ ಚೆಲ್ವೆಸೆದತ್ತು ಕೇವಲ**
**ಜ್ಞಾನದಿನೇಶಬಿಂಬದ ಪೊದಳ್ದುದಯಂ ವೃಷಭೋದಯಾದ್ರಿಯೊಳ್** ೯೮

**ಪದವಿಭಾಗ-ಅನ್ವಯ-ಅರ್ಥ:** ಧ್ಯಾನಮರೀಚಿಯಿಂ ಬೆದಱೆ = ಧ್ಯಾನದ ಬೆಳಕಿಗೆ ಹೆದರಿ. ಘಾತಿತಮಃ + ತಮಂ + ಎಯ್ದೆ = ಘಾತಿಕರ್ಮಗಳೆಂಬ ಕತ್ತಲ ರಾಶಿಯು ದೂರ ಸರಿಯಲು, ಭವ್ಯಸಂತಾನಸರೋಜರಾಜಿಗೆ + ಅಲರ್ವ + ಆದರಂ + ಆದಂ + ಅಳುಂಬಂ + ಆಗೆ = ಭವ್ಯಸಮೂಹವೆಂಬ ಕಮಲಗಳಿಗೆ ಅರಳುವ ಸಂತಸವು ವೆಗ್ಗಳವಾಗಲು, ವೈಮಾನಿಕಚಕ್ರವಾಕದ + ಒಲವು + ಉಣ್ಮಿರೆ = ದೇವತೆಗಳೆಂಬ ಚಕ್ರವಾಕ ಪಕ್ಷಿಗಳ ಪ್ರೀತಿಯು ಉಕ್ಕಲು. ವೃಷಭ + ಉದಯ + ಅದ್ರಿಯೊಳ್ ಪೊದಳ್ದ = ವೃಷಭನೆಂಬ ಮೂಡುದಿಕ್ಕಿನಲ್ಲಿ ಅರಳಿದ. ಕೇವಲಜ್ಞಾನದಿನೇಶಬಿಂಬದ ಉದಯಂ ಚೆಲ್ವು + ಎಸೆದತ್ತು = ಕೇವಲಜ್ಞಾನ ಎಂಬ ಸೂರ್ಯಮಂಡಲದ ಉದಯವು ಸೊಗಸಾಯಿತು.

**ಗದ್ಯಾನುಸರಣ:** ಧ್ಯಾನದ ಬೆಳಕಿಗೆ ಹೆದರಿ ಘಾತಿಕರ್ಮಗಳೆಂಬ ಕತ್ತಲ ರಾಶಿಯು ದೂರ ಸರಿಯಿತು; ಭವ್ಯಸಮೂಹವೆಂಬ ಕಮಲಗಳಿಗೆ ಅರಳುವ ಸಂತಸವು ವೆಗ್ಗಳವಾಯಿತು; ದೇವತೆಗಳೆಂಬ ಚಕ್ರವಾಕ ಪಕ್ಷಿಗಳ ಪ್ರೀತಿಯು ಉಕ್ಕಿತು; ಹೀಗೆ ವೃಷಭನೆಂಬ ಮೂಡುದಿಕ್ಕಿನಲ್ಲಿ ಅರಳಿದ ಕೇವಲಜ್ಞಾನ ಎಂಬ ಸೂರ್ಯಮಂಡಲದ ಉದಯವು ಸೊಗಸಾಯಿತು.

**ವ॥ ಆ ಪ್ರಸ್ತಾವದೊಳ್,**

**ಅರ್ಥ:** ಆ ಪ್ರಸ್ತಾವದೊಳ್ = ಆ ಸಂದರ್ಭದಲ್ಲಿ.

ಸುರಪುಷ್ಪಾಸಾರದಿಂದಂ ಸುರಗಣಪಟಹಸ್ಫುರದ್ಧ್ವಾನದಿಂದಂ
ಸುರಕಾಂತಾರಾಗದಿಂದಂ ಸುರವಿರಚಿತಮಂದಾನಿಳಾಂದೋಳದಿಂದಂ
ಸುರವಂದಿಸ್ತೋತ್ರದಿಂದಂ ದೆಸೆ ಗಗನತಳಂ ತೀವಿ ತಳ್ಳಂಕಗುಟ್ಟು
ತ್ತಿರೆಯುಂ ಕೈವಲ್ಯಬೋಧೋದಯಮಹಿಮೆ ಜಗಕ್ಕಾದುದಾಶ್ಚರ್ಯಭೂತಂ ೯೯

**ಪದವಿಭಾಗ–ಅನ್ವಯ–ಅರ್ಥ:** ಸುರಪುಷ್ಪ + ಆಸಾರದಿಂದಂ = ದೇವತೆಗಳ ಪುಷ್ಪವೃಷ್ಟಿಯಿಂದಲೂ, ಸುರಗಣಪಟಹಸ್ಫುರತ್ + ಧ್ವಾನದಿಂದಂ = ದೇವಭೇರಿಗಳಿಂದ ಹೊರಟ ಧ್ವನಿಯಿಂದಲೂ, ಸುರಕಾಂತಾರಾಗದಿಂದಂ = ದೇವವನಿತೆಯರ ಸಂತಸದಿಂದಲೂ, ಸುರವಿರಚಿತ ಮಂದಾನಿಳ + ಆಂದೋಳದಿಂದಂ = ದೇವತೆಗಳ ಉಂಟುಮಾಡಿದ ತಂಗಾಳಿಯ ಶೀಡುಪಿಕೆಯಿಂದಲೂ, ಸುರವಂದಿಸ್ತೋತ್ರದಿಂದಂ = ದೇವವಂದಿಗಳ ಸ್ತುತಿಧಾರೆಯಿಂದಲೂ, ದೆಸೆ ಗಗನತಳಂ ತೀವಿ ತಳ್ಳಂಕುಗುಟ್ಟುತ್ತಿರೆಯುಂ = ದಿಕ್ಕುಗಳೂ ಆಕಾಶಮಂಡಲವೂ ತುಂಬಿ ತುಳುಕುತ್ತಿರಲು, ಕೈವಲ್ಯಬೋಧ + ಉದಯಮಹಿಮೆ ಜಗಕ್ಕೆ ಆಶ್ಚರ್ಯಭೂತಂ ಆದುದು = ಕೇವಲಜ್ಞಾನದ ಪ್ರಾಪ್ತಿಯ ಮಹಿಮೆಯು ಜಗತ್ತಿಗೆ ಆಶ್ಚರ್ಯವನ್ನುಂಟುಮಾಡಿತು.

**ಗದ್ಯಾನುಸರಣ:** ದೇವತೆಗಳ ಪುಷ್ಪವೃಷ್ಟಿಯಿಂದ, ದೇವಭೇರಿಗಳಿಂದ ಹೊರಟ ಧ್ವನಿಯಿಂದ, ದೇವವನಿತೆಯರ ಸಂತಸದಿಂದ, ದೇವತೆಗಳ ಉಂಟುಮಾಡಿದ ತಂಗಾಳಿಯ ತೀಟದಿಂದ, ದೇವವಂದಿಗಳ ಸ್ತುತಿಧಾರೆಯಿಂದ ದಿಕ್ಕುಗಳೂ ಆಕಾಶಮಂಡಲವೂ ತುಂಬಿ ತುಳುಕಿದುವು; ಹೀಗೆ ಪರಮನ ಕೇವಲಜ್ಞಾನಪ್ರಾಪ್ತಿಯ ಮಹಿಮೆಯು ಜಗತ್ತಿಗೆ ಆಶ್ಚರ್ಯವನ್ನುಂಟುಮಾಡಿತು.

**ವ॥ ಆಗಳ್ ಅಚಿರರುಚಿರ ನಿಜಾಂಗರುಚಿಗಳೊಳಂ ಅನೇಕಾಳಂಕಾರರತ್ನಪ್ರಭಾಪ್ರಸರದೊಳಂ ಗಗನತಳಮನಳಂಕರಿಸಿ ಸೌಧರ್ಮೇಂದ್ರನಿಂದ್ರಾಣೀಸಮೇತನ್ ಅನೇಕಕಲ್ಪಾಮರೇಂದ್ರಪರಿವೃತನಾಗಿ ಬರೆ,**

**ಪದವಿಭಾಗ–ಅನ್ವಯ–ಅರ್ಥ:** ಆಗಳ್ = ಆಗ, ಅಚಿರರುಚಿರ + ನಿಜ + ಅಂಗರುಚಿಗಳೊಳಂ = ಅತ್ಯಂತ ಕಾಂತಿಮಯವಾದ ದೇಹಪ್ರಭೆಯಿಂದಲೂ, ಅನೇಕ + ಅಳಂಕಾರರತ್ನಪ್ರಭಾಪ್ರಸರದೊಳಂ = ನಾನಾ ರತ್ನಗಳ ಕಿರಣಗಳ ಹರಡುವಿಕೆಯಿಂದಲೂ, ಗಗಮತಳಮನ್ + ಅಳಂಕರಿಸಿ = ಗಗನಮಂಡಲವನ್ನು ಅಲಂಕರಿಸಿದ ಸೌಧರ್ಮೇಂದ್ರನ್ + ಇಂದ್ರಾಣೀಸಮೇತಂ = ಸೌಧರ್ಮೇಂದ್ರನು ಶಚೀದೇವಿಯ ಜೊತೆಗೆ, ಅನೇಕಕಲ್ಪ + ಅಮರೇಂದ್ರಪರಿವೃತನಾಗಿ ಬರೆ = ವಿವಿಧ ಕಲ್ಪಗಳ ಇಂದ್ರರುಗಳ ಜೊತೆಯಲ್ಲಿ ಬರಲು,

**ಗದ್ಯಾನುಸರಣ:** ಆಗ, ಅತ್ಯಂತ ಕಾಂತಿಮಯವಾದ ದೇಹಪ್ರಭೆಯಿಂದಲೂ, ನಾನಾ ರತ್ನಗಳ ಕಿರಣಗಳ ಹರಡುವಿಕೆಯಿಂದಲೂ ಗಗನಮಂಡಲವನ್ನು ಅಲಂಕರಿಸಿದ ಸೌಧರ್ಮೇಂದ್ರನು ಶಚೀದೇವಿಯ ಜೊತೆಗೆ ಬಂದ; ಅವನೊಡನೆ ವಿವಿಧ ಕಲ್ಪಗಳ ಇಂದ್ರರುಗಳೂ ಬಂದರು.

**ಹಾರಾಂಶುಸ್ವಚ್ಛನೀರಂ ಸುರಯುವತಿಮುಖಾಂಭೋಜನೇತ್ರೋತ್ಪಳಶ್ರೀ**
**ಸಾರಂ ಕಾಶ್ಮೀರರಾಗಾರುಣಿತಕುಚರಥಾಂಗಾಭಿಧಾನೋಜ್ಜ್ವಳಂ ನೀ**
**ಹಾರಪ್ರಸ್ಪರ್ಧಿಚಂಚಚ್ಚಮರಜಕಳಹಂಸಾಸ್ಪದಂ ಚೆಲ್ವನಿತ್ತ**
**ತ್ತೋರಂತಂಭೋದಮಾರ್ಗಂ ತಿಳಿದ ಕೊಳದವೋಲ್ ದೇವಸಂದೋಹದಿಂದಂ**
೧೦೦

**ಪದವಿಭಾಗ–ಅನ್ವಯ–ಅರ್ಥ:** ಹಾರ + ಅಂಶು + ಸ್ವಚ್ಛನೀರಂ = ಹಾರಗಳ ಕಿರಣಗಳೇ ತಿಳಿನೀರು, ಸುರಯುವತಿಮುಖ + ಅಂಭೋಜ = ದೇವಯುವತಿಯರ ಮುಖಕಮಲಗಳು, ನೇತ್ರ + ಉತ್ಪಳಶ್ರೀಸಾರಂ = ಮತ್ತು ಕಣ್ಣುಗಳೆಂಬ ನೈದಿಲೆಗಳೇ ಅದರ ಸಾರ, ಕಾಶ್ಮೀರರಾಗ + ಅರುಣಿತ = ಕುಂಕುಮಕೇಸರಿಯಿಂದ ಕೆಂಪಾದ, ಕುಚರಥಾಂಗ + ಅಭಿಧಾನ + ಉಜ್ಜ್ವಳಂ = ಮೊಲೆಗಳೆಂಬ ಚಕ್ರವಾಕಗಳಿಂದ ಹೊಳೆಯುತ್ತಿದ್ದ, ನೀಹಾರಪ್ರಸ್ಪರ್ಧಿ + ಚಂಚತ್ + ಚಮರಜ + ಕಳಹಂಸ + ಆಸ್ಪದಂ = ಹಿಮಕ್ಕೆ ಸರಿದೊರೆಯಾಗಿ ಬೆಳ್ಳಗಿದ್ದ ಓಲಾಡುವ ಚಾಮರಗಳೇ ರಾಜಹಂಸಗಳ ಆಶ್ರಯ, ಎಂಬಂತೆ ದೇವಸಂದೋಹದಿಂದಂ = ದೇವಸಮೂಹದಿಂದ, ಅಂಭೋದಮಾರ್ಗಂ = ಮೋಡದ ದಾರಿಯಾದ ಆಗಸವು, ತಿಳಿದ ಕೊಳದವೋಲ್ ಓರಂತೆ ಚೆಲ್ವನ್ + ಇತ್ತತ್ತು = ತಿಳಿನೀರಿನ ಕೊಳದಂತೆ ಸುಂದರವಾಯಿತು.

**ಗದ್ಯಾನುಸರಣ:** ಹಾರಗಳ ಕಿರಣಗಳೇ ತಿಳಿನೀರು, ದೇವಯುವತಿಯರ ಮುಖಕಮಲಗಳು ಮತ್ತು ಕಣ್ಣುಗಳೆಂಬ ನೈದಿಲೆಗಳೇ ಅದರ ಸಾರ, ಹಚ್ಚಿಕೊಂಡ ಕುಂಕುಮಕೇಸರಿಯಿಂದ ಕೆಂಪಾದ ಅವರ ಮೊಲೆಗಳೆಂಬ ಚಕ್ರವಾಕಗಳಿಂದ ಹೊಳೆಯುತ್ತಿದ್ದ ಹಾಗೂ ಹಿಮಕ್ಕೆ ಸರಿದೊರೆಯಾಗಿ ಬೆಳ್ಳಗೆ ಓಲಾಡುತ್ತಿದ್ದ ಚಾಮರಗಳೇ ರಾಜಹಂಸಗಳ ಆಶ್ರಯ – ಎಂಬಂತೆ ದೇವಸಮೂಹದಿಂದಾಗಿ ಆಗಸವು ತಿಳಿನೀರಿನ ಕೊಳದಂತೆ ಸುಂದರವಾಯಿತು.

**ಜಯಜಯ ನಂದ ನಂದ ಪರಮೇಶ್ವರ ಪಾಪವಿನಾಶ ಲೋಕವಿ**
**ಸ್ಮಯಕರ ಶಂಭು ಶಂಕರ ಮನೋಜಭಯಂಕರ ಭವ್ಯಬಂಧು ನಿ**
**ಮ್ಮಯ ದಯೆಯಿಂದಮೀ ಭವಸಮುದ್ರಮನೀಸುವೆವೆಂಬ ದೇವಕೋ**
**ಟಿಯ ನಿನದಂ ಪಳಂಚಲೆಯೆ ಘೂರ್ಣಿಸಿದತ್ತು ಸಮಸ್ತದಿಕ್ತಟಂ** ೧೦೧

**ಪದವಿಭಾಗ–ಅನ್ವಯ–ಅರ್ಥ:** ನಂದ ನಂದ ಜಯಜಯ = ನಂದ ನಂದನೇ ನಿನಗೆ ಜಯವಾಗಲಿ, ಪರಮೇಶ್ವರ ಪಾಪವಿನಾಶ ಲೋಕವಿಸ್ಮಯಕರ = ಅತ್ಯಂತ ಶ್ರೇಷ್ಠ ಒಡೆಯನೇ ಪಾಪವನ್ನು ಹೋಗಲಾಡಿಸುವವನೇ ಲೋಕಕ್ಕೆ ಅಚ್ಚರಿಯಾಗಿರುವವನೇ, ಶಂಭು ಶಂಕರ ಮನೋಜಭಯಂಕರ = ಮಂಗಳಮಯನೇ ಶುಭಕರನೇ ಕಾಮವಿರೋಧಿಯೇ, ಭವ್ಯಬಂಧು = ಭವ್ಯಜನರ ನಂಟನೇ, ನಿಮ್ಮಯ ದಯೆಯಿಂದಂ + ಈ ಭವಸಮುದ್ರಮನ್ + ಈಸುವೆವು + ಎಂಬ ದೇವಕೋಟಿಯ ನಿನದಂ = ನಿನ್ನ ಕೃಪೆಯಿಂದಾಗಿ ಈ ಸಂಸಾರಸಾಗರವನ್ನು ದಾಟುತ್ತೇವೆ ಎಂಬ

ಅಸಂಖ್ಯಾತ ದೇವತೆಗಳ ಘೋಷವು. ಪಳಂಚಲೆಯೆ ಸಮಸ್ತದಿಕ್ತಟಂ ಘೂರ್ಣಿಸಿದತ್ತು = ಹಬ್ಬಿ ದಿಗಂತಗಳಲ್ಲಿ ಭೋರ್ಗರೆಯಿತು.

**ಗದ್ಯಾನುಸರಣ:** 'ನಂದ ನಂದನೇ ನಿನಗೆ ಜಯವಾಗಲಿ; ಅತ್ಯಂತ ಶ್ರೇಷ್ಠ ಒಡೆಯನೇ, ಪಾಪವನ್ನು ಹೋಗಲಾಡಿಸುವವನೇ, ಲೋಕಕ್ಕೆ ಅಚ್ಚರಿಯಾಗಿರುವವನೇ, ಮಂಗಳಮಯನೇ, ಶುಭಕರನೇ, ಕಾಮವಿರೋಧಿಯೇ, ಭವ್ಯಜನರ ನಂಟನೇ, ನಿನ್ನ ಕೃಪೆಯಿಂದಾಗಿ ಈ ಸಂಸಾರಸಾಗರವನ್ನು ದಾಟುತ್ತೇವೆ' ಎಂಬ ಅಸಂಖ್ಯಾತ ದೇವತೆಗಳ ಘೋಷವು ಹಬ್ಬಿ ದಿಗಂತಗಳಲ್ಲಿ ಭೋರ್ಗರೆಯಿತು.

[**ವಿಶೇಷ ವಿಚಾರ:** ಶಂಭು ಶಂಕರ ಮನೋಜಭಯಂಕರ = ಜಿನನನ್ನು ಸ್ತುತಿಸುವ ಈ ಮಾತುಗಳು ಶಿವನಿಗೂ ಅನ್ವಯಿಸುತ್ತವೆ; ಶಿವ ಕಾಮನನ್ನು ಬೂದಿಮಾಡಿದನೆಂಬ ಪೌರಾಣಿಕ ಕಲ್ಪನೆಗೆ ಬದಲಾಗಿ ಜೈನರಲ್ಲಿ ಜಿನನು ಮಾತ್ರವೇ ಕಾಮನನ್ನು ಗೆದ್ದವನು ಎಂಬ ಚಿತ್ರವಿದೆ; ಹದಿಮೂರನೆಯ ಶತಮಾನದಲ್ಲಿನ ಬಂದ ಆಂಡಯ್ಯನ 'ಕಬ್ಬಿಗರ ಕಾವ'ದಲ್ಲಿ ಕಾಮನನ್ನು ಗೆಲ್ಲಬಲ್ಲವನು ಜಿನನು ಮಾತ್ರವೇ ಎಂಬುದರೊಂದಿಗೆ ಶಿವ ಕಾಮನಿಂದ ಸೋಲುಂಡು 'ಅರೆವೆಣ್ಣ'ನಾಗುವ ಚಿತ್ರವಿದೆ.]

**ವ॥ ಅಂತು ಸೌಧರ್ಮೇಂದ್ರಂ ಬಂದು, ತನ್ನ ಬೆಸದೊಳ್ ಮುನ್ನಮೆ ಧನದಂ ಸಮೆದ ಸಮವಸರಣಮಂ ಕ್ರಮಕ್ರಮದೊಳೆ ನೋಡುತ್ತುಂ ಬಂದು, ಗಂಧಕುಟಿಯಂ ತ್ರಿಃಪ್ರದಕ್ಷಿಣಂಗೆಯ್ದು ಸರ್ವಾಂಗಪ್ರಣತನಾಗಿ, ಅರ್ಚಿಸಿ ಭಕ್ತಿಯಿಂ ಸ್ತುತಿಯಿಸಿ ನಿಜೋಚಿತ ಸ್ಥಾನದೊಳ್ ಕುಳ್ಳಿರ್ದಾದಿ ತೀರ್ಥಂಕರನನೋಲಗಿಸುತಿರ್ಪನ್ನೆಗಂ ಪುರಿಮತಾಳಪುರಾಧೀಶ್ವರಂ ಭರತಮಹೀಶನಿಂ ನೇರ್ಗಿಱಿಯಂ ವೃಷಭಸೇನನಕುಮಾರಂ ನಾನಾವಿಧಾರ್ಚನಾಮಂಗಳದ್ರವ್ಯಹಸ್ತಂ ಸಮಸ್ತಪರಿವಾರ ಜನಪರಿವೃತಂ ಬಂದು ವೃಷಭೇಶ್ವರನ ಶ್ರೀಮುಖಮಂ ಕಾಣಲೊಡಂ ಆಸನ್ನಭವ್ಯತಾ ಪ್ರೇರಿತಾಂತರಂಗನಾಗಿ,**

**ಪದವಿಭಾಗ-ಅನ್ವಯ-ಅರ್ಥ:** ಅಂತು ಸೌಧರ್ಮೇಂದ್ರಂ ಬಂದು = ಹಾಗೆ ಸೌಧರ್ಮೇಂದ್ರನು ಆಗಮಿಸಿ, ತನ್ನ ಬೆಸದೊಳ್ ಮುನ್ನಮೆ ಧನದಂ ಸಮೆದ = ತನ್ನ ಆಜ್ಞೆಯಂತೆ ಮುಂಚೆಯೇ ಕುಬೇರನಿಂದ ನಿರ್ಮಿತವಾಗಿದ್ದ, ಸಮವಸರಣಮಂ ನೋಡುತ್ತುಂ ಬಂದು, = ಸಮವಸರಣ ಮಂಟಪವನ್ನು ನೋಡುತ್ತ ಬಂದು, ಗಂಧಕುಟಿಯಂ ತ್ರಿಃಪ್ರದಕ್ಷಿಣಂಗೆಯ್ದು ಸರ್ವಾಂಗಪ್ರಣತನಾಗಿ = ಗಂಧಕುಟಿಯನ್ನು ನೋಡಿ ಅದನ್ನು ಮೂರು ಬಾರಿ ಬಲವಂದು ಸಾಷ್ಟಾಂಗ ನಮಸ್ಕಾರ ಮಾಡಿ, ಅಂತು + ಅರ್ಚಿಸಿ = ಹಾಗೆ ಪೂಜಿಸಿ, ನಿಜ + ಉಚಿತಸ್ಥಾನದೊಳ್ + ಕುಳ್ಳಿರ್ದು + ಆದಿತೀರ್ಥಂಕರನನ್ + ಓಲಗಿಸುತೆ + ಇರ್ಪನ್ನೆಗಂ = ತಮಗೆ ಉಚಿತವಾದ ಸ್ಥಳಗಳಲ್ಲಿ ಕುಳಿತುಕೊಂಡು ಆದಿಜಿನನನ್ನು ಸೇವಿಸುತ್ತಿರುವಷ್ಟರಲ್ಲಿ, ಪುರಿಮತಾಳಪುರ + ಅಧೀಶ್ವರಂ ಭರತಮಹೀಶನಿಂ ನೇರ್ + ಕಿಱಿಯಂ ವೃಷಭಸೇನನಕುಮಾರಂ = ಪುರಿಮತಾಳ ನಗರದ ಒಡೆಯನೂ ಭರತಚಕ್ರವರ್ತಿಗಿಂತಲೂ ಕೊಂಚ ಚಿಕ್ಕವನೂ, ಆದ ವೃಷಭಸೇನಕುಮಾರನು,

ನಾನಾವಿಧ + ಅರ್ಚನಾ ಮಂಗಳದ್ರವ್ಯಹಸ್ತಂ = ನಾನಾ ಬಗೆಯ ಪೂಜಾ ಸಾಮಗ್ರಿಗಳನ್ನೂ ಮಂಗಳದ್ರವ್ಯಗಳನ್ನೂ ಕೈಯಲ್ಲಿ ಹಿಡಿದು, ಸಮಸ್ತಪರಿವಾರ ಜನಪರಿವೃತಂ ಬಂದು = ತನ್ನೆಲ್ಲ ಪರಿವಾರಜನರಿಂದೊಡಗೂಡಿ, ವೃಷಭೇಶ್ವರನ ಶ್ರೀಮುಖಮಂ ಕಾಣಲೊಡಂ = ವೃಷಭಜಿನನ ಮುಖವನ್ನು ನೋಡಿದಾಕ್ಷಣವೇ, ಆಸನ್ನಭವ್ಯತಾಪ್ರೇರಿತಾಂತರಂಗನಾಗಿ = ಆತನ ಭವ್ಯತೆಯ ಸಾಮೀಪ್ಯದಿಂದ ಪ್ರೇರಣೆಗೊಂಡು,

**ಗದ್ಯಾನುಸರಣ:** ಹಾಗೆ ಸೌಧರ್ಮೇಂದ್ರನು ಆಗಮಿಸಿ ತನ್ನ ಆಜ್ಞೆಯಂತೆ ಈ ಮುಂಚೆಯೇ ಕುಬೇರನಿಂದ ನಿರ್ಮಿತವಾಗಿದ್ದ ಸಮವಸರಣ ಮಂಟಪವನ್ನು ನೋಡಿದ; ಗಂಧಕುಟಿಯನ್ನು ನೋಡಿ ಅದನ್ನು ಮೂರು ಬಾರಿ ಬಲವಂದು ಸಾಷ್ಟಾಂಗ ನಮಸ್ಕಾರ ಮಾಡಿ, ಭಕ್ತಿಯಿಂದ ಸ್ತೋತ್ರಗೈದು, ಬಳಿಕ ತನಗೆ ಉಚಿತವಾದ ಸ್ಥಳದಲ್ಲಿ ಕುಳಿತುಕೊಂಡು ಆದಿಜಿನನನ್ನು ಸೇವಿಸುತ್ತಿರುವಷ್ಟರಲ್ಲಿ, ಪುರಿಮತಾಳ ನಗರದ ಒಡೆಯನೂ ಭರತಚಕ್ರವರ್ತಿಗಿಂತಲೂ ಕೊಂಚ ಚಿಕ್ಕವನೂ ಆದ ವೃಷಭಸೇನಕುಮಾರನು ನಾನಾ ಬಗೆಯ ಪೂಜಾ ಸಾಮಗ್ರಿಗಳನ್ನೂ ಮಂಗಳದ್ರವ್ಯಗಳನ್ನೂ ಕೈಯಲ್ಲಿ ಹಿಡಿದು ತನ್ನೆಲ್ಲ ಪರಿವಾರಜನರಿಂದೊಡಗೂಡಿ ಬಂದ; ವೃಷಭಜಿನನ ಮುಖವನ್ನು ನೋಡಿದಾಕ್ಷಣವೇ ಅವನು ಜಿನನ ಭವ್ಯತೆಯ ಸಾಮೀಪ್ಯದಿಂದ ಪ್ರೇರಣೆಗೊಂಡು,

[**ವಿಶೇಷ ವಿಚಾರ:** ಇಲ್ಲಿ 'ಸ್ತುತಿಯಿಸಿ' ಒಂದೇ ಶಬ್ದವಿದೆ; ಪೂರ್ವಪುರಾಣದಲ್ಲಿ ಎಂಬತ್ತು ವಿವಿಧ ಬಗೆಯ ವೃತ್ತಗಳ ಸ್ತುತಿಯೇ ಇದೆ: ಪೂಪು, ೨೩. ೧೧೭–೧೯೬]

**ಭಗವದರುಹನ ಸಮಕ್ಷದೊ**
**ಳಗಣ್ಯಪುಣ್ಯಪ್ರಭಾವದಿಂದಂ ಕೊಂಡಂ**
**ಭಗವದ್ರೂಪಮನಿಂದ್ರಾ**
**ಗಳೆಲ್ಲಂ ಪೊಗೞೆ ಕಾಲಲಬ್ಧಿಯನಾಗಳ್** ೧೦೨

**ಪದವಿಭಾಗ–ಅನ್ವಯ–ಅರ್ಥ:** ಇಂದ್ರಾದಿಗಳ್ + ಎಲ್ಲಂ ಆಗಳ್ ಕಾಲಲಬ್ಧಿಯನ್ ಪೊಗೞೆ = ಇಂದ್ರನೇ ಮೊದಲಾದವರೆಲ್ಲರೂ ಕಾಲಲಬ್ಧಿಯನ್ನು ಹೊಗಳುತ್ತಿರಲು, ಅಗಣ್ಯಪುಣ್ಯಪ್ರಭಾವದಿಂದಂ ಭಗವತ್ + ಅರುಹನ ಸಮಕ್ಷದೊಳ್ = ಅಪೂರ್ವವಾದ ಪುಣ್ಯದ ಪ್ರಭಾವದಿಂದಾಗಿ ತೀರ್ಥಂಕರನ ಸನ್ನಿಧಿಯಲ್ಲಿಯೇ, ಭಗವತ್ + ರೂಪಮನ್ ಕೊಂಡಂ = ಗಣಧರರೂಪವನ್ನು ಕೈಗೊಂಡ.

**ಗದ್ಯಾನುಸರಣ:** ಅಪೂರ್ವವಾದ ಪುಣ್ಯದ ಪ್ರಭಾವದಿಂದಾಗಿ ತೀರ್ಥಂಕರನ ಸನ್ನಿಧಿಯಲ್ಲಿಯೇ ಆತನು ಗಣಧರರೂಪವನ್ನು ಕೈಗೊಂಡ; ಆಗ ಇಂದ್ರನೇ ಮೊದಲಾದವರೆಲ್ಲರೂ ಕಾಲಲಬ್ಧಿಯನ್ನು ಹೊಗಳಿದರು

**ವ॥ ಅಂತು ದೀಕ್ಷಾಗ್ರಹಣಾನಂತರಸಮಯಸಮುತ್ಪನ್ನ ಸಪ್ತರ್ಧಿಜ್ಞಾನಚತುಷ್ಟಯಂ ಪ್ರಥಮಗಣಧರನಾದಂ. ಅನ್ನೆಗಮಿತ್ತ ಭರತರಾಜನಯೋಧ್ಯೆಯೊಳಾಸ್ಥಾನಮಂಟಪದೊಳಿರೆ**

ಪುರೋಹಿತಾಯುಧಾಧ್ಯಕ್ಷಾಂತಃಪುರವೃದ್ಧಕಂಚುಕಿಗಳ್ ಬಂದು ಪ್ರಣಾಮಾರ್ಪಣಪುರಸ್ಸರಂ ಶಿರೋವೇಷ್ಟನಪ್ರಲಂಬ ಚೇಳಾಂಚಳಪಿಹಿತವದನರಾಗಿ,

**ಪದವಿಭಾಗ–ಅನ್ವಯ–ಅರ್ಥ:** ಅಂತು ದೀಕ್ಷಾಗ್ರಹಣ + ಅನಂತರ ಸಮಯಸಮುತ್ಪನ್ನ = ಹಾಗೆ ದೀಕ್ಷೆಯನ್ನು ಪಡೆದ ಹೊತ್ತಿನಲ್ಲಿ ಉದ್ಭವವಾದ. ಸಪ್ತರ್ಧಿ ಜ್ಞಾನಚತುಷ್ಟಯಂ ಪ್ರಥಮಗಣಧರನ್ + ಆದಂ = ಸಪ್ತರ್ಧಿ ಮತ್ತು ಅನಂತಚತುಷ್ಟಯಗಳನ್ನು ಹೊಂದಿ ಗಣಧರನಾದ; ಅನ್ನೆಗಂ + ಇತ್ತ ಭರತರಾಜನ್ = ಆ ಹೊತ್ತಿಗೆ ಈ ಕಡೆ ಭರತಚಕ್ರವರ್ತಿಯು, ಅಯೋಧ್ಯೆಯೊಳ್ + ಆಸ್ಥಾನಮಂಟಪದೊಳ್ + ಇರೆ = ಅಯೋಧ್ಯೆಯಲ್ಲಿ ತನ್ನ ಆಸ್ಥಾನದಲ್ಲಿ ಕುಳಿತಿರಲು. ತತ್ + ಪುರೋಹಿತ + ಆಯುಧಾಧ್ಯಕ್ಷ + ಅಂತಃಪುರವೃದ್ಧಕಂಚುಕಿಗಳ್ ಬಂದು = ಅವನ ಪುರೋಹಿತ ಆಯುಧಾಗಾರದ ಮುಖ್ಯಸ್ಥ ಹಾಗೂ ಅಂತಃಪುರದ ಮುದುಕ ಕಾವಲುಗಾರರು ಒಟ್ಟಿಗೇ ಬಂದು, ಮಹೀತಳ + ಆಶ್ಲಿಷ್ಟಜಾನುಲಲಾಟಪಟ್ಟರ್ = ಭೂಮಿತಳದ ಮೇಲೆ ಮೊಳಕಾಲು ಮತ್ತು ಹಣೆಗಳನ್ನು ಮುಟ್ಟಿಸಿ, ಪ್ರಣಾಮ + ಅರ್ಪಣಪುರಸ್ಸರಂ = ನಮಸ್ಕಾರಗಳನ್ನು ಸೂಚಿಸಿ, ಶಿರೋವೇಷ್ಟನಪ್ರಲಂಬ ಚೇಳ + ಅಂಚಳಪಿಹಿತವದನರಾಗಿ = ತಲೆವಸ್ತ್ರದಿಂದ ಜೋತುಬೀಳುವ ಬಟ್ಟೆಯ ಅಂಚಿನಿಂದ ಬಾಯಿಯನ್ನು ಮುಚ್ಚಿಕೊಂಡು,

**ಗದ್ಯಾನುಸರಣ:** ಹಾಗೆ ದೀಕ್ಷೆಯನ್ನು ಪಡೆದ ಹೊತ್ತಿನಲ್ಲಿ ಉದ್ಭವವಾದ ಸಪ್ತರ್ಧಿ ಮತ್ತು ಅನಂತಚತುಷ್ಟಯಗಳನ್ನು ಹೊಂದಿ ಗಣಧರನಾದ; ಆ ಹೊತ್ತಿಗೆ ಈ ಕಡೆ ಭರತಚಕ್ರವರ್ತಿಯು ಅಯೋಧ್ಯೆಯಲ್ಲಿ ತನ್ನ ಆಸ್ಥಾನದಲ್ಲಿ ಕುಳಿತಿದ್ದಾಗ ಅವನ ಪುರೋಹಿತ ಆಯುಧಾಗಾರದ ಮುಖ್ಯಸ್ಥ ಹಾಗೂ ಅಂತಃಪುರದ ಮುದುಕ ಕಾವಲುಗಾರರು ಒಟ್ಟಿಗೇ ಬಂದರು; ಬಂದವರೇ ನಮಸ್ಕಾರಗಳನ್ನು ಸೂಚಿಸಲು ಭೂಮಿತಳದ ಮೇಲೆ ಮೊಳಕಾಲು ಮತ್ತು ಹಣೆಗಳನ್ನು ಮುಟ್ಟಿಸಿ ತಲೆವಸ್ತ್ರದಿಂದ ಜೋತುಬೀಳುವ ಬಟ್ಟೆಯ ಅಂಚಿನಿಂದ ಬಾಯಿಯನ್ನು ಮುಚ್ಚಿಕೊಂಡು,

**ಪುರುದೇವಂಗಾದ ಕೈವಲ್ಯದ ಮಹಿಮೆಯನುಗ್ರಾಯುಧಾಗಾರದೊಳ್ ಭಾ**
**ಸ್ಕರಚಕ್ರೋದ್ಭಾಸಿಚಕ್ರೋದ್ಭವದ ಪಿರಿದುಮಾಶ್ಚರ್ಯಮಂ ಶೋಭಿತಾಂತಃ**
**ಪುರದೊಳ್ ಮಾದೇವಿಗಾದಾತ್ಮಜನೊಸಗೆಯನಾ ಮೂವರುಂ ಬಿನ್ನಪಂಗೆ**
**ಯ್ದಿರೆ ಜಾತಾನಂದನೀ ಮೂಱುಸಗೆಗಳೊಳಮಿನ್ನಾವುದಂ ಮುನ್ನ ಮಾಳ್ಪೆಂ**
೧೧೩

**ಪದವಿಭಾಗ–ಅನ್ವಯ–ಅರ್ಥ:** ಪುರುದೇವಂಗೆ + ಆದ ಕೈವಲ್ಯದ ಮಹಿಮೆಯನ್ = ಪುರುದೇವನಿಗೆ ಉಂಟಾದ ಕೇವಲಜ್ಞಾನದ ಉದಯವನ್ನೂ, ಉಗ್ರ + ಆಯುಧ + ಆಗಾರದೊಳ್ ಭಾಸ್ಕರಚಕ್ರ + ಉದ್ಭಾಸಿಚಕ್ರ + ಉದ್ಭವದ ಪಿರಿದುಂ + ಆಶ್ಚರ್ಯಮಂ = ಉಗ್ರ ಆಯುಧಗಳಿದ್ದ ಕೋಣೆಯಲ್ಲಿ ಮಹಾ ಆಶ್ಚರ್ಯವುಂಟಾಗುವಂತೆ ಸೂರ್ಯಮಂಡಲದಂತೆ ಬೆಳಗುವ ಚಕ್ರದ ಹುಟ್ಟುವಿಕೆಯನ್ನೂ, ಶೋಭಿತ + ಅಂತಃಪುರದೊಳ್ ಮಾದೇವಿಗೆ + ಆದ +

ಆತ್ಮಜನ್ + ಒಸಗೆಯಸ್ = ಶೋಭಾಯಮಾನವಾದ ಅಂತಃಪುರದಲ್ಲಿ ಮಹಾರಾಣಿಗೆ ಹುಟ್ಟಿದ ತನ್ನ ಮಗನ ಶುಭಸಮಾಚಾರವನ್ನೂ, ಆ ಮೂವರುಂ ಬಿನ್ನಪಂಗೆಯ್ದಿರೆ = ಆ ಮೂವರೂ ಕ್ರಮವಾಗಿ ಬಿನ್ನವಿಸಿಕೊಳ್ಳಲು. ಜಾತ + ಆನಂದನ್ + ಈ ಮೂಱು + ಒಸಗೆಗಳೊಳಂ + ಇನ್ನಾವುದಂ ಮುನ್ನ ಮಾಟ್ಪೆಂ = ಸಂತೋಷಗೊಂಡ ಭರತನು ಈ ಮೂರೂ ಶುಭಸಮಾಚಾರಗಳಲ್ಲಿ ಮೊದಲು ಯಾವುದನ್ನು ಆಚರಿಸಲಿ (ಎಂದು ಯೋಚಿಸಿದ).

**ಗದ್ಯಾನುಸರಣ:** ಪುರುದೇವನಿಗೆ ಉಂಟಾದ ಕೇವಲಜ್ಞಾನದ ಉದಯವನ್ನೂ, ಉಗ್ರ ಆಯುಧಗಳಿದ್ದ ಕೋಠಿಯಲ್ಲಿ ಮಹಾ ಅಚ್ಚರಿಯುಂಟಾಗುವ ಹಾಗೆ ಸೂರ್ಯಮಂಡಲದಂತೆ ಬೆಳಗುವ ಚಕ್ರರತ್ನದ ಹುಟ್ಟುವಿಕೆಯನ್ನೂ, ಶೋಭಾಯಮಾನವಾದ ಅಂತಃಪುರದಲ್ಲಿ ಮಹಾರಾಣಿಗೆ ಹುಟ್ಟಿದ ತನ್ನ ಮಗನ ಶುಭಸಮಾಚಾರವನ್ನೂ ಆ ಮೂವರೂ ಕ್ರಮವಾಗಿ ಬಿನ್ನವಿಸಿಕೊಂಡರು; ಆಗ ಸಂತೋಷಗೊಂಡ ಭರತನು ಈ ಮೂರೂ ಶುಭಸಮಾಚಾರಗಳಲ್ಲಿ ಮೊದಲು ಯಾವುದನ್ನು ಆಚರಿಸಲಿ ಎಂದು ಯೋಚಿಸಿದ.

**ಧರ್ಮಾರ್ಥಕಾಮಮೆಂಬಿವು**
**ಧರ್ಮಾರ್ಥಿಜನಕ್ಕೆ ನೆಱೆದ ನೆರ್ಮಂತವಱೊಳ್**
**ಧರ್ಮಂ ಪ್ರಧಾನಮರ್ಥಂ**
**ಧರ್ಮಾಂಘ್ರಿಪಫಳಮದರ್ಕೆ ರಸಮದು ಕಾಮಂ** ೧೦೪

**ಪದವಿಭಾಗ-ಅನ್ವಯ-ಅರ್ಥ:** ಧರ್ಮ + ಅರ್ಥ + ಕಾಮಂ + ಎಂಬಿವು ಧರ್ಮ + ಅರ್ಥಿಜನಕ್ಕೆ ನೆಱೆದ ನೆರ್ಮ = ಧರ್ಮ ಅರ್ಥ ಮತ್ತು ಕಾಮಗಳು ಧರ್ಮವನ್ನು ಬಯಸುವ ಜನರ ಆಶ್ರಯ, ಅಂತು + ಅವಱೊಳ್ ಧರ್ಮಂ ಪ್ರಧಾನಂ = ಇಂತಹ ಅವುಗಳಲ್ಲಿ ಧರ್ಮವೇ ಮುಖ್ಯ, ಅರ್ಥಂ ಧರ್ಮ + ಅಂಘ್ರಿಪಫಳಂ = ಅರ್ಥವು ಧರ್ಮ ಎಂಬ ಮರದ ಹಣ್ಣು, ಅದರ್ಕೆ ರಸಂ + ಅದು ಕಾಮಂ = ಅದರ ರಸದಂತಿರುವುದು ಕಾಮ.

**ಗದ್ಯಾನುಸರಣ:** ಧರ್ಮ ಅರ್ಥ ಮತ್ತು ಕಾಮಗಳು ಧರ್ಮವನ್ನು ಬಯಸುವ ಜನರ ಆಶ್ರಯ; ಇಂತಹ ಅವುಗಳಲ್ಲಿ ಧರ್ಮವೇ ಮುಖ್ಯ; ಅರ್ಥವು ಧರ್ಮ ಎಂಬ ಮರದ ಹಣ್ಣು; ಕಾಮ ಅದರ ರಸ.

[**ವಿಶೇಷ ವಿಚಾರ:** ಇಲ್ಲಿ ಧರ್ಮ ಅರ್ಥ ಕಾಮ ಎಂಬ ಮೂರು ಘಟಕಗಳನ್ನು ಮಾತ್ರ ಹೇಳಿದೆ; ವೈದಿಕ ಪರಿವಲಯದ ಪುರುಷಾರ್ಥಗಳಲ್ಲಿ ಕೊನೆಯದು ಮೋಕ್ಷ, ಆದರೆ ಜೈನದಲ್ಲಿ ಅದಕ್ಕೆ ಸ್ಥಾನವಿಲ್ಲ; ಅದಕ್ಕೆ ಕಾರಣ ಜೈನವು ಮೋಕ್ಷದ ನೆಲೆಯಾದ ದೇವರಲ್ಲಿ ನಂಬಿಕೆ ಹೊಂದಿಲ್ಲದುದು.]

**ಅದಱಿಂದಮಿವಱೊಳರ್ಹ**
**ತ್ಪದಪದ್ಮಪ್ರಣತಿ ಮುಖ್ಯಮೊಸಗೆಯುಮೆಮಗಿ**
**ನ್ನಿದಱಿಂದಮಿಲ್ಲಿ ಮೇಲಾ**
**ವುದೆಂದು ಬಗೆ ಬೆಳಱೆ ಭಕ್ತಿನಿರತಂ ಭರತಂ** ೧೦೫

**ಪದವಿಭಾಗ-ಅನ್ವಯ-ಅರ್ಥ:** ಅದಱಿಂದಂ + ಇವಱೊಳ್ + ಅರ್ಹತ್ + ಪದಪದ್ಮಪ್ರಣುತಿ ಎಮಗೆ ಮುಖ್ಯಂ + ಒಸಗೆಯುಂ = ಅದರಿಂದ ಇವುಗಳಲ್ಲಿ ಜಿನನಿಗೆ ನಮಸ್ಕರಿಸುವುದು ನಮಗೆ ಮುಖ್ಯವಾದ ವಿಷಯ, ಇನ್ನು + ಇದಱಿಂದಂ + ಇಲ್ಲಿ ಮೇಲಾವುದು = ಇದಕ್ಕಿಂತಲೂ ಹೆಚ್ಚಿನ ಮುಖ್ಯವಾದುದಾವುದಿದೆ, ಎಂದು ಭಕ್ತಿನಿರತಂ ಭರತಂ ಬಗೆ ಬೆದಱಿ = ಎಂದು ಭಕ್ತಿ ತುಂಬಿದ ಭರತ ಮನಸ್ಸು ಬಾಗಿ,

**ಗದ್ಯಾನುಸರಣ:** 'ಅದರಿಂದ ಇವುಗಳಲ್ಲಿ ಜಿನನಿಗೆ ನಮಸ್ಕರಿಸುವುದು ನಮಗೆ ಮುಖ್ಯವಾದ ವಿಷಯ. ಇದಕ್ಕಿಂತಲೂ ಹೆಚ್ಚಿನ ಮುಖ್ಯವಾದುದಾವುದಿದೆ' ಎಂದು ಭಕ್ತಿ ತುಂಬಿದ ಭರತನ ಮನಸ್ಸು ಬಾಗಿತು.

**ವ॥ ಪುರಜನ ಪರಿಜನ ಪರಿವೃತಂ ಬಂದು ಅಭವನಾಸ್ಥಾನಮಂಟಪಮಂ ಗೆಂಟಱೊಳೆ ಕಂಡು ರಾಜಚಿಹ್ನಂಗಳನಿರಿಸಿ ಶ್ರೀಮಂಟಪಶ್ರೀಯುಮನತ್ಯಂತವಿಸ್ಮಯಸ್ಮೇರಮುಖನುಂ ರೋಮಾಂಚಕಂಚುಕಿತನುಮಾಗಿ ನೋಡುತ್ತುಂ ಅನೇಕಾರ್ಚನೆಗಳಿಂದರ್ಚಿಸುತ್ತುಂ ಮೂಱುಸೂೞ್ ಬಲಗೊಂಡು ಜಗತ್ತ್ರಿತಯಾಧೀಶ್ವರ ಶ್ರೀಮುಖಾಭಿಮುಖನಾಗಿ ನಿಂದನೇಕಸ್ತೋತ್ರ ಪವಿತ್ರೀಕೃತ ಮುಖಾರವಿಂದಂ ನಿಜೋಚಿತ ಸ್ಥಾನದೊಳ್ ಕುಳ್ಳಿರ್ದು,**

**ಪದವಿಭಾಗ-ಅನ್ವಯ-ಅರ್ಥ:** ಪುರಜನ ಪರಿಜನ ಪರಿವೃತಂ ಬಂದು = ಊರಿನ ಹಾಗೂ ಪರಿವಾರದವರ ಜೊತೆಗೆ ಬಂದು, ಗಗನಮಂಡಳಮನ್ + ಅಲಂಕರಿಸಿದ = ಆಗಸವನ್ನೆಲ್ಲ ಅಲಂಕಾರ ಮಾಡಿದಂತೆ ಇದ್ದ, ಅಭವನಾಸ್ಥಾನಮಂಟಪಮಂ ಗೆಂಟಱೊಳೆ ಕಂಡು = ಅರ್ಹಂತನ ಸಮವಸರಣಮಂಟಪವನ್ನು ದೂರದಿಂದಲೇ ನೋಡಿ, ರಾಜಚಿಹ್ನಂಗಳನ್ + ಇರಿಸಿ = ತನ್ನ ರಾಜಕುರುಹುಗಳನ್ನು ಕೆಳಗಿಟ್ಟು, ಶ್ರೀಮಂಟಪಶ್ರೀಯುಮನ್ = ಶ್ರೀಮಂಟಪದ ಸೊಬಗನ್ನೂ, ಅತ್ಯಂತವಿಸ್ಮಯಸ್ಮೇರಮುಖನುಂ = ಅತೀವ ಆಶ್ಚರ್ಯದಿಂದ ಕೂಡಿದ ಮುಗುಳ್ನಗೆಯ ಮುಖವುಳ್ಳವನೂ, ರೋಮಾಂಚಕಂಚುಕಿತನುಂ + ಆಗಿ ನೋಡುತ್ತುಂ = ಪುಳಕಗಳಿಂದ ಕೂಡಿದವನಾಗಿ ನೋಡುತ್ತ, ಅನೇಕ + ಅರ್ಚನೆಗಳಿಂದೆ + ಅರ್ಚಿಸುತ್ತುಂ = ನಾನಾ ಬಗೆಗಳಿಂದ ಪೂಜಿಸುತ್ತ, ಮೂಱುಸೂೞ್ + ಬಲಗೊಂಡು = ಮೂರು ಸಲ ಬಲಗೊಂಡು ಬಂದು, ಜಗತ್ + ತ್ರಿತಯ + ಅಧೀಶ್ವರಶ್ರೀಮುಖ + ಅಭಿಮುಖನಾಗಿ ನಿಂದು ಸ್ತುತಿಸಿ = ಮೂಲೋಕಗಳ ಒಡೆಯನ ಪಾವನ ಮುಖಕ್ಕೆದುರಾಗಿ ನಿಂತು ಸ್ತುತಿ ಮಾಡಿ(ದ)

**ಗದ್ಯಾನುಸರಣ:** ಊರಿನ ಹಾಗೂ ಪರಿವಾರದವರ ಜೊತೆಗೆ ಬಂದು. ಅರ್ಹಂತನ ಸಮವಸರಣಮಂಟಪವನ್ನು ದೂರದಿಂದಲೇ ನೋಡಿದ; ತನ್ನ ರಾಜಕುರುಹುಗಳನ್ನು ಕೆಳಗಿಟ್ಟು ಬಂದ; ಶ್ರೀಮಂಟಪದ ಸೊಬಗನ್ನೂ ನೋಡಿದ ಅವನ ಮುಖದಲ್ಲಿ ಅತೀವ ಆಶ್ಚರ್ಯದ ಮುಗುಳ್ನಗೆಯ ಮೂಡಿತು; ತನ್ನ ಕೈಗಳನ್ನು ಹಣೆಯ ಮೇಲಿರಿಸಿಕೊಂಡು ಪದೇ ಪದೇ ತಲೆಬಾಗುತ್ತ ಮುನ್ನಡೆದ;

ಹೊಮ್ಮುವ ಪುಳಕಗಳಿಂದ ಕೂಡಿದವನಾಗಿ ಅವುಗಳ ಸುತ್ತ ಮೂರು ಸಲ ಬಲಗೊಂಡು ಬಂದು ಮೂಲೋಕಗಳ ಒಡೆಯನ ಪಾವನ ಮುಖಕ್ಕೆದುರಾಗಿ ನಿಂತು ಹೀಗೆ ಸ್ತುತಿ ಮಾಡಿದ:

**ನೃಸುರಾಸುರಪರಿಷತ್ಸ**
**ಸ್ಯಸಂಕುಳಂ ಜಿನವಚೋಮೃತಾಸಾರಮಸಂ**
**ದಸದಳಮೆ ಬಯಸೆ ಭರತಂ**
**ಬೆಸಗೊಂಡಂ ಜಿನನನಖಿಳವಸ್ತುಸ್ಥಿತಿಯಂ** ೧೦೬

**ಪದವಿಭಾಗ-ಅನ್ವಯ-ಅರ್ಥ:** ನೃ + ಸುರ + ಅಸುರ ಪರಿಷತ್ + ಸಸ್ಯಸಂಕುಳಂ = ಮಾನವರು ಸುರರು ಮತ್ತು ಅಸುರರ ಸಮೂಹವೆಂಬ ಸಸ್ಯರಾಶಿಯು, ಜಿನವಚಃ + ಅಮೃತ + ಆಸಾರಮನ್ + ಅಂದು + ಅಸದಳಮೆ ಬಯಸೆ = ಜಿನನ ಮಾತುಗಳೆಂಬ ಅಮೃತದ ಮಳೆಯನ್ನು ಅತೀವವಾಗಿ ಬಯಸಲು, ಭರತಂ ಜಿನನನ್ + ಅಖಿಳವಸ್ತುಸ್ಥಿತಿಯಂ ಬೆಸಗೊಂಡಂ = ಭರತನು ಜಿನನನ್ನು ಅಖಿಲವಸ್ತುಗಳ ಸ್ವರೂಪವನ್ನು ವಿವರಿಸುವಂತೆ ಕೇಳಿಕೊಂಡನು.

**ಗದ್ಯಾನುಸರಣ:** ಮಾನವರು ಸುರರು ಮತ್ತು ಅಸುರರ ಸಮೂಹವೆಂಬ ಸಸ್ಯರಾಶಿಯು ಜಿನನ ಮಾತುಗಳೆಂಬ ಅಮೃತದ ಮಳೆಯನ್ನು ಅತೀವವಾಗಿ ಬಯಸಲು, ಭರತನು ಜಿನನನ್ನು ಅಖಿಲವಸ್ತುಗಳ ಸ್ವರೂಪವನ್ನು ವಿವರಿಸುವಂತೆ ಕೇಳಿಕೊಂಡನು.

**ವ। ಅಂತು ಬೆಸಗೊಳೆ, ದಿವ್ಯಧ್ವನಿಯೊಳಾ ಪರಮಯೋಗೀಂದ್ರನಿಂತೆಂದು ಬೆಸಸಿದಂ: ನಿನ್ನ ಬೆಸಗೊಂಡ ತತ್ತ್ವಮುಂ ಹೇಯೋಪಾದೇಯರೂಪದಿಂ ದ್ವಿವಿಧಮಕ್ಕುಂ ಅಲ್ಲಿ ಸಂಸಾರಕಾರಣಂಗಳ್ ಹೇಯಂಗಳ್, ಮುಕ್ತಿಕಾರಣಂಗಳುಪಾದೇಯಂಗಳ್, ಅಲ್ಲಿ ಮಿಥ್ಯಾದರ್ಶನಾದಿ ಕರ್ಮಂಗಳ್ ಸಂಸಾರಕಾರಣಂಗಳ್, ಅನಂತಜ್ಞಾನಾದಿನಿಜರೂಪಮಂ ಪಡೆವುದು ಮುಕ್ತಿ; ಸಮ್ಯಗ್ದರ್ಶನಚಾರಿತ್ರಂಗಳ್ ಅವಿಕಲ್ಪಂಗಳ್ ಮೋಕ್ಷಕಾರಣಂಗಳ್; ಅಲ್ಲಿ ತತ್ತ್ವಾರ್ಥಶ್ರದ್ಧಾನಂ ಸಮ್ಯಗ್ದರ್ಶನಂ, ಜೀವಾದಿಪದಾರ್ಥ ಯಥಾತ್ಮ್ಯಾವಗಮಂ ಸಮ್ಯಕ್‌ಜ್ಞಾನಂ, ಸಂಸಾರ ಪರಿತ್ಯಾಗೋದ್ಯುಕ್ತ ಸಮ್ಯಕ್‌ಜ್ಞಾನೋಪೇತ ಭವ್ಯಜೀವನ ಬಾಹ್ಯಾಭ್ಯಂತರ ಕ್ರಿಯಾನಿವೃತ್ತಿ ಸಮ್ಯಕ್‌ಚಾರಿತ್ರಮೆಂಬುದು - ಎಂದು ಹೇಯೋಪಾದೇಯ ತತ್ತ್ವಮನಜಿಪಿ[ದಂ]. ಮತ್ತಂ ಭರತೇಶ್ವರನುಂ ಬಾಹುಬಲಿಕುಮಾರನುಂ ಜಿನೇಶ್ವರ ಪಾದಪದ್ಮಂಗಳ್ಗೆಜಗಿ ನಿಜ ರಾಜಧಾನಿಗಳ್ಗೆ ಪೋದರ್.**

**ಇತ್ತ ಸೌಧರ್ಮೇಂದ್ರಂ ಧರ್ಮಚಕ್ರವರ್ತಿತ್ವಕ್ಕೆ ದಿಗ್ವಿಜಯಮೆನಿಸಿದ ಭಗವದ್ವಿಹಾರಮನವಧಿಯಿಂದಮಜಿದು, ಅದನೆ ಪುನರುಕ್ತಂ ಮಾಳ್ಪಂತೆ**

**ಪದವಿಭಾಗ-ಅನ್ವಯ-ಅರ್ಥ:** ಅರ್ಥ: ಅಂತು ಬೆಸಗೊಳೆ = ಹಾಗೆ ಕೇಳಿಕೊಳ್ಳಲು, ದಿವ್ಯಧ್ವನಿಯೊಳ್ + ಆ ಪರಮಯೋಗೀಂದ್ರನ್ + ಇಂತೆಂದು ಬೆಸಸಿದಂ = ಹಾಗೆ ಹೊಮ್ಮಿದ ಧ್ವನಿಯ ಮೂಲಕ ಯೋಗಿಶ್ರೇಷ್ಠನು ಹೀಗೆಂದು ವಿವರಿಸಿದ: ನಿನ್ನ ಬೆಸಗೊಂಡ ತತ್ತ್ವಮುಂ ಹೇಯ + ಉಪಾದೇಯರೂಪದಿಂ ದ್ವಿವಿಧಮಕ್ಕುಂ = ನೀನು ಕೇಳಿದ ತತ್ವವು ಹೇಯ ಮತ್ತು ಉಪಾದೇಯ ಎಂಬ

ರೂಪದಿಂದ ಎರಡು ವಿಧ; ಅಲ್ಲಿ ಸಂಸಾರಕಾರಣಂಗಳ್ ಹೇಯಂಗಳ್ = ಅವುಗಳಲ್ಲಿ ಸಂಸಾರಕ್ಕೆ ಕಾರಣವಾದವು ಹೇಯಗಳು; ಮುಕ್ತಿಕಾರಣಂಗಳ್ + ಉಪಾದೇಯಂಗಳ್ = ಬಿಡುಗಡೆಗೆ ಕಾರಣವಾದವು ಉಪಾದೇಯಗಳು; ಅನಂತಜ್ಞಾನ + ಆದಿನಿಜರೂಪಮಂ ಪಡೆವುದು ಮುಕ್ತಿ = ಅತ್ಯಂತ ಹಿಂದಿನ ಸಂಸಾರಬಂಧನದಿಂದ ಬದ್ಧವಾದ ದ್ರವ್ಯ ಭಾವ ಕರ್ಮಗಳನ್ನು ಹೋಗಲಾಡಿಸಿಕೊಂಡು ಪಡೆಯುವ ಅನಂತಜ್ಞಾನವೇ ಮುಂತಾದ ಸ್ವಸ್ವರೂಪವನ್ನು ಪಡೆಯುವುದು ಮುಕ್ತಿ; ಸಮ್ಯಕ್ + ದರ್ಶನಚಾರಿತ್ರಂಗಳ್ ಅವಿಕಲ್ಪಂಗಳ್ ಮೋಕ್ಷಕಾರಣಂಗಳ್ = ಸಮ್ಯಕ್ ಜ್ಞಾನ ದರ್ಶನ ಮತ್ತು ಚಾರಿತ್ರಗಳು ಅವಿಕಲ್ಪಗಳು ಮತ್ತು ಬಿಡುಗಡೆಯ ಕಾರಣಗಳು; ಅಲ್ಲಿ ತತ್ವ + ಅರ್ಥಶ್ರದ್ಧಾನಂ ಸಮ್ಯಗ್ದರ್ಶನಂ = ಅವುಗಳಲ್ಲಿ ತತ್ವಗಳು ಮತ್ತವುಗಳ ಅರ್ಥಗಳಲ್ಲಿ ಹೊಂದುವ ಶ್ರದ್ಧೆಯೇ ಸಮ್ಯಕ್‌ದರ್ಶನ; ಜೀವ + ಆದಿಪದಾರ್ಥ ಯಥಾತ್ಮ್ಯ + ಅವಗಮಂ ಸಮ್ಯಕ್‌ಜ್ಞಾನಂ = ಸಂಶಯ ವಿಪರ್ಯಾಯ ಸಾವದ್ಯ ಅನವದ್ಯವಸಾಯಗಳ ಸ್ವಭಾವರಹಿತವಾಗಿ ಜೀವ ಮುಂತಾದವುಗಳ ಸ್ವರೂಪವನ್ನು ಅರಿಯುವುದೇ ಸಮ್ಯಕ್‌ಜ್ಞಾನ; ಸಂಸಾರಪರಿತ್ಯಾಗ + ಉದ್ಯುಕ್ತ ಸಮ್ಯಕ್‌ಜ್ಞಾನ + ಉಪೇತ ಭವ್ಯಜೀವನ ಬಾಹ್ಯ + ಅಭ್ಯಂತರ ಕ್ರಿಯಾನಿವೃತ್ತಿ ಸಮ್ಯಕ್‌ಚಾರಿತ್ರಂ + ಎಂಬುದು = ಐಹಿಕತೆಯನ್ನು ತ್ಯಜಿಸಲು ಸಿದ್ಧವಾದ ಮತ್ತು ಸಮ್ಯಕ್‌ಜ್ಞಾನಸಮೇತವಾದ ಭವ್ಯಜೀವದ ಹೊರಗಣ ಮತ್ತು ಒಳಗಣ ಕ್ರಿಯೆಗಳ ನಿವೃತ್ತಿಯೇ ಸಮ್ಯಕ್‌ಚಾರಿತ್ರ; ಎಂದು ಹೇಯೋಪಾದೇಯ ತತ್ತ್ವಮನಱಿಪಿ[ದಂ] = ಎಂದು ಬೇಡದ ಮತ್ತು ಬೇಕಾದ ತತ್ವಗಳನ್ನು ತಿಳಿ ಹೇಳಿದ. ಮತ್ತಂ ಭರತೇಶ್ವರನುಂ ಬಾಹುಬಲಿಕುಮಾರನುಂ ಜಿನೇಶ್ವರ ಪಾದಪದ್ಮಂಗಳ್ಗೆಱಗಿ ನಿಜ ರಾಜಧಾನಿಗಳ್ಗೆ ಪೋದರ್ = ಆ ಬಳಿಕ ಭರತ-ಬಾಹುಬಲಿಯರು ಜಿನನ ಪಾದಕಮಲಗಳಿಗೆ ನಮಸ್ಕರಿಸಿ ತಮ್ಮ ತಮ್ಮ ರಾಜಧಾನಿಗಳಿಗೆ ಹೋದರು.

ಇತ್ತ ಸೌಧರ್ಮೇಂದ್ರಂ = ಈ ಕಡೆ ಸೌಧರ್ಮೇಂದ್ರನು, ಧರ್ಮಚಕ್ರವರ್ತಿತ್ವಕ್ಕೆ ದಿಗ್ವಿಜಯಮೆನಿಸಿದ + ಧರ್ಮಚಕ್ರವರ್ತಿತ್ವದ ದಿಗ್ವಿಜಯಯಾತ್ರೆ ಎನಿಸಿಕೊಂಡ, ಭಗವತ್ + ವಿಹಾರಮನ್ + ಅವಧಿಯಿಂದಂ + ಅಱಿದು = ಭಗವಂತನ ವಿಹಾರದ ಬಗ್ಗೆ ಅವಧಿಜ್ಞಾನದಿಂದ ತಿಳಿದು, ಅದನೆ ಪುನರುಕ್ತಂ ಮಾಳ್ಪಂತೆ = ಅದನ್ನು ಮತ್ತೆ ಹೇಳುವಂತೆ,

**ಗದ್ಯಾನುಸರಣ:** ಹಾಗೆ ವಿನಂತಿಸಲು ತನ್ನ ದಿವ್ಯಧ್ವನಿಯಲ್ಲಿ ಯೋಗಿಶ್ರೇಷ್ಠನು ಹೀಗೆಂದು ವಿವರಿಸಿದ: ನೀನು ಕೇಳಿದ ತತ್ವವು ಹೇಯ ಮತ್ತು ಉಪಾದೇಯ ಎಂಬ ರೂಪದಿಂದ ಎರಡು ವಿಧ; ಅವುಗಳಲ್ಲಿ ಸಂಸಾರಕ್ಕೆ ಕಾರಣವಾದವು ಹೇಯಗಳು, ಬಿಡುಗಡೆಗೆ ಕಾರಣವಾದವು ಉಪಾದೇಯಗಳು; ಮಿಥ್ಯಾದರ್ಶನ ಮುಂತಾದ ಕರ್ಮಗಳು ಸಂಸಾರಕ್ಕೆ ಕಾರಣವಾಗುತ್ತವೆ; ಸಮ್ಯಕ್ ಜ್ಞಾನ ದರ್ಶನ ಮತ್ತು ಚಾರಿತ್ರಗಳ ವಿಕಲ್ಪಗಳು ಬಿಡುಗಡೆಯ ಕಾರಣಗಳು; ಅವುಗಳಲ್ಲಿ ತತ್ವಗಳು

ಮತ್ತವುಗಳ ಅರ್ಥಗಳಲ್ಲಿ ಹೊಂದುವ ಶ್ರದ್ಧೆಯೇ ಸಮ್ಯಕ್‌ದರ್ಶನ; ಐಹಿಕತೆಯನ್ನು ತ್ಯಜಿಸಲು ಸಿದ್ಧವಾದ ಮತ್ತು ಸಮ್ಯಕ್‌ಜ್ಞಾನಸಮೇತವಾದ ಭವ್ಯಜೀವದ ಹೊರಗಣ ಮತ್ತು ಒಳಗಣ ಕ್ರಿಯೆಗಳ ನಿವೃತ್ತಿಯೇ ಸಮ್ಯಕ್‌ಚಾರಿತ್ರ – ಎಂದು ಬೇಡದ ಮತ್ತು ಬೇಕಾದ ತತ್ವಗಳನ್ನು ತಿಳಿ ಹೇಳಿದ. ಆ ಬಳಿಕ ಭರತ-ಬಾಹುಬಲಿಯರು ಜಿನನ ಪಾದಕಮಲಗಳಿಗೆ ನಮಸ್ಕರಿಸಿ ತಮ್ಮ ತಮ್ಮ ರಾಜಧಾನಿಗಳಿಗೆ ಹೋದರು.

ಈ ಕಡೆ ಸೌಧರ್ಮೇಂದ್ರನು ಧರ್ಮಚಕ್ರವರ್ತಿತ್ವದ ದಿಗ್ವಿಜಯಯಾತ್ರೆ ಎನಿಸಿಕೊಂಡ ಭಗವಂತನ ವಿಹಾರದ ಬಗ್ಗೆ ಅವಧಿಜ್ಞಾನದಿಂದ ತಿಳಿದು, ಅದನ್ನು ಮತ್ತೆ ಹೇಳುವಂತೆ,

[**ವಿಶೇಷ ವಿಚಾರ:** ದಿವ್ಯಧ್ವನಿ = ಕಾವ್ಯದ ಮೊದಲ ಆಶ್ವಾಸದ ಒಂಬತ್ತನೆಯ ಪದ್ಯದಲ್ಲಿ ಪಂಪನು ಸರಸ್ವತಿಯನ್ನು ಜಿನೇಂದ್ರವಾಣಿ ಎಂದು ವರ್ಣಿಸಿದುದನ್ನು ನೆನಪಿಸಿಕೊಳ್ಳಬಹುದು. ಈ ಸಂದರ್ಭದಲ್ಲಿ ಎಲ್. ಬಸವರಾಜು ಅವರು ನೀಡುವ ವಿವರಣೆ ಮನನೀಯ: 'ಈ ಸಂದರ್ಭದ ಪೂರ್ವಪುರಾಣದ ವಿವರವು ಜೀವಾದಿ ತತ್ವಗಳ ವಿಶ್ಲೇಷಣೆ ವಿವರಣೆಗಳಿಂದ ಜಟಿಲವಾಗಿದ್ದರೆ, ಈ ತತ್ವಾರ್ಥವೆಲ್ಲ ಮೋಕ್ಷಕ್ಕೆ ಕಾರಣವಾದ ಸಮ್ಯಕ್‌ದರ್ಶನ-ಜ್ಞಾನ-ಚಾರಿತ್ರಗಳ ನಿಟ್ಟಿನಲ್ಲಿ ಓರಣವಾಗಿ ಸ್ಪಷ್ಟವಾಗಿ (ಸೂಚ್ಯವಾಗಿಯೂ) ಮನಗಾಣಿಸಲಾಗಿದೆ. ಆದಿಪುರಾಣದ (೧೦. ೬೩ ವ) ಈ ವಚನಭಾಗದಲ್ಲಿ, ಪಂಪನ ದೃಷ್ಟಿ ಕನ್ನಡದೇಶದ ಜೈನಸಾಮಾನ್ಯರ ಕಡೆಗೇ ತಿರುಗಿರುವುದನ್ನು ಇಲ್ಲಿ ಕಾಣಬಹುದು. ಒಟ್ಟಿನಲ್ಲಿ ಪಂಪನ ಆದಿಪುರಾಣ ಎಲ್ಲ ಅರ್ಥದಲ್ಲೂ ಹೆಚ್ಚು ಮಾನವೀಯ, ಪೂರ್ವಪುರಾಣ ವಿದ್ವದೀಯ.' ಕಾವ್ಯದ ಕೊನೆಯಲ್ಲಿ 'ಆದಿಪುರಾಣ ವಸ್ತುಕೃತಿಯಂ ಪೇಟ್ದಂ ಬೆಡಂಗಪ್ಪ ಮಾರ್ಗದೊಳಂ ದೇಸಿಯೊಳಂ' ಎಂದು ಪಂಪ ಹೇಳಿಕೊಂಡಿರುವುದು ಈ ಕಾರಣದಿಂದಾಗಿಯೇ ಇರಬಹುದೇ?]

**ದೇವ ವಿನೇಯೋತ್ಕರ ಸ**
**ಸ್ಯಾವಳಿ ಸುಗಿದಗಿದು ಕೂಡೆ ಬಾಡಿರ್ದುದು ಪಾ**
**ಪಾವಗ್ರಹದಿನದಜೆನಖಿ**
**ಳಾವನಿತಳಕಂತು ತಳಿಯ ಧರ್ಮಾಮೃತದಿಂ** ೧೦೭

**ಪದವಿಭಾಗ-ಅನ್ವಯ-ಅರ್ಥ:** ದೇವ = ದೇವನೇ, ವಿನೇಯ + ಉತ್ಕರ ಸಸ್ಯ + ಆವಳಿ = ಶ್ರದ್ಧಾಳುಗಳ ಸಮೂಹವೆಂಬ ಗಿಡಗಳು, ಪಾಪ + ಅವಗ್ರಹದಿನ್ ಸುಗಿದಗಿದು ಕೂಡೆ ಬಾಡಿರ್ದುದು = ಪಾಪವೆಂಬ ಬರಗಾಲದಿಂದಾಗಿ ಮುರುಟಿಕೊಂಡು ಎಲ್ಲ ಬಾಡಿಹೋಗಿವೆ, ಅದಜೆನ್ + ಅಖಿಳ + ಅವನಿತಳಕೆ + ಅಂತು ಧರ್ಮ + ಅಮೃತದಿಂ ತಳಿಯ = ಅದರಿಂದ ಎಲ್ಲ ಭೂತಳದ ಮೇಲೆ ಧರ್ಮವೆಂಬ ಅಮೃತವನ್ನು ಚಿಮುಕಿಸು.

**ಗದ್ಯಾನುಸರಣ:** 'ದೇವನೇ, ಶ್ರದ್ಧಾಳುಗಳ ಸಮೂಹವೆಂಬ ಗಿಡಗಳು ಪಾಪವೆಂಬ ಬರಗಾಲದಿಂದಾಗಿ ಮುರುಟಿಕೊಂಡು ಎಲ್ಲ ಬಾಡಿಹೋಗಿವೆ; ಅದರಿಂದ ಎಲ್ಲ ಭೂತಳದ ಮೇಲೆ ಧರ್ಮವೆಂಬ ಅಮೃತವನ್ನು ಚಿಮುಕಿಸು.'

ಮಿಳಿರೆ ದಯಾಧ್ವಜಮುನ್ನತಿ
ಗೊಳಗಾಗಿರೆ ಧರ್ಮಚಕ್ರಮಾಯತಿಯಂ ಕೈ
ಕೊಳೆ ಭವ್ಯವರೂಥಿನಿ ನಿ
ರ್ಮಳ ನಿನ್ನ ವಿಹಾರಮಾರನೇನೆಜಿಗಿಸದೋ ೧೦೮

**ಪದವಿಭಾಗ-ಅನ್ವಯ-ಅರ್ಥ:** ನಿರ್ಮಳ = ಪರಿಶುದ್ಧನಾದವನೇ, ದಯಾಧ್ವಜಂ ಮಿಳಿರೆ = ದಯೆಯ ಬಾವುಟವು ಹಾರಾಡಲು, ಧರ್ಮಚಕ್ರಂ ಉನ್ನತಿಗೆ + ಒಳಗಾಗಿರೆ = ಧರ್ಮಚಕ್ರವು ಏಳಿಗೆಯನ್ನು ಹೊಂದಲು, ಭವ್ಯವರೂಥಿನಿ ಆಯತಿಯಂ ಕೈಕೊಳೆ = ಭವ್ಯಜನವೆಂಬ ರಥವು ಗೆಲವನ್ನು ಪಡೆಯಲು, ನಿನ್ನ ವಿಹಾರಂ = ನಿನ್ನ ಧರ್ಮವಿಹರಣವು (ಸಾಗಲಿ), ಆರನ್ + ಏನ್ + ಎಜಿಗಿಸದೋ = (ಅದು) ಯಾರನ್ನು ತಾನೇ ಬಾಗಿಸದು?

**ಗದ್ಯಾನುಸರಣ:** 'ಪರಿಶುದ್ಧನಾದವನೇ, ದಯೆಯ ಬಾವುಟವು ಹಾರಾಡುವಂತೆಯೂ ಧರ್ಮಚಕ್ರವು ಏಳಿಗೆಯನ್ನು ಹೊಂದುವಂತೆಯೂ ಭವ್ಯಜನವೆಂಬ ರಥವು ಗೆಲವನ್ನು ಪಡೆಯುವಂತೆಯೂ ನಿನ್ನ ಧರ್ಮವಿಹರಣವು ಸಾಗಲಿ, ಅದು ಯಾರನ್ನು ತಾನೇ ಬಾಗಿಸದು?'

**ವ॥ ಎಂದು ಆದಿಜಿನೇಂದ್ರಂಗೆ ಬಿನ್ನಪಂಗೆಯ್ಯಲೊಡಮನೇಕ ಭವ್ಯಕೋಟಿಯ ಪುಣ್ಯಪ್ರೇರಣೆಯಿಂದಂ ಸಮವಸರಣಮಂಡಳಂ ಗಗನಮಂಡಳದೊಳ್ ನಡೆಯೆ ಜನಿತಜಗಜ್ಜನಾನಂದನುಂ ಸಮಸ್ತಜನಮೈತ್ರೀ ಸಮೇತನುಂ ಸಹಸ್ರದಿನಕರಸ್ಪರ್ಧಿ ಸಹಸ್ರಾರಧರ್ಮಪುರಸ್ಸರನುಮಾಗಿ ಧರ್ಮಕ್ಷೇತ್ರಂಗಳಂ ವಿಹಾರಿಸಿ ಬಂದು,**

**ಪದವಿಭಾಗ-ಅನ್ವಯ-ಅರ್ಥ:** ಎಂದು ಆದಿಜಿನೇಂದ್ರಂಗೆ ಬಿನ್ನಪಂಗೆಯ್ಯ ಲೊಡಂ = ಎಂದು ಸೌಧರ್ಮೇಂದ್ರನು ಆದಿದೇವನಿಗೆ ಬಿನ್ನಹಗೈದಾಗ, ಅನೇಕ ಭವ್ಯಕೋಟಿಯ ಪುಣ್ಯಪ್ರೇರಣೆಯಿಂದಂ = ಅಸಂಖ್ಯ ಭಾವುಕರ ಪುಣ್ಯಫಲದಿಂದ, ಸಮವಸರಣಮಂಡಳಂ ಗಗನಮಂಡಳದೊಳ್ ನಡೆಯೆ = ಸಮವಸರಣಮಂಟಪವು ಆಗಸದಲ್ಲಿ ಚಲಿಸತೊಡಗಲು, ಜನಿತಜಗತ್ + ಜನಾನ + ಆಂದನುಂ = ಜಗತ್ತಿನ ಜನರಿಗೆ ಆನಂದವನ್ನು ಉಂಟುಮಾಡುವವನೂ, ಸಮಸ್ತಜನಮೈತ್ರೀ ಸಮೇತನುಂ = ಎಲ್ಲ ಜನರ ಸ್ನೇಹವನ್ನು ಪಡೆದವನೂ, ಸಹಸ್ರ ದಿನಕರಕರಸ್ಪರ್ಧಿಸಹಸ್ರಾರಧರ್ಮಪುರಸ್ಸರನುಮಾಗಿ = ಸಾವಿರ ಸೂರ್ಯರ ಪ್ರಭೆಯನ್ನು ಮೀರಿಸಿದ ಸಾವಿರ ಅರಗಳ ಧರ್ಮಚಕ್ರದ ಜೊತೆಗೂಡಿ, ಧರ್ಮಕ್ಷೇತ್ರಂಗಳಂ ವಿಹಾರಿಸಿ ಬಂದು = ಧರ್ಮಕ್ಷೇತ್ರಗಳಿಗೆ ವಿಹಾರವನ್ನು ಕೈಗೊಂಡು,

**ಗದ್ಯಾನುಸರಣ:** ಎಂದು ಸೌಧರ್ಮೇಂದ್ರನು ಆದಿದೇವನಿಗೆ ಬಿನ್ನಹಗೈದ; ಆಗ ಅಸಂಖ್ಯ ಭಾವುಕರ ಪುಣ್ಯಫಲದಿಂದಾಗಿ ಸಮವಸರಣಮಂಟಪವು ಆಗಸದಲ್ಲಿ ಚಲಿಸತೊಡಗಿತು; ಜನರಿಗೆ ಆನಂದವನ್ನು ಉಂಟುಮಾಡುವವನೂ, ಎಲ್ಲ ಜನರ ಸ್ನೇಹವನ್ನು ಪಡೆದವನಾದ ಆದಿದೇವನು ನಡೆಯುತ್ತ ದೇವನು ಸಾವಿರ ಸೂರ್ಯರ

ಪ್ರಭೆಯನ್ನು ಮೀರಿಸಿದ ಸಾವಿರ ಅರಗಳ ಧರ್ಮಚಕ್ರದ ಜೊತೆಗೂಡಿ ಮುನ್ನಡೆದು ನಾನಾ ಧರ್ಮಕ್ಷೇತ್ರಗಳನ್ನು ಸಂದರ್ಶಿಸಿ ಬಂದ.

**ಪರಮಾನಂದಚತುಷ್ಟಯೈಕನಿಳಯಂ ಶ್ರೀಮತ್ಸಭಾಮಂಡಳಾಂ**
**ತರಸಿಂಹಾಸನಸುಸ್ಥಿತಂ ಗಣವೃತಂ ಚಂಚಚ್ಚತುಷ್ಷಷ್ಟಿಚಾ**
**ಮರವಿಭ್ರಾಜಿತನಾನತತ್ರಿಭುವನಂ ಕುಂದೇಂದುದುಗ್ಧಾಬ್ಧಿಪಾಂ**
**ಡುರಕೈಲಾಸನಗೇಂದ್ರದೊಳ್ ನೆಲಸಿದಂ ಸಂಸಾರಸಾರೋದಯಂ** ೧೦೯

**ಪದವಿಭಾಗ–ಅನ್ವಯ–ಅರ್ಥ:** ಪರಮ + ಆನಂದಚತುಷ್ಟಯ + ಏಕನಿಳಯಂ = ಅತ್ಯಂತಿಕ ಆನಂದಚತುಷ್ಟಯಕ್ಕೆ ಏಕಾಶ್ರಯನೂ. ಶ್ರೀಮತ್ + ಸಭಾಮಂಡಳ + ಅಂತರಸಿಂಹಾಸನಸುಸ್ಥಿತಂ = ಶ್ರೇಷ್ಠ ಸಭಾಮಂಡಲದ ನಡುವಣ ಸಿಂಹಪೀಠದಲ್ಲಿ ಕುಳಿತವನೂ, ಗಣವೃತಂ = ಗಣಗಳಿಂದ ಸುತ್ತುವರಿದವನೂ, ಚಂಚತ್ + ಚತುಷ್ಷಷ್ಟಿಚಾಮರವಿಭ್ರಾಜಿತನ್ = ಹೊಳೆಯುವ ಅರುವತ್ತನಾಲ್ಕು ಚಾಮರಗಳಿಂದ ವಿರಾಜಿತನಾದವನೂ. ಆನತತ್ರಿಭುವನಂ = ಮೂಲೋಕಗಳಿಂದ ನಮಿತನೂ, ಸಂಸಾರಸಾರೋದಯಂ = ಆದ ಸಂಸಾರಸಾರೋದಯನು ಕುಂದ + ಇಂದು + ದುಗ್ಧ + ಅಬ್ಧಿಪಾಂಡುರ = ಕುಂದಪುಷ್ಪ ಚಂದ್ರ ಕ್ಷೀರಸಾಗರಗಳಂತೆ ಬೆಳ್ಳಗಿರುವ, ಕೈಲಾಸ + ನಗ + ಇಂದ್ರದೊಳ್ ನೆಲಸಿದಂ = ಕೈಲಾಸಪರ್ವತದಲ್ಲಿ ನೆಲಸಿದ.

**ಗದ್ಯಾನುಸರಣ:** ಅತ್ಯಂತಿಕ ಆನಂದಚತುಷ್ಟಯಕ್ಕೆ ಏಕಾಶ್ರಯನೂ. ಶ್ರೇಷ್ಠ ಸಭಾಮಂಡಲದ ನಡುವಣ ಸಿಂಹಪೀಠದಲ್ಲಿ ಕುಳಿತವನೂ, ಗಣಗಳಿಂದ ಸುತ್ತುವರಿದವನೂ, ಹೊಳೆಯುವ ಅರುವತ್ತನಾಲ್ಕು ಚಾಮರಗಳಿಂದ ವಿರಾಜಿತನಾದವನೂ, ಮೂಲೋಕಗಳಿಂದ ನಮಿತನಾದವನೂ ಆದ ಸಂಸಾರಸಾರೋದಯನು ಕುಂದಪುಷ್ಪ ಚಂದ್ರ ಕ್ಷೀರಸಾಗರಗಳಂತೆ ಬೆಳ್ಳಗಿರುವ ಕೈಲಾಸಪರ್ವತದಲ್ಲಿ ನೆಲಸಿದ.

*

# ಭರತ ಚಕ್ರವರ್ತಿ ಚರಿತಂ: ಅಹಂಕಾರ ನಿರಸನಂ

**ಶ್ರೀಪರಿಪೂರ್ಣಂ ಭರತಮ**
**ಹೀಪಾಳಂ ಚಕ್ರಪೂಜೆಗೆಯ್ದಂ ಸಕಳ**
**ಕ್ಷ್ಮಾಪತಿಶಿರೋರತ್ನಾಂಶು**
**ವ್ಯಾಪಿತಚರಣಂ ಸರಸ್ವತೀಮಣಿಹಾರಂ** ೧

**ಪದವಿಭಾಗ-ಅನ್ವಯ-ಅರ್ಥ:** ಶ್ರೀಪರಿಪೂರ್ಣಂ = ಸಂಪತ್ತಿನಿಂದ ಪರಿಪೂರ್ಣನಾದವನೂ, ಸಕಳಕ್ಷ್ಮಾಪತಿಶಿರೋರತ್ನ + ಅಂಶುವ್ಯಾಪಿತಚರಣಂ = ಎಲ್ಲ ರಾಜರುಗಳ ತಲೆವಣಿಗಳ ಕಾಂತಿಯಿಂದ ವ್ಯಾಪಿತವಾದ ಪಾದಗಳುಳ್ಳವನೂ, ಸರಸ್ವತೀಮಣಿಹಾರಂ = ಸರಸ್ವತಿಯ ಮಣಿಹಾರನೂ, ಭರತಮಹೀಪಾಳಂ ಚಕ್ರಪೂಜೆಗೆಯ್ದಂ = ಆದ ಭರತಮಹಾರಾಜನು ಚಕ್ರರತ್ನದ ಪೂಜೆಯನ್ನು ನೆರವೇರಿಸಿದ.

**ಗದ್ಯಾನುಸರಣ:** ಸಂಪತ್ತಿನಿಂದ ಪರಿಪೂರ್ಣನಾದವನೂ, ಎಲ್ಲ ರಾಜರುಗಳ ತಲೆವಣಿಗಳ ಕಾಂತಿಯಿಂದ ವ್ಯಾಪಿತವಾದ ಪಾದಗಳುಳ್ಳವನೂ, ಸರಸ್ವತಿಯ ಮಣಿಹಾರವಾದವನೂ ಆದ ಭರತಮಹಾರಾಜನು ತನ್ನ ಆಯುಧಾಗಾರದಲ್ಲಿ ಹುಟ್ಟಿದ್ದ ಚಕ್ರರತ್ನದ ಪೂಜೆಯನ್ನು ನೆರವೇರಿಸಿದ.

**ವ॥ ಆ ಸುದರ್ಶನಮೆಂಬ ಚಕ್ರರತ್ನಮಂ ಪೂಜಿಸಿದಿಂ ಬೞಯಂ ಜೀವಾಜೀವರತ್ನಂ ಬೇಱವೇಱ ಸಹಸ್ರಯಕ್ಷರಕ್ಷಿತಂಗಳಪ್ಪುವಂ,**

**ಪದವಿಭಾಗ-ಅನ್ವಯ-ಅರ್ಥ:** ಸುದರ್ಶನಂ + ಎಂಬ ಆ ಚಕ್ರರತ್ನಮಂ ಪೂಜಿಸಿದಿಂ ಬೞಯಂ = ಸುದರ್ಶನವೆಂಬ ಹೆಸರಿನ ಆ ಚಕ್ರರತ್ನವನ್ನು ಪೂಜಿಸಿದ ಬಳಿಕ, ಜೀವ + ಅಜೀವರತ್ನಂ ಬೇಱವೇಱ ಸಹಸ್ರಯಕ್ಷರಕ್ಷಿತಂಗಳಪ್ಪುವಂ = ಎಂಬ ಪ್ರತ್ಯೇಕವಾದ ಜೀವ ಮತ್ತು ಅಜೀವಗಳಾದ ಹಾಗೂ ಸಾವಿರ ಯಕ್ಷರಿಂದ ಕಾಪಿಡಲಾದುವನ್ನು,

**ಗದ್ಯಾನುಸರಣ:** ಸುದರ್ಶನವೆಂಬ ಹೆಸರಿನ ಆ ಚಕ್ರರತ್ನವನ್ನು ಪೂಜಿಸಿದ ಬಳಿಕ, ಜೀವ ಮತ್ತು ಅಜೀವಗಳಾದ ರತ್ನಗಳು ಉದಯಿಸಿದುವು.

**ಪೂಜಿಸಿ ಪೋಜಮಟ್ಟಗ್ರತ**
**ನೂಜೋತ್ಪತ್ತ್ಯುತ್ಸವಕ್ಕೊಡರ್ಚುವ ಪದದೊಳ್**
**ರಾಜಾಧಿರಾಜನಮರಮ**
**ಹೀಜದ ಲೀಲೆಯನೆ ಲೀಲೆಯಿಂ ಕೈಕೊಂಡಂ** ೨

**ಪದವಿಭಾಗ-ಅನ್ವಯ-ಅರ್ಥ:** ಪೂಜಿಸಿ ಪೊಱಮಟ್ಟು = ಜೀವಾಜೀವ ರತ್ನಗಳನ್ನು ಪೂಜಿಸಿ ಹೊರಹೊರಟು, ಅಗ್ರತನೂಜ + ಉತ್ಪತ್ತಿ + ಉತ್ಸವಕ್ಕೆ + ಒಡರ್ಚುವ ಪದದೊಳ್ = ತನ್ನ ಚೊಚ್ಚಲ ಮಗನು ಹುಟ್ಟಿದ ಸಂಭ್ರಮಕ್ಕೆ ತೊಡಗುವ ಸಂದರ್ಭದಲ್ಲಿ, ರಾಜಾಧಿರಾಜನ್ + ಅಮರಮಹೀಜದ ಲೀಲೆಯನೆ ಲೀಲೆಯಿಂ ಕೈಕೊಂಡಂ = ರಾಜರಾಜನಾದ ಭರತನು ಕಲ್ಪವೃಕ್ಷದ ರೀತಿಯನ್ನು ಉತ್ಸುಕನಾಗಿ ಕೈಕೊಂಡ.

**ಗದ್ಯಾನುಸರಣ:** ಜೀವಾಜೀವರತ್ನಗಳನ್ನು ಪೂಜಿಸಿ ಹೊರಹೊರಟು, ತನ್ನ ಚೊಚ್ಚಲ ಮಗನು ಹುಟ್ಟಿದ ಸಂಭ್ರಮಕ್ಕೆ ತೊಡಗುವ ಸಂದರ್ಭದಲ್ಲಿ ರಾಜರಾಜನಾದ ಭರತನು ಕಲ್ಪವೃಕ್ಷದ ರೀತಿಯನ್ನು ಉತ್ಸುಕನಾಗಿ ಕೈಕೊಂಡ.

[**ವಿಶೇಷ ವಿಚಾರ:** ಕಲ್ಪವೃಕ್ಷವು ಹೇಗೆ ಯಥೇಚ್ಛವಾಗಿ ನೀಡುತ್ತದೋ ಹಾಗೆಯೇ ಭರತನೂ ಉಡುಗೊರೆ-ದಾನಗಳನ್ನು ನೀಡಿದ ಎಂಬುದು ಭಾವ.]

**ವ॥ ಅನ್ನೆಗಂ,**

**ಅರ್ಥ:** ಅಷ್ಟರಲ್ಲಿ,

**ಪೊಸಜಾದಿಯ ಬೆಳೆದೊಱಗಿದ**
**ಪೊಸಗಱಮೆಯ ಪೊಸತರಲ್ದ ತಾವರೆಗಳ ಕಂ**
**ಪಸದಳಮೆಸೆದಿರೆ ದೆಸೆದೆಸೆ**
**ಗೊಸಗೆಯೆ ಬರ್ಪಂತೆ ಕಣ್ಗೆ ವಂದುದು ಶರದಂ** ೩

**ಪದವಿಭಾಗ-ಅನ್ವಯ-ಅರ್ಥ:** ಪೊಸಜಾದಿಯ = ಹೊಸ ಜಾಜಿಯ, ಬೆಳೆದು + ಒಱಗಿದ ಪೊಸ + ಕಱಮೆಯ = ಮಾಗಿ ನೆಲಕ್ಕೊರಗಿದ ಹೊಸ ಬತ್ತ, ಪೊಸತು + ಅರಲ್ದ ತಾವರೆಗಳ ಕಂಪು = ಆಗತಾನೆ ಅರಳಿದ ತಾವರೆಗಳ ಸುವಾಸನೆಯು, ಅಸದಳಂ + ಎಸೆದಿರೆ = ಅಪರಿಮಿತವಾಗಿ ಸೊಗಯಿಸಲು, ದೆಸೆದೆಸೆಗೆ + ಒಸಗೆಯೆ ಬರ್ಪಂತೆ ಶರದಂ ಕಣ್ಗೆ ವಂದುದು = ದಿಕ್ಕುದಿಕ್ಕುಗಳಿಗೆ ಸಂತಸ ಉಕ್ಕುವಂತೆ ಶರತ್ಕಾಲವು ಬಂದಿತು.

**ಗದ್ಯಾನುಸರಣ:** ಹೊಸ ಜಾಜಿ, ಮಾಗಿ ನೆಲಕ್ಕೊರಗಿದ ಹೊಸ ಬತ್ತ, ಆಗತಾನೆ ಅರಳಿದ ತಾವರೆಗಳು ಇವುಗಳ ಸುವಾಸನೆಯು, ಅಪರಿಮಿತವಾಗಿ ಸೊಗಸುತ್ತ ದಿಕ್ಕುದಿಕ್ಕುಗಳಿಗೂ ಸಂತಸ ಉಕ್ಕುವಂತೆ ಶರತ್ಕಾಲವು ಬಂದಿತು.

**ಖರಕಿರಣಂಗಳ ಕಾಯ್ಪಿನ**
**ಕರತನದಿಂ ಚಂದ್ರಕಿರಣದುಜ್ವಳಿಕೆಯಿನಾ**
**ಭರತನ ಮುಳಿಸೊಸಗೆಯನನು**
**ಕರಿಸಿದುದೇಂ ಚಕ್ರವರ್ತಿವೃತ್ತಮೊ ಶರದಂ** ೪

**ಪದವಿಭಾಗ-ಅನ್ವಯ-ಅರ್ಥ:** ಖರಕಿರಣಂಗಳ ಕಾಯ್ಪಿನ ಕರತನದಿಂ = ಸೂರ್ಯನ ಕಿರಣಗಳ ಬಿಸಿ ತಾಪದಿಂದಲೂ, ಚಂದ್ರಕಿರಣದ + ಉಜ್ವಳಿಕೆಯಿನ್ = ಬೆಳುದಿಂಗಳ ದೀಪ್ತಿಯಿಂದಲೂ, ಭರತನ ಮುಳಿಸು + ಒಸಗೆಯನ್

ಅನುಕರಿಸಿದುದು = ಭರತನ ಕೋಪ ಸಂತಸಗಳನ್ನು (ಪ್ರಕೃತಿಯು) ಅನುಕರಿಸುವ ಹಾಗೆ ಕಾಣಿಸಿತು; ಶರದಂ ಏಂ ಚಕ್ರವರ್ತಿವೃತ್ತಮೊ = ಶರತ್ಕಾಲದ್ದೂ ಅದೇ ಚಕ್ರವರ್ತಿಯ ಸ್ವಭಾವವೇ.

**ಗದ್ಯಾನುಸರಣ:** ಹಗಲು ಸೂರ್ಯನ ಬಿಸಿಲ ತಾಪ, ರಾತ್ರಿ ಹೊಳೆಯುವ ಬೆಳುದಿಂಗಳು – ಇವು ಭರತನ ಕೋಪ ಸಂತಸಗಳಂತೆಯೇ ಕಾಣಿಸಿತು; ಹೀಗಾಗಿ ಶರತ್ಕಾಲದ್ದೂ ಅದೇ ಚಕ್ರವರ್ತಿಯ ಸ್ವಭಾವವೇ!

[**ವಿಶೇಷ ವಿಚಾರ:** ರಾಜನ ಬಗ್ಗೆ ಕವಿಯ ಅಭಿಪ್ರಾಯ ಏನಿರಬಹುದು? ಎಲ್ಲರೂ ಒಮ್ಮೆ ಕೋಪಗೊಳ್ಳುವ ಒಮ್ಮೆ ತಣ್ಣಗಿರುವ ಸ್ವಭಾವದವರೇ; ಆದರೆ ಶರತ್ಕಾಲದ ಗುಣವನ್ನು ರಾಜನ ಸ್ವಭಾವಕ್ಕೆ ಹೋಲಿಸುವ ಕವಿಯು ಅರಸನ ಊಹಿಸಿಕೊಳ್ಳಲಾರದ ಕೋಪತಾಪಗಳ ಹಾಗೂ ಶಾಂತಕ್ಷಣಗಳ ಬಗ್ಗೆ, ಅಂದರೆ ರಾಜತ್ವದ ತಿಕ್ಕಲುತನದ ಬಗ್ಗೆ ಗೇಲಿ ಮಾಡುತ್ತಿರಬಹುದೇ! 'ಆದಿಪುರಾಣ'ದ ರಚನೆಯ ಕಾಲದಲ್ಲಿ ಪಂಪ ಇನ್ನೂ ರಾಜಾಶ್ರಯವನ್ನು ಪಡೆದಿರಲಿಲ್ಲ. ಆದರೆ ಅರಿಕೇಸರಿಯನ್ನು ಅರ್ಜುನನೊಡನೆ ಹೋಲಿಸಿ 'ಪಂಪಭಾರತ'ವನ್ನು ರಚಿಸುವ ಕಾಲಕ್ಕೆ, ಪ್ರಾಯಶಃ ರಾಜನ ಆಹ್ವಾನದಿಂದಲೇ, ರಾಜಾಶ್ರಯದಲ್ಲಿದ್ದ. ಕಾವ್ಯದ ಮೊದಲ ಸಾಲಿನಿಂದ ಕೊನೆಯ ಸಾಲಿನವರೆಗೂ ಒಂದು ರೀತಿಯಲ್ಲಿ ರಾಜತ್ವದ ವೈಭವೀಕರಣವನ್ನು ಮಾಡುವ ಕವಿಯು ಅಶ್ವತ್ಥಾಮ–ಶಲ್ಯರ ಮೂಲಕ ರಾಜರ 'ಅವಿವೇಕಿ'ತನ ಮತ್ತು ಸಂಚಲವಾದ 'ನೃಪಚಿತ್ತವೃತ್ತಿ'ಯನ್ನು ಕುರಿತು ಟೀಕೆಗೈದಿರುವುದನ್ನು ಗಮನಿಸಿ: 'ಪಂಪಭಾ', ೧೨.೪೦; ೧೨.೯೨ ಮತ್ತು ೯೩]

**ವ। ಅಂತು ತನ್ನ ದಿಗ್ವಿಜಯೋದ್ಯೋಗಕ್ಕುಪಯೋಗಿಯಾಗಿ ಬಂದ ಶಾರದಶ್ರೀಯ ನಿದಿರ್ಗೊಂಡನೇಕಗಣಕಗಣಗಣಿತ ಶುಭದಿನನಕ್ಷತ್ರಮುಹೂರ್ತದೊಳ್ ದಿಗ್ವಿಜಯಪ್ರಯಾಣ ಭೇರಿಯಂ ಪೊಯ್ಸಿದಾಗಳ್**

**ಪದವಿಭಾಗ–ಅನ್ವಯ–ಅರ್ಥ:** ಅಂತು ತನ್ನ ದಿಗ್ವಿಜಯ + ಉದ್ಯೋಗಕ್ಕೆ + ಉಪಯೋಗಿಯಾಗಿ ಬಂದ = ಹಾಗೆ ತನ್ನ ದಿಗ್ವಿಜಯದ ಕಾರ್ಯಕ್ಕೆ ಸಹಾಯಕವಾಗಿ ಬಂದ, ಶಾರದಶ್ರೀಯನ್ + ಇದಿರ್ಗೊಂಡ = ಮಾಗಿಯನ್ನು ಬರಮಾಡಿಕೊಂಡು, ಅನೇಕಗಣಕಗಣಗಣಿತ = ಅನೇಕ ಜೋಯಿಸ ಸಮೂಹದಿಂದ ಲೆಕ್ಕಾಚಾರ ಮಾಡಿದ, ಶುಭದಿನನಕ್ಷತ್ರಮುಹೂರ್ತದೊಳ್ = ಮಂಗಳಕರವಾದ ದಿನ ನಕ್ಷತ್ರ ಮತ್ತು ಮುಹೂರ್ತದಲ್ಲಿ, ದಿಗ್ವಿಜಯಪ್ರಯಾಣಭೇರಿಯಂ ಪೊಯ್ಸಿದಾಗಳ್ = ರಾಜನು ತನ್ನ ದಿಗ್ವಿಜಯ ಯಾತ್ರೆಯ ಆರಂಭಸೂಚಕ ಭೇರಿಯನ್ನು ಹೊಡೆಸಲು.

**ಗದ್ಯಾನುಸರಣ:** ಹಾಗೆ ತನ್ನ ದಿಗ್ವಿಜಯದ ಕಾರ್ಯಕ್ಕೆ ಸಹಾಯಕವಾಗಿ ಬಂದ ಮಾಗಿಯನ್ನು ರಾಜನು ಬರಮಾಡಿಕೊಂಡ; ಅನೇಕ ಜೋಯಿಸ ಸಮೂಹವು ಮಂಗಳಕರವಾದ ತಿಥಿ ವಾರ ನಕ್ಷತ್ರ ಮುಹೂರ್ತಗಳನ್ನು ಲೆಕ್ಕಾಚಾರ ಹಾಕಿ ಹೇಳಿದರು; ಅಂದು ರಾಜನು ತನ್ನ ದಿಗ್ವಿಜಯ ಯಾತ್ರೆಯನ್ನು ಆರಂಭಿಸಿದ: ಪ್ರಯಾಣಭೇರಿಯ ಸದ್ದಾಯಿತು.

[**ವಿಶೇಷ ವಿಚಾರ:** ತಿಥಿ ವಾರ ನಕ್ಷತ್ರ ಯೋಗ ಮತ್ತು ಕರಣಗಳೇ ದಿನದ ಪಂಚಾಂಗ.]

**ಒದವಿದ ಚಕ್ರರತ್ನದೊಳಿದೊಂದೆಣೆಯಾಯ್ತೆನಿಸಿರ್ದ ಚಕ್ರಯು**
**ಗ್ಮದಿನಮರ್ದಚ್ಚು ವಜ್ರಮಯಮಾಗೆ ಕನನ್ಮಣಿಮೌಕ್ತಿಕಪ್ರಭಾ**
**ಸ್ಪದಮಮರೇಂದ್ರರುಂದ್ರಗಿರಿಕುಂಜವಿಚಂಚಳಕೇತನಾಳಿ ಕ**
**ಟ್ಟಿದಿರೊಳೆ ಬಂದು ನಿಂದುದಜಿತಂಜಯಮಾತ್ತಮನೋರಥಂ ರಥಂ ೫**

**ಪದವಿಭಾಗ-ಅನ್ವಯ-ಅರ್ಥ:** ಒದವಿದ ಚಕ್ರರತ್ನದೊಳ್ = ತನಗೆ ಒದಗಿಬಂದ ಚಕ್ರರತ್ನದೊಡನೆ, ಇದೊಂದು + ಎಣೆಯಾಯ್ತು + ಎನಿಸಿರ್ದ = ಇದೂ ಸಮಾನವಾಯಿತು ಎನಿಸಿದ, ಚಕ್ರಯುಗ್ಮದಿನ್ + ಅಮರ್ದ + ಅಚ್ಚು ವಜ್ರಮಯಮಾಗೆ = ಎರಡು ಚಕ್ರಗಳಿಂದ ಕೂಡಿ ಅಚ್ಚು ವಜ್ರಸಮವಾಗಿ ಗಟ್ಟಿಯಾಗಿದ್ದ, ಕನತ್ + ಮಣಿಮೌಕ್ತಿಕಪ್ರಭಾಸ್ಪದಂ = ಹೊಳೆಯುವ ಮಣಿ ಮುತ್ತುಗಳಂತೆ ಕಾಂತಿಯುಕ್ತವಾದ, ಅಮರೇಂದ್ರರುಂದ್ರಗಿರಿಕುಂಜವಿಚಂಚಳಕೇತನಾಳಿ = ದೇವಗಿರಿಯ ಪರ್ವತಶ್ರೇಣಿಯಲ್ಲಿ ಹಾರಾಡುವ ಬಾವುಟಗಳನ್ನು, ಆತ್ತ = ಹೊತ್ತ, ಮನೋರಥಂ = ಮನದ ಇಷ್ಟದಂತಹ, ಅಜಿತಂಜಯಂ ರಥಂ = ಅಜಿತಂಜಯ ಎಂಬ ರಥರತ್ನವು, ಕಟ್ಟಿದಿರೊಳೆ ಬಂದು ನಿಂದುದು = (ಭರತನ) ಕಟ್ಟೆದುರಿನಲ್ಲೇ ಬಂದು ನಿಂತುಕೊಂಡಿತು.

**ಗದ್ಯಾನುಸರಣ:** ತನಗೆ ಒದಗಿಬಂದ ಚಕ್ರರತ್ನದೊಡನೆ ಇದೂ ಸಮಾನವಾಯಿತು ಎನಿಸಿದ, ಎರಡು ಚಕ್ರಗಳಿಂದ ಕೂಡಿದ್ದು ಅಚ್ಚು ವಜ್ರಸಮವಾಗಿ ಗಟ್ಟಿಯಾಗಿದ್ದ, ಹೊಳೆಯುವ ಮಣಿ ಮುತ್ತುಗಳಂತೆ ಕಾಂತಿಯುಕ್ತವಾದ ದೇವಗಿರಿಯ ಪರ್ವತಶ್ರೇಣಿಯಲ್ಲಿ ಹಾರಾಡುವ ಬಾವುಟಗಳನ್ನು ಹೊತ್ತ ತನ್ನ ಮನದ ಇಷ್ಟದಂತಹ ಅಜಿತಂಜಯ ಎಂಬ ರಥವು ಭರತನ ಕಟ್ಟೆದುರಿನಲ್ಲೇ ಬಂದು ನಿಂತುಕೊಂಡಿತು.

**ವ॥ ಆಗಳ್ ಮೌಹೂರ್ತಿಕರ್ ಬಂದು ದೇವಾ ವಿಜಯಪ್ರಸ್ಥಾನಲಗ್ನಂ ಸಾರೆವಂದುದೆಂದು ಬಿನ್ನಪಂಗೈದಾಗಳ್,**

**ಅರ್ಥ:** ಆಗಳ್ ಮೌಹೂರ್ತಿಕರ್ ಬಂದು ದೇವಾ ವಿಜಯಪ್ರಸ್ಥಾನಲಗ್ನಂ ಸಾರೆವಂದುದೆಂದು ಬಿನ್ನಪಂಗೈದಾಗಳ್ = ಆಗ ಜೋಯಿಸರು ಬಂದು'ದೇವಾ, ವಿಜಯಯಾತ್ರೆಗೆ ಮುಹೂರ್ತವು ಹತ್ತಿರ ಬಂದಿತು' ಎಂದು ಬಿನ್ನಹ ಮಾಡಿದರು.

**ರೋದೋಂತರ್ಭಾಗದೊಳ್ ದುಂದುಭಿಗಳೆಸೆಯೆ ಮಾಂಗಲ್ಯಗೀತಪ್ರಣಾದಂ**
**ವಾದಿತ್ರಧ್ವಾನದೊಳ್ ಸಂದಣಿಸೆ ಗುರುಜನೋದ್ಗೀತನಾನಾವಿಧಾಶೀ**
**ರ್ವಾದಂ ಶೇಷಾಕ್ಷತಂಗಳ್‌ವೆರಸೆಸೆಯೆ ಮಹಾವಂದಿವೃಂದಾಂಕಮಾಲಾ**
**ನಾದಂ ಗಂಭೀರನಾದಂ ನೆಗೆಟ್ದಿರೆ ತಳರ್ದಂ ರಾಗದಿಂ ಸಾರ್ವಭೌಮಂ ೬**

**ಪದವಿಭಾಗ-ಅನ್ವಯ-ಅರ್ಥ:** ರೋದಃ + ಅಂತರ್ಭಾಗದೊಳ್ ದುಂದುಭಿಗಳೆಸೆಯೆ = ಕ್ಷಿತಿಜಗಳಲ್ಲಿ ದುಂದುಭಿಯ ಸದ್ದು ತುಂಬಿಕೊಳ್ಳಲು, ಮಾಂಗಲ್ಯಗೀತಪ್ರಣಾದಂ ವಾದಿತ್ರಧ್ವಾನದೊಳ್ ಸಂದಣಿಸೆ = ಮಂಗಳಗಿತೆಗಳ

ನಾದವು ವಾದ್ಯಗಳ ನಾದದೊಡನೆ ಸೇರಲು, ಗುರುಜನ + ಉದ್ಗೀತನಾನಾವಿಧ + ಆಶೀರ್ವಾದದಂ ಶೇಷಾಕ್ಷತಂಗಳ್‌ವೆರಸು + ಎಸೆಯೆ = ಹಿರಿಯರ ಹೇಳುವ ನಾನಾ ವಿಧವಾದ ಆಶೀವಾದಗಳೊಡನೆ ಶೇಷಾಕ್ಷತೆಗಳು ಸೇರಿ ಶೋಭಿಸಲು, ಮಹಾವಂದಿವೃಂದ + ಅಂಕಮಾಲಾನಾದಂ ಗಂಭೀರನಾದಂ ನೆಗಟ್ಟಿರೆ = ಮಹಾ ಹೊಗಳುಭಟರ ಹೆಗ್ಗಳಿಕೆಯ ಶಬ್ದಜಾಲದಲ್ಲಿ ಗಂಭೀರಧ್ವನಿಯು ಕೂಡಲು, ಸಾರ್ವಭೌಮಂ ರಾಗದಿಂ ತಳರ್ದಂ = ಚಕ್ರವರ್ತಿಯು ಪ್ರೀತಿಯಿಂದ ಹೊರಟ.

**ಗದ್ಯಾನುಸರಣ:** ಕ್ಷಿತಿಜಗಳಲ್ಲಿ ದುಂದುಭಿಯ ಸದ್ದು ತುಂಬಿಕೊಂಡಿತು; ಮಂಗಳಗಿತೆಗಳ ನಾದವು ವಾದ್ಯಗಳ ನಾದದೊಡನೆ ಸೇರಿತು; ಹಿರಿಯರ ಹೇಳುವ ನಾನಾ ವಿಧವಾದ ಆಶೀವಾದಗಳೊಡನೆ ಶೇಷಾಕ್ಷತೆಗಳು ಸೇರಿ ಶೋಭಿಸಿತು; ಹೊಗಳುಭಟರ ಹೆಗ್ಗಳಿಕೆಯ ಶಬ್ದಜಾಲದಲ್ಲಿ ಗಂಭೀರಧ್ವನಿಯು ಕೂಡಿಕೊಂಡಿತು; ಆ ಹೊತ್ತಿನಲ್ಲಿ ಚಕ್ರವರ್ತಿಯು ಪ್ರೀತಿಯಿಂದ ಪ್ರಯಾಣ ಹೊರಟ.

**ವ॥ ಅಂತು ತಳರ್ದು ಚಿತ್ತದೊಳ್ ವೀರರಸಂ ಕೈಗಣ್ಮಿ ಪೊಣ್ಮುತ್ತಿರೆ ನಿಜಬಲಮಂ ನೋಡಿ ಎರಡುಂ ಕೆಲದೊಳಂ ಬಂದೆಱಗಿದ ರಾಜಚಕ್ರಮನೀಕ್ಷಣ ದರಹಸಿತಾಳಾಪನಪರಿಹಾಸ ವಿಸ್ರಂಭಾಳಾಪಂಗಳಿಂ ಸಂತಸಂಬಡಿಸುತ್ತುಂ ಬಂದಿಂದಿನ ದಿನಮಯೋಧ್ಯಾ ಪುರಾಸನ್ನದೊಳ್ ನಿಜಸ್ಥಪತಿರತ್ನವಿರಚಿತಮಾಗಿ,**

**ಪದವಿಭಾಗ–ಅನ್ವಯ–ಅರ್ಥ:** ಅಂತು ತಳರ್ದು = ಹಾಗೆ ಹೊರಟು, ಚಿತ್ತದೊಳ್ ವೀರರಸಂ ಕೈಗಣ್ಮಿ ಪೊಣ್ಮುತ್ತಿರೆ = ತನ್ನಮನಸ್ಸಿನಲ್ಲಿ ವೀರರಸವು ತುಂಬಿ ತುಳುಕಲು, ಸಾರ್ವಭೌಮಂ ನಿಜಬಲಮಂ = ಚಕ್ರವರ್ತಿಯು ತನ್ನ ಸೈನ್ಯವನ್ನು ನೋಡಿ, ಎರಡುಂ ಕೆಲದೊಳಂ ಬಂದು + ಎಱಗಿದ = ತನ್ನ ಎರಡೂ ಕಡೆಗಳಿಂದ ಬಂದು ನಮಸ್ಕರಿಸುತ್ತಿದ್ದ ರಾಜಚಕ್ರಮನ್ = ರಾಜಸಮೂಹವನ್ನು, ದರಹಸಿತ + ಆಳಾಪನ + ಪರಿಹಾಸ ವಿಸ್ರಂಭ + ಆಳಾಪಂಗಳಿಂ = ಹುಬ್ಬುಸನ್ನೆ ಮುಗುಳ್ನಗೆ ಮಾತುಕತೆ ಹಾಸ್ಯ ಹಾಗೂ ವಿಶ್ವಾಸದ ಮಾತುಗಳಿಂದ, ಸಂತಸಂ + ಪಡಿಸುತ್ತುಂ ಬಂದು = ಸಂತಸಗೊಳಿಸುತ್ತ ಬಂದು, ಅಂದಿನ ದಿನಂ + ಅಯೋಧ್ಯಾಪುರ + ಆಸನ್ನದೊಳ್ = ಆ ದಿನ ಅಯೋಧ್ಯಾನಗರದ ಬಳಿಯಲ್ಲಿಯೇ, ನಿಜಸ್ಥಪತಿರತ್ನವಿರಚಿತಂ + ಆಗಿ = ತನ್ನ ಸ್ಥಪತಿರತ್ನದಿಂದ ರಚಿತವಾಗಿ,

**ಗದ್ಯಾನುಸರಣ:** ಹಾಗೆ ಹೊರಟು ಭರತನು ತನ್ನಮನಸ್ಸಿನಲ್ಲಿ ವೀರರಸವು ತುಂಬಿ ತುಳುಕುವಂತೆ ಮಾಡಲು ಚಕ್ರವರ್ತಿಯು ತನ್ನ ಸೈನ್ಯವನ್ನು ನೋಡಿ ಬಂದು ನಮಸ್ಕರಿಸಿದ ರಾಜಸಮೂಹವನ್ನು ಕ್ರಮದಿಂದ ಕಡೆಗಣ್ಣೋಟ ಕುಡಿನೋಟ ಹಾಗೂ ಪೂರ್ಣ ದೃಷ್ಟಿಯಿಂದ ನೋಡುತ್ತಲೂ, ಹುಬ್ಬುಸನ್ನೆ ಮುಗುಳ್ನಗೆ ಮಾತುಕತೆ ಹಾಸ್ಯ ಹಾಗೂ ವಿಶ್ವಾಸದ ಮಾತುಗಳಿಂದ ಸಂತಸಗೊಳಿಸುತ್ತ ಬಂದ; ಆ ದಿನ ಅಯೋಧ್ಯಾನಗರದ ಬಳಿಯಲ್ಲಿಯೇ ತನ್ನ ಸ್ಥಪತಿರತ್ನದಿಂದ ರಚಿತವಾದ,

[**ವಿಶೇಷ ವಿಚಾರ:** ತನಗೆ ನಮಸ್ಕರಿಸಿದ ವಿವಿಧ ಮಟ್ಟದ ರಾಜ ಸಾಮಂತ ಮಾಂಡಳಿಕ ಪರಿವಾರಗಳ ಮುಖ್ಯಸ್ಥರನ್ನು ಅವರವರ ಅಂತಸ್ತಿಗೆ ತಕ್ಕಂತೆ ಮಾತನಾಡಿಸುವ ರಾಜನ ರೀತಿಯನ್ನು ಕಪಿಯು ಅದೆಷ್ಟು ಸೂಕ್ಷ್ಮವಾಗಿ ನಿರೂಪಿಸುತ್ತಾನೆ!]

**ವಿಜಯಶ್ರೀಗೃಹಮೆನಿಸುವ**
**ವಿಜಯಪ್ರಸ್ಥಾನಶಿಬಿರನೃಪಮಂದಿರಮಂ**
**ವಿಜಿಗೀಷು ಬಂದು ಪೊಕ್ಕಂ**
**ವಿಜಯಾಲಂಕಾರಬಾಹು ಭರತಮಹೀಶಂ** ೭

**ಪದವಿಭಾಗ-ಅನ್ವಯ-ಅರ್ಥ:** ವಿಜಯಶ್ರೀಗೃಹಂ + ಎನಿಸುವ = ಗೆಲವಿನ ಸಂಪತ್ತಿನ ಮನೆ ಎಂಬಂತಹ, ವಿಜಯಪ್ರಸ್ಥಾನಶಿಬಿರನೃಪಮಂದಿರಮಂ = ದಿಗ್ವಿಜಯಯಾತ್ರೆಯಲ್ಲಿನ ಚಕ್ರವರ್ತಿಯ ಬಿಡಾರದರಮನೆಯನ್ನು, ವಿಜಿಗೀಷು ವಿಜಯ + ಅಲಂಕಾರಬಾಹು ಭರತಮಹೀಶಂ ಬಂದು ಪೊಕ್ಕಂ = ಗೆಲ್ಲುವ ಬಯಕೆಯ ಹಾಗೂ ಗೆಲವನ್ನೇ ಅಲಂಕಾರವಾಗಿ ಧರಿಸಿದ ಭರತ ಚಕ್ರವರ್ತಿಯು ಬಂದು ಸೇರಿದ.

**ಗದ್ಯಾನುಸರಣ:** ಗೆಲವಿನ ಸಂಪತ್ತಿನ ಮನೆ ಎಂಬಂತಿದ್ದ ಚಕ್ರವರ್ತಿಯ ದಿಗ್ವಿಜಯಯಾತ್ರೆಯ ಬಿಡಾರದರಮನೆಯನ್ನು ಗೆಲ್ಲುವ ಬಯಕೆಯ ಹಾಗೂ ಗೆಲವನ್ನೇ ತೋಳಬಂದಿಯಾಗಿ ಧರಿಸಿದ ಭರತ ಚಕ್ರವರ್ತಿಯು ಬಂದು ಸೇರಿದ.

**ವ॥ ಮಱುದಿವಸಂ ಆನಂದಿಗಳೆಂಬ ಪನ್ನೆರಡು ಭೇರಿಗಳುಂ ವಿಜಯಘೋಷಂಗಳೆಂಬ ಪನ್ನೆರಡು ಪಟಹಂಗಳುಂ ಗಂಭಿರಾವರ್ತಂಗಳೆಂಬಿರ್ಪತ್ತನಾಲ್ಕು ಶಂಖಂಗಳುಂ ನಾಲ್ವತ್ತೆಂಟುಕೋಟಿ ಪತಾಕೆಗಳುಮೆಸೆಯೆ ಪೂರ್ವಾಭಿಮುಖನಾಗಿ ಚಕ್ರರತ್ನಪುರಸ್ಸರಂ ಬಿಜಯಂಗೆಯ್ದಾಗಳ್,**

**ಪದವಿಭಾಗ-ಅನ್ವಯ-ಅರ್ಥ:** ಮಱುದಿವಸಂ = ಮಾರನೆಯ ದಿನ, ಆನಂದಿಗಳೆಂಬ ಪನ್ನೆರಡು ಭೇರಿಗಳುಂ = ಆನಂದಿ ಎಂಬ ಹೆಸರಿನ ಹನ್ನೆರಡು ಭೇರಿಗಳೂ, ವಿಜಯಘೋಷಂಗಳೆಂಬ ಪನ್ನೆರಡು ಪಟಹಂಗಳುಂ = ವಿಜಯಘೋಷ ಎಂಬ ಹೆಸರಿನ ಹನ್ನೆರಡು ನಗಾರಿಗಳೂ, ಗಂಭಿರಾವರ್ತಂಗಳೆಂಬ + ಇರ್ಪತ್ತನಾಲ್ಕು ಶಂಖಂಗಳುಂ = ಗಂಭೀರಾವರ್ತ ಎಂಬ ಹೆಸರಿನ ಇಪ್ಪತ್ತಾಲ್ಕು ಶಂಖಗಳೂ, ನಾಲ್ವತ್ತೆಂಟುಕೋಟಿ ಪತಾಕೆಗಳು + ಎಸೆಯೆ = ನಲವತ್ತೆಂಟುಕೋಟಿ ಧ್ವಜಗಳು ಹಾರಾಡುತ್ತಿರಲು, ಪೂರ್ವ + ಅಭಿಮುಖನಾಗಿ ಚಕ್ರರತ್ನಪುರಸ್ಸರಂ ಬಿಜಯಂಗೆಯ್ದಾಗಳ್ = ಪೂರ್ವಕ್ಕೆ ಎದುರಾಗಿ ಚಕ್ರರತ್ನದೊಡನೆ ಪ್ರಯಾಣ ಬೆಳೆಸಲು,

**ಗದ್ಯಾನುಸರಣ:** ಹೀಗೆ ಆ ದಿವಸವನ್ನು ಕಳೆದ; ಮಾರನೆಯ ದಿನ, ಆನಂದಿ ಎಂಬ ಹೆಸರಿನ ಹನ್ನೆರಡು ಭೇರಿಗಳೂ, ವಿಜಯಘೋಷ ಎಂಬ ಹೆಸರಿನ ಹನ್ನೆರಡು ನಗಾರಿಗಳೂ, ಗಂಭೀರಾವರ್ತ ಎಂಬ ಹೆಸರಿನ ಇಪ್ಪತ್ತಾಲ್ಕು ಶಂಖಗಳೂ, ನಲವತ್ತೆಂಟುಕೋಟಿ ಧ್ವಜಗಳಿಂದಲೂ ಕೂಡಿ ಭರತನು ಪೂರ್ವಕ್ಕೆ ಎದುರಾಗಿ ಚಕ್ರರತ್ನದೊಡನೆ ಪ್ರಯಾಣ ಬೆಳೆಸಿದ.

ಘನಘಟೆ ನಭದಿಂದಂ ಧಾತ್ರಿಗೆತ್ತೆತ್ತ ಬಂದ
ತ್ತೆನಿಸಿ ತಳರ್ದುದೆತ್ತಂ ಚೂತಸಪ್ತಚ್ಛದೈಳಾ
ವನಸುರಭಿಮದಾಸಾರಸವಾಸಕ್ತಭೃಂಗೀ
ನಿನದಮುಖರಿತಾಶಾಚಕ್ರಗಂಧೇಭಚಕ್ರಂ ೮

**ಪದವಿಭಾಗ–ಅನ್ವಯ–ಅರ್ಥ:** ಘನಘಟೆ = ಆನೆಗಳ ದಂಡು, ನಭದಿಂದಂ ಧಾತ್ರಿಗೆ + ಎತ್ತೆತ್ತ ಬಂದತ್ತು + ಎನಿಸಿ = ಆಕಾಶದಿಂದ ಭೂಮಿಗೆ ಎಲ್ಲಲ್ಲಿಂದಲೋ ಬಂದಿತು ಎನ್ನಿಸಿ, ಚೂತ ಸಪ್ತಚ್ಛದ + ಏಳಾವನ ಸುರಭಿ ಮದಾಸಾರ + ಆಸವ + ಆಸಕ್ತ = ಮಾವು ಏಳೆಲೆಬಾಳೆ ಏಲಕ್ಕಿಯ ತೋಟಗಳು ಹಾಗೂ ಕಂಪುಳ್ಳ ಮದಜಲವೆಂಬ ಬಂಡಿನಲ್ಲಿ ಆಸೆಯುಳ್ಳ, ಭೃಂಗೀ ನಿನದ ಆಶಾಚಕ್ರ ಮುಖರಿತ = ದುಂಬಿಗಳ ಝೇಂಕಾರವು ತುಂಬಿದ ದಿಕ್ಕುಗಳಲ್ಲಿ, ಎತ್ತಂ ಗಂಧೇಭಚಕ್ರಂ ತಳರ್ದುದು = ಎಲ್ಲೆಡೆಯೂ ಮದ್ದಾನೆಗಳ ಸೈನ್ಯವು ಹೊರಟಿತು

**ಗದ್ಯಾನುಸರಣ:** ಆನೆಗಳ ದಂಡೇ ಆಕಾಶದಿಂದ ಭೂಮಿಗೆ ಎಲ್ಲೆಡೆಯಲ್ಲಿ ಇಳಿದು ಬಂದಿತು ಎನ್ನಿಸುವಂತೆ, ಮಾವು ಏಳೆಲೆಬಾಳೆ ಏಲಕ್ಕಿಯ ತೋಟಗಳು ಹಾಗೂ ಕಂಪುಳ್ಳ ಮದಜಲವೆಂಬ ಬಂಡಿನಲ್ಲಿ ಆಸಕ್ತವಾದ ದುಂಬಿಗಳ ಝೇಂಕಾರವು ದಿಕ್ಕುಗಳಲ್ಲಿ ತುಂಬಿರಲು ಎಲ್ಲೆಡೆಯೂ ಮದ್ದಾನೆಗಳ ಸೈನ್ಯವು ಹೊರಟಿತು.

**ವನಧಿಯ ನೀಳ್ದ ಪೆರ್ದೆರೆಗಳೀ ನೆಲನಂ ಕವಿದಪ್ಪುವೀಗಳೆಂ**
**ಬಿನಮತಿವೇಗದಿಂ ಪರಿವ ಪಾಱುವ ಲಕ್ಕೆಯನೊಡ್ಡುವೊಳ್ಪು ತ**
**ನ್ನನೆ ನಡೆ ನೋಡಿಸುತ್ತುಮಿರೆ ಜಾಯಿಲಮೊಂದೆರಡೆಂದು ತೋಱಿ ನೆ**
**ಟ್ಟನೆ ಪದಿನೆಂಟುಕೋಟಿವರೆಗಂ ತಳರ್ದತ್ತು ತುರಂಗಸಾಧನಂ** ೯

**ಪದವಿಭಾಗ–ಅನ್ವಯ–ಅರ್ಥ:** ವನಧಿಯ ನೀಳ್ದ ಪೆರ್ದೆರೆಗಳ್ + ಈ ನೆಲನಂ ಈಗಳ್ ಕವಿದಪ್ಪುವು ಎಂಬಿನಂ = ಸಮುದ್ರದ ನೀಳವಾದ ಹೆದ್ದೆರೆಗಳು ಈ ಭೂಮಿಯನ್ನೆಲ್ಲ ಈಗ ಆವರಿಸಿಬಿಡುತ್ತದೆ ಎನ್ನುವಂತೆ, ಅತಿವೇಗದಿಂ ಪರಿವ ಪಾಱುವ ಲಕ್ಕೆಯನೊಡ್ಡುವ + ಒಳ್ಪು = ಅತ್ಯಂತ ವೇಗದಿಂದ ಓಡುವ ಹಾರುವ ಗುರಿಯನನು ತಲುಪುವ ಸೊಗಸು, ತನ್ನನೆ ನಡೆ ನೋಡಿಸುತ್ತುಂ + ಇರೆ = ತನ್ನನ್ನೇ ನೋಡುವ ಹಾಗೆ ಮಾಡುತ್ತಿರಲು, ಜಾಯಿಲಂ + ಒಂದು + ಎರಡೆಂದು ತೋಱಿ = ಕುದುರೆಯು ಒಂದೋ ಎರಡೋ ಎನ್ನುವಂತೆ ಅನ್ನಿಸಿ, ನೆಟ್ಟನೆ ಪದಿನೆಂಟುಕೋಟಿವರೆಗಂ ತುರಂಗಸಾಧನಂ ತಳರ್ದತ್ತು = ಹದಿನೆಂಟು ಕೋಟಿಯವರೆಗಿನ ಅಶ್ವದಳವು ಹೊರಟಿತು.

**ಗದ್ಯಾನುಸರಣ:** ಸಮುದ್ರದ ನೀಳವಾದ ಹೆದ್ದೆರೆಗಳು ಈ ಭೂಮಿಯನ್ನೆಲ್ಲ ಈಗ ಆವರಿಸಿಬಿಡುತ್ತದೆ ಎನ್ನುವಂತೆ, ಅತ್ಯಂತ ವೇಗದಿಂದ ಓಡುವ ಹಾರುವ ಗುರಿಯನನು ತಲುಪುವ ಸೊಗಸು ತನ್ನನ್ನೇ ಜನರೆಲ್ಲ ನೋಡುವ ಹಾಗೆ ಮಾಡುತ್ತ, ಮೊದಮೊದಲು ಕುದುರೆಯು ಒಂದೋ ಎರಡೋ ಎನ್ನುವಂತೆ ಅನ್ನಿಸಿ. ಬರೋಬರಿ ಹದಿನೆಂಟು ಕೋಟಿಯವರೆಗಿನ ಅಶ್ವದಳವು ಹೊರಟಿತು.

**ವಿವಿಧಾಯುಧಪೂರ್ಣಂಗಳ್**
**ಪ್ರವೀರಪುರುಷಪ್ರತಿಷ್ಠಿತಂಗಳ್ ಚೇತೋ**
**ಜವಹರಿಯೋಗ್ಯಂಗಳ್ ತಳ**
**ರ್ದುವಾಗಳೆಂಬತ್ತನಾಲ್ಕುಲಕ್ಕೆ ರಥಂಗಳ್** ೧೦

**ಪದವಿಭಾಗ-ಅನ್ವಯ-ಅರ್ಥ:** ವಿವಿಧ + ಆಯುಧಪೂರ್ಣಂಗಳ್ = ನಾನಾ ಆಯುಧಗಳಿಂದ ತುಂಬಿದ, ಪ್ರವೀರಪುರುಷಪ್ರತಿಷ್ಠಿತಂಗಳ್ = ವೀರಯೋಧರು ಕುಳಿತಿದ್ದಂತಹ, ಚೇತೋಜವಹರಿಯೋಗ್ಯಂಗಳ್ = ಮನೋವೇಗದಲ್ಲಿ ಸಾಗಲು ಸಮರ್ಥವಾದ, ಎಂಬತ್ತನಾಲ್ಕುಲಕ್ಕೆ ರಥಂಗಳ್ ಆಗಳ್ ತಳರ್ದುವು = ಎಂಬತ್ತನಾಲ್ಕು ಲಕ್ಷ ರಥಗಳು ಆಗ ಹೊರಟುವು.

**ಗದ್ಯಾನುಸರಣ:** ನಾನಾ ಆಯುಧಗಳಿಂದ ತುಂಬಿದ, ವೀರಯೋಧರು ಕುಳಿತಿದ್ದ ಮನೋವೇಗದಲ್ಲಿ ಸಾಗಲು ಸಮರ್ಥವಾದ ಎಂಬತ್ತನಾಲ್ಕು ಲಕ್ಷ ರಥಗಳು ಹೊರಟುವು.

**ಪಾದಾಭಿಘಾತವಿಚಳ**
**ನ್ಮೇದಿನ್ಯುತ್ಥಿತವಿಶಾಲಧೂಳೀಪಟಲಾ**
**ಚ್ಛಾದಿತಗಗನಂ ನಡೆದುದು**
**ಪಾದಾತಂ ಚತುರಶೀತಿಕೋಟಿಪ್ರಮಿತಂ** ೧೧

**ಪದವಿಭಾಗ-ಅನ್ವಯ-ಅರ್ಥ:** ಪಾದ + ಅಭಿಘಾತವಿಚಳತ್ + ಮೇದಿನಿ + ಉತ್ಥಿತ ವಿಶಾಲಧೂಳೀಪಟಲ + ಆಚ್ಛಾದಿತ ಗಗನಂ = ಹೆಜ್ಜೆಗಳ ಭರದಿಂದ ನೆಲದಿಂದೆದ್ದ ಧೂಳು ಆಗಸವನ್ನೆಲ್ಲ ಮುಚ್ಚಿಬಿಟ್ಟರಲು, ಚತುರಶೀತಿಕೋಟಿಪ್ರಮಿತಂ ಪಾದಾತಂ ನಡೆದುದು = ಎಂಬತ್ತನಾಲ್ಕು ಕೋಟಿ ಪ್ರಮಾಣದ ಪದಾತಿದಳವು ಹೊರಟಿತು.

**ಗದ್ಯಾನುಸರಣ:** ಇಟ್ಟ ಹೆಜ್ಜೆಗಳ ಭರದಿಂದ ನೆಲದಿಂದೆದ್ದ ಧೂಳು ಆಗಸವನ್ನೆಲ್ಲ ಮುಚ್ಚಿಬಿಟ್ಟರಲು, ಎಂಬತ್ತನಾಲ್ಕು ಕೋಟಿ ಪ್ರಮಾಣದ ಪದಾತಿದಳವು ಹೊರಟಿತು.

**ಎಡೆ ನೆಱಿಯದು ಭುವನತಳಂ**
**ನಡೆವ ಚತುರ್ಬಲಕೆ ದಿವಿಜಖೇಚರಸೈನ್ಯ**
**ಕ್ಕೆಡೆ ನೆಱಿಯದು ಗಗನಮುಮೆನೆ**
**ಷಡಂಗಬಲಮಿಂತು ತಳರೆ ತಳರ್ದಂ ಭರತಂ** ೧೨

**ಪದವಿಭಾಗ-ಅನ್ವಯ-ಅರ್ಥ:** ನಡೆವ ಚತುರ್ಬಲಕೆ ಭುವನತಳಂ ಎಡೆ ನೆಱಿಯದು = ನಡೆದು ಹೋಗುವ ನಾಲ್ಕು ಬಗೆಯ ಸೈನ್ಯಕ್ಕೆ ಭೂಮಂಡಳದ ಜಾಗ ಸಾಕಾಗದು, (ಹಾಗೆಯೇ) ದಿವಿಜಖೇಚರಸೈನ್ಯಕ್ಕೆ ಗಗನಮುಂ ಎಡೆ ನೆಱಿಯದು = ದೇವ ಹಾಗೂ ಖೇಚರ ಪಡೆಗಳಿಗೆ ಆಕಾಶದ ಜಾಗವೂ ಸಾಕಾಗುವುದಿಲ್ಲ, ಎನೆ ಇಂತು ಷಟ್ + ಅಂಗಬಲಂ ತಳರೆ ಭರತಂ ತಳರ್ದಂ = ಎಂಬಂತೆ ಈ ರೀತಿಯಲ್ಲಿ ಆರೂ ಬಗೆಯ ಸೈನ್ಯಗಳು ಹೊರಟಾಗ ಜೊತೆಯಲ್ಲಿ ಭರತನು ಹೊರಟ.

**ಗದ್ಯಾನುಸರಣ:** ನಡೆದು ಹೋಗುವ ನಾಲ್ಕು ಬಗೆಯ ಸೈನ್ಯಕ್ಕೆ ಭೂಮಂಡಳದ ಜಾಗ ಸಾಕಾಗದು, ಹಾಗೆಯೇ ದೇವ ಹಾಗೂ ಖೇಚರ ಪಡೆಗಳಿಗೆ ಆಕಾಶದ ಜಾಗವೂ ಸಾಕಾಗುವುದಿಲ್ಲ ಎಂಬಂತೆ ಈ ರೀತಿಯಲ್ಲಿ ಆರೂ ಬಗೆಯ ಸೈನ್ಯಗಳು ಹೊರಟಾಗ ಜೊತೆಯಲ್ಲಿ ಭರತನು ಹೊರಟ.

**ಲಯದಿಂ ಮೆಲ್ಪಿಂ ಬೆಡಂಗಂ ಪಡೆವ ತುರಗದಿಂ ಚಿತ್ರಿತಚ್ಛತ್ರಿಕಾಲೀ**
**ಲೆಯಿನುದ್ದಂಬರ್ಪ ಚೇಟೀನಿವಹದ ಬರವಿಂ ಭೂಷಣಾಡಂಬರೋದ್ಧ್ಯೋ**
**ತಿಯಿನೊಪ್ಪಿರ್ದುದ್ವಿಳಾಸಂ ವಿಳಸಿತಕಮಳಾವಾಸಮೀ ಬರ್ಪುದೇಂ ರಾ**
**ಣಿಯವಾಸಂ ನೋಡಿಮೆಂಬಂತೆಸೆದುದು ಪಲವುಂ ತಂಡದಿಂ ಪೆಂಡವಾಸಂ** ೧೩

**ಪದವಿಭಾಗ–ಅನ್ವಯ–ಅರ್ಥ:** ಲಯದಿಂ ಮೆಲ್ಪಿಂ = ಲಯಬದ್ಧವಾಗಿಯೂ ಮೆಲುವಾಗಿಯೂ, ಬೆಡಂಗಂ ಪಡೆವ ತುರಗದಿಂ = ಬೆಡಗಿನಿಂದ ಕೂಡಿದ ಕುದುರೆಯಿಂದಲೂ, ಚಿತ್ರಿತಚ್ಛತ್ರಿಕಾಲೀಲೆಯಿನ್ = ಚಿತ್ರಣಗೊಂಡ ಛತ್ರಿಯ ವಿಲಾಸದಿಂದಲೂ, ಉದ್ದಂಬರ್ಪ ಚೇಟೀನಿವಹದ ಬರವಿಂ = ಸಾಲಾಗಿ ಬರುವ ಸೇವಕಿಯರ ತಂಡದಿಂದಲೂ, ಭೂಷಣ + ಆಡಂಬರ + ಉದ್ಧ್ಯೋತಿಯಿನ್ = ಆಭರಣಗಳ ವೈಭವದ ಮಹಾ ಕಾಂತಿಯಿಂದಲೂ, ಒಪ್ಪಿರ್ದ + ಉತ್ + ವಿಳಾಸಂ ವಿಳಸಿತಕಮಳ + ಆವಾಸಂ = ಶೋಭಿಸುವ ಅತೀವ ವಿಲಾಸದ ಅರಳಿದ ತಾವರೆಗಳ ಸಮೂಹವೆನಿಸಿದ. ಈ ರಾಣಿಯವಾಸಂ ಬರ್ಪುದೇಂ ನೋಡಿಂ = ಈ ರಾಣಿಯವಾಸವು ಬರುತ್ತಿದೆಯೇನೋ ನೋಡಿರಿ, ಎಂಬಂತೆ ಪಲವುಂ ತಂಡದಿಂ ಪೆಂಡವಾಸಂ ಎಸೆದುದು = ಎನ್ನುವ ರೀತಿಯಲ್ಲಿ ಅಂತಃಪುರವು ನಾನಾ ಗುಂಪುಗಳಲ್ಲಿ ಸೊಗಸಾಯಿತು .

**ಗದ್ಯಾನುಸರಣ:** ಲಯಬದ್ಧವಾಗಿಯೂ ಮೆಲುವಾಗಿಯೂ ಬೆಡಗಿನಿಂದ ಕೂಡಿದ ಕುದುರೆಗಳಿಂದಲೂ, ಚಿತ್ರಣಗೊಂಡ ಛತ್ರಿಯ ವಿಲಾಸದಿಂದಲೂ, ಸಾಲಾಗಿ ಬರುವ ಸೇವಕಿಯರ ತಂಡದಿಂದಲೂ, ಆಭರಣಗಳ ವೈಭವದ ಮಹಾ ಕಾಂತಿಯಿಂದಲೂ, ಶೋಭಿಸುವ ಅತೀವ ವಿಲಾಸದ ಅರಳಿದ ತಾವರೆಗಳ ಸಮೂಹವೆನಿಸಿದ ರಾಣಿಯವಾಸವು ಬರುತ್ತಿದೆಯೇನೋ ನೋಡಿರಿ, ಎಂಬಂತೆ ಎನ್ನುವ ರೀತಿಯಲ್ಲಿ ಅಂತಃಪುರವು ನಾನಾ ಗುಂಪುಗಳಲ್ಲಿ ಸೊಗಸಾಯಿತು.

**ಚತುರಂಗಬಲಸಮನ್ವಿತ**
**ರತರ್ಕ್ಯವಿಕ್ರಮರನೇಕಕರಿತುರಗಮಣಿ**
**ಪ್ರತತಿಗಳಂ ಮುಂದಿಟ್ಟವ**
**ನತರಾದರ್ ಚಕ್ರಿಗಳ್ಕಿ ದಂಡೋಪನತರ್** ೧೪

**ಪದವಿಭಾಗ–ಅನ್ವಯ–ಅರ್ಥ:** ಚತುರಂಗಬಲಸಮನ್ವಿತರ್ = ನಾಲ್ಬಗೆಯ ಬಲದಿಂದ ಕೂಡಿದ, ಅತರ್ಕ್ಯವಿಕ್ರಮರ್ = ಮಹಾ ವೀರರು, ಚಕ್ರಿಗೆ + ಅಳ್ಕಿ = ಚಕ್ರವರ್ತಿಗೆ ಹೆದರಿಕೊಂಡು. ಅನೇಕಕರಿತುರಗಮಣಿಪ್ರತತಿಗಳಂ ಮುಂದಿಟ್ಟು = ಅನೇಕ ಶ್ರೇಷ್ಠ ಆನೆ ಕುದುರೆಗಳ ಸಮೂಹವನ್ನು ಮುಂದಿರಿಸಿ, ದಂಡ + ಉಪನತರ್ ಅವನತರ್ + ಆದರ್ = ಸಾಷ್ಟಾಂಗ ನಮಸ್ಕಾರ ಮಾಡಿ ಶರಣಾದರು.

**ಗದ್ಯಾನುಸರಣ:** ಚಕ್ರವರ್ತಿಗೆ ಹೆದರಿಕೊಂಡು ಮಹಾ ವೀರರು ತಮ್ಮ ನಾಲ್ಕಗೆಯ ಬಲದಿಂದ ಕೂಡಿದ ಶ್ರೇಷ್ಠ ಆನೆ ಕುದುರೆಗಳ ಸಮೂಹವನ್ನು ಮುಂದಿರಿಸಿ ಸಾಷ್ಟಾಂಗ ನಮಸ್ಕಾರ ಮಾಡಿ ಶರಣಾದರು.

**ವ॥ ಮತ್ತಂ ಅತಿಪ್ರಚಂಡಮಂಡಳಿಕರ್ ಭರತೇಶ್ವರಚಕ್ರವರ್ತಿಯ ಬರವಂ ಕೇಳ್ದು,**

**ಅರ್ಥ:** ಅತಿಪ್ರಚಂಡಮಂಡಳಿಕರ್ = ಮಹಾ ಶೂರರಾದ ಮಂಡಲಾಧಿಪತಿಗಳು, ಭರತೇಶ್ವರಚಕ್ರವರ್ತಿಯ ಬರವಂ ಕೇಳ್ದು = ಭರತ ಚಕ್ರವರ್ತಿಯ ಆಗಮನ ವಿಷಯವನ್ನು ತಿಳಿದುಕೊಂಡು,

**ಕರಿಸಂಘಾತಮುಮಂ ಹಯವ್ರಜಮುಮಂ ಪಿಂತಿಕ್ಕಿ ತೂರ್ಯಸ್ವನೋ**
**ತ್ಕರಮಂ ಮಾಣಿಸಿ ಹೇತಿಮುಕ್ತಭಟದೋರ್ದಂಡಾಗ್ರಶುಂಭದ್ಧ್ವಜೋ**
**ತ್ಕರಸಂದೋಹಮುಮಂ ಬಿಸುಟ್ಟುಡುಗಿ ಪಿಂಚಚ್ಛತ್ರಮಂ ಪ್ರಶ್ರಯಾ**
**ಕರವೇಷೋಚಿತರರ್ಘ್ಯಹಸ್ತರಿದಿರಂ ಬಂದರ್ ಭಯಭ್ರಾಂತಿಯಿಂ** ೧೫

**ಪದವಿಭಾಗ–ಅನ್ವಯ–ಅರ್ಥ:** ಕರಿಸಂಘಾತಮುಮಂ = ಆನೆಗಳ ಹಿಂಡನ್ನೂ, ಹಯವ್ರಜಮುಮಂ = ಕುದುರೆಗಳ ಸಮೂಹವನ್ನೂ, ಪಿಂತಿಕ್ಕಿ = ಹಿಂದಕ್ಕೆ ಬಿಟ್ಟು, ತೂರ್ಯಸ್ವನ + ಉತ್ಕರಮಂ ಮಾಣಿಸಿ = ಕಹಳೆಗಳ ಊದಾಟವಿಲ್ಲದೆ, ಹೇತಿಮುಕ್ತ = ಆಯುಧಗಳನ್ನು ಬಿಟ್ಟು, ಭಟದೋರ್ದಂಡ + ಅಗ್ರಶುಂಭತ್ + ಧ್ವಜ + ಉತ್ಕರಸಂದೋಹಮುಮಂ ಬಿಸುಟ್ಟು = ಸೈನಿಕರು ತೋಳುತುದಿಗಳಲ್ಲಿ ಹಿಡಿಯುವ ಧ್ವಜಸಂದೋಹವನ್ನು ತೊರೆದು, ಪಿಂಚಚ್ಛತ್ರಮಂ ಉಡುಗಿ = ನವಿಲುಗರಿಗಳ ಛತ್ರಿಗಳನ್ನು ಬಿಟ್ಟು, ಪ್ರಶ್ರಯಾಕರವೇಷ + ಉಚಿತರ್ = ವಿನಯವಂತರಿಗೆ ಸೂಕ್ತವಾದ ಉಡುಪು ಧರಿಸಿ, ಅರ್ಘ್ಯಹಸ್ತರ್ = ಕೈಯಲ್ಲಿ ಅರ್ಘ್ಯವನ್ನು ಹಿಡಿದು, ಭಯಭ್ರಾಂತಿಯಿಂ ಇದಿರಂ ಬಂದರ್ = ಹೆದರಿಕೆಯಿಂದ ಎದುರುಗೊಂಡರು.

**ಗದ್ಯಾನುಸರಣ:** ಆನೆಗಳ ಹಿಂಡನ್ನೂ, ಕುದುರೆಗಳ ಸಮೂಹವನ್ನೂ ಹಿಂದಕ್ಕೆ ಬಿಟ್ಟು, ಕಹಳೆಗಳ ಊದಾಟವಿಲ್ಲದೆ, ಆಯುಧಗಳನ್ನು ಬಿಟ್ಟು, ಸೈನಿಕರು ತೋಳುತುದಿಗಳಲ್ಲಿ ಹಿಡಿಯುವ ಧ್ವಜಸಂದೋಹವನ್ನು ತೊರೆದು, ನವಿಲುಗರಿಗಳ ಛತ್ರಿಗಳನ್ನು ಬಿಟ್ಟು, ವಿನಯವಂತರಿಗೆ ಸೂಕ್ತವಾದ ಉಡುಪು ಧರಿಸಿ, ಕೈಯಲ್ಲಿ ಅರ್ಘ್ಯವನ್ನು ಹಿಡಿದು ಹೆದರಿಕೆಯಿಂದ ರಾಜನನ್ನು ಎದುರುಗೊಂಡರು.

**ವ॥ ಅಂತು ತನ್ನ ಬಲಂ ಬೆರಸೆಲ್ಲಿಯುಂ ನಿಲ್ಲದೆ ಬಂದು ಲವಣಸಮುದ್ರದೊಳಗನೆ ಪೋಲ್ತಿರ್ದುಪಸಮುದ್ರದ ತಡಿವಿಡಿದು ಅದಂ ನೋಡುತ್ತಂತೆ ಬಂದು ಗಂಗಾದ್ವಾರ ವಜ್ರವೇದಿಕೋತ್ತುಂಗತೋರಣದ್ವಾರದಂತರ್ವಣ ತುಂಗಕುಜಂಗಳ ನೆಟಲ್ಗಳೊಳ್ ನಾಲ್ವತ್ತೆಣ್ಗಾವುದದ ನೀಳದ ಮೂವತ್ತಾಱು ಗಾವುದದಗಲದ ಬೀಡಂ ಬಿಡಿಸಿ, ದರ್ಭಶಯನತಳಗತನಾಗಿ ನಾನಾವಿಧ ಮಂತ್ರಾನುಷ್ಠಾನುಪವಾದದಿಂ ತ್ರಿರಾತ್ರಮನಿರ್ದು ಪಂಚಪರಮೇಷ್ಠಿಗಳ್ಗೆ ಪೂಜೆಯಂ ಪುರೋಹಿತಂ ಮಾಡಿ ಶಾಂತಿಕಪೌಷ್ಟಿಕಕ್ರಿಯೆಯಂ ನಿರ್ವರ್ತಿಸಿ ಮಱುದಿವಸಂ ನೇಸರ್ಮೂಡೆ ಪಡೆವಳ್ಳನಂ ಪಡೆಗೆ ಕಾಪುವೇಟ್ಟು ದಿವ್ಯಾಸ್ತ್ರಂಗಳಿಂ ತೀವಿ ಗಿಳಿಯ ಬಣ್ಣದ ಕುದುರೆಗಳೊಳ್ ಪೂಡಿದಜಿತಂಜಯಮೆಂಬ ರಥಮನೇಱಿ ಸಾರಥಿಯಂ ಚೋದಿಸಲ್ವೇೞ್ದು ಗಂಗಾದ್ವಾರದೊಳಗನೆ ಲವಣಜಳಧಿಯಂ ಪೊಕ್ಕಾಗಳ್,**

**ಪದವಿಭಾಗ-ಅನ್ವಯ-ಅರ್ಥ:** ಅಂತು ತನ್ನ ಬಲಂ ಬೆರಸು = ಹೀಗೆ ತನ್ನ ಸೈನ್ಯದೊಡನೆ. ಎಲ್ಲಿಯುಂ ನಿಲ್ಲದೆ ಬಂದು = ಎಲ್ಲಿಯೂ ನಿಲ್ಲದೆ ಬಂದು, ಲವಣಸಮುದ್ರದೊಳಗನೆ = ಲವಣಸಮುದ್ರದ ರೀತಿಯನ್ನೇ, ಪೋಲ್ತಿರ್ದ + ಉಪಸಮುದ್ರದ ತಡಿವಿಡಿದು = ಹೋಲುತ್ತಿದ್ದ ಉಪಸಮುದ್ರದ ದಡದ ಗುಂಟ, ಅದಂ ನೋಡುತ್ತೆ + ಅಂತೆ ಬಂದು = ಅದನ್ನೇ ನೋಡುತ್ತ ಹಾಗೆಯೇ ಮುನ್ನಡೆದು, ಗಂಗಾದ್ವಾರದ ವಜ್ರವೇದಿಕಾ = ಗಂಗಾದ್ವಾರದ ವೇದಿಕೆಯ, ಉತ್ತುಂಗತೋರಣದ್ವಾರದ = ಎತ್ತರವಾದ ತೋರಣದ್ವಾರದ, ಅಂತರ್ವಣ ತುಂಗಕುಜಂಗಳ ನೆಟಿಲ್ಗಳೊಳ್ = ಒಳಗಿದ್ದ ಭಾರಿ ಮರಗಳ ನೆರಳಿನಲ್ಲಿ. ನಾಲ್ವತ್ತೆಣ್ಗಾವುದದ ನೀಳದ = ನಲವತ್ತೆಂಟು ಗಾವುದ ಉದ್ದದ, ಮೂವತ್ತಾಱು ಗಾವುದದ + ಅಗಲದ ಬೀಡಿಂಗೆ = ಮೂವತ್ತಾರು ಗಾವುದ ಅಗಲವಾದ ಸೇನಾಬಿಡಾರಕ್ಕೆ, ವಾಸ್ತುವಿಭವಕ್ಕೆ + ಎಡೆಯಿಲ್ಲದೆ = ವಾಸ್ತುವಿನ ಶ್ರೀಮಂತಿಕೆಗೆ ಅವಕಾಶವಿಲ್ಲದೆ, ಕುಱುಂಬಂಗಳೊಳ್ ಬೀಡಂ ಬಿಡಿಸಿದಾಗಳ್ = ಸಣ್ಣ ಸಣ್ಣ ಬಿಡಾರಗಳಲ್ಲಿ ಬೀಡುಬಿಡಿಸಿ, ದರ್ಭಶಯನತಳಗತನಾಗಿರ್ದು = ಹುಲ್ಲುಹಾಸಿಗೆಯಲ್ಲಿ ಮಲಗಿ, ನಾನಾವಿಧ ಮಂತ್ರಾನುಷ್ಠಾನುನುಪವಾದಿಂ ತ್ರಿರಾತ್ರಮನಿರ್ದು = ನಾನಾ ಬಗೆಯ ಮಂತ್ರಗಳ ಅನುಷ್ಠಾನದೊಡನೆ ಮೂರು ರಾತ್ರಿ ಉಪವಾಸವಿದ್ದು, ಅಂತು ಪುರೋಹಿತಂ ಪಂಚಪರಮೇಷ್ಠಿಗಳ್ಗೆ ಪೂಜೆಯಂ ಮಾಡಿ = ಪುರೋಹಿತನು ಪಂಚಪರಮೇಷ್ಠಿಗಳಿಗೆ ಪೂಜೆಯನ್ನು ಸಲ್ಲಿಸಿ, ಶಾಂತಿಕಪೌಷ್ಟಿಕಕ್ರಿಯೆಯಂ ನಿರ್ವರ್ತಿಸಿ = ಶಾಂತಿಕಪೌಷ್ಟಿಕಕ್ರಿಯೆಗಳನ್ನು ಮುಗಿಸಿದ ಬಳಿಕ, ಮಱುದಿವಸಂ ನೇಸರ್ + ಮೂಡೆ = ಮಾರನೆಯ ದಿನ ಸೂರ್ಯ ಉದಯಿಸಿದಾಗ, ಪಡೆವಳ್ಳನಂ ಪಡೆಗೆ ಕಾಪುವೇಟ್ಟು = ಸೇನಾಪತಿಯನ್ನು ಸೈನ್ಯದ ರಕ್ಷಣೆಗೆ ನೇಮಿಸಿ, ದಿವ್ಯ + ಅಸ್ತ್ರಂಗಳಿಂ ತೆಕ್ಕನೆ ತೀವಿ = ದಿವ್ಯ ಅಸ್ತ್ರಗಳಿಂದಲೇ ಕೂಡಿದ್ದ, ಗಿಳಿಯ ಬಣ್ಣದ ಕುದುರೆಗಳೊಳ್ ಪೂಡಿದ = ಹಸಿರು ಬಣ್ಣದ ಕುದುರೆಗಳನ್ನು ಹೂಡಿದ, ಅಜಿತಂಜಯಂ + ಎಂಬ ರಥಮನ್ + ಏಱಿ = ಅಜಿತಂಜಯ ಎಂಬ ರಥವನ್ನು ಹತ್ತಿ, ಸಾರಥಿಯಂ ಚೋದಿಸಲ್ + ಪೇೞ್ದು = ಸಾರಥಿಗೆ ರಥವನ್ನು ನಡೆಸಲು ಹೇಳಿ, ಗಂಗಾದ್ವಾರದೊಳಗನೆ ಲವಣಜಳಧಿಯಂ ಪೊಕ್ಕಾಗಳ್ = ಗಂಗಾದ್ವಾರದ ಮೂಲಕ ಲವಣಸಮುದ್ರವನ್ನು ಹೊಗಲು,

**ಗದ್ಯಾನುಸರಣ:** ಹೀಗೆ ತನ್ನ ಸೈನ್ಯದೊಡನೆ ಎಲ್ಲಿಯೂ ನಿಲ್ಲದೆ ಬಂದು, ಲವಣಸಮುದ್ರದ ರೀತಿಯನ್ನೇ ಹೋಲುತ್ತಿದ್ದ ಉಪಸಮುದ್ರದ ದಡದ ಗುಂಟ ಅದನ್ನೇ ನೋಡುತ್ತ ಹಾಗೆಯೇ ಮುನ್ನಡೆದರು; ಗಂಗಾದ್ವಾರದ ವೇದಿಕೆಯ ಎತ್ತರವಾದ ತೋರಣದ್ವಾರದ ಒಳಗಿದ್ದ ಭಾರಿ ಮರಗಳ ನೆರಳಿನಲ್ಲಿ ನಲವತ್ತೆಂಟು ಗಾವುದ ಉದ್ದ ಹಾಗೂ ಮೂವತ್ತಾರು ಗಾವುದ ಅಗಲವಾದ ಸೇನಾಬಿಡಾರದ ವಾಸ್ತುವಿಗೆ ಅವಕಾಶವಿಲ್ಲದ್ದರಿಂದ ಸಣ್ಣ ಸಣ್ಣ ಬಿಡಾರಗಳಲ್ಲಿ ಬೀಡುಬಿಟ್ಟರು. ಭರತ ಹುಲ್ಲುಹಾಸಿಗೆಯಲ್ಲಿ ಮಲಗಿದ; ನಾನಾ ಬಗೆಯ ಮಂತ್ರಗಳ ಅನುಷ್ಠಾನದೊಡನೆ

ಮೂರು ರಾತ್ರಿ ಉಪವಾಸವಿದ್ದು ಪುರೋಹಿತನು ಪಂಚಪರಮೇಷ್ಠಿಗಳಿಗೆ ಪೂಜೆಯನ್ನು ಸಲ್ಲಿಸಿ, ಶಾಂತಿಕಪೌಷ್ಟಿಕಕ್ರಿಯೆಗಳನ್ನು ಮುಗಿಸಿದ; ಮಾರನೆಯ ದಿನ ಬೆಳಗಾಗಲು ಸೇನಾಪತಿಯನ್ನು ಸೈನ್ಯದ ರಕ್ಷಣೆಗೆ ನೇಮಿಸಿದ; ಆ ಬಳಿಕ ಹಸಿರು ಬಣ್ಣದ ಕುದುರೆಗಳನ್ನು ಹೂಡಿದ್ದು ದಿವ್ಯ ಅಸ್ತ್ರಗಳನ್ನು ತುಂಬಿದ್ದ ಅಜಿತಂಜಯ ಎಂಬ ರಥವನ್ನು ಹತ್ತಿದ; ತನಗೆ ಅನುರೂಪನಾಗಿದ್ದ ಸಾರಥಿಗೆ ರಥವನ್ನು ನಡೆಸಲು ಹೇಳಿದ; ಆ ಬಳಿಕ ಗಂಗಾದ್ವಾರದ ಮೂಲಕ ಲವಣಸಮುದ್ರವನ್ನು ಹೊಕ್ಕ.

**ಕುದುರೆಯ ಖುರಂಗಳಿನಿಸಾ**
**ಱದೆಯುಂ ಚಕ್ರಂಗಳರ್ದು ಬಾರದೆಯುಂ ಚ**
**ಕ್ರದ ಚೀತ್ಕಾರರವಂ ಕುಂ**
**ದದೆಯುಂ ರಥಮಿಂತು ಪರಿದುದಂಭೋನಿಧಿಯೊಳ್ ೧೬**

**ಪದವಿಭಾಗ–ಅನ್ವಯ–ಅರ್ಥ:** ಕುದುರೆಯ ಖುರಂಗಳ್ + ಇನಿಸು + ಆಱದೆಯುಂ = ಕುದುರೆಗಳ ಗೊರಸು ನೀರಲ್ಲಿ ಸ್ವಲ್ಪವಾದರೂ ಮುಳುಗದಂತೆಯೂ, ಚಕ್ರಂಗಳ್ + ಅರ್ದು ಬಾರದೆಯುಂ = ಚಕ್ರಗಳು ನೀರಲ್ಲಿ ಅದ್ದದಂತೆಯೂ, ಚಕ್ರದ ಚೀತ್ಕಾರರವಂ ಕುಂದದೆಯುಂ = ಚಕ್ರದ ಚೀತ್ಕಾರಧ್ವನಿ ಕಡಿಮೆಯಾಗ ದಂತೆಯೂ, ರಥಂ + ಇಂತು ಅಂಭೋನಿಧಿಯೊಳ್ ಪರಿದುದು = ಹೀಗೆ ರಥವು ಸಮುದ್ರದಲ್ಲಿ ಸಾಗಿತು.

**ಗದ್ಯಾನುಸರಣ:** ಕುದುರೆಗಳ ಗೊರಸು ನೀರಲ್ಲಿ ಸ್ವಲ್ಪವಾದರೂ ಮುಳುಗದಂತೆ, ರಥದ ಚಕ್ರಗಳು ನೀರಲ್ಲಿ ಅದ್ದದಂತೆ, ಚಕ್ರದ ರಭಸ ಕಡಿಮೆಯಾಗದಂತೆ ರಥವು ಸಮುದ್ರದಲ್ಲಿ ಸಾಗಿತು.

**ವ॥ ಅಂತು ರಥಂ ಪನ್ನೆರಡುಯೋಜನಂಬರಂ ಪೋದಾಗಳ್, ಅಂತು ಬಿಣ್ಗುಂಡಿಕ್ಕಿದ ಬಹಿತ್ರದಂತೆ ಅಲ್ಲಿಂ ತಳರದೆ ನಿಂದ ರಥಮಂ ಕಂಡು, ಮುಳಿದು ವಜ್ರಕಾಂಡಮೆಂಬ ವಿಜಯಕಾರ್ಮುಕಕ್ಕೆ ನಿಜಭುಜಾದಂಡಮಂ ನೀಡಿ ನೀಡಿಲ್ಲದೇಜೆಸಿ ನೀವಿ ಜೇವೊಡೆಗೈದಮೋಘ ಬಾಣಮಂ ಬಾಣಧಿಯಿನುರ್ಚಿಕೊಂಡು**

**ಪದವಿಭಾಗ–ಅನ್ವಯ–ಅರ್ಥ:** ಅಂತು ರಥಂ ಪನ್ನೆರಡುಯೋಜನಂಬರಂ ಪೋದಾಗಳ್ = ರಥವು ಹನ್ನೆರಡು ಯೋಜನ ಸಾಗಿರಲು, ಬಿಣ್ಗುಂಡು + ಇಕ್ಕಿದ ಬಹಿತ್ರದಂತೆ ಅಲ್ಲಿಂ ತಳರದೆ ನಿಂದ ರಥಮಂ ಕಂಡು = ಲಂಗರು ಹಾಕಿದ ಹಡಗಿನಂತೆ ಚಲಿಸದೆ ನಿಂತ ರಥವನ್ನು ಕಂಡು, ಮುಳಿದು = ಕೋಪಗೊಂಡು, ವಜ್ರಕಾಂಡಂ + ಎಂಬ ವಿಜಯಕಾರ್ಮುಕಕ್ಕೆ ನಿಜಭುಜಾದಂಡಮಂ ನೀಡಿ ನೀಡಿಲ್ಲದೆ + ಏಜೆಸಿ ನೀವಿ ಜೇವೊಡೆಗೈದು = ವಜ್ರಕಾಂಡ ಎಂಬ ತನ್ನ ಬಿಲ್ಲಿಗೆ ಬಾಹುದಂಡವನ್ನು ಚಾಚಿ ತಡಮಾಡದೆ ಹಿಡಿದು ನಾರಿಯನ್ನು ಹಿಡಿದೆಳೆದು ಠೇಂಕಾರ ಮಾಡಿ, ಬಾಣಧಿಯಿಂ ಅಮೋಘ ಬಾಣಮಂ + ಉರ್ಚಿಕೊಂಡು = ತನ್ನ ಬತ್ತಳಿಕೆಯಲ್ಲಿದ್ದ ನಿಸ್ವಾರ್ಥಕವಾಗದ ಬಾಣವನ್ನು ತೆಗೆದುಕೊಂಡ.

**ಅರ್ಥ:** ಈ ರೀತಿಯಲ್ಲಿ ರಥವು ಹನ್ನೆರಡು ಯೋಜನ ಸಾಗಿರಲು, ಲಂಗರು ಹಾಕಿದ ಹಡಗಿನಂತೆ ಚಲಿಸದೆ ನಿಂತ ರಥವನ್ನು ಕಂಡು, ಕೋಪದಿಂದ ವಜ್ರಕಾಂಡ

ಎಂಬ ತನ್ನ ಬಿಲ್ಲಿಗೆ ಬಾಹುದಂಡವನ್ನು ಚಾಚಿ ತಡಮಾಡದೆ ಹಿಡಿದು ನಾರಿಯನ್ನು ಹಿಡಿದೆಳೆದು ಠೇಂಕಾರ ಮಾಡಿ, ತನ್ನ ಬತ್ತಳಿಕೆಯಲ್ಲಿದ್ದ ನಿಸ್ವಾರ್ಥಕವಾಗದ ಬಾಣವನ್ನು ತೆಗೆದುಕೊಂಡು ಹೂಡಿದ.

**ಪುರುಪರಮೇಶ್ವರಪುತ್ರಂ**
**ಭರತೇಶ್ವರಚಕ್ರವರ್ತಿ ಬಂದಿರ್ದಂ ತ**
**ದ್ಧರಣಿನಿವಾಸಿಗಳುಂ ವ್ಯಂ**
**ತರಾಮರರ್ ಬಂದು ಕಾಣ್ಬುದವನತಮಕುಟರ್** ೧೭

**ಪದವಿಭಾಗ–ಅನ್ವಯ–ಅರ್ಥ:** ಪುರುಪರಮೇಶ್ವರಪುತ್ರಂ ಭರತೇಶ್ವರಚಕ್ರವರ್ತಿ ಬಂದಿರ್ದಂ = ಪುರುದೇವನ ಮಗನಾದ ಭರತಚಕ್ರವರ್ತಿಯು ಬಂದಿದ್ದಾನೆ, ತತ್ + ಧರಣಿವಾಸಿಗಳುಂ ವ್ಯಂತರ + ಅಮರರ್ ಅವನತಮಕುಟರ್ ಬಂದು ಕಾಣ್ಬುದು = ಆ ಭೂಭಾಗದ ಪ್ರಜೆಗಳೂ ವ್ಯಂತರರೂ ದೇವರುಗಳು ತಲೆಬಾಗಿ ಬಂದು ಕಾಣಬೇಕು.

**ಗದ್ಯಾನುಸರಣ:** 'ಪುರುದೇವನ ಮಗನಾದ ಭರತಚಕ್ರವರ್ತಿಯು ಬಂದಿದ್ದಾನೆ, ಈ ಭೂಭಾಗದ ಪ್ರಜೆಗಳೂ ವ್ಯಂತರರೂ ದೇವರುಗಳು ತಲೆಬಾಗಿ ಬಂದು ಕಾಣಬೇಕು.'

**ಎಂಬಕ್ಕರದಿಂದೆಸೆದುದ**
**ನಂಬರತಳಮೊಡನೆ ಬೆಳಗೆ ಬೆಳೆಪುದನಾ ಶೌ**
**ರ್ಯಾಂಬುಧಿ ತೊಟ್ಟಿಸಲೊಡಮಿರ**
**ದಂಬರದಿಂದುಳ್ಕುವುಳ್ಕಮಂ ಪೋಲ್ತು ಕರಂ** ೧೮

**ಪದವಿಭಾಗ–ಅನ್ವಯ–ಅರ್ಥ:** ಎಂಬ + ಅಕ್ಕರದಿಂದೆ + ಎಸೆದುದನ್ = ಎಂಬ ಬರಹದಿದ ಕೂಡಿದ, ಅಂಬರತಳಂ + ಒಡನೆ ಬೆಳಗೆ ಬೆಳೆಪುದನ್ = ಆಕಾಶಮಂಡಲವನ್ನೇ ಬೆಳಗಿಸುವ ಬೆಳಕಿನಿಂದ ಕೂಡಿದ ಆ ಬಾಣವನ್ನು, ಆ ಶೌರ್ಯ + ಅಂಬುಧಿ ತೊಟ್ಟು + ಇಸಲೊಡಂ = ಆ ಶೌರ್ಯಸಮುದ್ರನಾದ ಭರತನು ಹೂಡಿ ಬಿಡಲು, ಇರದೆ + ಅಂಬರದಿಂದೆ + ಉಳ್ಕುವುಳ್ಕಮಂ ಕರಂ ಪೋಲ್ತು = ಆಕಾಶದಿಂದ ಬೀಳುವ ಉಲ್ಕೆಯನ್ನು ಹೋಲುತ್ತ,

**ಗದ್ಯಾನುಸರಣ:** ಎಂಬ ಬರಹದಿದ ಕೂಡಿದ ಆ ಬಾಣವನ್ನು ಶೌರ್ಯ ಸಮುದ್ರನಾದ ಭರತನು ಬಿಲ್ಲಿಗೆ ಹೂಡಿ ಬಿಟ್ಟ; ಅದು ಆಕಾಶಮಂಡಲವನ್ನೇ ಬೆಳಗಿಸುವ ಬೆಳಕನ್ನು ಸೂಸುತ್ತ ಆಕಾಶದಿಂದ ಬೀಳುವ ಉಲ್ಕೆಯಂತೆ ಕಾಣಿಸಿತು.

**ಕಾಳಾಂತಪವನಹತಿಕ**
**ಲ್ಲೋಳಾವಿಳಜಳಧಿನಿನದಮೋ ನಿರ್ಘಾತಾ**
**ಭೀಳತರರಭಸಮೋ ಲಯ**
**ಕಾಳಾಂಬುದಘೋಷಮೋ ನೆಲಂ ಮೊಬಗಿದುದೋ** ೧೯

**ಪದವಿಭಾಗ–ಅನ್ವಯ–ಅರ್ಥ:** ಕಾಳ + ಅಂತಪವನಹತಿಕಲ್ಲೋಳ + ಆವಿಳಜಳಧಿನಿನದಮೋ = ಪ್ರಳಯಕಾಲದ ಬಿರುಗಾಳಿಯಿಂದಾದ

ಉಬ್ಬರದಲೆಗಳಿಂದ ಕದಡಿ ಹೊಮ್ಮುವ ಭೋರ್ಗರೆತವೋ, ನಿರ್ಘಾತ + ಅಭೀಳತರರಭಸಮೋ = ಸಿಡಿಲಿನ ಭಯಂಕರ ಹೊಡೆತವೋ, ಲಯಕಾಳ + ಅಂಬುದಘೋಷಮೋ = ಪ್ರಳಯಕಾಲದ ಗುಡುಗೋ, ನೆಲಂ ಮೊಳಗಿದುದೋ = ಭೂಮಿ ಮೊಳಗಿತೋ

**ಗದ್ಯಾನುಸರಣ:** ಪ್ರಳಯಕಾಲದ ಬಿರುಗಾಳಿಯಿಂದಾದ ಉಬ್ಬರದಲೆಗಳಿಂದ ಕದಡಿ ಹೊಮ್ಮುವ ಭೋರ್ಗರೆತವೋ, ಸಿಡಿಲಿನ ಭಯಂಕರ ಹೊಡೆತವೋ, ಪ್ರಳಯಕಾಲದ ಗುಡುಗೋ, ಭೂಮಿ ಮೊಳಗಿತೋ!

**ಎನೆ ಪುರಜನಮಂತಃಪುರ**
**ಜನಮುಂ ಪರಿಜನಮುಮಳ್ಕೆ ತದ್ರಾಜನಿಕೇ**
**ತನದಲ್ಲಿ ಬಿರ್ದು ಪಡೆದುದು**
**ಮನಕ್ಕೆ ಕಡುಮುಳಿಸಿನೆಸಕಮಂ ಮಾಗಧನಾ** ೨೦

**ಪದವಿಭಾಗ-ಅನ್ವಯ-ಅರ್ಥ:** ಎನೆ = ಎಂಬಂತೆ, ಪುರಜನಮಂ + ಅಂತಃಪುರಜನಮುಂ ಪರಿಜನಮುಂ + ಅಳ್ಕೆ = ಆ ಊರಿನ ಪ್ರಜೆಗಳೂ ಅಂತಃಪುರಸ್ತ್ರೀಯರೂ ಪರಿವಾರದ ಜನರೂ ಹೆದರಲು, ತತ್ + ರಾಜನಿಕೇತನದಲ್ಲಿ ಬಿರ್ದು = ಆ ರಾಜನ ಅರಮನೆಯಲ್ಲಿ ಬಿದ್ದು, ಮಾಗಧನಾ ಮನಕ್ಕೆ ಕಡುಮುಳಿಸಿನ + ಎಸಕಮಂ ಪಡೆದುದು = ಮಾಗಧನ ಮನಸ್ಸಿನಲ್ಲಿ ಅತೀವ ಕೋಪವನ್ನು ಉಂಟುಮಾಡಿತು.

**ಗದ್ಯಾನುಸರಣ:** ಎಂಬಂತೆ ಆ ಊರಿನ ಪ್ರಜೆಗಳೂ ಅಂತಃಪುರಸ್ತ್ರೀಯರೂ ಪರಿವಾರದ ಜನರೂ ಹೆದರಿದರು; ಬಾಣವು ಅರಮನೆಯಲ್ಲಿ ಬಿದ್ದು, ಅದನ್ನು ನೋಡಿದ ಮಾಗಧನಿಗೆ ಅತೀವ ಕೋಪವನ್ನುಂಟುಮಾಡಿತು.

**ಶರಚಾಪಚಕ್ರಭೀಕರ**
**ಕರವಾಳಾಯುಧವಿರಾಜಿ ಮತ್ಕರಯುಗಮಿಂ**
**ದೊರೆಗಿಡೆ ಪೆಱಂಗೆ ಮುಗಿವುದೆ**
**ಕಿರೀಟಮಿದು ಪೆಂಪುಗಿಡೆ ಪೆಱಂಗೆಱಗುವುದೇ** ೨೧

**ಪದವಿಭಾಗ-ಅನ್ವಯ-ಅರ್ಥ:** ಶರ ಚಾಪ ಚಕ್ರ ಭೀಕರ ಕರವಾಳ + ಆಯುಧವಿರಾಜಿ ಮತ್ + ಕರಯುಗಂ = ಬಾಣ ಬಿಲ್ಲು ಚಕ್ರ ಭೀಕರ ಆಯುಧಗಳಿಂದ ಶೋಭಿಸುವ ನನ್ನ ಈ ಎರಡೂ ಕೈಗಳು, ದೊರೆ + ಕಿಡೆ ಇಂ ಪೆಱಂಗೆ ಮುಗಿವುದೆ = ತಮ್ಮ ಹೆಚ್ಚುಗಾರಿಕೆಯನ್ನು ಕಳೆದುಕೊಂಡು ಬೇರೆಯವನಿಗೆ ಮುಗಿಯುತ್ತದೆಯೇ? ಪೆಂಪು + ಕಿಡೆ ಕಿರೀಟಮಿದು ಪೆಱಂಗೆ + ಎಱಗುವುದೇ = ಹಿರಿಮೆ ಕೆಡುವಂತೆ ಈ ಕಿರೀಟವು ಬೇರೊಬ್ಬನಿಗೆ ಬಾಗುವುದೇ?

**ಗದ್ಯಾನುಸರಣ:** 'ಬಾಣ ಬಿಲ್ಲು ಚಕ್ರ ಭೀಕರ ಆಯುಧಗಳಿಂದ ಶೋಭಿಸುವ ನನ್ನ ಈ ಎರಡೂ ಕೈಗಳು ತಮ್ಮ ಹೆಚ್ಚುಗಾರಿಕೆಯನ್ನು ಕಳೆದುಕೊಂಡು ಬೇರೆಯವನಿಗೆ ಮುಗಿಯುತ್ತದೆಯೇ? ಹಾಗೆಯೇ ತನ್ನ ಹಿರಿಮೆ ಹಾಳಾಗಲು ಈ ಕಿರೀಟವು ಬೇರೊಬ್ಬನಿಗೆ ಬಾಗುವುದೇ?'

**ಶರಮನಿದು ಕಡಿಕಡಿದುಡಿ**
**ದೆರಡೆರಡಪ್ಪಂತು ತಜೆದು ರಿಪುಬಲಗಹನಾಂ**
**ತರಮಂ ಸುಡಲೊಗೆವುದು ದು**
**ರ್ಧರಕೋಪಾಗ್ನಿಯೆನೆ ಮುನ್ನಮಾಂ ಪೊತ್ತಿಸೆನೇ** ೨೨

**ಪದವಿಭಾಗ-ಅನ್ವಯ-ಅರ್ಥ:** ಇದು ಶರಮನ್ ಕಡಿಕಡಿದು + ಉಡಿದು = ಈ ಬಾಣವನ್ನು ಕತ್ತರಿಸಿ, ಎರಡೆರಡು + ಅಪ್ಪಂತು ತಜೆದು = ಎರಡು ತುಂಡಾಗಿ ಮಾಡಿ, ದುರ್ಧರಕೋಪಾಗ್ನಿ = ಎದುರಿಸಲಸಾಧ್ಯವಾದ ಕೋಪವೆಂಬ ಬೆಂಕಿಯು, ರಿಪುಬಲಗಹನ + ಅಂತರಮಂ ಸುಡಲ್ + ಒಗೆವುದು ಎನೆ = ಶತ್ರುಸೈನ್ಯವೆಂಬ ಕಾಡಿನ ಮಧ್ಯದಲ್ಲಿ ಎಸೆದು ಸುಡಬೇಕು ಎಂದರೆ, ಮುನ್ನಂ + ಆಂ ಪೊತ್ತಿಸೆನೇ = ನಾನೇ ಮೊದಲು ಆ ಬೆಂಕಿಯನ್ನು ಹೊತ್ತಿಸಲಾರೆನೇ?

**ಗದ್ಯಾನುಸರಣ:** 'ಬಾಣವನ್ನು ಕತ್ತರಿಸಿ ಎರಡು ತುಂಡಾಗಿ ಮಾಡಿ ಎದುರಿಸಲಸಾಧ್ಯವಾದ ಕೋಪವೆಂಬ ಬೆಂಕಿಯನ್ನು ಶತ್ರುಸೈನ್ಯವೆಂಬ ಕಾಡಿನ ಮಧ್ಯದಲ್ಲಿ ಎಸೆದು ಸುಡಬೇಕು ಎಂದರೆ, ನಾನೇ ಮೊದಲು ಆ ಬೆಂಕಿಯನ್ನು ಹೊತ್ತಿಸುತ್ತೇನೆ.'

**ವ॥ ಎಂದು ನುಡಿವನಿತುಮಂ ನುಡಿದು ಮಾಣ್ದ ಮಾಗಧಾಮರನಂ ದೃಷ್ಟಪರಂಪರರಪ್ಪ ಕುಲವೃದ್ಧರೆಯ್ದೆವಂದು, ಬಲಸ್ಥನೊಳ್ ಬಲಮನೆ ಪೂಣ್ಬುದುಂ ಪರಭವಕ್ಕೆ ಮೊದಲ್.**

**ಅರ್ಥ:** ಎಂದು ನುಡಿವ + ಅನಿತುಮಂ ನುಡಿದು ಮಾಣ್ದ ಮಾಗಧ + ಅಮರನಂ ದೃಷ್ಟಪರಂಪರರ್ + ಅಪ್ಪ ಕುಲವೃದ್ಧರ್ + ಎಯ್ದೆವಂದು = ಎಂದು ಹೇಳುವುದನ್ನೆಲ್ಲ ಹೇಳಿ ಮಾತನ್ನು ನಿಲ್ಲಿಸಿದ ಮಾಗಧನನ್ನು ಪರಿಣಾಮಗಳನ್ನು ಬಲ್ಲ ಹಿರಿಯರು ಅವನ ಬಳಿ ಬಂದು, ಬಲಸ್ಥನೊಳ್ ಬಲಮನೆ ಪೂಣ್ಬುದುಂ ಪರಭವಕ್ಕೆ ಮೊದಲ್ = ಬಲಿಷ್ಠನ ಜೊತೆ ಬಲಪ್ರದರ್ಶನವು ಸೋಲಿನ ಮೊದಲ ಹೆಜ್ಜೆ [ಎಂದು ತಿಳಿ ಹೇಳಿದರು]

**ಸಾಮಾನ್ಯಮಲ್ತು ಶರಮಿದು**
**ಸಾಮಾನ್ಯಮನುಷ್ಯನಲ್ಲನಿದನೆಚ್ಚಾತಂ**
**ನಾಮಾಕ್ಷರಮಾಳಿಕೆಗಳ್**
**ತಾಮಜೆಪವೆ ಚಕ್ರವರ್ತಿಯೆಂಬುದನಾತಂ** ೨೩

**ಪದವಿಭಾಗ-ಅನ್ವಯ-ಅರ್ಥ:** ಇದು ಶರಂ ಸಾಮಾನ್ಯಂ + ಅಲ್ತು = ಈ ಬಾಣವು ಸಾಧಾರಣವಾದುದಲ್ಲ, ಇದನ್ + ಎಚ್ಚಾತಂ ಸಾಮಾನ್ಯಮನುಷ್ಯನಲ್ಲನ್ = ಇದನ್ನು ಬಿಟ್ಟವನು ಸಾಧಾರಣ ವ್ಯಕ್ತಿಯಲ್ಲ, ಆತಂ ಚಕ್ರವರ್ತಿಯೆಂಬುದನ್ = ಅವನು ಚಕ್ರವರ್ತಿ ಎಂಬುದನ್ನು, ನಾಮ + ಅಕ್ಷರಮಾಳಿಕೆಗಳ್ ತಾಂ + ಅಜೆಪವೆ = ಅವನ ಹೆಸರಿನ ಅಕ್ಷರಗಳೇ ಹೇಳುವುದಿಲ್ಲವೇ?

**ಗದ್ಯಾನುಸರಣ:** ಈ ಬಾಣವು ಸಾಧಾರಣವಾದುದಲ್ಲ, ಇದನ್ನು ಬಿಟ್ಟವನು ಸಾಧಾರಣ ವ್ಯಕ್ತಿಯೂ ಅಲ್ಲ, ಅವನು ಚಕ್ರವರ್ತಿ ಎಂಬುದನ್ನು ಹೆಸರಿನ ಅಕ್ಷರಗಳೇ ಹೇಳುವುದಿಲ್ಲವೇ?

**ಪುರುಪರಮೇಶ್ವರಪುತ್ರಂ**
**ಚರಮಾಂಗಂ ಚಕ್ರವರ್ತಿಯೆಂದೊಡೆ ಪೇಟಲ್**
**ದೊರೆ ಪೆಜಿರಾರ್ ಭರತನೊಳೆನೆ**
**ಕರಗಿದುದಾ ಗರ್ವಪರ್ವತಂ ಮಾಗಧನಾ** ೨೪

**ಪದವಿಭಾಗ-ಅನ್ವಯ-ಅರ್ಥ:** ಪುರುಪರಮೇಶ್ವರಪುತ್ರಂ = ಪುರುದೇವನ ಮಗನೂ, ಚರಮ + ಅಂಗಂ = ಮರುವುಟ್ಟು ಇರದವನೂ, ಚಕ್ರವರ್ತಿ = ಮೊದಲನೆಯ ಚಕ್ರವರ್ತಿಯೂ. ಎಂದೊಡೆ ಪೇಟಲ್ ಭರತನೊಳ್ ಪೆಜಿರ್ ಆರ್ ದೊರೆ = ಅಂದ ಮೇಲೆ ಭರತನಿಗೆ ಸರಿದೊರೆಯಾದವರು ಯಾರಿದ್ದಾರೆ, ಎನೆ ಮಾಗಧನಾ ಆ ಗರ್ವಪರ್ವತಂ ಕರಗಿದುದು = ಎಂದಾಗ ಆ ಮಾಗಧನ ಗರ್ವದ ಬೆಟ್ಟ ಕರಗಿತು.

**ಗದ್ಯಾನುಸರಣ:** 'ಭರತನು ಪುರುದೇವನ ಮಗ, ಮರುವುಟ್ಟು ಇರದವನು, ಮೊದಲನೆಯ ಚಕ್ರವರ್ತಿ ಅಂದ ಮೇಲೆ ಆತನಿಗೆ ಸರಿದೊರೆಯಾದವರು ಯಾರಿದ್ದಾರೆ' – ಎಂದಾಗ ಮಾಗಧನ ಗರ್ವದ ಬೆಟ್ಟ ಕರಗಿತು.

**ವ। ಅಂತು ನಿಜಶೌರ್ಯಮದಜ್ವರಂ ಮಂತ್ರಿವರ್ಗವೈದ್ಯವಚನೌಷಧಿಗಳಿಂ ಪತ್ತುವಿಡೆ,**

**ಅರ್ಥ:** ಅಂತು ನಿಜಶೌರ್ಯಮದಜ್ವರಂ ಮಂತ್ರಿವರ್ಗವೈದ್ಯವಚನ + ಔಷಧಿಗಳಿಂ ಪತ್ತುವಿಡೆ = ಹೀಗೆ ತನ್ನ ಪರಾಕ್ರಮದ ಬಗೆಗಿನ ಗರ್ವಜ್ವರವು ಮಂತ್ರಿಸಂಪುಟದ ಮಾತುಗಳೆಂಬ ಔಷಧದಿಂದ ಹೋಯಿತು.

[**ವಿಶೇಷ ವಿಚಾರ:** 'ನಿಜಶೌರ್ಯಮದಜ್ವರಂ' ಬದಲು 'ನಿಜಮದಜ್ವರಂ' – ಎಲ್. ಬಸವರಾಜು ಅವರ ಆವೃತ್ತಿಯ ಪಾಠ]

**ಮುನ್ನಂ ಪೂಜಿಸಿ ಶರಮಂ**
**ರನ್ನದ ಪಡಲಿಗೆಯೊಳಿಟ್ಟು ನಿಜಪರಿವಾರಂ**
**ತನ್ನುಳ್ಳನಿತುಂ ಬೆರಸು ಭ**
**ಯನ್ನಡುಕಮನೀಯೆ ಬಂದು ಕಂಡಂ ದಿವಿಜಂ** ೨೫

**ಪದವಿಭಾಗ-ಅನ್ವಯ-ಅರ್ಥ:** ಮುನ್ನಂ ಶರಮಂ ಪೂಜಿಸಿ = ಮೊದಲು ಬಾಣವನ್ನು ಪೂಜಿಸಿ, ರನ್ನದ ಪಡಲಿಗೆಯೊಳ್ + ಇಟ್ಟು = ರತ್ನದ ಹರಿವಾಣದಲ್ಲಿಟ್ಟುಕೊಂಡು, ತನ್ನುಳ್ಳ + ಅನಿತುಂ ನಿಜಪರಿವಾರಂ ಬೆರಸು = ತನಗಿದ್ದ ಎಲ್ಲ ಪರಿವಾರದ ಜೊತೆಗೆ. ಭಯಂ + ನಡುಕಮನ್ + ಈಯೆ ಬಂದು ದಿವಿಜಂ ಕಂಡಂ = ಭಯವು ನಡುಕವನ್ನುಂಟುಮಾಡುತ್ತಿರಲು ಆ ದೇವರಾಜನು ಬಂದು ಭರತನನ್ನು ಕಂಡ.

**ಗದ್ಯಾನುಸರಣ:** ಮಾಗಧನು ಮೊದಲು ಭರತನ ಬಾಣವನ್ನು ಪೂಜಿಸಿದ; ಆನಂತರ ಅದನ್ನು ರತ್ನದ ಹರಿವಾಣದಲ್ಲಿಟ್ಟುಕೊಂಡು, ತನ್ನೆಲ್ಲ ಪರಿವಾರದ ಜೊತೆಗೆ ಭಯನಡುಕಗಳಿಂದ ಬಂದು ಭರತನನ್ನು ಕಂಡ.

**ಚಕ್ರಂ ಪುಟ್ಟಲೊಡಂ ಪರ**
**ಚಕ್ರಭಯಂಕರ ಬರಲ್ಕೆವೇಟ್ಟುದನಜಿದೆಂ**

ವಿಕ್ರಮಮನುಟಿದೆನೆನುತೊಂ
ದಕ್ರಮಮಂ ಸೈರಿಸೊಂದು ಸೂಟಿಲ್ ಚಕ್ರಧರಾ ೨೬

**ಪದವಿಭಾಗ-ಅನ್ವಯ-ಅರ್ಥ:** ಪರಚಕ್ರಭಯಂಕರ = ಶತ್ರುಸಮೂಹ ವಿನಾಶಿಯೇ, ಚಕ್ರಂ ಪುಟ್ಟಲೊಡಂ ಬರಲ್ಕೆವೇಟ್ಟುದನ್ + ಅಜಿದೆಂ = ಚಕ್ರರತ್ನವು ಹುಟ್ಟಿದಾಗಲೇ ನನಗೆ ಬರಹೇಳುವುದನ್ನು ತಿಳಿದೆ, ವಿಕ್ರಮಮನುಟಿದೆನ್ ಎನುತೆ = ನನ್ನ ಪರಾಕ್ರಮವನ್ನು ಬಿಟ್ಟೆ ಎಂದು ಹೇಳಿ, ಚಕ್ರಧರಾ = ಚಕ್ರವರ್ತಿಯೇ, ಒಂದು + ಅಕ್ರಮಮಂ ಒಂದು ಸೂಟಿಲ್ ಸೈರಿಸು = ಇದೊಂದು ಬಾರಿ ನನ್ನ ಅವಿನಯವನ್ನು ಕ್ಷಮಿಸು.

**ಗದ್ಯಾನುಸರಣ:** 'ಶತ್ರುಸಮೂಹವಿನಾಶಿಯೇ, ಚಕ್ರರತ್ನವು ಹುಟ್ಟಿದಾಗಲೇ ನನಗೆ ಬರಹೇಳುವುದನ್ನು ತಿಳಿದೆ, ನನ್ನ ಪರಾಕ್ರಮವನ್ನು ಬಿಟ್ಟೆ' ಎಂದು ಹೇಳಿ, 'ಚಕ್ರವರ್ತಿಯೇ, ಇದೊಂದು ಬಾರಿ ನನ್ನ ಅವಿನಯವನ್ನು ಕ್ಷಮಿಸು.'

**ವ। ಎಂದು ಮಾಗಧಾಮರಂ ತನ್ನ ಸದ್ಭಾವಸರ್ವಸ್ವದೊಡನೆ ಸರ್ವಸ್ವಮೆಲ್ಲಮುಮಂ ಮುಂದಿಟ್ಟಾಗಳ್,**

**ಅರ್ಥ:** ಎಂದು ಮಾಗಧ + ಅಮರಂ ತನ್ನ ಸದ್ಭಾವಸರ್ವಸ್ವದೊಡನೆ ಸರ್ವಸ್ವಂ + ಎಲ್ಲಮುಮಂ ಮುಂದಿಟ್ಟಾಗಳ್ = ಎಂದು ಮಾಗಧನು ತನ್ನೆಲ್ಲ ಒಳ್ಳೆಯ ಭಾವನೆಯೊಡನೆ ತನ್ನದೆಲ್ಲವನ್ನೂ ಭರತನ ಮುಂದಿರಿಸಿದ. ಆಗ

**ಮಣಿಸಂಘಾತಂಗಳಂ ಮಾಗಧನತಿಭಯದಿಂದಿತ್ತುವಂ ಚಕ್ರಿಚೂಡಾ**
**ಮಣಿ ಕೈಕೊಂಡಾಜ್ಞೆಯಂ ದಾಂಟದೆ ನಡೆವುದು ನೀನೆಂದಣಂ ಮಾಣದೇಕ**
**ಕ್ಷಣದಿಂದಂ ತನ್ನ ಲೀಲಾರಥದೊಳೆ ಲವಣಾಂಭೋಧಿಯಂ ದಾಂಟಿ ನಾನಾ**
**ಗುಣರತ್ನಾಂಭೋಧಿ ಬಂದಂ ಸುಕವಿಜನಮನೋಮಾನಸೋತ್ತಂಸಹಂಸಂ** ೨೭

**ಪದವಿಭಾಗ-ಅನ್ವಯ-ಅರ್ಥ:** ಮಾಗಧನ್ + ಅತಿಭಯದಿಂದೆ + ಇತ್ತುವಂ ಮಣಿಸಂಘಾತಂಗಳಂ = ಮಾಗಧನು ಅತೀವ ಭಯದಿಂದ ನೀಡಿದ್ದ ಮಣಿಗಳನ್ನು, ಚಕ್ರಿಚೂಡಾಮಣಿ ಕೈಕೊಂಡು = ಚಕ್ರವರ್ತಿಶ್ರೇಷ್ಠನು ತೆಗೆದುಕೊಂಡು, ಆಜ್ಞೆಯಂ ದಾಂಟದೆ ನೀನ್ ನಡೆವುದು = ನನ್ನ ಆಜ್ಞೆಯನ್ನು ಮೀರದೆ ನಡೆದುಕೋ, ಎಂದು + ಅಣಂ ಮಾಣದೆ = ಎಂದು ಹೇಳಿ ಒಂದು ಕ್ಷಣವೂ ತಡಮಾಡದೆ, ಏಕಕ್ಷಣದಿಂದಂ ತನ್ನ ಲೀಲಾರಥದೊಳೆ ಲವಣಾಂಭೋಧಿಯಂ ದಾಂಟಿ = ಒಂದೇ ಕ್ಷಣದಲ್ಲಿ ತನ್ನ ವಿಲಾಸಯುಕ್ತ ರಥದಲ್ಲಿ ಉಪ್ಪುಕಡಲನ್ನು ದಾಟಿ, ನಾನಾಗುಣರತ್ನಾಂಭೋಧಿ ಸುಕವಿಜನಮನೋಮಾನಸೋತ್ತಂಸಹಂಸಂ ಬಂದಂ = ವಿವಿಧ ಗುಣಗಳ ಸಮುದ್ರವಾದ ಹಾಗೂ ಸುಕವಿಜನರ ಮನಸ್ಸೆಂಬ ಸರೋವರದಲ್ಲಿ ವಿಹರಿಸುವ ರಾಜಹಂಸನಾದ ಭರತನು ಬಂದ.

**ಪದವಿಭಾಗ-ಅನ್ವಯ-ಅರ್ಥ:** ಮಾಗಧನು ಅತೀವ ಭಯದಿಂದ ನೀಡಿದ್ದ ಮಣಿಗಳನ್ನು ಸ್ವೀಕರಿಸಿದ ಚಕ್ರವರ್ತಿಯು 'ನನ್ನ ಆಜ್ಞೆಯನ್ನು ಮೀರದೆ ನಡೆದುಕೋ' ಎಂದು ಹೇಳಿ ಒಂದು ಕ್ಷಣವೂ ತಡಮಾಡದೆ ತನ್ನ ವಿಲಾಸಯುಕ್ತ ರಥದಲ್ಲಿ

ಬೇಗನೇ ಉಪ್ಪುಕಡಲನ್ನು ದಾಟಿ ವಿವಿಧ ಗುಣಗಳ ಸಮುದ್ರವಾದ ಹಾಗೂ ಸುಕವಿಜನರ ಮನಸ್ಸೆಂಬ ಸರೋವರದಲ್ಲಿ ವಿಹರಿಸುವ ರಾಜಹಂಸನಾದ ಭರತನು ಬಂದ.

**ವ। ಅಂತು ಭರತೇಶ್ವರ ಚಕ್ರವರ್ತಿ ದಕ್ಷಿಣಾಂಬುರಾಶಿಯನೆಯ್ದಿ ವೈಜಯಂತೀದ್ವಾರದೊಳ್ ಬೀಡಂ ಬಿಟ್ಟು, ಲವಣಸಮುದ್ರದುಪಸಮುದ್ರದ ನಡುವೆ ನಡೆದು ಚಂದನ ಪನಸ ನಾಳಿಕೇರ ತಾಂಬೂಲವಲ್ಲೀಪ್ರಚುರಪ್ರದೇಶಂಗಳೊಳ್ ನಿಜವಿಜಯಕುಂಜರಂಗಳಂ ವಿಹಾರಿಸಿ ಬಂದು ಸಿಂಧುದ್ವಾರದೊಳ್ ವಿಜಯಕಟಕನಾಗಿ ಪೂರ್ವಸ್ಥಿತಿಯೊಳೆ ಜಳಧಿಯ ನೀರಂ ದಾಂಟಿ, [ವ್ಯಂತರಾಧಿಪತಿ] ಪ್ರಭಾಸಾಮರಂ ನಿಜ ವಿಜಯ ಯಶಃಪ್ರಭಾಸಮೂಹದಿಂದಂ ಪುದಿದು ಸಿಂಧು ನದೀ ತೀರಂಬಿಡಿದು ಬರ್ಪಲ್ಲಿ,**

**ಪದವಿಭಾಗ–ಅನ್ವಯ–ಅರ್ಥ:** ಅಂತು ಭರತೇಶ್ವರಚಕ್ರವರ್ತಿ ದಕ್ಷಿಣ + ಅಂಬುರಾಶಿಯನ್ + ಎಯ್ದಿ ವೈಜಯಂತೀದ್ವಾರದೊಳ್ ಬೀಡಂ ಬಿಟ್ಟು = ಹೀಗೆ ಭರತನು ದಕ್ಷಿಣಸಮುದ್ರದ ಬಳಿ ಬಂದು ವೈಜಯಂತೀ ಬಾಗಿಲಲ್ಲಿ ಬೀಡುಬಿಟ್ಟ. ಲವಣಸಮುದ್ರದುಪಸಮುದ್ರದ ನಡುವೆ ನಡೆದು = ಉಪ್ಪುನೀರಿನ ಸಮುದ್ರದ ನಡುವಣ ದ್ವೀಪಗಳ ಮೂಲಕ ಹೋಗಿ, ಸಿಂಧುದ್ವಾರದೊಳ್ = ಸಿಂಧುದ್ವಾರದಲ್ಲಿ, ಆವಾಸಿತ ವಿಜಯಕಟಕನಾಗಿ ಪೂರ್ವಸ್ಥಿತಿಯೊಳೆ ಜಳಧಿಯ ನೀರಂ ದಾಂಟಿ = ತನ್ನ ವಿಜಯದ ಕಟಕದೊಡನೆ ಹಿಂದಿನಂತೆಯೇ ಹೋಗಿ ಸಮುದ್ರದ ನೀರನ್ನು ದಾಟಿ, [ವ್ಯಂತರಾಧಿಪತಿ] ಪ್ರಭಾಸಾಮರಂ = ವ್ಯಂತರರ ರಾಜ ಪ್ರಭಾಸಾಮರನು, ನಿಜ ವಿಜಯ ಯಶಃಪ್ರಭಾಸಮೂಹದಿಂದಂ = ತನ್ನ ಗೆಲವಿನ ಮತ್ತು ಕೀರ್ತಿಗಳ ಸಾಲಿನಿಂದ ಬೀಗುತ್ತ, ಪುದಿದು ಸಿಂಧು ನದೀ ತೀರಂಬಿಡಿದು ಬರ್ಪಲ್ಲಿ = ಹೊಕ್ಕು ಸಿಂಧೂ ನದಿಯ ದಡದಲ್ಲಿ ಬರುತ್ತಿರಲು,

**ಅರ್ಥ:** ಹೀಗೆ ಭರತನು ದಕ್ಷಿಣಸಮುದ್ರದ ಬಳಿ ಬಂದು ವೈಜಯಂತೀ ಬಾಗಿಲಲ್ಲಿ ಬೀಡುಬಿಟ್ಟ. ಆ ಬಳಿಕ ಉಪ್ಪುನೀರಿನ ಸಮುದ್ರದ ನಡುವಣ ದ್ವೀಪಗಳ ಮೂಲಕ ಸಿಂಧುದ್ವಾರದಲ್ಲಿ ತನ್ನ ವಿಜಯದ ಕಟಕದೊಡನೆ ಹಿಂದಿನಂತೆಯೇ ಹೋಗಿ ಸಮುದ್ರದ ನೀರನ್ನು ದಾಟಿದ. ವ್ಯಂತರರ ರಾಜ ಪ್ರಭಾಸಾಮರನು ತನ್ನ ಗೆಲವಿನ ಮತ್ತು ಕೀರ್ತಿಗಳ ಸಾಲಿನಿಂದ ಬೀಗುತ್ತ ಸಿಂಧೂ ನದಿಯ ದಡದಲ್ಲಿ ಬರುತ್ತಿರಲು,

**ಎಳವಿಸಲೀಗಳೀಗಳೆ ಮುದಿರ್ದುದು ಚೂತಕುಜಾತಮೀಗಳೀ**
**ಗಳೆ ನನೆದೋಱಿತಿಂದೊಳದಿನುನ್ಮದಷಟ್ಪದವೃಂದಮೀಗಳೀ**
**ಗಳೆ ಮೊರೆದತ್ತು ಚಂದನದ ತಳ್ಕಬಳಾನಿಕರಕ್ಕದೀಗಳೀ**
**ಗಳೆ ನೆಗಟ್ಟಿತ್ತೆಲೇ ಪುಗಿಲದಾಗಲೆ ವೇಡ ವಸಂತರಾಜನಾ** ೨೮

**ಪದವಿಭಾಗ–ಅನ್ವಯ–ಅರ್ಥ:** ಎಳವಿಸಲ್ + ಈಗಳೀಗಳೆ ಮುದಿರ್ದುದು = ಎಳೆಬಿಸಲು ಈಗಷ್ಟೇ ಹಿಂದೆ ಸರಿದಿದೆ, ಚೂತಕುಜಾತಂ + ಈಗಳೀಗಳೆ ನನೆದೋಱಿತು = ಮಾವಿನ ಮರವು ಈಗ ತಾನೆ ಚಿಗುರಿದೆ, ಉನ್ಮದಷಟ್ಪದವೃಂದಂ + ಈಗಳೀಗಳೆ ಇಂದೋಳದಿನ್ ಮೊರೆದತ್ತು = ಸೊಕ್ಕಿದ ದುಂಬಿಗಳು ಈಗಷ್ಟೇ

ಓಂದೋಳದಿಂದ ಹಾಡತೊಡಗಿವೆ. ಅಬಳಾನಿಕರಕ್ಕೆ + ಅದೀಗಳೀಗಳೆ ಚಂದನದ ತಳ್ಕು ನೆಗಟ್ಟಿತ್ತು = ವನಿತಾಸಮೂಹಕ್ಕೆ ಈಗಷ್ಟೇ ಶ್ರೀಗಂಧದ ಲೇಪದ ಆವಶ್ಯಕತೆಯುಂಟಾಗಿದೆ. ಎಲೇ ವಸಂತರಾಜನಾ ಪುಗಿಲ್ ಅದಾಗಲೆವೇಡ = ಅಂದರೆ ವಸಂತನ ಆಗಮನ ಆಗಿಬಿಟ್ಟಿರಬೇಕಲ್ಲವೇ!

**ಗದ್ಯಾನುಸರಣ:** ಎಳೆಬಿಸಿಲು ಈಗಷ್ಟೇ ಹಿಂದೆ ಸರಿದಿದೆ, ಮಾಪಿನ ಮರವು ಈಗ ತಾನೆ ಚಿಗುರಿದೆ, ಸೊಕ್ಕಿದ ದುಂಬಿಗಳು ಈಗಷ್ಟೇ ಇಂಪಾಗಿ ಹಾಡತೊಡಗಿವೆ, ವನಿತಾಸಮೂಹಕ್ಕೆ ಈಗಷ್ಟೇ ಶ್ರೀಗಂಧದ ಲೇಪದ ಆವಶ್ಯಕತೆಯುಂಟಾಗಿದೆ – ಅಂದರೆ ವಸಂತನ ಆಗಮನ ಆಗಿಬಿಟ್ಟಿರಬೇಕಲ್ಲವೇ!

**ವ॥ ಅಂತು ದಿಗ್ವಿಜಯಯಾತ್ರೆಯೆ ವಸಂತೋದ್ಯಾನಯಾತ್ರೆಯನನುಕರಿಸೆ ವಿಜಯೋದ್ಯೋಗದಿಂ ವಿಜಯಾರ್ಧಾಚಳೋಪಾಂತಮನೊಯ್ಯನೊಯ್ಯನೆಯ್ದಿ ವನವೇದಿಕೆಯ ತೋರಣದ್ವಾರದಿಂದಂ ನುಗುಳ್ದು ವಿಜಯಾರ್ಧಮಧ್ಯಮಕೂಟಾಸನ್ನಪ್ರದೇಶನಿವೇಶಿತಶಿಬಿರನಾಗಿ ನಿಯಮದೊಳಿರ್ದ ಭರತೇಶ್ವರಚಕ್ರವರ್ತಿಯಿರವನಜೆದು, ವಿಜಯಕುಮಾರಂ ಬಂದು ಎಜಗಿ ನಿಲ್ವುದುಂ ನೃಪೇಂದ್ರಂ ಸಾರೆ ಕರೆದು ಭದ್ರಾಸನಮನಿಕ್ಕವೇಟಿ ಕುಳ್ಳಿರ್ದು,**

**ಅರ್ಥ:** ಅಂತು ದಿಗ್ವಿಜಯಯಾತ್ರೆಯೆ ವಸಂತ + ಉದ್ಯಾನಯಾತ್ರೆಯನ್ + ಅನುಕರಿಸೆ = ಈ ರೀತಿಯಾಗಿ ಭರತನ ದಿಗ್ವಿಜಯಪಯಣವು ವಸಂತನು ಕೈಗೊಂಡ ವನವಿಹಾರದಂತೆ ವಿಜಯ + ಉದ್ಯೋಗದಿಂ ವಿಜಯಾರ್ಧ + ಅಚಳ + ಉಪಾಂತಮನ್ ಎಯ್ದಿ = ಸೈನ್ಯವು ವಿಜಯಾರ್ಧಪರ್ವತದ ಸಮೀಪಕ್ಕೆ ಬಂದು, ವನವೇದಿಕೆಯ + ತೋರಣದ್ವಾರದಿಂದಂ = ವನವೇದಿಕೆಯ ತೋರಣದ ಬಾಗಿಲಿನಿಂದ, ನುಗುಳ್ದು = ನುಸುಳಿಕೊಂಡು, ವಿಜಯಾರ್ಧಮಧ್ಯಮಕೂಟ + ಆಸನ್ನಪ್ರದೇಶನಿವೇಶಿತಶಿಬಿರನ್ + ಆಗಿ = ವಿಜಯಾರ್ಧಪರ್ವತದ ನಡುವಣ ಶಿಖರಪ್ರದೇಶದ ಸಮೀಪದ ಜಾಗವೊಂದರಲ್ಲಿ ಶಿಬಿರವನ್ನು ಹೂಡಿ, ನಿಯಮೊಳಿರ್ದ ಭರತೇಶ್ವರಚಕ್ರವರ್ತಿಯ + ಇರವನ್ + ಅಜೆದು = ಆ ಸಮಯದಲ್ಲಿ ನೇಮವನ್ನನ್ನುಸರಿಸುತ್ತಿದ್ದ ಭರತಚಕ್ರವರ್ತಿಯ ಇರುವುದನ್ನು ತಿಳಿದುಕೊಂಡು, ವಿಜಯಕುಮಾರಂ ಬಂದು ಎಜಗಿ ನಿಲ್ವುದುಂ = ವಿಜಯಾರ್ಧ ಕುಮಾರನು ಬಂದು ನಮಸ್ಕರಿಸಲು, ನೃಪೇಂದ್ರಂ ಸಾರೆ ಕರೆದು = ಚಕ್ರವರ್ತಿಯು ಅವನನ್ನು ಹತ್ತಿರ ಕರೆದು, ಭದ್ರಾಸನಮನಿಕ್ಕವೇಟಿ ಕುಳ್ಳಿರ್ದು = ಉನ್ನತಪೀಠವನ್ನು ಇಡಿಸಲು ಅದರ ಮೇಲೆ ಕುಳಿತ.

**ಗದ್ಯಾನುಸರಣ:** ಈ ರೀತಿಯಾಗಿ ಭರತನ ದಿಗ್ವಿಜಯಪಯಣವು ವಸಂತನು ಕೈಗೊಂಡ ವನವಿಹಾರದಂತೆ ಸೈನ್ಯವು ವಿಜಯಾರ್ಧಪರ್ವತದ ಸಮೀಪಕ್ಕೆ ಬಂದು. ಕಂಗೊಳಿಸುವ ವನವೇದಿಕೆಯ ತೋರಣದ ಬಾಗಿಲ ಮೂಲಕ ನುಸುಳಿಕೊಂಡು ಭರತನು ವಿಜಯಾರ್ಧಪರ್ವತದ ನಡುವಣ ಶಿಖರಪ್ರದೇಶದ ಸಮೀಪದ ಜಾಗವೊಂದರಲ್ಲಿ ಶಿಬಿರವನ್ನು ಹೂಡಿದ; ಅಲ್ಲಿ ಚಕ್ರವರ್ತಿಯು ನೇಮವನ್ನನ್ನುಸರಿಸುತ್ತಿದ್ದ; ಆಗ ಆತನು ಇರುವುದನ್ನು ತಿಳಿದುಕೊಂಡು ವಿಜಯಾರ್ಧ

ಕುಮಾರನು ಬಂದು ನಮಸ್ಕರಿಸಿದ. ಆಗ ಭರತನು ಅವನನ್ನು ಹತ್ತಿರ ಕರೆದು ಉನ್ನತಪೀಠವೊಂದನ್ನಿರಿಸಿ ಕೂರಲು ಹೇಳಿದ.

**ಇದು ವಿಜಯಾರ್ಧಮೆನ್ನ ಪೆಸರುಂ ವಿಜಯಾರ್ಧಮಲಂಘ್ಯಮೆಂದುಮಿಂ**
**ತಿದು ಪೆಱರ್ಗಾನುಮಿನ್ನೆಗಮಲಂಘ್ಯನೆನಿಂ ನಿನಗಾಳೆನಾಳ ಲೆ**
**ಕ್ಕದೊಳಿದು ಚಕ್ರವರ್ತಿಗಳ ದಿಗ್ವಿಜಯಾರ್ಧದೊಳೊಂದಿ ನಿಂದುದ**
**ಪ್ಪುದಿದಱಿಂ ಸಂದುದೀ ಗಿರಿಯುಮೀ ಜಗದೊಳ್ ವಿಜಯಾರ್ಧನಾಮದಿಂ ೨೯**

**ಪದವಿಭಾಗ–ಅನ್ವಯ–ಅರ್ಥ:** ಇದು ವಿಜಯಾರ್ಧಂ + ಎನ್ನ ಪೆಸರುಂ ವಿಜಯಾರ್ಧಂ = ಇದು ವಿಜಯಾರ್ಧಪರ್ವತ ನನ್ನ ಹೆಸರೂ ವಿಜಯಾರ್ಧನೆಂದೇ, ಪೆಱರ್ಗೆ ಎಂದುಂ + ಇಂತು + ಇದು ಅಲಂಘ್ಯಂ = ಇತರರಿಗೆ ಇದುವರೆಗೂ ಈ ಪರ್ವತವು ಹತ್ತಲು ಅಸಾಧ್ಯ, ಆನುಂ + ಇನ್ನೆಗಂ + ಅಲಂಘ್ಯನೆನ್ = ನಾನೂ ಇದುವರೆಗೆ ಗೆಲಲ್ಲಸಾಧ್ಯನೇ ಆಗಿದ್ದೆ, ಇಂ ನಿನಗೆ + ಆಳೆನ್ = ಇನ್ನು ನಾನು ನಿನ್ನ ಸೇವಕ, ಆಳ ಲೆಕ್ಕದೊಳ್ + ಇದು ಚಕ್ರವರ್ತಿಗಳ ದಿಗ್ವಿಜಯದ + ಅರ್ಧದೊಳ್ + ಒಂದಿ ನಿಂದುದು + ಅಪ್ಪುದು = ಆಳಿನ ಲೆಕ್ಕದಲಿ (ಆಳಿನಂತೆ) ಈ ಪರ್ವತವು ಚಕ್ರವರ್ತಿಯ ಗೆಲವಿನಲ್ಲಿ ಭಾಗಿಯಾಗಿ ನಿಂತಿದೆ, ಇದಱಿಂ ಈ ಗಿರಿಯುಂ + ಈ ಜಗದೊಳ್ ವಿಜಯಾರ್ಧನಾಮದಿಂ ಸಂದುದು = ಈ ಕಾರಣದಿಂದ ಈ ಬೆಟ್ಟಕ್ಕೂ ವಿಜಯಾರ್ಧ ಎಂಬ ಹೆಸರು ಸಲ್ಲುತ್ತದೆ.

**ಗದ್ಯಾನುಸರಣ:** ಇದು ವಿಜಯಾರ್ಧಪರ್ವತ, ನನ್ನ ಹೆಸರೂ ವಿಜಯಾರ್ಧನೆಂದೇ; ಇತರರಿಗೆ ಇದುವರೆಗೂ ಈ ಪರ್ವತವು ಹತ್ತಲು ಅಸಾಧ್ಯ, ನಾನೂ ಇದುವರೆಗೆ ಗೆಲಲ್ಲಸಾಧ್ಯನೇ ಆಗಿದ್ದೆ; ಇನ್ನು ನಾನು ನಿನ್ನ ಸೇವಕ; ಆಳಿನ ಲೆಕ್ಕದಲ್ಲಿ ಈ ಪರ್ವತವು ಚಕ್ರವರ್ತಿಯ ಗೆಲವಿನಲ್ಲಿ ಭಾಗಿಯಾಗಿ ನಿಂತಿದೆ; ಈ ಕಾರಣದಿಂದ ಈ ಬೆಟ್ಟಕ್ಕೂ ವಿಜಯಾರ್ಧ ಎಂಬ ಹೆಸರು ಸಲ್ಲುತ್ತದೆ.

**ಇದಱೊಳ್ ಮಧ್ಯಮಕೂಟದೊಳ್ ವಸಿಯಿಪೆಂ ನಿನ್ನಾಜ್ಞೆ ಪೂಮಾಲೆಯಂ**
**ದದೆ ನಿಂದಿರ್ಪುದು ಮತ್ಕಿರೀಟತಟದೊಳ್ ಚಕ್ರೇಶರಾರ್ ಬಂದೊಡಂ**
**ಮೊದಲೊಳ್ ಮಾಟ್ಪ ನಿಯೋಗಮಿಂತಿದೆನಗೆಂದಾನಂದದಿಂ ತನಗೆ ಮಾ**
**ಡಿದನಾ ಚಕ್ರಿಗೆ ನಾಡೆಯುಂ ವಿಭವದಿಂ ಪುಣ್ಯೋದಕಸ್ನಾನಮಂ ೩೦**

**ಪದವಿಭಾಗ–ಅನ್ವಯ–ಅರ್ಥ:** ಇದಱೊಳ್ ಮಧ್ಯಮಕೂಟದೊಳ್ ವಸಿಯಿಪೆಂ = ಇದರ ನಡುವಣ ಶಿಖರದಲ್ಲಿ ನಾನು ವಾಸಿಸುತ್ತೇನೆ, ಮತ್ + ಕಿರೀಟತಟದೊಳ್ ನಿನ್ನಾಜ್ಞೆ = ನನ್ನ ಕಿರೀಟದ ಪಕ್ಕದಲ್ಲಿ ನಿನ್ನ ಆಜ್ಞೆಯು, ಪೂಮಾಲೆಯಂದದೆ ನಿಂದಿರ್ಪುದು = ಹೂಮಾಲೆಯ ರೂಪದಲ್ಲಿ ನಿಂತಿದೆ, ಆರ್ ಚಕ್ರೇಶರ್ ಬಂದೊಡಂ = ಚಕ್ರವರ್ತಿಗಳು ಯಾರೇ ಬರಲಿ, ಇಂತು + ಇದು + ಎನೆಗೆ ಮೊದಲೊಳ್ ಮಾಟ್ಪ ನಿಯೋಗಂ = ಹೀಗೆಯೇ ಇದು ನಾನು ಮಾಡಬೇಕಾದ ಮೊದಲ ಕರ್ತವ್ಯ, ಎಂದು + ಆನಂದದಿಂ ಆ ಚಕ್ರಿಗೆ ನಾಡೆಯುಂ ವಿಭವದಿಂ = ಎಂದು ಸಂತಸದಿಂದ ಚಕ್ರವರ್ತಿಗೆ ಮಹಾಸಂಭ್ರಮದಿಂದ, ತನಗೆ ಪುಣ್ಯ + ಉದಕಸ್ನಾನಮಂ ಮಾಡಿದನ್ = ತಾನೇ ಪಾವನಜಲದಿಂದ ಅಭಿಷೇಕ ಮಾಡಿದ.

**ಗದ್ಯಾನುಸರಣ:** ಇದರ ನಡುವಣ ಶಿಖರದಲ್ಲಿ ನಾನು ವಾಸಿಸುತ್ತೇನೆ; ನನ್ನ ಕಿರೀಟದ ಪಕ್ಕದಲ್ಲಿ ನಿನ್ನ ಆಜ್ಞೆಯು ಹೂಮಾಲೆಯ ರೂಪದಲ್ಲಿ ನಿಂತಿದೆ; ಚಕ್ರವರ್ತಿಗಳು ಯಾರೇ ಬರಲಿ ನಾನು ಮಾಡಬೇಕಾದ ಮೊದಲ ಕರ್ತವ್ಯ – ಎಂದು ಸಂತಸದಿಂದ ಚಕ್ರವರ್ತಿಗೆ ಮಹಾಸಂಭ್ರಮದಿಂದ ತಾನೇ ಪಾವನಜಲದಿಂದ ಅಭಿಷೇಕ ಮಾಡಿದ.

**ವ। ಅಂತು ವಿಜಯಾಭಿಷೇಕಂಗೆಯ್ದು, ಸಾರವಸ್ತುಗಳನೋಲಗಿಸಿ ವಿಜಯಾರ್ಧಕುಮಾರಂ ಆಜ್ಞಾವಿಧೇಯನಾಗಿ ಪೋದಂ. ಭರತೇಶ್ವರಚಕ್ರವರ್ತಿಯುಮಲ್ಲಿ ಚಕ್ರರತ್ನಮಂ ಪೂಜಿಸಿ, ತನ್ನ ಮುನ್ನೆ ಬಂದ ವನವೀಥಿಯೊಳಗನೆ ಮಗುಟ್ದು ಪೋಗಿ ವೇದಿಕಾದ್ವಾರದಿಂ ಪೊಱಮಟ್ಟು ಬೀಡಂ ಬಿಟ್ಟಿರ್ಪನ್ನೆಗಂ ಗಂಗಾಸಿಂಧುಗಳೆರಡಱೆಡೆಯ ಕುರುರಾಜಾದಿ ಮೂರ್ಧಾಭಿಷಿಕ್ತಪಾರ್ಥಿವರ್ ಮುನ್ನ ವೃಷಭನಾಥನ ನಡಪಿದುದುಮಂ ತಮ್ಮ ನಣ್ಪುಮಂ ಬಗೆದು ಸನ್ನದ್ಧಬಲಪರಿವೃತರಾಗಿ ಭರತೇಶ್ವರಚಕ್ರವರ್ತಿಯನಾಸ್ಥಾನದೊಳ್ ಬಂದು ಕಂಡು ದೇವರ್ ನಡೆವನಿತುಮಾವುದು ಗಹನಂ ಎಮ್ಮನೆ ಬೆಸಸಾ ಎಂಬನ್ನೆಗಂ ಚಕ್ರವರ್ತಿಯ ಮನ್ನಣೆಯೊಳ್ ಸಂತಸಂಬಟ್ಟು ಪೋಗಲೊಡಂ, ಸೇನಾನಾಯಕನ ಮೊಗಮಂ ನೋಡಿ, ಕೃತಮಾಳಾಮರೋದ್ದಿಷ್ಟ ಉಪಾಯಮನೆಲ್ಲಮಂ ಪೇಳ್ದು**

**ಪದವಿಭಾಗ–ಅನ್ವಯ–ಅರ್ಥ:** ಅಂತು ವಿಜಯಾಭಿಷೇಕಂಗೆಯ್ದು = ಹೀಗೆ ವಿಜಯಸ್ನಾನ ಮಾಡಿಸಿ, ವಿಜಯಾರ್ಧಕುಮಾರಂ ಸಾರವಸ್ತುಗಳನೋಲಗಿಸಿ ಆಜ್ಞಾವಿಧೇಯನಾಗಿ ಪೋದಂ = ವಿಜಯಾರ್ಧಕುಮಾರನು ಬೆಲೆಬಾಳುವ ವಸ್ತುಗಳನ್ನು ಕಾಣಿಗೆಯಾಗಿತ್ತು ಹೋದ; ಭರತೇಶ್ವರಚಕ್ರವರ್ತಿಯುಂ + ಅಲ್ಲಿ ಚಕ್ರರತ್ನಮಂ ಪೂಜಿಸಿ = ಭರತನು ಚಕ್ರರತ್ನವನ್ನು ಪೂಜಿಸಿದ. ತನ್ನ ಮುನ್ನೆ ಬಂದ ವನವೀಥಿಯೊಳಗನೆ ಮಗುಟ್ದು ಪೋಗಿ ವೇದಿಕಾದ್ವಾರದಿಂ ಪೊಱಮಟ್ಟು = ತಾನು ಮುಂಚೆ ಪ್ರವೇಶಿಸಿದ್ದ ವನದ ದಾರಿಯಲ್ಲಿಯೇ ವಾಪಸು ಹೋಗಿ, ಬೀಡಂ ಬಿಟ್ಟಿರ್ಪನ್ನೆಗಂ = ಬಿಡಾರ ಮಾಡಿರಲು, ಗಂಗಾಸಿಂಧುಗಳೆರಡಱೆಡೆಯ ಭೂಪಾಳರ್ = ಗಂಗೆ ಮತ್ತು ಸಮುದ್ರಗಳ ನಡುವಣ ರಾಜ್ಯಗಳ ರಾಜರು, ಇಂದೆ ಮುನ್ನ = ಈ ಹಿಂದೆ, ವೃಷಭನಾಥನ ನಡಪಿದುದುಮಂ = ಪುರುದೇವನು ತಮ್ಮನ್ನು ನಡೆಸಿಕೊಂಡ ರೀತಿಯನ್ನೂ, ತಮ್ಮ ನಣ್ಪುಮಂ ಬಗೆದು = ತಮ್ಮ ಬಾಂಧವ್ಯವನ್ನೂ ನೆನಪಿಸಿಕೊಂಡು, ಕುರುರಾಜ + ಆದಿ ಮೂರ್ಧಾಭಿಷಿಕ್ತಪಾರ್ಥಿವರ್ = ಕುರುರಾಜನೇ ಮೊದಲಾದ ಪಟ್ಟಾಭಿಷೇಕಗೊಂಡ ರಾಜರು, ಸನ್ನದ್ಧಬಲ ಪರಿವೃತರಾಗಿ = ಸಜ್ಜಾದ ಸೈನ್ಯಗಳೊಡನೆ, ಬಂದು ಭರತೇಶ್ವರಚಕ್ರವರ್ತಿಯನ್ + ಆಸ್ಥಾನದೊಳ್ ಕಂಡು = ಬಂದು ಭರತನನ್ನು ಆತನ ಆಸ್ಥಾನದಲ್ಲಿ ಭೇಟಿಯಾದರು. ದೇವರ್ ನಡೆವನಿತುಮಾವುದು ಗಹನಂ ಎಮ್ಮನೆ ಬೆಸಸಾ = ತಾವು ಹೇಳಿದಂತೆ ನಡೆಯುವುದಕ್ಕೇನು? ಎಮ್ಮನೆ ಬೆಸಸಾ = ನಮಗೆ ಆಜ್ಞೆ ಮಾಡಿ. ಎಂಬನ್ನೆಗಂ = ಎಂದರು. ಚಕ್ರವರ್ತಿಯ ಮನ್ನಣೆಯೊಳ್ ಸಂತಸಂಬಟ್ಟು ಪೋಗಲೊಡಂ = ಚಕ್ರವರ್ತಿಯ ಸತ್ಕಾರದಿಂದ ಸಂತಸಗೊಂಡು ಹೋಗಲು. ಸೇನಾನಾಯಕನ ಮೊಗಮಂ ನೋಡಿ. = ಆಗ ಭರತನು ತನ್ನ ಸೇನಾಧಿಪತಿಯ ಮುಖವನ್ನು ನೋಡಿ. ಕೃತಮಾಳಾ + ಅಮರ + ಉದ್ದಿಷ್ಟ + ಉಪಾಯಮನ್ + ಎಲ್ಲಮಂ

ಪೇೞ್ದು = ಕೃತಮಾಲಾದೇವನು ಹೇಳಿದ್ದ ಉಪಾಯಗಳನ್ನೆಲ್ಲವನ್ನೂ ವಿವರಿಸಿ ಹೇಳಿ,

**ಗದ್ಯಾನುಸರಣ:** ಹೀಗೆ ವಿಜಯಸ್ನಾನ ಮಾಡಿಸಿ, ವಿಜಯಾರ್ಧಕುಮಾರನು ಬೆಲೆಬಾಳುವ ವಸ್ತುಗಳನ್ನು ಕಾಣಿಗೆಯಾಗಿತ್ತು ಹೋದ; ಭರತನು ಚಕ್ರರತ್ನವನ್ನು ಪೂಜಿಸಿ ರಾಜನು ತಾನು ಮುಂಚೆ ಪ್ರವೇಶಿಸಿದ್ದ ವನದ ದಾರಿಯಲ್ಲಿಯೇ ವಾಪಸು ಹೋಗಿ ಅಲ್ಲಿ ಬಿಡಾರ ಮಾಡಿದ; ಗಂಗೆ ಮತ್ತು ಸಮುದ್ರಗಳ ನಡುವಣ ರಾಜ್ಯಗಳ ರಾಜರಿಗೆ ಈ ಹಿಂದೆ ಪುರುದೇವನು ತಮ್ಮನ್ನು ನಡೆಸಿಕೊಂಡ ರೀತಿಯನ್ನು ನೆನಪಿಗೆ ಬಂತು; ಅಲ್ಲದೇ ತಮ್ಮ ನಂಟಸ್ತಿಕೆಯೂ ನೆನಪಾಯಿತು; ಹೀಗಾಗಿ ಕುರುರಾಜನೇ ಮೊದಲಾದ ಪಟ್ಟಾಭಿಷಿಕ್ತ ರಾಜರೆಲ್ಲ ಸಜ್ಜಾದ ಸೈನ್ಯಗಳೊಡನೆ ಬಂದರು; ಭರತನನ್ನು ಆತನ ಆಸ್ಥಾನದಲ್ಲಿ ಭೇಟಿಯಾದರು. 'ತಾವು ಹೇಳಿದಂತೆ ನಡೆಯುವುದಕ್ಕೇನು? ನಮಗೆ ಆಜ್ಞೆ ಮಾಡಿ' ಎಂದರು. ಬಳಿಕ ಚಕ್ರವರ್ತಿಯ ಸತ್ಕಾರದಿಂದ ಸಂತಸಗೊಂಡು ಹೋದರು. ಆನಂತರ ಭರತನು ತನ್ನ ಸೇನಾಧಿಪತಿಯ ಮುಖವನ್ನು ನೋಡಿ, ಕೃತಮಾಲಾದೇವನು ಹೇಳಿದ್ದ ಉಪಾಯಗಳನ್ನೆಲ್ಲವನ್ನೂ ವಿವರಿಸಿ ಹೇಳಿದ.

**ತೆಱೆವ ತೆಱನಿಂತುಟಂತೀ**
**ತೆಱದಿಂದೆ ತಮಿಸ್ರಗುಹೆಯ ವಜ್ರದ ಪಡಿಯಂ**
**ತೆಱೆದದಱ ಬೆಂಕೆ ಪೋಪಿನ**
**ಮೆಱಗಿಸು ನೀಂ ಮ್ಲೇಚ್ಛಖಂಡಮಂ ಪಡುವಣದಂ** ೩೧

**ಪದವಿಭಾಗ–ಅನ್ವಯ–ಅರ್ಥ:** ತಮಿಸ್ರಗುಹೆಯ ವಜ್ರದ ಪಡಿಯಂ = ಕತ್ತಲಗುಹೆಯ ವಜ್ರದ ಬಾಗಿಲನ್ನು, ತೆಱೆವ ತೆಱನ್ + ಇಂತುಟು = ತೆಗೆಯುವಂತೆ ಮಾಡುವ ಉಪಾಯ ಇದು, ಇಂತು + ಈ ತೆಱದಿಂದೆ ತೆಱೆದು = ಅದರಂತೆಯೇ ಅದನ್ನು ತೆಗೆದು, ಅದಱ ಬೆಂಕೆ ಪೋಪಿನಂ = ಅದರ ಬೆಂಕಿಯು ಆರುವಂತೆ ಮಾಡಿ, ಪಡುವಣದಂ ಮ್ಲೇಚ್ಛಖಂಡಮಂ ನೀಂ ಎಱಗಿಸು = ಪಶ್ಚಿಮಭಾಗದ ಮ್ಲೇಚ್ಛಖಂಡವನ್ನು ನೀನು ಮಣಿಸು.

**ಗದ್ಯಾನುಸರಣ:** ಕತ್ತಲಗುಹೆಯ ವಜ್ರದ ಬಾಗಿಲನ್ನು ತೆಗೆಯುವಂತೆ ಮಾಡುವ ಉಪಾಯ ಇದು; ಅದರಂತೆಯೇ ತೆಗೆದು, ಅದಱ ಅದರ ಬೆಂಕಿಯು ಆರುವಂತೆ ಮಾಡು; ಆ ಬಳಿಕ ಪಶ್ಚಿಮಭಾಗದ ಮ್ಲೇಚ್ಛಖಂಡವನ್ನು ಮಣಿಸು.

**ವ॥ ಎನೆ ರಥಿನೀಪತಿ ಚಕ್ರೇಶನ ಬೆಸಸಂ ಪೂಣ್ದು ತಾನೊರ್ಬನೆಯ್ದೆವಂದು ತುರಗರತ್ನಮನೇಱಿ ಚಕ್ರವರ್ತಿ ಗೆಲ್ಗೆಂದು ವಜ್ರಪುಟಂಗಳಂ, ಭರದಿಂದಂ ದಂಡದೊಳ್ ತಾಟಿಸಿದೊಡೆ, ಅಭೇದ್ಯ ವಜ್ರಕವಾಟಪುಟಂಗಳಾ ಪರ್ವತದೆರ್ದೆದೆಱೆವಂತೆ ತೆಱೆಯೆ ಭೋಂಕೆನಲುರ್ವ ಬೆಂಕೆಯಂ ಸೋಂಕಲೀಯದೆ, ತುರಂಗರತ್ನಮಂ ಮ್ಲೇಚ್ಛಖಂಡದೊಳಗಣ ವಿವಿಧಾಕಾರ ಪುರಗ್ರಾಮ ಸೀಮಾಭೂಮಿಭಾಗಮಂ ಪುಗಿಸಿದಾಗಳ್ ಸೇನಾನಾಯಕಂ ಮ್ಲೇಚ್ಛಖಂಡಮಂ ಪ್ರದಕ್ಷಿಣಂಗೆಯ್ದು ಬಾಯ್ಕೇಳಿಸಿ, ಗುಹಾದ್ವಾರಮಂ ಪತಾಕಿನೀಪತಿ ಪಡೆಗೆ ನಡೆಯಲಿಂಬಪ್ಪಂತು ಶೋಧಿಸಿ ಕಾಪಂ ಪೇೞ್ದು ಶಿಬಿರಮಂ ಪೊಕ್ಕು ಚಕ್ರವಲ್ಲಭನಾಸ್ಥಾನಮಂಟಪದೊಳ್ ಮ್ಲೇಚ್ಛರಾಜರಂ ಲಲಾಟಸ್ಪೃಷ್ಟ**

ಭೂತಳರಂ ಮಾಡಿ ಕಾಣಿಸಿ, ಅವರ ದೇಶನಾಮಕುಲಗೋತ್ರಂಗಳಂ ತಿಳಿಯೆ ಬಿನ್ನಪಂಗೆಯ್ದು ಭೃತ್ಯಭಾವಮಂ ಪೂಣಿಸಿ ಸನ್ಮಾನದಾನಂಗಳೊಳ್ ಸಂತಸಂಬಡಿಸಿ ತಂತಮ್ಮ ನೆಲೆಗಳ್ಗೆ ಪೋಗಲ್ವೇೞ್ದಿಂ.

ಆನಂತರಂ ರಾಜರಾಜಂ ಜಯಗಜಮನೇಱಿ ಪೊಱಮಟ್ಟು ನಡೆಯೆ ಸೈನ್ಯಾಧಿನಾಥನಧಿನಾಥನ ಕೆಲದೊಳ್ ಪಕ್ಷಗಜಾಧಿರೂಢನಾಗಿ, ಅನೇಕ ದೇಶಾಧೀಶಬಲಂಗಳಂ ಬೇಱಿವೇಱಿ ತೋಱುತ್ತುಂ ಪಶ್ಚಿಮಖಂಡಮುಮಂ ಧ್ವಜಿನೀಪತಿಯನಟ್ಟಿ ಬಾಯ್ಕೇಳಿಸಿ ಚಕ್ರರತ್ನಮಂ ಮುಂದಿಟ್ಟು ಮಧ್ಯಮಖಂಡಮುಮಂ ಔಂಕಿ ಚಿಲಾತಾವರ್ತರೆಂಬಿರ್ವರುಂ ಮ್ಲೇಚ್ಛರಾಜರ್ ತಮ್ಮ ಬಲಮನೊಂದುಮಾಡಿ ಕೂಡಿಕೊಂಡು [ಬರೆ] ಚಿಲಾತಾವರ್ತರಂ ವಿಧೇಯಯರ್ಮಾಡಿ ಸಿಂಧುನದೀತೀರಂಬಿಡಿದು ಪೋಗಿ ಸಿಂಧುಪ್ರಪಾತಮನೆಯ್ದಿ ಸಿಂಧುದೇವಿಯಿಂದಂ ಸಿಂಧುಜಳಂಗಳೊಳಭಿಷಿಕ್ತನಾಗಿ ಭದ್ರಾಸನಮಂ ಪಡೆದು ಕತಿಪಯಪ್ರಯಾಣಂಗಳಿಂ ಹಿಮವನ್ಮಧ್ಯಕೂಟಾಭಿಮುಖಪ್ರದೇಶದೊಳ್ ಬೀಡಂ ಬಿಟ್ಟು ನಿಯಮಸ್ಥನಾಗಿ ಹಿಮವತ್ಕುಮಾರನುಮಂ ವಿಜಯಾರ್ಧಕುಮಾರನಂದದೊಳೆ ಸಾಧಿಸುವುದುಂ ಆತನಂದೋಲಗಿಸಿದ ಸಾರವಸ್ತುಗಳನೋಲಗಿಸಿ ಸಿಂಧುನದೀ ತೀರಂಬಿಡಿದು ಪೋಗಿ ಹಿಮವತ್ಪರ್ವತಮಂ ನೋಡಿ, ತದ್ಗಿರೀಂದ್ರಮಧ್ಯಮಕೂಟದಿಂದಂ ಸಯ್ತು ತೆಂಕಮೊಗದೆ ಬಂದು ವೃಷಭಾಚಳಮಂ [ಕಂಡು] ವೃಷಭಾದ್ರಿಯ ಮೇಖಳಾಭಿತ್ತಿಯೊಳ್ ಆತ್ಮೀಯವಿಶ್ವವಿಶ್ವಂಭರಾ ವಿಜಯಪ್ರಶಸ್ತಿಯನಟ್ಟೆಯೊಳ್ ಬರೆಯಿಸುವೆನೆಂದು ಪೋಗಿ ನೋಡುವನ್ನೆಗಂ,

**ಪದವಿಭಾಗ–ಅನ್ವಯ–ಅರ್ಥ:** ಎನೆ ರಥಿನೀಪತಿ = ಎಂದಾಗ ಸೇನಾಧಿಪತಿಯು, ಚಕ್ರೇಶನ ಬೆಸನಂ ಪೂಣ್ದು = ಚಕ್ರವರ್ತಿಯ ಆಜ್ಞೆಯನ್ನು ತಾಳಿ, ತಾನೊರ್ಬನೆ + ಎಯ್ದೆವಂದು = ಗುಹೆಯ ನಡುವಿಗೆ ತಾನೊಬ್ಬನೇ ಬಂದು, ತುರಗರತ್ನಮನ್ + ಏಱಿ = ತುರಗರತ್ನವನ್ನು ಹತ್ತಿ,ಚಕ್ರವರ್ತಿ ಗೆಲ್ಗೆ + ಎಂದು = ಚಕ್ರವರ್ತಿಗೆ ಗೆಲವು ದೊರೆಯಲಿ ಎಂದು, ವಜ್ರಪುಟಂಗಳಂ = ವಜ್ರಮಯ ಬಾಗಿಲುಗಳನ್ನು, ಭರದಿಂದಂ ದಂಡದೊಳ್ ತಾಟಿಸಿದೊಡೆ = ಜೋರಾಗಿ ದಂಡರತ್ನದಿಂದ ಹೊಡೆಯಲು, ಅಭೇದ್ಯವಜ್ರಕವಾಟಪುಟಂಗಳ್ + ಆ ಪರ್ವತದ + ಎದೆ + ತೆಱೆವಂತೆ ತೆಱೆಯೆ ಭೋಂಕೆನೆ + ಅಳುರ್ವ ಬೆಂಕೆಯಂ ಸೋಂಕಲೀಯದೆ = ಹಾಗೆ ಒಡೆಯಲಸಾಧ್ಯವೆನಿಸದ ವಜ್ರಕಠಿಣ ಬಾಗಿಲುಗಳು ಪರ್ವತದ ಎದೆ ಬಿರಿಯುವ ಹಾಗೆ ತೆರೆದುಕೊಂಡಾಗ ನುಗ್ಗಿದ ಬೆಂಕಿಯು ತಾಕದಂತೆ, ತುರಂಗರತ್ನಮಂ ಮ್ಲೇಚ್ಛಖಂಡದೊಳಗಣ = ಮ್ಲೇಚ್ಛಖಂಡದಲ್ಲಿದ್ದ, ವಿವಿಧ + ಆಕಾರಪುರಗ್ರಾಮಸೀಮಾ + ಭೂಮಿಭಾಗಮಂ ಪುಗಿಸಿದಾಗಳ್ = ನಾನಾ ಅಳತೆಗಳ ನಗರ ಹಳ್ಳಿ ಉದ್ಯಾನವನಗಳ ಭೂಭಾಗಕ್ಕೆ ಹೊಗಿಸಿದಾಗ, ಸೇನಾನಾಯಕಂ ಮ್ಲೇಚ್ಛಖಂಡಮಂ ಪ್ರದಕ್ಷಿಣಂಗೆಯ್ದು = ಸೇನಾಧಿಪತಿಯು ಮ್ಲೇಚ್ಛಖಂಡವನ್ನು ಬಲಗೊಂಡು ಬಂದು, ಬಾಯ್ಕೇಳಿಸಿ = ಆಜ್ಞಾವರ್ತಿಗಳನ್ನಾಗಿಸಿಕೊಂಡು, ಪಡೆಗೆ ನಡೆಯಲಿಂಬಪ್ಪಂತು = ಆನಂತರ ಸೈನ್ಯವು ನಡೆದುಬರಲು ಅನುಕೂಲವಾಗುವಂತೆ, ಗುಹಾದ್ವಾರಮಂ ಶೋಧಿಸಿ ಕಾಪಂ ಪೇೞ್ದು = ಗುಹೆಯ ಬಾಗಿಲನ್ನು ಶೋಧಿಸಿ ಕಾವಲಿರಿಸಿ, ಪತಾಕಿನೀಪತಿ ಶಿಬಿರಮಂ ಪೊಕ್ಕು = ಸೇನಾಧಿಪತಿಯು ಸೇನಾಶಿಬಿರವನ್ನು ಸೇರಿ, ಚಕ್ರವಲ್ಲಭನ + ಆಸ್ಥಾನಮಂಟಪದೊಳ್ = ಚಕ್ರವರ್ತಿಯ ಓಲಗಶಾಲೆಯಲ್ಲಿ,

ಮ್ಲೇಚ್ಛರಾಜರಂ = ಮ್ಲೇಚ್ಛರಾಜರನ್ನು, ಲಲಾಟಸ್ಪೃಷ್ಟ ಭೂತಳರಂ ಮಾಡಿ ಕಾಣಿಸಿ = ಭೂಮಿಗೆ ಹಣೆಮುಟ್ಟಿ ನಮಸ್ಕರಿಸುವಂತೆ ಮಾಡಿ, ಅವರ ದೇಶನಾಮ ಕುಲಗೋತ್ರಂಗಳಂ = ಎಂದು ಆ ರಾಜರ ದೇಶ ಹೆಸರು ಕುಲ ಗೋತ್ರಗಳನ್ನು, ತಿಳಿಯೆ ಬಿನ್ನಪಂಗೆಯ್ದು = ತಿಳಿಯುವಂತೆ ವಿವರವಾಗಿ ಹೇಳಿ, ಭೃತ್ಯಭಾವಮಂ ಪೂಣಿಸಿ = ಅವರಿಂದ ಸೇವಕತನವನ್ನು ಪ್ರತಿಜ್ಞೆ ಮಾಡಿಸಿ, ಸನ್ಮಾನದಾನಂಗಳೊಳ್ ಸಂತಸಂಬಡಿಸಿ = ಸತ್ಕಾರ ಮತ್ತು ಕಾಣಿಕೆಗಳನ್ನಿತ್ತು ಸಂತೋಷಗೊಳಿಸಿ, ತಂತಮ್ಮ ನೆಲೆಗಳ್ಗೆ ಪೋಗಲ್ + ಪೇಳ್ದಂ = ತಮ್ಮ ಜಾಗಗಳಿಗೆ ಹೋಗಲು ಹೇಳಿದ.

ಆನಂತರಂ ರಾಜರಾಜಂ ಜಯಗಜಮನೇಱಿ ಪೊಱಮಟ್ಟು ನಡೆಯೆ = ಆ ಬಳಿಕ ಮಹಾರಾಜನು ತನ್ನ ಜಯ ಎಂಬ ಆನೆಯನ್ನೇರಿ ಹೊರಟು ನಡೆಯಲು, ಸೈನ್ಯಾಧಿನಾಥನ್ + ಅಧಿನಾಥನ ಕೆಲದೊಳ್ = ಸೇನಾಧಿಪತಿಯು ಚಕ್ರವರ್ತಿಯ ಸನಿಹದ, ಪಕ್ಷಗಜ + ಅಧಿರೂಢನ್ + ಆಗಿ = ಪಕ್ಕದ ಆನೆಯ ಮೇಲೆ ಕುಳಿತು, ಅನೇಕ ದೇಶಾಧೀಶಬಲಂಗಳಂ ಬೇಱೆವೇಱೆ ತೋಱುತ್ತುಂ ನಡೆದು = ಎಂದು ವಿವಿಧ ದೇಶಗಳಿಂದ ಬಂದ ಸೈನ್ಯಗಳನ್ನು ಒಂದೊಂದಾಗಿ ತೋರಿಸಿ ಪರಿಚಯಿಸುತ್ತ ಬರುತ್ತಿರಲು, ಧ್ವಜಿನೀಪತಿಯನಟ್ಟಿ ಪಶ್ಚಿಮಖಂಡಮುಮಂ ಬಾಯ್ಕೇಳಿಸಿ = ತನ್ನ ಸೇನಾಪತಿಯನ್ನು ಕಳಿಸಿ ಪಶ್ಚಿಮಖಂಡವನ್ನೂ ಕೈವಶಮಾಡಿಕೊಂಡು, ಚಕ್ರರತ್ನಮಂ ಮುಂದಿಟ್ಟು ಮಧ್ಯಮಖಂಡಮುಮಂ = ಚಕ್ರರತ್ನವು ಮುಂದೆ ಸಾಗಲು ಅದರ ಹಿಂದೆ ನಡೆದು ಮಧ್ಯಮಖಂಡವನ್ನೂ, ಔಂಕಿ ಚಿಲಾತ + ಆವರ್ತರ್ + ಎಂಬ + ಇರ್ವರುಂ ಮ್ಲೇಚ್ಛರಾಜರ್ = ಚಿಲಾತ ಮತ್ತು ಆವರ್ತ ಎಂಬಿಬ್ಬರು ಮ್ಲೇಚ್ಛರಾಜರು, ತಮ್ಮ ಬಲಮನೊಂದು ಕೂಡಿಕೊಂಡು [ಬರೆ] = ತಮ್ಮ ಸೇನೆಯನ್ನೆಲ್ಲ ಒಗ್ಗೂಡಿಸಿಕೊಂಡು ಬರಲು, ಚಿಲಾತ ಮತ್ತು ಆವರ್ತರಂ ವಿಧೇಯಯರ್ಮಾಡಿ = ಅವರನ್ನು ತನ್ನ ಆಜ್ಞೆಗೊಳಪಡಿಸಿ, ಸಿಂಧುನದೀತೀರಂಬಿಡಿದು ಪೋಗಿ = ಸಿಂಧುನದಿಯ ತೀರದ ಗುಂಟ ಸಾಗಿ, ಸಿಂಧುಪ್ರಪಾತಮನ್ + ಎಯ್ದಿ = ಸಿಂಧುಕೊಳ್ಳವನ್ನು ಸೇರಿ, ಸಿಂಧುದೇವಿಯಿಂದಂ = ಸಿಂಧೂದೇವಿಯಿಂದ, ಸಿಂಧುಜಳಂಗಳೊಳ್ + ಅಭಿಷಿಕ್ತನಾಗಿ ಭದ್ರಾಸನಮಂ ಪಡೆದು = ಸಿಂಧೂನದಿಯ ನೀರಿನಿಂದ ಅಭಿಷಿಕ್ತನಾಗಿ ಮಂಗಳಪೀಠದಲ್ಲಿ ಕುಳಿತು, ಕತಿಪಯಪ್ರಯಾಣಂಗಳಿಂ = ಕೆಲವು ಕಾಲದ ಪಯಣದ ಬಳಿಕ, ಹಿಮವತ್ + ಮಧ್ಯಕೂಟ + ಅಭಿಮುಖಪ್ರದೇಶದೊಳ್ ಬೀಡಂ ಬಿಟ್ಟು = ಹಿಮಾಲಯ ಮಧ್ಯದ ಶಿಖರಕ್ಕೆದುರಾಗಿ ಶಿಬಿರವನ್ನು ಹೂಡಿ, ನಿಯಮಸ್ಥನಾಗಿ = ನೇಮವನ್ನಾಚರಿಸಿ, ವಿಜಯಾರ್ಧಕುಮಾರನ + ಅಂದದೊಳೆ ಹಿಮವತ್ಕುಮಾರನುಮಂ ಸಾಧಿಸುವುದುಂ = ವಿಜಯಾರ್ಧ ಕುಮಾರನನ್ನು ಗೆದ್ದ ರೀತಿಯಲ್ಲಿಯೇ ಹಿಮವತ್ಕುಮಾರನನ್ನೂ ಗೆದ್ದು, ಆತನ್ + ಅಂದು + ಓಲಗಿಸಿದ = ಅವನು ಕಾಣಿಕೆಯಾಗಿ ನೀಡಿದ ಸಾರವಸ್ತುಗಳಂ = ಆ ಬೆಟ್ಟದಲ್ಲಿ ಸಿಗುವ ಶ್ರೇಷ್ಠವಸ್ತುಗಳನ್ನು, ಕೈಕೊಂಡು ಆಜ್ಞಾವಿಧೇಯರ್ಮಾಡಿ = ಸ್ವೀಕರಿಸಿ ಅವರನ್ನು ತನ್ನ ಆಜ್ಞಾಪಾಲಕರನ್ನಾಗಿ ಮಾಡಿ, ಸಿಂಧುನದೀ ತೀರಂಬಿಡಿದು ಪೋಗಿ

= ಸಿಂಧುನದಿಯ ದಡದ ಗುಂಟ ಸಾಗಿ, ಹಿಮವತ್ + ಪರ್ವತಮಂ ನೋಡಿ = ಹಿಮಾಲಯ ಪರ್ವತವನ್ನು ನೋಡಿ, ತತ್ + ಗಿರೀಂದ್ರಮಧ್ಯಮಕೂಟದಿಂದಂ = ಆ ಪರ್ವತದ ಮಧ್ಯದ ಶಿಖರದಿಂದ, ಸಯ್ತು ತೆಂಕಮೊಗದೆ ಬಂದು ವೃಷಭಾಚಳಮಂ [ಕಂಡು] = ನೇರವಾಗಿ ದಕ್ಷಿಣದೆಡೆಗೆ ಸಾಗಿ ವೃಷಭಾಚಲವನ್ನು ಕಂಡು, ವೃಷಭ + ಅದ್ರಿಯ ಮೇಖಳಾಭಿತ್ತಿಯೊಳ್ ಆತ್ಮೀಯವಿಶ್ವವಿಶ್ವಂಭರಾ ವಿಜಯಪ್ರಶಸ್ತಿಯನ್ + ಅಟ್ಟೆಯೊಳ್ ಬರೆಯಿಸುವೆನ್ + ಎಂದು ಪೋಗಿ ನೋಡುವನ್ನೆಗಂ = ಆ ವೃಷಭ ಪರ್ವತಾಗ್ರದ ಗೋಡೆಯ ಮೇಲೆ ತನ್ನ ಜಗದ್ವಿಜಯಪ್ರಶಸ್ತಿಯನ್ನು ಪ್ರೀತಿಯಿಂದ ಬರೆಯಿಸಲೆಂದು ಹೋಗಿ ನೋಡಿದರೆ

**ಗದ್ಯಾನುಸರಣ:** ಎಂದು ರಾಜನು ಆಜ್ಞಾಪಿಸಿದ; ಆಗ ಸೇನಾಧಿಪತಿಯು ಚಕ್ರವರ್ತಿಯ ಆಜ್ಞೆಯನ್ನು ತನ್ನ ಪ್ರತಿಜ್ಞೆಯೆಂಬಂತೆ ತಾಳಿದ; ಗುಹೆಯ ನಡುವಿಗೆ ತಾನೊಬ್ಬನೇ ಬಂದು ತುರಗರತ್ನವನ್ನು ಹತ್ತಿ, 'ಚಕ್ರವರ್ತಿಗೆ ಗೆಲವು ದೊರೆಯಲಿ' ಎಂದು ವಜ್ರಮಯ ಬಾಗಿಲುಗಳ ಮೇಲೆ ಜೋರಾಗಿ ದಂಡರತ್ನದಿಂದ ಹೊಡೆದ. ಹಾಗೆ ಒಡೆಯಲಸಾಧ್ಯವೆನಿಸದ ವಜ್ರಕಠಿಣ ಬಾಗಿಲುಗಳು ಪರ್ವತದ ಎದೆ ಬಿರಿಯುವ ಹಾಗೆ ತೆರೆದುಕೊಂಡಾಗ ನುಗ್ಗಿದ ಬೆಂಕಿಯು ತಾಕದಂತೆ, ಮ್ಲೇಚ್ಛಖಂಡದಲ್ಲಿದ್ದ ನಾನಾ ಅಳತೆಗಳ ನಗರ ಹಳ್ಳಿ ಉದ್ಯಾನವನಗಳ ಭೂಭಾಗಕ್ಕೆ ಹೊಗಿಸಿದಾಗ, ಸೇನಾಧಿಪತಿಯು ಮ್ಲೇಚ್ಛಖಂಡವನ್ನು ಬಲಗೊಂಡು ಬಂದು, ಎಲ್ಲರನ್ನೂ ಆಜ್ಞಾವರ್ತಿಗಳನ್ನಾಗಿ ಮಾಡಿಕೊಂಡ. ಸೇನಾಧಿಪತಿಯು ಸೈನ್ಯವು ನಡೆದುಬರಲು ಅನುಕೂಲವಾಗುವಂತೆ ಗುಹೆಯ ಬಾಗಿಲನ್ನು ಶೋಧಿಸಿ ಕಾವಲಿರಿಸಿದ; ಅನಂತರ ಸೇನಾಶಿಬಿರವನ್ನು ಸೇರಿ, ಓಲಗಶಾಲೆಯಲ್ಲಿದ್ದ ಚಕ್ರವರ್ತಿಗೆ ದೂರದಿಂದಲೇ ಮಣಿಖಚಿತ ಕಿರೀಟವನ್ನು ಬಾಗಿಸಿ ನಮಿಸಿದ; ಆಮೇಲೆ ತಾನು ಕರೆತಂದಿದ್ದ ಮ್ಲೇಚ್ಛರಾಜರನ್ನು ತಮ್ಮ ತಮ್ಮ ವಸ್ತುವಾಹನಗಳೊಡನೆ ಭೂಮಿಗೆ ಹಣೆಮುಟ್ಟಿಸಿ ನಮಸ್ಕರಿಸುವಂತೆ ಮಾಡಿದ. ಆ ರಾಜರ ದೇಶ ಹೆಸರು ಕುಲ ಗೋತ್ರಗಳನ್ನು ತಿಳಿಯುವಂತೆ ವಿವರವಾಗಿ ಹೇಳಿ ಅವರಿಂದ ಸೇವಕತನವನ್ನು ಪ್ರತಿಜ್ಞೆ ಮಾಡಿಸಿದ; ಬಳಿಕ ಸತ್ಕಾರ ಮತ್ತು ಕಾಣಿಕೆಗಳನ್ನಿತ್ತು ಅವರನ್ನು ಸಂತೋಷಗೊಳಿಸಿ ತಮ್ಮ ಜಾಗಗಳಿಗೆ ಹೋಗಲು ಹೇಳಿದ.

ಆ ಬಳಿಕ ಮಹಾರಾಜನು ತನ್ನ ಜಯ ಎಂಬ ಆನೆಯನ್ನೇರಿ ಹೊರಟು ನಡೆಯಲು, ಸೇನಾಧಿಪತಿಯು ಚಕ್ರವರ್ತಿಯ ಪಕ್ಕದ ಆನೆಯ ಮೇಲೆ ಕುಳಿತು, ಎಂದು ವಿವಿಧ ದೇಶಗಳಿಂದ ಬಂದ ಸೈನ್ಯಗಳನ್ನು ಒಂದೊಂದಾಗಿ ತೋರಿಸಿ ಪರಿಚಯಿಸುತ್ತ ಮುಂದೆ ಬಂದ. ತನ್ನ ಸೇನಾಪತಿಯನ್ನು ಕಳಿಸಿ ಪಶ್ಚಿಮಖಂಡವನ್ನೂ ಕೈವಶಮಾಡಿಕೊಂಡ; ಅನಂತರ ಚಕ್ರರತ್ನವು ಮುಂದೆ ಸಾಗಲು ಅದರ ಹಿಂದೆ ನಡೆದು ಮಧ್ಯಮಖಂಡವನ್ನೂ ಸೋಲಿಸಿ ಹೊಕ್ಕು ಹೆಮ್ಮೆಯಿಂದ ನಿಂತ; ಆಗ ಚಿಲಾತ ಮತ್ತು ಆವರ್ತ ಎಂಬಿಬ್ಬರು ಮ್ಲೇಚ್ಛರಾಜರು ಬಿಲ್ಲುಗಾರರು ತಮ್ಮ ಸೇನೆಯನ್ನೆಲ್ಲ ಒಗ್ಗೂಡಿಸಿಕೊಂಡು ಬರಲು, ಚಿಲಾತ ಮತ್ತು ಆವರ್ತರನ್ನು ತನ್ನ

ಆಜ್ಞೆಗೊಳಪಡಿಸಿದ; ಬಳಿಕ ಸಿಂಧುನದಿಯ ತೀರದ ಗುಂಟ ಸಾಗಿ ಹಿಮಾಲಯ ಪರ್ವತದ ಸಿಂಧುಕೊಳ್ಳವನ್ನು ತಲುಪಿದ; ಸಿಂಧೂದೇವಿಯಿಂದ ಸಿಂಧೂನದಿಯ ನೀರಿನಿಂದ ಅಭಿಷಿಕ್ತನಾಗಿ ಮಂಗಳಪೀಠದಲ್ಲಿ ಕುಳಿತುಕೊಂಡ; ಮುಂದೆ ಸಿಂಧೂದೇವಿಯಿಂದ ಬೀಳ್ಕೊಂಡು, ಕೆಲವು ಕಾಲದ ಪಯಣದ ಬಳಿಕ ಹಿಮಾಲಯ ಮಧ್ಯದ ಶಿಖರಕ್ಕೆದುರಾಗಿ ಶಿಬಿರವನ್ನು ಹೂಡಲು ಹೇಳಿ ಅಲ್ಲಿ ಕೆಲಕಾಲ ನೇಮವನ್ನಾಚರಿಸಿದ; ಮುಂದೆ ವಿಜಯಾರ್ಧಕುಮಾರನನ್ನು ಗೆದ್ದ ರೀತಿಯಲ್ಲಿಯೇ ಹಿಮವತ್ಕುಮಾರನನ್ನೂ ಗೆದ್ದು, ಅವನು ಕಾಣಿಕೆಯಾಗಿ ನೀಡಿದ ಗೋರೋಚನ ಶ್ರೀಗಂಧ ದಿವ್ಯವಾದ ಮೂಲಿಕೆಗಳು ಹಾಗೂ ಹೂಹಾರ ಮುಂತಾದ ಆ ಬೆಟ್ಟದಲ್ಲಿ ಸಿಗುವ ಶ್ರೇಷ್ಠವಸ್ತುಗಳನ್ನು ಸ್ವೀಕರಿಸಿ ಅವರನ್ನು ತನ್ನ ಆಜ್ಞಾಪಾಲಕರನ್ನಾಗಿ ಮಾಡಿಕೊಂಡ; ಕೊನೆಗೆ ಸಿಂಧುನದಿಯ ದಡದ ಗುಂಟ ಸಾಗಿ ಹಿಮಾಲಯ ಪರ್ವತವನ್ನು ಕಂಡ. ಆ ಪರ್ವತದ ಮಧ್ಯದ ಶಿಖರದಿಂದ ನೇರವಾಗಿ ದಕ್ಷಿಣದೆಡೆಗೆ ಸಾಗಿ ವೃಷಭಾಚಲವನ್ನು ಕಂಡ; ಆ ವೃಷಭ ಪರ್ವತಾಗ್ರದ ಗೋಡೆಯ ಮೇಲೆ ತನ್ನ ಜಗದ್ವಿಜಯಪ್ರಶಸ್ತಿಯನ್ನು ಪ್ರೀತಿಯಿಂದ ಬರೆಯಿಸಲೆಂದು ಹೋಗಿ ನೋಡಿದರೆ,

**ಅದಱೊಳನೇಕಕಲ್ಪಶತಕೋಟಿಗಳೊಳ್ ಸಲೆ ಸಂದ ಚಕ್ರಿವೃಂ**
**ದದ ಚಲದಾಯದಾಯತಿಯ ಬೀರದ ಚಾಗದ ಮಾತುಗಳ್ ಪೊದ**
**ಳ್ದೊದವಿರೆ ತತ್ಪ್ರಶಸ್ತಿಗಳೊಳಂತವನೊಯ್ಯನೆ ನೋಡಿ ನೋಡಿ ಸೋ**
**ರ್ದುದು ಕೊಳಗೊಂಡ ಗರ್ವರಸಮಾ ಭರತೇಶ್ವರಚಕ್ರವರ್ತಿಯಾ** ೩೨

**ಪದವಿಭಾಗ–ಅನ್ವಯ–ಅರ್ಥ:** ಅದಱೊಳ್ + ಅನೇಕಕಲ್ಪಶತಕೋಟಿಗಳೊಳ್ ಸಲೆ ಸಂದ = ಆ ಗೋಡೆಯಲ್ಲಿ ಅನೇಕ ಕೋಟಿಕೋಟಿ ವರ್ಷಗಳಲ್ಲಿ ಆಗಿ ಹೋದ, ಚಕ್ರಿವೃಂದದ ಚಲದ + ಆಯದ + ಆಯತಿಯ ಬೀರದ ಚಾಗದ ಮಾತುಗಳ್ = ಚಕ್ರವರ್ತಿಸಮೂಹದ ಚಲ ಪರಾಕ್ರಮ ಸಾಮರ್ಥ್ಯ ಶೌರ್ಯ ಮತ್ತು ತ್ಯಾಗಗಳನ್ನು ಕುರಿತ ಶಬ್ದಗಳು, ತತ್ಪ್ರಶಸ್ತಿಗಳೊಳ್ ಪೊದಳ್ದು + ಒದವಿರೆ = ಆ ಪ್ರಶಸ್ತಿಗಳಲ್ಲಿ ತುಂಬಿ ತುಳುಕುತ್ತಿರಲು, ಅಂತು + ಅವನ್ + ಒಯ್ಯನೆ ನೋಡಿ ನೋಡಿ = ಹಾಗೆಯೇ ಅವುಗಳನ್ನು ಸಾವಧಾನವಾಗಿ ನೋಡಿದಾಗ, ಭರತೇಶ್ವರಚಕ್ರವರ್ತಿಯ + ಆ ಕೊಳಗೊಂಡ ಆ ಗರ್ವರಸಂ ಸೋರ್ದುದು = ಭರತನಲ್ಲಿ ಮಡುಗಟ್ಟಿದ್ದ ಗರ್ವರಸವು ಸೋರಿಹೋಯಿತು.

**ಗದ್ಯಾನುಸರಣ:** ಆ ಗೋಡೆಯಲ್ಲಿ ಅನೇಕ ಕೋಟಿಕೋಟಿ ವರ್ಷಗಳಲ್ಲಿ ಆಗಿ ಹೋದ ಚಕ್ರವರ್ತಿಸಮೂಹದ ಚಲ ಪರಾಕ್ರಮ ಸಾಮರ್ಥ್ಯ ಶೌರ್ಯ ಮತ್ತು ತ್ಯಾಗಗಳನ್ನು ಕುರಿತ ಶಬ್ದಗಳು ಆ ಪ್ರಶಸ್ತಿಗಳಲ್ಲಿ ತುಂಬಿ ತುಳುಕುತ್ತಿದ್ದುವು; ಹಾಗೆಯೇ ಒಂದೊಂದಾಗಿ ಅವುಗಳನ್ನು ನೋಡಿದಾಗ ಭರತನಲ್ಲಿ ಮಡುಗಟ್ಟಿದ್ದ ಗರ್ವರಸವು ಸೋರಿಹೋಯಿತು.

[**ವಿಶೇಷ ವಿಚಾರ:** ಈ ಪದ್ಯವನ್ನೋದಿದಾಗ ಬೇಂದ್ರೆಯವರ 'ಹಕ್ಕಿ ಹಾರುತಿದೆ ನೋಡಿದಿರಾ' ಕವನದಲ್ಲಿನ 'ರಾಜ್ಯದ ಸಾಮ್ರಾಜ್ಯದ ತೆನೆ ಒಕ್ಕಿ ಮಂಡಲ–ಗಿಂಡಲಗಳ

ಗಡ ಮುಕ್ಕಿ ತೇಲಿಸಿ ಮುಳುಗಿಸಿ ಖಂಡ-ಖಂಡಗಳ। ಸಾರ್ವಭೌಮರಾ ನೆತ್ತಿಯ ಕುಕ್ಕಿ। ಹಕ್ಕಿ ಹಾರುತಿದೆ ನೋಡಿದಿರಾ' ಎಂಬ ಭಾಗ ನೆನಪಿಗೆ ಬರುವುದು ಸಹಜ; ಹಾಗೆಯೇ 'ಅನೇಕಕಲ್ಪಶತಕೋಟಿಗಳೊಳ್ ಸಲೆ ಸಂದ ಚಕ್ರಿವೃಂದ' ಎಂಬ ಮಾತು ಅವರದೇ ಮತ್ತೊಂದು ಕವನದಲ್ಲಿನ 'ನೀ ತೊಟ್ಟ ದೇಹಗಳ ಲೆಕ್ಕ ಇಡುವರಾ ಸೊಕ್ಕ ಯಮ ನೋಡಿ ನಕ್ಕ' ಎಂಬ ಸಾಲನ್ನು ನೆನಪಿಗೆ ತಂದು, ಈ ಪದ್ಯವು ಕೊನೆಯಿಲ್ಲದ ಕಾಲ ಹಾಗೂ ಆಗಿಹೋದ ಅಸಂಖ್ಯ ಜನರ ಉಲ್ಲೇಖದ ಮೂಲಕ ಓದುಗರಲ್ಲೂ ನಮ್ರಭಾವನೆಯನ್ನುಂಟುಮಾಡುತ್ತದೆ; ಅಷ್ಟು ಪರಿಣಾಮಕಾರಿಯಾದ ಪದ್ಯ ಇದು.]

**ವ॥ ಅಂತು ಗಳಿತಗರ್ವನಾಗಿ ಸಿಗ್ಗಾಗಿ ಪೂರ್ವಾವನಿಪಾಳಪ್ರಶಸ್ತಿಯೊಳೊಂದಂ ದಂಡರತ್ನದಿಂ ಸೀಂಟಿ ಕಳೆದು ನಿಜಪ್ರಶಸ್ತಿಗೆಡೆಮಾಡಿ,**

**ಅರ್ಥ:** ಅಂತು ಗಳಿತಗರ್ವನಾಗಿ ಸಿಗ್ಗಾಗಿ ಪೂರ್ವ + ಅವನಿಪಾಳ ಪ್ರಶಸ್ತಿಯೊಳ್ + ಒಂದಂ ದಂಡರತ್ನದಿಂ ಸೀಂಟಿ ಕಳೆದು ನಿಜಪ್ರಶಸ್ತಿಗೆ + ಎಡೆಮಾಡಿ = ಹೀಗೆ ನಾಚಿಕೆಯಿಂದ ಭರತನ ಗರ್ವರಸವು ಸೋರಿದ ಬಳಿಕ ತನ್ನ ದಂಡರತ್ನದಿಂದ ಅವಗಳಲ್ಲಿ ಒಂದನ್ನು ಅಳಿಸಿ ಹಾಕಿಸಿ ತನ್ನ ಪ್ರಶಸ್ತಿಯನ್ನು ಬರೆಸಲು ಜಾಗ ಮಾಡಿಕೊಟ್ಟ.

**ಸ್ವಸ್ತಿ ಸಮಸ್ತನರೇಶ್ವರ**
**ಮಸ್ತಕವಿನ್ಯಸ್ತಶಸನಂ ಸಕಲಜಗ**
**ದ್ವಿಸ್ತಾರಿತಯಶನನ್ವಯ**
**ವಿಸ್ತಾರಕನಾದಿದೇವನಗ್ರತನೂಜಂ** ೩೩

**ಪದವಿಭಾಗ-ಅನ್ವಯ-ಅರ್ಥ:** ಸ್ವಸ್ತಿ = ಶುಭವಾಗಲಿ, ಸಮಸ್ತನರೇಶ್ವರಮಸ್ತಕ ವಿನ್ಯಸ್ತಶಾಸನಂ = ಎಲ್ಲ ರಾಜರುಗಳ ತಲೆಯ ಮೇಲೆ ತನ್ನ ಆಜ್ಞೆಯನ್ನು ಹೊರಿಸಿದವನೂ, ಸಕಲಜಗತ್ + ವಿಸ್ತಾರಿತಯಶನ್ = ಜಗತ್ತಿನೆಲ್ಲಡೆ ತನ್ನ ಕೀರ್ತಿಯನ್ನು ಹರಡಿದವನೂ, ಅನ್ವಯ ವಿಸ್ತಾರಕನ್ = ತನ್ನ ವಂಶವನ್ನು ವಿಸ್ತರಿಸಿದವನೂ, ಆದಿದೇವನ + ಅಗ್ರತನೂಜಂ = ಆದಿದೇವನ ಹಿರಿಯ ಮಗನೂ ಅದ,

**ಗದ್ಯಾನುಸರಣ:** ಸ್ವಸ್ತಿ, ಎಲ್ಲ ರಾಜರುಗಳ ತಲೆಯ ಮೇಲೆ ತನ್ನ ಆಜ್ಞೆಯನ್ನು ಹೊರಿಸಿದವನೂ, ಜಗತ್ತಿನೆಲ್ಲಡೆ ತನ್ನ ಕೀರ್ತಿಯನ್ನು ಹರಡಿದವನೂ, ತನ್ನ ವಂಶವನ್ನು ವಿಸ್ತರಿಸಿದವನೂ, ಆದಿದೇವನ ಹಿರಿಯ ಮಗನೂ ಆದ,

**ಭುವನವಿಶೇಷಕನಿಕ್ಷ್ವಾ**
**ಕುವಂಶಗಗನೇಂದು ಚಕ್ರರತ್ನಾಧೀಶಂ**
**ನವನಿಧಿವಲ್ಲಭನಾನತ**
**ದಿವಿಜಗಣಂ ನೆಗಟ್ದ ನಾಭಿರಾಜನ ಮೊಮ್ಮಂ** ೩೪

**ಪದವಿಭಾಗ-ಅನ್ವಯ-ಅರ್ಥ:** ಭುವನವಿಶೇಷಕನ್ = ಜಗತ್ತಿನಲ್ಲಿ ಅಪರೂಪದವನೂ. ಇಕ್ಷ್ವಾಕುವಂಶಗಗನ + ಇಂದು = ಇಕ್ಷ್ವಾಕು ವಂಶವೆಂಬ

ಆಕಾಶದ ಚಂದ್ರನಂತಿರುವವನೂ, ಚಕ್ರರತ್ನ + ಅಧೀಶಂ = ಚಕ್ರರತ್ನದ ಒಡೆಯನೂ, ನವನಿಧಿವಲ್ಲಭನ್ = ನವನಿಧಿಗೆ ಆಶ್ರಯದಾತನೂ, ಆನತದಿವಿಜಗಣಂ = ದೇವಸಮೂಹದಿಂದ ನಮಸ್ಕರಿಸಲ್ಪಡುವವನೂ, ನೆಗಟ್ದಿ ನಾಭಿರಾಜನ ಮೊಮ್ಮಂ = ಪ್ರಸಿದ್ಧನಾದ ನಾಭಿರಾಜನ ಮೊಮ್ಮಗನೂ,

**ಗದ್ಯಾನುಸರಣ:** ಜಗತ್ತಿನಲ್ಲಿ ಅಪರೂಪದವನೂ, ಇಕ್ಷ್ವಾಕು ವಂಶವೆಂಬ ಆಕಾಶದ ಚಂದ್ರನಂತಿರುವವನೂ, ಚಕ್ರರತ್ನದ ಒಡೆಯನೂ, ನವನಿಧಿಗೆ ಆಶ್ರಯದಾತನೂ, ದೇವಸಮೂಹದಿಂದ ನಮಸ್ಕರಿಸಲ್ಪಡುವವನೂ, ಪ್ರಸಿದ್ಧನಾದ ನಾಭಿರಾಜನ ಮೊಮ್ಮಗನೂ

**ವೇಳಾವನಂಗಳುಂ ಕು**
**ತ್ಕೀಳಂಗಳುಮಾವ ನೃಪನ ಪಡೆ ನಡೆವೆಡೆ ನಿ**
**ರ್ಮೂಳಂಗಳಾದುದಾವನ**
**ತೋಳಿಂ ನಿಮಿರ್ದತ್ತು ಜಳಧಿವರಮವನಿತಳಂ** ೩೫

**ಪದವಿಭಾಗ–ಅನ್ವಯ–ಅರ್ಥ:** ಆವ ನೃಪನ ಪಡೆ ನಡೆವ + ಎಡೆ = ಯಾವ ರಾಜನ ಸೈನ್ಯವು ನಡೆಯುವಾಗ, ವೇಳಾವನಂಗಳುಂ ಕುತ್ಕೀಳಂಗಳುಂ = ಸಮುದ್ರದಂಡೆಯ ಕಾಡುಗಳೂ ಬೆಟ್ಟಗಳೂ, ನಿರ್ಮೂಳಂಗಳ್ + ಆದುದು = ನಾಶಗೊಂಡುವೋ, ಆವನ ತೋಳಿಂ ಅವನಿತಳಂ ಜಳಧಿವರಂ ನಿಮಿರ್ದತ್ತು = ಯಾವನ ತೋಳ್ಬಲದಿಂದ ಸಾಮ್ರಾಜ್ಯವು ಸಮುದ್ರದವರೆಗೂ ವಿಸ್ತಾರಗೊಂಡಿತೋ,

**ಗದ್ಯಾನುಸರಣ:** ಯಾವ ರಾಜನ ಸೈನ್ಯವು ನಡೆಯುವಾಗ ಸಮುದ್ರದಂಡೆಯ ಕಾಡುಗಳೂ ಬೆಟ್ಟಗಳೂ ನಾಶಗೊಂಡುವೋ, ಯಾವನ ತೋಳ್ಬಲದಿಂದ ಸಾಮ್ರಾಜ್ಯವು ಸಮುದ್ರದವರೆಗೂ ವಿಸ್ತಾರಗೊಂಡಿತೋ,

**ಆತಂ ಭರತೇಶ್ವರನಿಂ**
**ತೀ ತೆಱದಿಂ ನೆಗಟ್ದಿ ತನ್ನ ಕೀರ್ತಿಯನೀ ವಿ**
**ಖ್ಯಾತವೃಷಭಾದ್ರಿಯೊಳ್ ಸುರ**
**ಗೀತಯಶಂ ನಿಜೆಸಿದಂ ನೆಲಂ ನಿಲ್ವಿನಂ** ೩೬

**ಪದವಿಭಾಗ–ಅನ್ವಯ–ಅರ್ಥ:** ಸುರಗೀತಯಶಂ ಆತಂ ಭರತೇಶ್ವರನ್ = ದೇವತೆಗಳೇ ಹೊಗಳುವಂತಹ ಯಶಸ್ಸನ್ನು ಪಡೆದ ಆ ಭರತ ಚಕ್ರವರ್ತಿಯು, ಇಂತು + ಈ ತೆಱದಿಂ ನೆಗಟ್ದಿ ತನ್ನ ಕೀರ್ತಿಯನ್ = ಹೀಗೆ ಪ್ರಸಿದ್ಧವಾದ ತನ್ನ ಕೀರ್ತಿಯನ್ನು, ಈ ವಿಖ್ಯಾತವೃಷಭಾದ್ರಿಯೊಳ್ ನೆಲಂ ನಿಲ್ವಿನಂ ನಿಜೆಸಿದಂ = ಈ ಶ್ರೇಷ್ಠ ವೃಷಭಪರ್ವತದಲ್ಲಿ ಭೂಮಿ ಇರುವ ತನಕ ಇರುವಂತೆ ಸ್ಥಾಪಿಸಿದ.

**ಗದ್ಯಾನುಸರಣ:** ಹೀಗೆ ದೇವತೆಗಳೇ ಹೊಗಳುವಂತಹ ಯಶಸ್ಸನ್ನು ಪಡೆದ ಆ ಭರತ ಚಕ್ರವರ್ತಿಯು ಪ್ರಸಿದ್ಧವಾದ ತನ್ನ ಕೀರ್ತಿಯನ್ನು, ಈ ಶ್ರೇಷ್ಠ ವೃಷಭಪರ್ವತದಲ್ಲಿ ಭೂಮಿ ಇರುವ ತನಕ ಇರುವಂತೆ ಸ್ಥಾಪಿಸಿದ.

[ವಿಶೇಷ ವಿಚಾರ: ಜಾಗವೇ ಇಲ್ಲದಂತೆ ಬೆಟ್ಟದೆಲ್ಲೆಡೆ ಹಿಂದಿನ ಚಕ್ರವರ್ತಿಗಳು ಬರೆಸಿದ್ದ ಪ್ರಶಸ್ತಿಗಳನ್ನು ನೋಡಿದ ಭರತನ ಗರ್ವರಸ ಸೋರಿಹೋದರೂ ಮಾರನೆಯ ಕ್ಷಣವೇ ತನ್ನ ಪ್ರಶಸ್ತಿಯನ್ನು ಇನ್ನಿಲ್ಲದ ವಿಶೇಷಣಗಳೊಡನೆ ಬರೆಸುತ್ತಿದ್ದಾನೆ. ಅದೂ 'ನೆಲಂ ನಿಲ್ವಿನಂ ನಿಜೆಸಿದ'ನಂತೆ! ಇಲ್ಲಿನ ವ್ಯಂಗ್ಯವನ್ನು ಪರಿಭಾವಿಸಬೇಕು. ಸಾಮಾನ್ಯನ ಹಾಗೆಯೇ ಭರತನಿಗೆ ಉಂಟಾದದ್ದು 'ಶ್ಮಶಾನ ವೈರಾಗ್ಯ'ದ ಪರಿ; ಅವನ ಜೀವ ಇನ್ನೂ ಪಕ್ವವಾಗಿಲ್ಲ ಎಂಬುದನ್ನು ಕವಿ ಎಷ್ಟು ಸಪಿರಾಗಿ ಚಿತ್ರಿಸಿದ್ದಾನೆ!]

**ವ। ಅಂತಾತ್ಮೀಯವಿಜಯಪ್ರಶಸ್ತಿಯನಾ ವೃಷಭಗಿರಿಯೊಳ್ ಬರೆಯಿಸಿ ಗಂಗಾತಟಂಬಿಡಿದು ದಕ್ಷಿಣಾಭಿಮುಖನಾಗಿ ನಿತ್ಯಪ್ರಯಾಣಂಗಳಿಂ ಬಂದು, ವಿಜಯಾರ್ಧಾಚಳಕಾಂಡಕಪ್ರಪಾತ ಗುಹಾಸಮೀಪದೊಳ್ ಬೀಡಂ ಬಿಟ್ಟು ಮುನ್ನಿನ ಮಾಟ್ಕೆಯೊಳೆ ವರೂಥಿನೀಪತಿಯಂ ಬೆಸಸಿದೊಡೆ ಆತಂ ಆ ಗುಹಾದ್ವಾರಮಂ ಪೂರ್ವೋಕ್ತಕ್ರಮದೊಳೆ ತೆಱೆದದಱ ಬೆಂಕೆಯಾಱುವನ್ನೆಗಂ ವಿದ್ಯಾಧರ ರಾಜಾಧಿರಾಜರ್ ನಮಿವಿನಮಿಗಳಂ ಮುಂದಿಟ್ಟು ಬಂದು,**

**ಪದವಿಭಾಗ–ಅನ್ವಯ–ಅರ್ಥ:** ಅಂತು + ಆತ್ಮೀಯವಿಜಯಪ್ರಶಸ್ತಿಯನ್ = ಹೀಗೆ ತನ್ನ ವಿಜಯಪ್ರಶಸ್ತಿಯನ್ನು, ವೃಷಭಗಿರಿಯೊಳ್ ಬರೆಯಿಸಿ = ವೃಷಭಗಿರಿಯಲ್ಲಿ ಕೊರೆಯಿಸಿ, ಗಂಗಾತಟಂ + ಪಿಡಿದು = ಗಂಗಾನದಿಯ ಗುಂಟ, ದಕ್ಷಿಣ + ಅಭಿಮುಖನಾಗಿ ನಿತ್ಯಪ್ರಯಾಣಂಗಳಿಂ ಬಂದು = ದಕ್ಷಿಣದಿಕ್ಕನ್ನು ಕುರಿತು ನಿತ್ಯವೂ ಪ್ರಯಾಣ ಬೆಳಸಿ, ವಿಜಯಾರ್ಧ + ಅಚಳ ಕಾಂಡಕಪ್ರಪಾತಗುಹಾಸಮೀಪದೊಳ್ ಬೀಡಂ ಬಿಟ್ಟು = ಹೀಗೆ ವಿಜಯಾರ್ಧಪರ್ವತದ ಕಾಂಡಕ ಪ್ರಪಾತದ ಬಳಿ ಬಿಡಾರ ಹೂಡಿ, ಮುನ್ನಿನ ಮಾಟ್ಕೆಯೊಳೆ ವರೂಥಿನೀಪತಿಯಂ ಬೆಸಸಿದೊಡೆ = ಹಿಂದಿನಂತೆಯೇ ಸೇನಾಧಿಪತಿಗೆ ಆಜ್ಞಾಪಿಸಿದಾಗ, ಆತನ್ + ಆ ಗುಹಾದ್ವಾರಮಂ ಪೂರ್ವೋಕ್ತಕ್ರಮದೊಳೆ ತೆಱೆದು = ಅವನು ಆ ಗುಹೆಯ ಬಾಗಿಲನ್ನು ಹಿಂದಿನ ರೀತಿಯಲ್ಲಿಯೇ ತೆಗೆದು, ಅದಱ ಬೆಂಕೆ + ಆಱುವನ್ನೆಗಂ = ಅದರ ಉರಿಯು ಆರುವವರೆಗೂ, ವಿದ್ಯಾಧರ ರಾಜಾಧಿರಾಜರ್ = ಪೂರ್ವ ದಕ್ಷಿಣ ಮತ್ತು ಉತ್ತರದಿಕ್ಕುಗಳ ವಿದ್ಯಾಧರ ರಾಜರುಗಳು, ನಮಿವಿನಮಿಗಳಂ ಮುಂದಿಟ್ಟು ಬಂದು = ನಮಿವಿನಮಿಗಳ ನೇತೃತ್ವದಲ್ಲಿ ಬಂದು,

**ಗದ್ಯಾನುಸರಣ:** ಹೀಗೆ ವೃಷಭನಾಥನ ಮಗನಾದ ಭರತನು ವೃಷಭಾಚಲದಲ್ಲಿ ತನ್ನ ವಿಜಯಪ್ರಶಸ್ತಿಯನ್ನು ಬರೆಯಿಸಿದ; ಮುಂದೆ ಗಂಗಾನದಿಯ ಗುಂಟ ಸಾಗಿ ಭರತನು ದಕ್ಷಿಣದಿಕ್ಕಿಗೆ ಅಭಿಮುಖನಾಗಿ ನಿತ್ಯವೂ ಪ್ರಯಾಣ ಬೆಳಸಿದ. ವಿಜಯಾರ್ಧಪರ್ವತದ ಕಾಂಡಕ ಪ್ರಪಾತದ ಬಳಿ ಸೈನ್ಯವು ಬಿಡಾರ ಹೂಡಿತು; ಆಗ ರಾಜನು ಹಿಂದಿನಂತೆಯೇ ಸೇನಾಧಿಪತಿಗೆ ಆಜ್ಞಾಪಿಸಿದ; ಅವನು ಆ ಗುಹೆಯ ಬಾಗಿಲನ್ನು ಹಿಂದಿನ ರೀತಿಯಲ್ಲಿಯೇ ತೆಗೆದು ಅದರ ಉರಿಯು ಆರುವವರೆಗೂ ವಿದ್ಯಾಧರ ರಾಜರುಗಳು ನಮಿವಿನಮಿಗಳ ನೇತೃತ್ವದಲ್ಲಿ ಭರತನನ್ನು ಕಾಣಲು ಬಂದರು.

**ಭರತೇಶ್ವರಪದನಖಮಣಿ**
**ಮರೀಚಿಗಳ್ ತಮ್ಮ ಮಕುಟಮಣಿದೀಧಿತಿಯೊಳ್**

**ಬೆರಸಿರೆ ತದಾಜ್ಞೆಯಂ ನಿಜ**
**ಕಿರೀಟದಿಂ ತಾಳ್ದಿದಂದದಿಂ ಸೊಗಯಿಸಿದರ್** ೩೭

**ಪದವಿಭಾಗ–ಅನ್ವಯ–ಅರ್ಥ:** ಭರತೇಶ್ವರಪದನಖಮಣಿಮರೀಚಿಗಳ್ = ಭರತ ಚಕ್ರವರ್ತಿಯ ಪಾದದ ಉಗುರುಗಳೆಂಬ ರತ್ನಗಳ ಕಿರಣಗಳು, ತಮ್ಮ ಮಕುಟಮಣಿದೀಧಿತಿಯೊಳ್ ಬೆರಸಿರೆ = ತಮ್ಮ ಕಿರೀಟಗಳ ರತ್ನಗಳ ಕಿರೀಟದೊಡನೆ ಬೆರೆತಿರಲು, ತತ್ + ಆಜ್ಞೆಯಂ ನಿಜಕಿರೀಟದಿಂ ತಾಳ್ದಿದ + ಅಂದದಿಂ ಸೊಗಯಿಸಿದರ್ = ಅವನ ಆಜ್ಞೆಯನ್ನು ತಮ್ಮ ಕಿರೀಟಗಳಲ್ಲಿ ತಾಳಿದರೋ ಎಂಬಂತೆ ಶೋಭಿಸಿದರು.

**ಗದ್ಯಾನುಸರಣ:** ತಮ್ಮ ಕಿರೀಟಗಳು ಭರತ ಚಕ್ರವರ್ತಿಯ ಪಾದಕ್ಕೆ ಮಣಿದಾಗ ಅವರ ಕಿರೀಟರತ್ನಕಿರಣಗಳು ಅವನ ಕಾಲುಗುರುಗಳೆಂಬ ರತ್ನಗಳ ಕಿರೀಟದೊಡನೆ ಬೆರೆತುವು; ಇದರಿಂದ ಅವರೆಲ್ಲ ಅವನ ಆಜ್ಞೆಯನ್ನು ತಮ್ಮ ಕಿರೀಟಗಳಲ್ಲಿ ತಾಳಿದರೋ ಎಂಬಂತೆ ಶೋಭಿಸಿದರು.

**ನಮಿವಿನಮಿಗಳಂತಾ ಕ**
**ಚ್ಛಮಹಾಕಚ್ಛರ್ಕಳಿಂದಮೊದವಿದ ನಣ್ಪಂ**
**ತಮರ್ದಿರೆ ತಮ್ಮೊಡವುಟ್ಟಿದ**
**ಕಮಳಾನನೆಯಂ ಸುಭದ್ರೆಯಂ ತಂದಿತ್ತರ್** ೩೮

**ಪದವಿಭಾಗ–ಅನ್ವಯ–ಅರ್ಥ:** ಕಚ್ಛಮಹಾಕಚ್ಛರ್ಕಳಿಂದಂ + ಒದವಿದ ನಣ್ಪು = ಕಚ್ಛ ಮತ್ತು ಮಹಾಕಚ್ಛರಿಂದ ಉಂಟಾದ ನಂಟಸ್ತಿಕೆಯು, ಅಂತು + ಅಮರ್ದಿರೆ ಆ ನಮಿವಿನಮಿಗಳ್ = ಹೀಗೆ ಸೇರಿರಲು ಆ ನಮಿವಿನಮಿಗಳು, ಅಂತು ತಮ್ಮೊಡವುಟ್ಟಿದ ಕಮಳಾನನೆಯಂ ಸುಭದ್ರೆಯಂ ತಂದಿತ್ತರ್ = ಬಂದು ತಮ್ಮ ತಂಗಿಯಾದ ಸುಭದ್ರೆ ಎಂಬ ಸುಂದರಿಯನ್ನು ಭರತನಿಗೆ ಮದುವೆ ಮಾಡಿ ಕೊಟ್ಟರು.

**ಗದ್ಯಾನುಸರಣ:** ಕಚ್ಛ ಮತ್ತು ಮಹಾಕಚ್ಛರಿಂದ ಉಂಟಾದ ನಂಟಸ್ತಿಕೆಯು ಹೀಗೆ ಒದಗಿ ಬರಲು ಆ ನಮಿವಿನಮಿಗಳು ತಮ್ಮ ತಂಗಿಯಾದ ಸುಭದ್ರೆ ಎಂಬ ಸುಂದರಿಯನ್ನು ಭರತನಿಗೆ ಮದುವೆ ಮಾಡಿಕೊಟ್ಟರು.

**ವ॥ ಅಂತಾ ಕನ್ಯಾರತ್ನಮಂ ಆ ಪುರುಷರತ್ನಾಕರನೊಳ್ ನೆರಪಿ ತಮ್ಮ ಮನೆಯೊಳುಳ್ಳನರ್ಘ್ಯ ರತ್ನಂಗಳೆಲ್ಲಮಂ ಬಳಿವಳಿಗೊಟ್ಟು ಪೋದರ್. ಆನಂತರಂ ಭರತೇಶ್ವರಂ ಗುಹಾದ್ವಾರದಿಂ ಪೊಱಮಟ್ಟು ಪೂರ್ವದಿಗ್ಭಾಗಸ್ಥಿತಮಂ ಮ್ಲೇಚ್ಛಖಂಡಮನಪ್ರತಿಹತಶಾಸನಾಂಕಿತಂ ಮಾಡಿ ಗಂಗಾತಟಂಬಿಡಿದು ಪಯಣಂ ಬಂದು ಕೈಳಾಸಾಚಳನಿಕಟದೊಳ್ ಕಟಕಮಂ ನಿಜೆಸಿ ಪರಿಮಿತಪರಿಜನಂಬೆರಸು ತದ್ಗಿರೀಂದ್ರಮನೆಯ್ದೆವಂದು, ವೃಷಭನಾಥನಾಸ್ಥಾನಮಂಟಪಮಂ ನೋಡುತ್ತುಂ ಬಂದು ಜಗತ್ತ್ರಯತಿಳಕನ ಪಾದಪದ್ಮಂಗಳ್ಗೆ ಭರತೇಶ್ವರಚಕ್ರವರ್ತಿ ಮಹೀತಳನಿಹಿತ ಮಣಿಕಿರೀಟನಾಗಿ,**

**ಪದವಿಭಾಗ–ಅನ್ವಯ–ಅರ್ಥ:** ಅಂತು + ಆ ಕನ್ಯಾರತ್ನಮಂ = ಹೀಗೆ ಸುಭದ್ರೆ ಎಂಬ ಆ ಕನ್ಯಾರತ್ನವನ್ನು, ಆ ಪುರುಷರತ್ನಾಕರನೊಳ್ ನೆರಪಿ = ಆ

ಪುರುಷಶ್ರೇಷ್ಠನೊಡನೆ ಮದುವೆ ಮಾಡಿ ಜೊತೆಗೂಡಿಸಿ, ತಮ್ಮ ಮನೆಯೊಳ್ + ಉಳ್ಳ + ಅನರ್ಘ್ಯರತ್ನಂಗಳೆಲ್ಲಮಂ = ತಮ್ಮ ಅರಮನೆಯಲ್ಲಿದ್ದ ಬೆಲೆಬಾಳುವ ರತ್ನಗಳನ್ನೆಲ್ಲ, ಬಟಿವಟಿಗೊಟ್ಟು ಪೋದರ್ = ಉಡುಗೊರೆಯಾಗಿ ನೀಡಿ ಹೋದರು; ಅನಂತರಂ ಭರತೇಶ್ವರಂ ಗುಹಾದ್ವಾರದಿಂ ಪೊಱಮಟ್ಟು = ಆ ಬಳಿಕ ಭರತನು ಗುಹೆಯ ಬಾಗಿಲ ಮೂಲಕ ಹೊರಟು, ಪೂರ್ವದಿಕ್ + ಭಾಗಸ್ಥಿತಮಂ ಮ್ಲೇಚ್ಛಖಂಡಮನ್ = ಪೂರ್ವದಿಕ್ಕಿನಲ್ಲಿದ್ದ ಮ್ಲೇಚ್ಛಖಂಡವನ್ನು, ಅಪ್ರತಿಹತ ಶಾಸನಾಂಕಿತಂ ಮಾಡಿ ಬರೆ = ಮೀರಲಾರದಂತೆ ಕಟ್ಟಪ್ಪಣೆ ಮಾಡಿ ಬರಲು, ವಿಜಯಸೈನ್ಯಪನಿರ್ಜಿತಭರತಮಂಡಳಂ ಭರತೇಶ್ವರಚಕ್ರವರ್ತಿ = ವಿಜಯಸೈನ್ಯದಿಂದ ಭರತಮಂಡಲವನ್ನು ಗೆದ್ದು ಭರತಚಕ್ರವರ್ತಿಯು, ಗಂಗಾತಟಂ + ಪಿಡಿದು ಪಯಣಂ ಬಂದು = ಗಂಗಾನದಿಯ ದಡಗಳ ಗುಂಟ ಸಾಗಿ ಬಂದು, ಕೈಳಾಸ + ಅಚಳನಿಕಟದೊಳ್ ಕಟಕಮಂ ನಿಜೆಸಿ = ಕೈಲಾಸಪರ್ವತದ ತಪ್ಪಲಲ್ಲಿ ತನ್ನ ಸೈನ್ಯವನ್ನು ಬೀಡು ಬಿಡಿಸಿ, ಪರಿಮಿತಪರಿಜನಂಬೆರಸು ತತ್ + ಗಿರೀಂದ್ರಮನ್ + ಎಯ್ದೆವಂದು = ಕೆಲವೇ ಮಂದಿಯ ಪರಿವಾರದೊಂದಿಗೆ ಆ ಪರ್ವತಕ್ಕೆ ಬಂದು, ವೃಷಭನಾಥನ + ಆಸ್ಥಾನಮಂಟಪಮಂ ನೋಡುತ್ತುಂ ಬಂದು = ಆದಿದೇವನ ಸಮವಸರಣದ ಆಸ್ಥಾನವನ್ನು ನೋಡುತ್ತ ಬಂದು, ಜಗತ್ + ತ್ರಯತಿಳಕನ ಪಾದಪದ್ಮಂಗಳ್ಗೆ = ಪೀಠದಲ್ಲಿ ಕುಳಿತಿದ್ದ ಮೂಲಕದೊಡೆಯನ ಅಡಿದಾವರೆಗಳಿಗೆ, ಭರತೇಶ್ವರಚಕ್ರವರ್ತಿ = ಭರತನು, ಮಹೀತಳನಿಹಿತಮಣಿಕಿರೀಟನಾಗಿ = ನೆಲದ ಮೇಲೆ ಇಟ್ಟ ತನ್ನ ಕಿರೀಟದ ಮಣಿಗಳ ಕಾಂತಿಯನ್ನಿರಿಸಿ

**ಗದ್ಯಾನುಸರಣ:** ಹೀಗೆ ಸುಭದ್ರೆ ಎಂಬ ಆ ಕನ್ಯಾರತ್ನವನ್ನು ಆ ಪುರುಷಶ್ರೇಷ್ಠನೊಡನೆ ಮದುವೆ ಮಾಡಿ ಜೊತೆಗೂಡಿಸಿದರು; ಬಳಿಕ ಅವರಿಗೆ ತಮ್ಮ ಅರಮನೆಯಲ್ಲಿದ್ದ ಬೆಲೆಬಾಳುವ ರತ್ನಗಳನ್ನು ಉಡುಗೊರೆಯಾಗಿ ನೀಡಿ ಹೋದರು; ಅಷ್ಟರಲ್ಲಿ ತಾನು ತೋಳ್ಬಲದಿಂದ ಗೆದ್ದಿದ್ದ ಮ್ಲೇಚ್ಛರಾಜರ ಸೈನ್ಯಗಳೊಡನ ದಂಡನಾಯಕನು ವಾಪಸಾದ; ಆ ಬಳಿಕ ಭರತನು ಗುಹೆಯ ಬಾಗಿಲ ಮೂಲಕ ಹೊರಟು, ಪೂರ್ವದಿಕ್ಕಿನಲ್ಲಿದ್ದ ಮ್ಲೇಚ್ಛಖಂಡದ ರಾಜರನ್ನು ಚಕ್ರವರ್ತಿಯ ಆಜ್ಞೆಯನ್ನು ಮೀರದಂತೆ ಕಟ್ಟಪ್ಪಣೆ ಮಾಡಿ ಬಂದ; ಅನಂತರ ಗಂಗಾನದಿಯ ದಡಗಳ ಗುಂಟ ಸಾಗಿ ಬಂದ; ಹಾಗೆ ಬಂದು ಕೈಲಾಸಪರ್ವತದ ತಪ್ಪಲಲ್ಲಿ ತನ್ನ ಸೈನ್ಯವನ್ನು ಬೀಡು ಬಿಡಿಸಿದ; ಬಳಿಕ, ಕೆಲವೇ ಮಂದಿಯ ಪರಿವಾರದೊಂದಿಗೆ ಆ ಪರ್ವತಕ್ಕೆ ಆಗಮಿಸಿದ. ಆದಿದೇವನ ಸಮವಸರಣದ ಆಸ್ಥಾನವನ್ನು ನೋಡುತ್ತ ಬಂದು ಭರತನು ನೆಲದ ಮೇಲೆ ಇಟ್ಟ ತನ್ನ ಕಿರೀಟದ ಮಣಿಗಳ ಕಾಂತಿಯನ್ನರ್ಪಿಸಿದ.

[**ವಿಶೇಷ ವಿಚಾರ:** ಆದಿದೇವನ ಸಮವಸರಣವನ್ನು 'ಪೂರ್ವೋಕ್ತವರ್ಣನೋಪೇತಮಪ್ಪ' ಎಂದು ಹೇಳಿ ಪಂಪನು ಮುಂದುವರಿದಿದ್ದರೆ, ಜಿನಸೇನಮುನಿಯು ೫೪ ಶ್ಲೋಕಗಳಲ್ಲಿ ಮತ್ತೆ ವರ್ಣಿಸುತ್ತಾನೆ: ಪೂಪು. ೩೩. ೭೨-೨=೧೨೫.]

**ಸಮಸ್ತಸುರಕೋಟಿ ಹೇಮಘಟಕೋಟಿಯಿಂ ತೀವಿ ತಂ**
**ದಮೇಯಭುಜಕೋಟಿಯಿಂ ಮಿಸಿಸೆ ದುಗ್ಧಸಿಂಧುಪ್ಲವಂ**
**ಶ್ರಮಾಂಬುಲವಮೊಂದುಮಂ ನಿನಗೆ ಪುಟ್ಟಿಸಲ್ಕಾರ್ತುದಿ**
**ಲ್ಲಮಾನುಷಮನಂತವೀರ್ಯಗುಣಮಾದಿತೀರ್ಥೇಶ್ವರಾ** ೩೯

**ಪದವಿಭಾಗ-ಅನ್ವಯ-ಅರ್ಥ:** ಸಮಸ್ತಸುರಕೋಟಿ = ಅಸಂಖ್ಯ ದೇವಗಣವು, ಹೇಮಘಟಕೋಟಿಯಿಂ ತೀವಿ ತಂದ = ಅಸಂಖ್ಯ ಚಿನ್ನದ ಬಿಂದಿಗೆಗಳಲ್ಲಿ ತುಂಬಿಕೊಂಡು ತಂದ, ದುಗ್ಧಸಿಂಧುಪ್ಲವಂ = ಹಾಲ್ಗಡಲಿನ ನೀರಿನ ಧಾರೆಯಿಂದ, ಅಮೇಯಭುಜಕೋಟಿಯಿಂ ಮಿಸಿಸೆ = ತಮ್ಮ ಕೋಟಿ ಕೈಗಳಿಂದ ಶಿಶುವಾದ ನಿನಗೆ ಅಭಿಷೇಕ ಮಾಡಿಸಿದರೂ. ನಿನಗೆ ಶ್ರಮ + ಅಂಬುಲವಂ + ಒಂದುಮಂ ಪುಟ್ಟಿಸಲ್ಕೆ + ಆರ್ತುದಿಲ್ಲ = ನಿನ್ನಲ್ಲಿ ಒಂದು ಹನಿ ಬೆವರನ್ನೂ ಉಂಟುಮಾಡಲು ಸಾಧ್ಯವಾಗಲಿಲ್ಲ. ಆದಿತೀರ್ಥೇಶ್ವರಾ ಅಮಾನುಷಂ + ಅನಂತವೀರ್ಯಗುಣಂ = ಆದಿಜಿನನೇ ಹೀಗೆ ನಿನ್ನ ವೀರ್ಯಗುಣವು ಅಳತೆಗೆ ಮೀರಿದುದೂ ಕೊನೆಯಿಲ್ಲದ್ದೂ ಆಗಿರುವಂಥದು,

**ಗದ್ಯಾನುಸರಣ:** ಅಸಂಖ್ಯ ದೇವಗಣವು ಅಸಂಖ್ಯ ಚಿನ್ನದ ಬಿಂದಿಗೆಗಳಲ್ಲಿ ತುಂಬಿಕೊಂಡು ತಂದ ಹಾಲ್ಗಡಲಿನ ನೀರಿನ ಧಾರೆಯಿಂದ ತಮ್ಮ ಕೋಟಿ ಕೈಗಳಿಂದ ಶಿಶುವಾದ ನಿನಗೆ ಅಭಿಷೇಕ ಮಾಡಿಸಿದರೂ ನಿನ್ನಲ್ಲಿ ಒಂದು ಹನಿ ಬೆವರನ್ನೂ ಉಂಟುಮಾಡಲು ಸಾಧ್ಯವಾಗಲಿಲ್ಲ; ಆದಿಜಿನನೇ. ಹೀಗೆ ನಿನ್ನ ವೀರ್ಯಗುಣವು ಅಳತೆಗೆ ಮೀರಿದುದೂ ಕೊನೆಯಿಲ್ಲದ್ದೂ ಆಗಿರುವಂಥದು.

**ಅತೀಂದ್ರಿಯಸುಖಾಮೃತಾಂಬುಧಿನಿವಾಸಮೊಂದೊಂದನಾ**
**ತ್ಮತತ್ತ್ವವಿದ ಮುಕ್ತಿಮಾರ್ಗಮನೆ ಕೀಜೆ ಕಂಡ್ಯೆ ಪೆಱರ್**
**ಚತುರ್ಗತಿಯ ಬಟ್ಟೆಯಂ ನೆಱೆಯೆ ಕಂಡರೆಂತುಂ ಕರ**
**ಸ್ಥಿತಾಮಳಕಮೆಂಬರಾ ಜಱುಚದೇವುದಿಂದ್ರಾರ್ಚಿತಾ** ೪೦

**ಪದವಿಭಾಗ-ಅನ್ವಯ-ಅರ್ಥ:** ಆತ್ಮತತ್ತ್ವವಿದ = ಆತ್ಮನ ಸ್ವರೂಪವನ್ನು ತಿಳಿದವನೇ, ಅತೀಂದ್ರಿಯಸುಖ + ಅಮೃತ + ಅಂಬುಧಿನಿವಾಸಂ + ಒಂದೊಂದನ್ = ಇಂದ್ರಿಯಾತೀತವಾದ ಸುಖವೆಂಬ ಸಮುದ್ರದ ಪ್ರತಿಯೊಂದು ಘಟ್ಟದಲ್ಲಿಯೂ. ಮುಕ್ತಿಮಾರ್ಗಮನೆ ಕೀಜೆ ಕಂಡ್ಯೆ = ನೀನು ಮುಕ್ತಿಯ ಹಾದಿಯನ್ನೇ ಖಚಿತವಾಗಿ ಕಂಡಿರುವೆ, ಪೆಱರ್ ಚತುರ್ಗತಿಯ ಬಟ್ಟೆಯಂ ನೆಱೆಯೆ ಕಂಡರ್ = ಇತರರಾದರೆ ದೇವ ಮಾನವ ತಿರ್ಯಕ್ ಮತ್ತು ನಾರಕ ಎಂಬ ನಾಲ್ಕು ಹಂತದ ಹಾದಿಯನ್ನಷ್ಟೇ ಕಂಡರು, ಎಂತುಂ ಕರಸ್ಥಿತ + ಆಮಳಕಂ + ಎಂಬರ್ = ಅದನ್ನೇ ಅಂಗೈಯ ನೆಲ್ಲಿಕಾಯಿ ಎನ್ನುತ್ತಾರೆ, ಇಂದ್ರಾರ್ಚಿತಾ ಆ ಜಱುಚು + ಅದು + ಏವುದು = ಇಂದ್ರಪೂಜಿತನೇ. ಅಂಥ ಹರಟೆಯಿಂದ ಏನು ಪ್ರಯೋಜನ?

**ಗದ್ಯಾನುಸರಣ:** ಆತ್ಮನ ಸ್ವರೂಪವನ್ನು ತಿಳಿದವನೇ, ಇಂದ್ರಿಯಾತೀತವಾದ ಸುಖವೆಂಬ ಸಮುದ್ರದ ಪ್ರತಿಯೊಂದು ಘಟ್ಟದಲ್ಲಿಯೂ, ನೀನು ಮುಕ್ತಿಯ ಹಾದಿಯನ್ನೇ ಖಚಿತವಾಗಿ ಕಂಡಿರುವೆ; ಇತರರಾದರೆ ದೇವ ಮಾನವ ತಿರ್ಯಕ್

ಮತ್ತು ಸಾರಕ ಎಂಬ ನಾಲ್ಕು ಹಂತದ ಹಾದಿಯನ್ನಷ್ಟೇ ಕಂಡರು, ಅದನ್ನೇ ಅಂಗೈಯ ನೆಲ್ಲಿಕಾಯಿ ಎನ್ನುತ್ತಾರೆ. ಇಂದ್ರಪೂಜಿತನೇ, ಅಂಥ ಹರಟೆಯಿಂದ ಏನು ಪ್ರಯೋಜನ?

**ಜವಂಗಿಡದೆ ಮುಟ್ಟೆವರ್ಪ ಜವನಂ ಜವಂಗುಂದಿಸಲ್**
**ಜವಂಗೆ ಜವನಾಗಲಿಂ ಪೆಜರ್ಗೆ ತೀರ್ಗುಮೇ ತೀರದಾ**
**ಜವಂ ಜವಜವಾಗಿ ಮುಟ್ಟುಗಿಡುವನ್ನಮಿನ್ನಾ ಜವಂ**
**ಜವವ್ಯಸನಪುಂಜಮಂ ಕಿಡಿಪುದಾದಿತೀರ್ಥೇಶ್ವರಾ** ೪೧

**ಪದವಿಭಾಗ-ಅನ್ವಯ-ಅರ್ಥ:** ಜವಂ + ಕಿಡದೆ ಮುಟ್ಟೆವರ್ಪ ಜವನಂ = ವೇಗ ಕುಂದದಂತೆ ಹಿಡಿಯಲು ಬರುವ ಯಮನನ್ನು, ಜವಂ + ಕುಂದಿಸಲ್ ಜವಂಗೆ ಜವನಾಗಲ್ = ವೇಗ ಕುಂಠಿತಗೊಳಿಸುವುದಕ್ಕೆ ಹಾಗೂ ಯಮನಿಗೇ ಯಮನಾಗಲು, ಇಂ ಪೆಜರ್ಗೆ ತೀರ್ಗುಮೇ = ಬೇರೆಯವರಿಗೆ ಶಕ್ಯವೇನು? ತೀರದು = ಉಹ್ಞೂ, ಸಾಧ್ಯವಿಲ್ಲ, ಆದಿತೀರ್ಥೇಶ್ವರಾ = ಆದಿತೀರ್ಥಂಕರನೇ, ಜವಂ ಜವಜವಾಗಿ ಮುಟ್ಟುಗಿಡುವನ್ನಂ = ಯಮನು ದುರ್ಬಲಗೊಂಡು ನಿರುಪಯುಕ್ತನಾಗುವಂತೆ, ಇನ್ನು + ಆಜವಂಜವ ವ್ಯಸನಪುಂಜಮಂ ಕಿಡಿಪುದು = ಇನ್ನು ವ್ಯಸನಗಳ ಪರಂಪರೆಯನ್ನು ನಾಶಪಡಿಸು.

**ಗದ್ಯಾನುಸರಣ:** ವೇಗವಾಗಿ ಹಿಂಬಾಲಿಸಿ ಬರುವ ಯಮನ ವೇಗವನ್ನು ಕುಂಠಿತಗೊಳಿಸಲಾಗಲೀ ಯಮನಿಗೇ ಯಮನಾಗಲಾಗಲೀ ನಿನ್ನ ಹೊರತು ಬೇರೆಯವರಿಗೆ ಸಾಧ್ಯವಿಲ್ಲ; ಆದಿತೀರ್ಥಂಕರನೇ, ಯಮನೇ ದುರ್ಬಲಗೊಳ್ಳುವಂತೆ ವ್ಯಸನಪರಂಪರೆಯನ್ನು ನಾಶಪಡಿಸು.

**ಅನೇಕಭುಜನೇತ್ರಪಜ್ತೆರಸನಾಳಿಗಳ್ ದೇವ ನಿ**
**ನ್ನನರ್ಚಿಸುವ ನೋಟ್ಟಿ ಬಣ್ಣಿಸುವ ಪೊತ್ತದೇಕಾಗದಿಂ**
**ದ್ರನಂತೆನಗೆ ಸಾಲವಿನ್ನೆರಡೆ ಕೈಯೆರಟ್ಕಣ್ಗಳೊಂ**
**ದೆ ನಾಲಗೆಯುಮೆಂದೆ ಚಿಂತಿಸುವೆನಾದಿಭಟ್ಟಾರಕಾ** ೪೨

**ಪದವಿಭಾಗ-ಅನ್ವಯ-ಅರ್ಥ:** ದೇವ ನಿನ್ನನ್ + ಅರ್ಚಿಸುವ ನೋಟ್ಟಿ ಬಣ್ಣಿಸುವ ಪೊತ್ತು = ದೇವನೇ, ನಿನ್ನನ್ನು ಪೂಜಿಸುವ ನೋಡುವ ಸ್ತುತಿಸುವ ಸಮಯದಲ್ಲಿ, ಎರಡೆ ಕೈ + ಎರಟ್ + ಕಣ್ಗಳ್ + ಒಂದೆ ನಾಲಗೆಯುಂ ಸಾಲವು = ಎರಡೇ ಕೈಗಳು ಎರಡೇ ಕಣ್ಣುಗಳೂ ಒಂದೇ ನಾಲಗೆಯೂ ಸಾಕಾಗುವುದಿಲ್ಲ, ಆದಿಭಟ್ಟಾರಕಾ = ಆದಿತೀರ್ಥಂಕರನೇ, ಇಂದ್ರನಂತೆ ಇನ್ ಎನಗೆ ಅನೇಕ ಭುಜ ನೇತ್ರಪಜ್ತೆ ರಸನಾ + ಆಳಿಗಳ್ ಅದೇಕೆ + ಆಗದು = ಇಂದ್ರನಿಗಿರುವಂತೆ ನನಗೂ ಹಲವು ಕೈಗಳು ಕಣ್ಣುಗಳೂ ನಾಲಗೆಗಳ ಸಾಲು ಏಕೆ ಉಂಟಾಗಬಾರದು? ಎಂದೆ ಚಿಂತಿಸುವೆನ್ = ಎಂದು ಹಂಬಲಿಸುತ್ತೇನೆ.

**ಗದ್ಯಾನುಸರಣ:** ದೇವನೇ, ನಿನ್ನನ್ನು ಪೂಜಿಸುವ ನೋಡುವ ಸ್ತುತಿಸುವ ಸಮಯದಲ್ಲಿ ಎರಡೇ ಕೈಗಳು ಎರಡೇ ಕಣ್ಣುಗಳೂ ಒಂದೇ ನಾಲಗೆಯೂ ನನಗೆ

ಸಾಕಾಗುವುದಿಲ್ಲ; ಹೀಗಾಗಿ ಆದಿತೀರ್ಥಂಕರನೇ, ಇಂದ್ರನಿಗಿರುವಂತೆ ನನಗೂ ಹಲವು ಕೈಗಳೂ ಕಣ್ಣುಗಳೂ ನಾಲಗೆಗಳ ಸಾಲೂ ಏಕೆ ಉಂಟಾಗಬಾರದು ಎಂದು ಹಂಬಲಿಸುತ್ತೇನೆ.

**ಫಣಿಪ್ರಭುಗಮೆತ್ತಮತ್ತಳಗಮಲ್ತೆ ರೂಪಸ್ತವಂ**
**ಗುಣಸ್ತವಮುದಾತ್ತವೃತ್ತ ಭವದೀಯ ವಸ್ತುಸ್ತವಂ**
**ಗುಣಾಗುಣವಿವೇಕಮೂಕರತಿಮೂರ್ಖರೆಮ್ಮಂದಿಗರ್**
**ಪ್ರಣಾಮದೊಳೆ ಪುಣ್ಯಮಂ ಪಡೆದವರಾದಿತೀರ್ಥೇಶ್ವರಾ** ೪೩

**ಪದವಿಭಾಗ–ಅನ್ವಯ–ಅರ್ಥ:** ಉದಾತ್ತವೃತ್ತ ಭವದೀಯ ರೂಪಸ್ತವಂ ಗುಣಸ್ತವಂ ವಸ್ತುಸ್ತವಂ = ಉದಾರಚರಿತನೇ, ನಿನ್ನ ರೂಪ ಗುಣ ಹಾಗೂ ಸ್ವರೂಪಗಳ ಸ್ತುತಿಯನ್ನು ಮಾಡಲು, ಫಣಿಪ್ರಭುಗಂ + ಎತ್ತಂ + ಅತ್ತಳಗಂ + ಅಲ್ತೆ = ನಾಗರಾಜನಿಗೂ ಅಸದಳವಲ್ಲವೇ? ಆದಿತೀರ್ಥೇಶ್ವರಾ = ಆದಿ ತೀರ್ಥಂಕರನೇ, ಗುಣ + ಅಗುಣವಿವೇಕಮೂಕರ್ + ಅತಿಮೂರ್ಖರ್ + ಎಮ್ಮಂದಿಗರ್ = ಗುಣದೋಷಗಳ ವಿವೇಚನೆ ಮಾಡಲಾಗದ ಮಹಾಮೂರ್ಖರಾದ ನಮ್ಮಂತಹವರು, ಪ್ರಣಾಮದೊಳೆ ಪುಣ್ಯಮಂ ಪಡೆದವರ್ = ನಿನಗೆ ನಮಸ್ಕರಿಸಿ ಪುಣ್ಯವನ್ನು ಪಡೆಯುವವರು.

**ಗದ್ಯಾನುಸರಣ:** ಉದಾರಚರಿತನೇ, ನಿನ್ನ ರೂಪ ಗುಣ ಹಾಗೂ ಸ್ವರೂಪಗಳ ಸ್ತುತಿಯನ್ನು ಮಾಡಲು ನಾಗರಾಜನಿಗೂ ಅಸದಳವಲ್ಲವೇ? ಆದಿತೀರ್ಥಂಕರನೇ, ಗುಣದೋಷಗಳ ವಿವೇಚನೆ ಮಾಡಲಾಗದ ಮಹಾಮೂರ್ಖರಾದ ನಮ್ಮಂತಹವರು ನಿನಗೆ ನಮಸ್ಕರಿಸಿ ಪುಣ್ಯವನ್ನು ಪಡೆಯುವವರು.

**ವ। ಎಂದನೇಕಸ್ತವನಂಗಳಿಂ ಸ್ತುತಿಸಿ,**

**ಅರ್ಥ:** ಎಂದು + ಅನೇಕಸ್ತವನಂಗಳಿಂ ಸ್ತುತಿಸಿ = ಎಂದು ನಾನಾ ಬಗೆಯಿಂದ ಸ್ತುತಿಮಾಡಿದ.

[**ವಿಶೇಷ ವಿಚಾರ:** ಈ ಎಂಟು ಪದ್ಯಗಳಲ್ಲಿ ವ್ಯಕ್ತವಾಗುವ ಭರತಚಕ್ರವರ್ತಿಯ ವಿನೀತಭಾವವನ್ನೂ ಮೋಕ್ಷಾಪೇಕ್ಷೆಯನ್ನೂ ನೋಡಿ ಎಂತಹವರ ಮನಸ್ಸೂ ಕರಗಿಬಿಡುವಂತಿದೆ. ಆದರೆ ಇದಕ್ಕೂ ಕೊಂಚವೇ ಮುಂಚೆ ಕೈಗೊಂಡ ದಿಗ್ವಿಜಯಕಾಲದ ಅವನ ಗರ್ವವನ್ನೂ ಮುಂದೆ ನಡೆದುಕೊಳ್ಳುವ ಪರಿಯನ್ನೂ ಗಮನಿಸಿದರೆ ನಿಜವಾಗಿಯೂ ಅದಕ್ಕೆ ಅವನು ಸಿದ್ಧನಿದ್ದಾನೆಯೇ ಎಂಬ ಅಚ್ಚರಿ ಮೂಡುತ್ತದೆ. ಈ ಕ್ಷಣಕ್ಕೆ ವೈರಾಗ್ಯ; ಅದು ಹಿಂದಿನ ಕ್ಷಣವೂ ಇರಲಿಲ್ಲ, ಮುಂದಿನ ಗಳಿಗೆಯೂ ಇರಲಿಕ್ಕಿಲ್ಲ! ಇದು ಎಲ್ಲರಿಗೂ ಅನ್ವಯಿಸುವ ಮಾತು; ಮಾನವ ಪ್ರಾರ್ಥನೆಯ ವ್ಯಂಗ್ಯ.]

**ಚತುರಂಭೋರಾಶಿಮಧ್ಯಕ್ಷಿತಿವಲಯದೊಳಂ ತನ್ನುದಗ್ರಪ್ರತಾಪೋ**
**ನ್ನತಿಯಿಂದಂ ತಂದ ರತ್ನಪ್ರತತಿಗಳೊಳಪೂರ್ವಂಗಳಂ ಕೊಂಡುಕೊಂಡೂ**
**ರ್ಜಿತಪುಣ್ಯಂ ಪೂಜಿಸುತ್ತುಂ ತಣಿಯನೆ ಭಗವತ್ಪಾದಪೀಠೋಪಕಂಠ**
**ಕ್ಷಿತಿಯಂ ಚಕ್ರಾಧಿನಾಥಂ ಸುಕವಿಜನಮನೋಮಾನಸೋತ್ತಂಸಹಂಸಂ** ೪೪

**ಪದವಿಭಾಗ-ಅನ್ವಯ-ಅರ್ಥ:** ಚತುಃ + ಅಂಭೋರಾಶಿಮಧ್ಯಕ್ಷಿತಿವಲಯದೊಳಂ = ನಾಲ್ಕು ಸಮುದ್ರಗಳ ನಡುವಣ ಭೂಮಂಡಲದಲ್ಲಿ, ತನ್ನ + ಉದಗ್ರಪ್ರತಾಪ + ಉನ್ನತಿಯಿಂದಂ ತಂದ = ತನ್ನ ಮಹಾರುದ್ರಪ್ರತಾಪದಿಂದ ಗಳಿಸಿ ತಂದ, ರತ್ನಪ್ರತತಿಗಳೊಳ್ + ಅಪೂರ್ವಂಗಳಂ = ರತ್ನಗಳ ರಾಶಿಯಲ್ಲಿ ಅಮೂಲ್ಯವಾದುವನ್ನು, ಕೊಂಡುಕೊಂಡು ಊರ್ಜಿತಪುಣ್ಯಂ = ಆ ಪುಣ್ಯವಂತನು ಸ್ವೀಕರಿಸಿ, ಸುಕವಿಜನಮನೋಮಾನಸೋತ್ತಂಸಹಂಸಂ ಚಕ್ರಾಧಿನಾಥಂ = ಸುಕವಿಜನರಮನಸ್ಸುಗಳೆಂಬ ಸರೋವರದಲ್ಲಿ ವಿಹರಿಸುವ ಹಂಸನಾದ ಭರತಚಕ್ರವರ್ತಿಯು, ಭಗವತ್ + ಪಾದಪೀಠ + ಉಪಕಂಠಕ್ಷಿತಿಯಂ ಪೂಜಿಸುತ್ತುಂ ತಣಿಯನೆ = ಅರ್ಹಂತನ ಪಾದಪೀಠದ ಬಳಿಯ ನೆಲದಲ್ಲಿ ಕುಳಿತು ಎಷ್ಟು ಪೂಜಿಸಿಯೂ ತೃಪ್ತನಾಗಲಿಲ್ಲ.

**ಗದ್ಯಾನುಸರಣ:** ನಾಲ್ಕು ಸಮುದ್ರಗಳ ನಡುವಣ ಭೂಮಂಡಲದಲ್ಲಿ ತನ್ನ ಮಹಾರುದ್ರಪ್ರತಾಪದಿಂದ ಗಳಿಸಿ ತಂದು ಅಮೂಲ್ಯರತ್ನರಾಶಿಯನ್ನು ಆ ಪುಣ್ಯವಂತನು ಸ್ವೀಕರಿಸಿದ; ಇಂತಹ ಸುಕವಿಜನರ ಮನಸ್ಸುಗಳೆಂಬ ಸರೋವರದಲ್ಲಿ ವಿಹರಿಸುವ ಹಂಸನಾದ ಭರತಚಕ್ರವರ್ತಿಯು ಅರ್ಹಂತನ ಪಾದಪೀಠದ ಬಳಿಯ ನೆಲದಲ್ಲಿ ಕುಳಿತು ಎಷ್ಟು ಪೂಜಿಸಿಯೂ ತೃಪ್ತನಾಗಲಿಲ್ಲ.

**ಶ್ರೀರಮಣನೆಱಗಿ ಮುಕ್ತಿ**
**ಶ್ರೀರಮಣನ ಪಾದಪೀಠದೊಳ್ ಸುರಸಭೆ ಕ**
**ಣ್ಣಾರೆ ನಡೆ ನೋಡೆ ಮದನಾ**
**ಕಾರಂ ತಳರ್ದಂ ಸರಸ್ವತೀಮಣಿಹಾರಂ** ೪೫

**ಪದವಿಭಾಗ-ಅನ್ವಯ-ಅರ್ಥ:** ಶ್ರೀರಮಣನ್ ಮದನಾಕಾರಂ ಸರಸ್ವತೀ ಮಣಿಹಾರಂ = ಲಕ್ಷ್ಮೀವಲ್ಲಭನೂ ಮನ್ಮಥನಂತಹ ರೂಪಿನವನೂ ಸರಸ್ವತೀ ಮಣಿಹಾರನೂ ಆದ ಭರತನು, ಮುಕ್ತಿಶ್ರೀರಮಣನ ಪಾದಪೀಠದೊಳ್ ಎಱಗಿ = ಮುಕ್ತಿಶೀವಲ್ಲಭನಾದ ಆದಿದೇವನ ಪಾದಗಳಿಗೆ ನಮಿಸಿ, ಸುರಸಭೆ ಕಣ್ಣಾರೆ ನಡೆ ನೋಡೆ ತಳರ್ದಂ = ದೇವತಾಸಭೆಯು ನೋಡುತ್ತಿರಲು ಅಲ್ಲಿಂದ ಹೊರಟ.

**ಗದ್ಯಾನುಸರಣ:** ಲಕ್ಷ್ಮೀವಲ್ಲಭನೂ ಮನ್ಮಥನಂತಹ ರೂಪಿನವನೂ ಸರಸ್ವತೀ ಮಣಿಹಾರನೂ ಆದ ಭರತನು ಮುಕ್ತಿಶೀವಲ್ಲಭನಾದ ಆದಿದೇವನ ಪಾದಗಳಿಗೆ ನಮಿಸಿ ದೇವತಾಸಭೆಯು ನೋಡುತ್ತಿರಲು ಅಲ್ಲಿಂದ ಹೊರಟ.

**ವ॥ ಅಂತು ಸಮವಸರಣಮಂಡಳದಿಂ ಪೊಱಮಟ್ಟು ಲೀಲಾಪ್ರಸಾದಿತಸಕಳ ದಿಙ್ಮಂಡಳಂ ಕೈಲಾಸಶೈಲಕಟಕ ನಿಕಟವರ್ತಿಯಾಗಿರ್ದ ನಿಜವಿಜಯಕಟಕಕ್ಕೆ ವಂದು,**

**ಅರ್ಥ:** ಅಂತು ಲೀಲಾಪ್ರಸಾದಿತಸಕಳ ದಿಙ್ಮಂಡಳಂ ಸಮವಸರಣಮಂಡಳದಿಂ ಪೊಱಮಟ್ಟು ಕೈಲಾಸಶೈಲಕಟಕನಿಕಟವರ್ತಿಯಾಗಿರ್ದ ನಿಜವಿಜಯಕಟಕಕ್ಕೆ ವಂದು = ಹೀಗೆ ದಿಗ್ವಲಯಗಳನ್ನೆಲ್ಲ ಅನುಗ್ರಹಿಸಿದ ಭರತನು ಸಮವಸರಣ ಮಂಟಪದಿಂದ ಹೊರಟು ಕೈಲಾಸಪರ್ವತದ ಬಳಿಯಿದ್ದ ತನ್ನ ಸೈನ್ಯದ ಬಳಿಗೆ ಬಂದ.

**ಅಱುವತ್ತು ಸಾಸಿರಂಗಳ್**
**ನೆಱೆದುವು ಬರಿಸಂಗಳೆಂದು ದಿಗ್ವಿಜಯದೊಳ**
**ಟ್ಟಿಱಿನೊಳಯೋಧ್ಯೆಗೆ ಮೊಗಸಿದ**
**ನಱಿಕೆಯ ಪಱೆ ಪಲವುಮೆಸೆಯೆ ಭರತಮಹೀಶಂ** ೪೬

**ಪದವಿಭಾಗ–ಅನ್ವಯ–ಅರ್ಥ:** ದಿಗ್ವಿಜಯದೊಳ್ ಅಱುವತ್ತು ಸಾಸಿರಂಗಳ್ ಬರಿಸಂಗಳ್ ನೆಱೆದುವೆಂದು = ಜೈತ್ರಯತ್ರೆಯಲ್ಲಿ ಅರುವತ್ತು ಸಾವಿರ ವರ್ಷಗಳು ಸಂದುಹೋದುವು ಎಂದು, ಅಱಿಕೆಯ ಪಱೆ ಪಲವುಂ + ಎಸೆಯೆ = ಮಂಗಳಕರವಾದ ಹರೆಗಳು ಶಬ್ದಗೈಯಲು, ಭರತಮಹೀಶಂ ಅಯೋಧ್ಯೆಗೆ ಅಟ್ಟಿಱಿನೊಳ್ ಮೊಗಸಿದನ್ = ಭರತಚಕ್ರವರ್ತಿಯು ಅಯೋಧ್ಯೆಗೆ ಪ್ರೀತಿಯಿಂದ ಮರಳಿದ.

**ಗದ್ಯಾನುಸರಣ:** ಹೀಗೆ ಜೈತ್ರಯಾತ್ರೆಯಲ್ಲಿ ಅರುವತ್ತು ಸಾವಿರ ವರ್ಷಗಳು ಸಂದುಹೋದುವು; ಬಳಿಕ ಮಂಗಳಕರವಾದ ಹರೆಗಳು ಶಬ್ದಗೈಯಲು ಭರತಚಕ್ರವರ್ತಿಯು ಅಯೋಧ್ಯೆಗೆ ಪ್ರೀತಿಯಿಂದ ಮರಳಿದ.

**ವ। ಅಂತು ಕೆಲವು ಪ್ರಯಾಣಂಗಳಿಂದಂ ನಿಜಾನ್ವಯರಾಜಧಾನಿಯನಯೋಧ್ಯಾಪುರ ಮನೆಯ್ದಿದಾಗಳ್,**

**ಅರ್ಥ:** ಅಂತು ಕೆಲವು ಪ್ರಯಾಣಂಗಳಿಂದಂ ನಿಜ + ಅನ್ವಯರಾಜಧಾನಿಯನ್ + ಅಯೋಧ್ಯಾಪುರಮನ್ + ಎಯ್ದಿದಾಗಳ್ = ಹೀಗೆಯೇ ಹಲವಾರು ದಿವಸಗಳ ಕಾಲ ಪ್ರಯಾಣ ಮಾಡಿ ತಮ್ಮ ವಂಶದ ರಾಜಧಾನಿಯಾದ ಅಯೋಧ್ಯೆಯನ್ನು ಬಂದು ತಲುಪಿದ; ಆಗ

**ಹತವೈರಿಕ್ಷತ್ರಚಕ್ರಂ ಭಯಚಕಿತಜಗದ್ವೀರಚಕ್ರಂ ವಿನಮ್ರ**
**ಕ್ಷಿತಿಚಕ್ರಂ ದೀಪದೀಪ್ತಿಪ್ರತಿಹತದಿನಕೃಚ್ಚಕ್ರತೀವ್ರಾಂಶುಚಕ್ರಂ**
**ಜಿತದಿಕ್ಚಕ್ರಂ ಪ್ರಭಾಪ್ರಸ್ಫುರಿತದಶದಿಶಾಚಕ್ರಮುಗ್ರಪ್ರತಾಪೋ**
**ರ್ಜಿತತೇಜಶ್ಚಕ್ರಮಿರ್ದತ್ತೊಳಪುಗದೆ ಪುರೋಪಾಂತದೊಳ್ ಚಕ್ರಿಚಕ್ರಂ** ೪೭

**ಪದವಿಭಾಗ–ಅನ್ವಯ–ಅರ್ಥ:** ಹತವೈರಿಕ್ಷತ್ರಚಕ್ರಂ = ಶತ್ರುಕ್ಷತ್ರಿಯರನ್ನು ಕೊಂದ ಚಕ್ರ, ಭಯಚಕಿತಜಗತ್ + ವೀರಚಕ್ರಂ = ವೀರರನ್ನು ಭಯದಿಂದ ಗಾಬರಿಗೊಳಿಸಿದ ಚಕ್ರ, ವಿನಮ್ರ ಕ್ಷಿತಿಚಕ್ರಂ = ಭೂಮಂಡಲವನ್ನೇ ವಿಧೇಯವಾಗಿಸಿದ ಚಕ್ರ, ದೀಪದೀಪ್ತಿಪ್ರತಿಹತದಿನಕೃತ್ + ಚಕ್ರತೀವ್ರಾಂಶುಚಕ್ರಂ = ದೀಪಗಳ ಬೆಳಕನ್ನೆಲ್ಲ ಅಡಗಿಸಿದ ಚಕ್ರವಾದ ಸೂರ್ಯನಿಗಿಂತಲೂ ತೀಕ್ಷ್ಣವಾದ ಬೆಳಗನ್ನುಳ್ಳ ಚಕ್ರ, ಜಿತದಿಕ್ + ಚಕ್ರಂ = ದಿಕ್ಕುಗಳನ್ನೆಲ್ಲ ಗೆದ್ದ ಚಕ್ರ, ಪ್ರಭಾಪ್ರಸ್ಫುರಿತದಶದಿಶಾಚಕ್ರಂ = ತನ್ನಿಂದ ಹೊಮ್ಮುವ ಕಾಂತಿಯಿಂದ ಹತ್ತೂ ದಿಕ್ಕುಗಳನ್ನು ಬೆಳಗಿಸುವ ಚಕ್ರ, ಉಗ್ರಪ್ರತಾಪ + ಊರ್ಜಿತತೇಜಃ + ಚಕ್ರಂ = ಭೀಕರ ಪ್ರತಾಪವು ಅಧಿಕಗೊಳ್ಳುವ ಚಕ್ರ, ಚಕ್ರಿಚಕ್ರಂ ಒಳಪುಗದೆ ಪುರ + ಉಪಾಂತದೊಳ್ ಇರ್ದತ್ತು = ಇಂತಹ ಚಕ್ರರತ್ನವು ಪ್ರವೇಶಿಸದೆ ನಗರದ ಹೊರವಲಯದಲ್ಲಿ ನಿಂತಿತು.

**ಗದ್ಯಾನುಸರಣ:** ಶತ್ರುಕ್ಷತ್ರಿಯರನ್ನು ಕೊಂದ, ವೀರರನ್ನು ಭಯದಿಂದ ಗಾಬರಿಗೊಳಿಸಿದ, ಭೂಮಂಡಲವನ್ನೇ ವಿಧೇಯವಾಗಿಸಿದ, ದೀಪಗಳ ಬೆಳಕನ್ನೆಲ್ಲ ಅಡಗಿಸಿದ ಚಕ್ರವಾದ ಸೂರ್ಯನಿಗಿಂತಲೂ ತೀಕ್ಷ್ಣವಾದ ಬೆಳಗನ್ನುಳ್ಳ, ದಿಕ್ಕುಗಳನ್ನೆಲ್ಲ ಗೆದ್ದ, ತನ್ನಿಂದ ಹೊಮ್ಮುವ ಕಾಂತಿಯಿಂದ ಹತ್ತೂ ದಿಕ್ಕುಗಳನ್ನು ಬೆಳಗಿಸುವ ಹಾಗೂ ಭೀಕರ ಪ್ರತಾಪದ ಬೆಳಕು ಅಧಿಕಗೊಳ್ಳುವಂತಹ ಚಕ್ರರತ್ನವು ಅಯೋಧ್ಯೆಯನ್ನು ಪ್ರವೇಶಿಸದೆ ಹೊರವಲಯದಲ್ಲಿ ನಿಂತುಬಿಟ್ಟಿತು.

**ವ॥ ಅಂತು ಚಕ್ರರತ್ನಮಯೋಧ್ಯಾಪುರಮಂ ಪುಗದೆ ತಱುಂಬಿ ನಿಂದುದಂ ಕಂಡುಮದಂ ರಕ್ಷಿಸುವ ಯಕ್ಷಸಹಸ್ರಂಬೆರಸು ಗಣಬದ್ಧದೇವರೆಲ್ಲಂ ನೆರೆದು,**

**ಅರ್ಥ:** ಅಂತು ಚಕ್ರರತ್ನಂ + ಅಯೋಧ್ಯಾಪುರಮಂ ಪುಗದೆ ತಱುಂಬಿ ನಿಂದುದಂ ಕಂಡುಂ + ಅದಂ ರಕ್ಷಿಸುವ ಯಕ್ಷಸಹಸ್ರಂಬೆರಸು ಗಣಬದ್ಧದೇವರೆಲ್ಲಂ ನೆರೆದು = ಆದರೆ ಚಕ್ರರತ್ನವು ಅಯೋಧ್ಯಾನಗರದ ಒಳಕ್ಕೆ ಹೊಗದೆ ನಿಂತುಕೊಂಡಿತು ಅದನ್ನು ಕಂಡು ಅದರ ರಕ್ಷಕರಾದ ಅಸಂಖ್ಯ ಯಕ್ಷರೊಡನೆ ಗಣಬದ್ಧದೇವರುಗಳು ಸೇರಿದರು.

**ಪುರಗೋಪುರದೊಳಗಂ ಚ**
**ಕ್ರರತ್ನಮಿಂತೇಕೆ ಪುಗದೆ ಮಾಣ್ದಿರ್ದುದೊ ಮ**
**ಚ್ಚರಿಪದಟನಿನ್ನನಾವನೊ**
**ಭರತೇಶ್ವರಚಕ್ರವರ್ತಿಗಿನ್ನುಂ ಜಗದೊಳ್** ೪೮

**ಪದವಿಭಾಗ-ಅನ್ವಯ-ಅರ್ಥ:** ಪುರಗೋಪುರದೊಳಗಂ ಪುಗದೆ = ಊರ ಅಗಸೆ ಬಾಗಿಲಿನೊಳಗೆ ಬಾರದೆ, ಚಕ್ರರತ್ನಂ + ಇಂತು + ಏಕೆ ಮಾಣ್ದು + ಇರ್ದುದೊ = ಚಕ್ರರತ್ನವು ಹೀಗೇಕೆ ನಿಂತುಬಿಟ್ಟಿದೆ, ಭರತೇಶ್ವರಚಕ್ರವರ್ತಿಗೆ ಜಗದೊಳ್ ಇನ್ನುಂ ಮಚ್ಚರಿಪ ಇನ್ನನ್ ಅದಟನ್ + ಆವನೊ = ಭರತಚಕ್ರವರ್ತಿಗೆ ಈ ಜಗತ್ತಿನಲ್ಲಿ ಇನ್ನೂ ಪೈಪೋಟಿ ನಡೆಸುವ ಇಂಥ ಶೂರನು ಇನ್ನಾವನಿರುವನೋ!

**ಗದ್ಯಾನುಸರಣ:** ಊರ ಅಗಸೆಬಾಗಿಲಿನೊಳಗೆ ಬಾರದೆ ಚಕ್ರರತ್ನವು ಹೀಗೇಕೆ ನಿಂತುಬಿಟ್ಟಿದೆ; ಭರತಚಕ್ರವರ್ತಿಗೆ ಈ ಜಗತ್ತಿನಲ್ಲಿ ಇನ್ನೂ ಪೈಪೋಟಿ ನಡೆಸುವ ಇಂಥ ಶೂರನು ಇನ್ನೂ ಯಾವನಿದ್ದಾನೋ!

**ಆವಂಗಕಾಲಚಕ್ರಮ**
**ನೋವದೆ ಮಾಡಲ್ಕೆ ಚಕ್ರಮಿದು ಬಗೆದುದೊ ಶೌ**
**ರ್ಯಾವಿರ್ಭೂತದವಾನಳ**
**ನಾವನ ಚತುರಂಗಬಲಮನಿಂ ಸುಟ್ಟಪುದೋ** ೪೯

**ಪದವಿಭಾಗ-ಅನ್ವಯ-ಅರ್ಥ:** ಆವಂಗೆ + ಅಕಾಲಚಕ್ರಮನ್ + ಓವದೆ ಮಾಡಲ್ಕೆ ಇದು ಚಕ್ರಂ ಬಗೆದುದೊ = ಯಾವನಿಗೆ ಅಪಮೃತ್ಯುವನ್ನುಂಟುಮಾಡಲು ಈ ಚಕ್ರವು ಉದ್ದೇಶಿಸಿದೆಯೋ, ಶೌರ್ಯ + ಆವಿರ್ಭೂತದವಾನಳನ್ = ಪರಾಕ್ರಮದಿಂದ ಉಂಟಾಗುವ ಕಾಳ್ಗಿಚ್ಚು, ಆವನ ಚತುರಂಗಬಲಮನ್ + ಇಂ ಸುಟ್ಟಪುದೋ = ಯಾವನ ಚತುರಂಗಸೈನ್ಯವನ್ನು ಸುಟ್ಟುಹಾಕಲಿದೆಯೋ!

**ಗದ್ಯಾನುಸರಣ:** ಯಾವನಿಗೆ ಅಪಮೃತ್ಯುವನ್ನುಂಟುಮಾಡಲು ಈ ಚಕ್ರವು ಉದ್ದೇಶಿಸಿದೆಯೋ; ಪರಾಕ್ರಮದಿಂದ ಉಂಟಾಗುವ ಕಾಳ್ಗಿಚ್ಚು ಇನ್ನು ಯಾವನ ಚತುರಂಗಸೈನ್ಯವನ್ನು ಸುಟ್ಟುಹಾಕಲಿದೆಯೋ!

**ಆತಂಗೆ ಚಕ್ರಿ ವೇಟ್ಕುಮೆ**
**ಪೋ ತಳ್ತಿಜೆದಾಮೆ ಗೆಲ್ವಮೆಂದನಿಬರುಮು**
**ತ್ಪಾತಮರುದಾಭಿಘಾತೋ**
**ದ್ಘೂತಪಯೋನಿಧಿಗಳಂತೆ ಮಸಗಿದರಾಗಳ್** ೫೦

**ಪದವಿಭಾಗ–ಅನ್ವಯ–ಅರ್ಥ:** ಆತಂಗೆ ಚಕ್ರಿ ವೇಟ್ಕುಮೆ = ಅಂಥವನನ್ನು ಎದುರಿಸಲು ಚಕ್ರವರ್ತಿ ಬೇಕೇನು, ಪೋ ಆಮೆ ತಳ್ತು + ಇಜೆದು ಗೆಲ್ವಂ = ನಾವೇ ಅವನನ್ನು ಎದುರಿಸಿ ತಿವಿದು ಗೆಲ್ಲೋಣ, ಎಂದು + ಅನಿಬರುಂ = ಎನ್ನುತ್ತ ಸೈನಿಕರೆಲ್ಲರೂ, ಉತ್ಪಾತಮರುತ್ + ಅಭಿಘಾತ = ಪ್ರಳಯಕಾಲದ ಬಿರುಗಾಳಿಯ ಹೊಡೆತದಿಂದ, ಉದ್ಘೂತಪಯೋನಿಧಿಗಳಂತೆ ಆಗಳ್ ಮಸಗಿದರ್ = ಮೇಲೆದ್ದ ಸಮುದ್ರದಲ್ಲಿ ಉಂಟಾಗುವಂತೆ ಮೊರೆದರು.

**ಗದ್ಯಾನುಸರಣ:** ಅಂಥವನನ್ನು ಎದುರಿಸಲು ಚಕ್ರವರ್ತಿ ಬೇಕೇನು, ನಾವೇ ಅವನನ್ನು ಎದುರಿಸಿ ತಿವಿದು ಗೆಲ್ಲೋಣ – ಎನ್ನುತ್ತ ಸೈನಿಕರೆಲ್ಲರೂ ಪ್ರಳಯಕಾಲದ ಬಿರುಗಾಳಿಯ ಹೊಡೆತದಿಂದ ಮೇಲೆದ್ದ ಸಮುದ್ರದಲ್ಲಿ ಉಂಟಾಗುವಂತೆ ಮೊರೆದರು.

**ವ॥ ಆ ಪ್ರಸ್ತಾವದೊಳ್ ಚಕ್ರೇಶ್ವರಂಗೆ ಚಕ್ರರತ್ನಸ್ಖಲನಮಂ ಪತಾಕಿನೀಚಕ್ರಪ್ರಧಾನ ಪ್ರಭುಗಳಜೆಯೆ ಬಿನ್ನಪಂಗೈಮೊಡಸ್ಖಲಿತಮಪ್ಪ ಚಕ್ರರತ್ನಸ್ಖಳನಕ್ಕೆ ನಾಡೆಯುಂ ಚಕ್ರಿಮನಸ್ಖಳನಮಾಗೆ ವಿಸ್ಮಯಂಬಟ್ಟು ಪುರೋಹಿತರತ್ನಮಂ ಬರಿಸಿ,**

**ಪದವಿಭಾಗ–ಅನ್ವಯ–ಅರ್ಥ:** ಆ ಪ್ರಸ್ತಾವದೊಳ್ ಚಕ್ರರತ್ನಸ್ಖಲನಮಂ = ಆಗ ಚಕ್ರರತ್ನವು ನಿಂತುದನ್ನು, ಪತಾಕಿನೀಚಕ್ರಪ್ರಧಾನಪ್ರಭುಗಳ್ = ಸೇನಾನಾಯಕರು, ಚಕ್ರೇಶ್ವರಂಗೆ ಅಜೆಯೆ ಬಿನ್ನಪಂಗೈದೊಡೆ = ಚಕ್ರವರ್ತಿಗೆ ವಿವರವಾಗಿ ತಿಳಿಸಲು, ಅಸ್ಖಲಿತಮಪ್ಪ ಚಕ್ರರತ್ನಸ್ಖಳನಕ್ಕೆ = ತಡೆಯಿಲ್ಲದ ಚಕ್ರರತ್ನದ ತಡೆಗೆ, ಚಕ್ರಿಮನಸ್ಖಳನಂ + ಆಗೆ = ಚಕ್ರವರ್ತಿಯು ಬಹುವಾಗಿ ಎದೆಗುಂದಿ, ನಾಡೆಯುಂ ವಿಸ್ಮಯಂಬಟ್ಟು = ಅತೀವ ವಿಸ್ಮಯಕ್ಕೊಳಗಾಗಿ, ಪುರೋಹಿತರತ್ನಮಂ ಬರಿಸಿ = ಪುರೋಹಿತಶ್ರೇಷ್ಠನಿಗೆ ಹೇಳಿಕಳಿಸಿ,

**ಗದ್ಯಾನುಸರಣ:** ಆಗ ಚಕ್ರರತ್ನವು ನಿಂತ ವಿಷಯವನ್ನು ಸೇನಾನಾಯಕರು ಚಕ್ರವರ್ತಿಗೆ ವಿವರವಾಗಿ ಬಿನ್ನವಿಸಿಕೊಂಡರು; ತಡೆಯಿಲ್ಲದ ಚಕ್ರರತ್ನವು ತಡೆದುದನ್ನು ಕೇಳಿ ಚಕ್ರವರ್ತಿಯು ಬಹುವಾಗಿ ಎದೆಗುಂದಿ ಹಾಗೂ ವಿಸ್ಮಯಪಟ್ಟು ಪುರೋಹಿತಶ್ರೇಷ್ಠನಿಗೆ ಹೇಳಿಕಳಿಸಿದ.

**ಪದಿನಾಲ್ಕುಂ ರತ್ನಕ್ಕಂ**
**ಮೊದಲೆನಗೀ ಚಕ್ರರತ್ನಮಿದಜೆಂ ಮೇಲಾ**
**ವುದು ದೈವಮೆನಗಯೋಧ್ಯೆಯ**
**ನಿದು ಪುಗದೆ ತಜುಂಬಿ ನಿಂದ ಕಾರಣಮೇನೋ** ೫೧

**ಪದವಿಭಾಗ-ಅನ್ವಯ-ಅರ್ಥ:** ಪದಿನಾಲ್ಕುಂ ರತ್ನಕ್ಕಂ ಈ ಚಕ್ರರತ್ನಂ ಎನಗೆ ಮೊದಲ್ = ಹದಿನಾಲ್ಕು ರತ್ನಗಳಲ್ಲಿಯೂ ಚಕ್ರರತ್ನವೇ ನನಗೆ ಮುಖ್ಯ. ಇದಱಿಂ ಮೇಲೆ ದೈವಂ ಆವುದು ಎನಗೆ = ಇದಕ್ಕಿಂತಲೂ ಮಿಗಿಲಾದ ದೈವವು ನನಗೆ ಬೇರೆ ಯಾವುದಿದೆ? ಇದು ಅಯೋಧ್ಯೆಯನ್ ಪುಗದೆ ತಱುಂಬಿ ನಿಂದ ಕಾರಣಮೇನೋ = ಇದು ಅಯೋಧ್ಯಾನಗರವನ್ನು ಹೊಗದೆ ಅಡ್ಡಗಟ್ಟಿ ನಿಂತ ಕಾರಣವೇನು?

**ಗದ್ಯಾನುಸರಣ:** ಹದಿನಾಲ್ಕು ರತ್ನಗಳಲ್ಲಿಯೂ ಚಕ್ರರತ್ನವೇ ನನಗೆ ಮುಖ್ಯ. ಇದಕ್ಕಿಂತಲೂ ಮಿಗಿಲಾದ ದೈವವು ನನಗೆ ಬೇರೆ ಯಾವುದಿದೆ? ಆದರೆ ಇದು ಅಯೋಧ್ಯಾನಗರವನ್ನು ಹೊಗದೆ ಅಡ್ಡಗಟ್ಟಿ ನಿಂತ ಕಾರಣವೇನು?

**ಎನಗಮರಾತಿಗಳೊಳರೆಂ**
**ಬಿನಿತು ಪರಾಭವಮನೀಗಳೀ ಚಕ್ರಂ ಸೂ**
**ಚನೆಗೈದುದಿನ್ನನಾವಂ**
**ತನಗಿರಲೆಡೆಮಾಡಿದಪ್ಪನಂತಕಮುಖಮಂ** ೫೨

**ಪದವಿಭಾಗ-ಅನ್ವಯ-ಅರ್ಥ:** ಎನಗಂ + ಅರಾತಿಗಳ್ + ಒಳರ್ + ಎಂಬ + ಇನಿತು = ನನಗೆ ಇನ್ನೂ ಶತ್ರುಗಳಿದ್ದಾರೆ ಎಂಬಷ್ಟು ಮಟ್ಟಿಗೆ, ಪರಾಭವಮನ್ + ಈಗಳ್ + ಈ ಚಕ್ರಂ ಸೂಚನೆಗೈದುದು = ಹಿನ್ನಡೆಯನ್ನು ಈ ಚಕ್ರವು ಸೂಚಿಸುತ್ತಿದೆ, ಇನ್ನನ್ + ಆವಂ ತನಗೆ ಅಂತಕಮುಖಮಂ ಇರಲ್ + ಎಡೆಮಾಡಿದಪ್ಪನ್ = ಇಂತಹ ಯಾವನು ತನಗೆ ಯಮನ ಬಾಯಿಯಲ್ಲಿ ಇರಲು ಅವಕಾಶಮಾಡಿಕೊಳ್ಳುತ್ತಿದ್ದಾನೆ.

**ಗದ್ಯಾನುಸರಣ:** ನನಗೆ ಇನ್ನೂ ಶತ್ರುಗಳಿದ್ದಾರೆ ಎಂಬಷ್ಟು ಮಟ್ಟಿನ ಹಿನ್ನಡೆಯನ್ನು ಈ ಚಕ್ರವು ಸೂಚಿಸುತ್ತಿದೆ; ಇಂತಹ ಯಾವನು ತನಗೆ ಯಮನ ಬಾಯಿ ಹೊಗಲು ಅವಕಾಶಮಾಡಿಕೊಳ್ಳುತ್ತಿದ್ದಾನೆ?

**ವ॥ ಎಂದು ವೀರರಸೋದಾರಗಂಭೀರವಚನರಚನೆಗಳಿನನಿತನೆ ಬೆಸಸಿ ಮಾಣ್ದ ಚಕ್ರವಲ್ಲಭಂಗೆ ಪುರೋಹಿತನಭಿಮುಖನಾಗಿ,**

**ಅರ್ಥ:** ಎಂದು ವೀರರಸ + ಉದಾರಗಂಭೀರವಚನರಚನೆಗಳಿನ್ + ಇನಿತನೆ ಬೆಸಸಿ ಮಾಣ್ದ ಚಕ್ರವಲ್ಲಭಂಗೆ ಪುರೋಹಿತನ್ + ಅಭಿಮುಖನಾಗಿ = ಎಂಬ ವೀರರಸವನ್ನು ತೋರುವ ಗಂಭೀರ ಮಾತುಗಳಿಂದ ಇಷ್ಟನ್ನು ಮಾತ್ರ ಕೇಳಿ ಸುಮ್ಮನಾದ ಚಕ್ರವರ್ತಿಗೆ ಪುರೋಹಿತನು ಮುಂದೆ ನಿಂತು,

**ಇದು ಪಗೆವರುಳ್ಳುದಂ ತೋ**
**ಱಿದಪುದು ನಿನಗರಿನೃಪರ್ಕಳಿಲ್ಲದಿದಿಂತಿ**
**ರ್ದುದೆ ದುರ್ನಿರೀಕ್ಷ್ಯಮಿನಬಿಂ**
**ಬದಂತೆ ಪಜ್ವಳಿಸಿ ಬಾಗಿಲೊಳ್ ಪುರವರದಾ** ೫೩

**ಪದವಿಭಾಗ-ಅನ್ವಯ-ಅರ್ಥ:** ಇದು ನಿನಗೆ ಪಗೆವರ್ + ಉಳ್ಳುದಂ ತೋಱಿದಪುದು = ಚಕ್ರರತ್ನವು ನಿಂತಿರುವುದು ನಿನಗೆ ಶತ್ರುಗಳಿರುವುದನ್ನು

ಸೂಚಿಸುತ್ತದೆ, ಅರಿನೃಪರ್ಕಳ್ + ಇಲ್ಲದೆ = ಶತ್ರುರಾಜರುಗಳಿರದಿದ್ದರೆ, ಇನಬಿಂಬದಂತೆ ದುರ್ + ನಿರೀಕ್ಷ್ಯಂ ಇದು = ಸೂರ್ಯಮಂಡಲದಂತೆ ನೋಡಲಾಗದಂತಹ ಇದು, ಪುರವರದಾ ಬಾಗಿಲೊಳ್ ಪಜ್ವಳಿಸಿ ಇಂತು + ಇರ್ಪುದೆ = ಊರ ಅಗಸೆಬಾಗಿಲ ಮುಂದೆ ಉರಿಯುತ್ತ ಹೀಗೆ ನಿಲ್ಲುತ್ತದೆಯೇ?

**ಗದ್ಯಾನುಸರಣ:** ಚಕ್ರರತ್ನವು ನಿಂತಿರುವುದು ನಿನಗೆ ಶತ್ರುಗಳಿರುವುದನ್ನು ಸೂಚಿಸುತ್ತದೆ, ಶತ್ರುರಾಜರುಗಳಿರದಿದ್ದರೆ, ಸೂರ್ಯಮಂಡಲದಂತೆ ನೋಡಲಾಗದಂತಹ ಈ ಚಕ್ರವು ಊರ ಅಗಸೆಬಾಗಿಲ ಮುಂದೆ ಪ್ರಜ್ವಲಿಸುತ್ತ ಹೀಗೆ ನಿಲ್ಲುತ್ತದೆಯೇ?

**ನಿನಗರಸ ಬಹಿರ್ಮಂಡಳ**
**ಮನೆ ಸಮಜಿಲ್ಕಿನಿತು ಬರಿಸಮುಂ ಪೋದುವು ಕೇ**
**ಳಿನಿಸಂಂತರ್ಮಂಡಲಸಾ**
**ಧಮುಂಟೆಂದಜಿಪಿದುದುಮನಿನ್ನಜಿಪುವುವೇ** ೫೪

**ಪದವಿಭಾಗ–ಅನ್ವಯ–ಅರ್ಥ:** ಅರಸ ಬಹಿರ್ಮಂಡಳಮನೆ ಸಮಜಿಲ್ಕೆ + ಇನಿತು ಬರಿಸಮುಂ ನಿನಗೆ ಪೋದುವು = ರಾಜನೇ, ಹೊರಗಡೆಯ ರಾಜ್ಯಗಳನ್ನು ವಶಪಡಿಸಿಕೊಳ್ಳಲು ನಿನಗೆ ಇಷ್ಟು ವರ್ಷಗಳು ಕಳೆದುಹೋದುವು; ಇನಿಸು + ಅಂತರ್ಮಂಡಲಸಾಧನಂ + ಉಂಟು = ಇನ್ನು ಒಳಗಿನ ಪ್ರದೇಶಗಳನ್ನು ಸಾಧಿಸಿಕೊಳ್ಳಬೇಕಾಗಿದೆ; ಎಂದು + ಅಜಿಪಿದುದುಮನ್ + ಇನ್ನಜಿಪುವುವೇ ಕೇಳ್ = ಎಂದು ತಿಳಿಸಿದುದನ್ನೇ ಮತ್ತೆ ತಿಳಿಸಬೇಕೇ?

**ಗದ್ಯಾನುಸರಣ:** ರಾಜನೇ, ಹೊರಗಡೆಯ ರಾಜ್ಯಗಳನ್ನು ವಶಪಡಿಸಿಕೊಳ್ಳಲು ನಿನಗೆ ಇಷ್ಟು ವರ್ಷಗಳು ಕಳೆದುಹೋದುವು; ಇನ್ನು ಒಳಗಿನ ಪ್ರದೇಶಗಳನ್ನು ಸಾಧಿಸಿಕೊಳ್ಳಬೇಕಾಗಿದೆ; ತಿಳಿದಿರುವುದನ್ನೇ ಮತ್ತೆ ತಿಳಿಸಬೇಕೇ?

**ಪುರುತನಯಂ ತಾನಾಮುಂ**
**ಪುರುತನಯರೆಮೆಮಗೆ ತಂದೆಯಿತ್ತವನಿತಳಂ**
**ಪೊರೆಯುಂಟೆ ತನಗೆ ಭಾಗ್ಯಾ**
**ನುರೂಪದಿಂ ಬಾಳ್ವೆಮೆಜಗೆವೆಂಬತಿಮದದಿಂ** ೫೫

**ಪದವಿಭಾಗ–ಅನ್ವಯ–ಅರ್ಥ:** ತಾನ್ ಪುರುತನಯಂ ಆಮುಂ ಪುರುತನಯರೆಂ = ಅವನು ಪುರುದೇವನ ಮಗ ಹೇಗೋ ಹಾಗೆ ನಾವೂ ಪುರುದೇವನ ಮಕ್ಕಳು, ಎಮಗೆ ತಂದೆಯಿತ್ತ + ಅವನಿತಳಂ ತನಗೆ ಪೊರೆಯುಂಟೆ = ನಮಗೆ ತಂದೆಯು ದಯಪಾಲಿಸಿದ ಭೂಮಂಡಲದ ಮೇಲೆ ಅವನಿಗೆ ಹೊಣೆಗಾರಿಯಿದೆಯೇ? ತನಗೆ ಭಾಗ್ಯಾನುರೂಪದಿಂ ಬಾಳ್ವೆಂ = ನಮ್ಮ ಭಾಗ್ಯಕ್ಕೆ ಅನುಗುಣವಾದ ರೀತಿಯಲ್ಲಿ ಬಾಳುತ್ತೇವೆ; ಎಜಗೆವು + ಎಂಬ + ಅತಿಮದದಿಂ = ಯಾರಿಗೂ ತಲೆಬಾಗುವುದಿಲ್ಲ,

**ಗದ್ಯಾನುಸರಣ:** ಅವನು ಪುರುದೇವನ ಮಗ ಹೇಗೋ ಹಾಗೆ ನಾವೂ ಪುರುದೇವನ ಮಕ್ಕಳು, ನಮಗೆ ತಂದೆಯು ದಯಪಾಲಿಸಿದ ಭೂಮಂಡಲದ

ಮೇಲೆ ಅವನಿಗೆ ಅಧಿಕಾರವಿದೆಯೇ? ನಮ್ಮ ಭಾಗ್ಯಕ್ಕೆ ಅನುಗುಣವಾದ ರೀತಿಯಲ್ಲಿ ಬಾಳುತ್ತೇವೆ; ಆದರೆ. ಯಾರಿಗೂ ತಲೆಬಾಗುವುದಿಲ್ಲ.

**ನಿನ್ನನುಜರನಿಬರುಂ ಮಾ**
**ನೋನ್ನತರಣಮೆಱಗರವರೊಳಗ್ಗಳದದಟಂ**
**ತನ್ನಭಿಮಾನದ ಭುಜಬಲ**
**ದುನ್ನತಿಯನೆ ಮೆಱೆವ ಬಾಹುಬಲಿ ಮುನ್ನೆಱಗಂ** ೫೬

**ಪದವಿಭಾಗ–ಅನ್ವಯ–ಅರ್ಥ:** ನಿನ್ನ + ಅನುಜರ್ + ಅನಿಬರುಂ ಮಾನ + ಉನ್ನತರ್ = ನಿನ್ನ ತಮ್ಮಂದಿರೆಲ್ಲ ಮಹಾ ಸ್ವಾಭಿಮಾನಿಗಳು, ಅಣಂ ಎಱಗರ್ = ಸ್ವಲ್ಪವೂ ಬಾಗದವರು, ಅವರೊಳ್ + ಅಗ್ಗಳದ + ಅದಟಂ = ಅವರಲ್ಲಿಯೂ ಮಹಾ ದರ್ಪಿಷ್ಟನಾದವನೂ. ತನ್ನ + ಅಭಿಮಾನದ ಭುಜಬಲದ + ಉನ್ನತಿಯನೆ ಮೆಱೆವ = ತನ್ನ ಸ್ವಾಭಿಮಾನ ಮತ್ತು ತೋಳ್ಬಲಗಳನ್ನು ಮೆರೆಯುವವನೂ ಆದ, ಬಾಹುಬಲಿ ಮುನ್ನೆ + ಎಱಗಂ = ಬಾಹುಬಲಿಯಂತೂ ಮೊದಲೇ ಬಾಗುವುದಿಲ್ಲ.

**ಗದ್ಯಾನುಸರಣ:** ನಿನ್ನ ತಮ್ಮಂದಿರೆಲ್ಲ ಮಹಾ ಸ್ವಾಭಿಮಾನಿಗಳು, ಸ್ವಲ್ಪವೂ ಬಾಗದವರು; ಅವರಲ್ಲಿಯೂ ಮಹಾ ದರ್ಪಿಷ್ಟನಾದವನೂ, ತನ್ನ ಸ್ವಾಭಿಮಾನ ಮತ್ತು ತೋಳ್ಬಲಗಳನ್ನು ಮೆರೆಯುವವನೂ ಆದ ಬಾಹುಬಲಿಯಂತೂ ಮೊದಲೇ ಬಾಗುವುದಿಲ್ಲ.

**ಆದಿಬ್ರಹ್ಮರ ಕೊಟ್ಟೀ**
**ಮೇದಿನಿಗಾನೊಡೆಯನಾತನರಸಿನಿವಿರಿದಿಂ**
**ದಾದೊಡಮೇನೆನಗೆಂಬ ಮ**
**ದೋದಯದೊಳ್ ದೇವ ಬಾಹುಬಲಿ ಬಲ್ದಿರ್ದಂ** ೫೭

**ಪದವಿಭಾಗ–ಅನ್ವಯ–ಅರ್ಥ:** ಆದಿಬ್ರಹ್ಮರ ಕೊಟ್ಟ + ಈ ಮೇದಿನಿಗೆ + ಆನ್ + ಒಡೆಯನ್ = ಆದಿತೀರ್ಥಂಕರನು ಕೊಟ್ಟಿರುವ ಈ ಭೂಮಿಗೆ ನಾನೂ ಒಡೆಯನೇ, ಆತನ + ಅರಸು ಇಂದು ಇನಿವಿರಿದಾದೊಡಂ ಎನಗೆ ಏನ್ = ಭರತನ ಅಧಿಕಾರ ಕೊಂಚ ಹೆಚ್ಚಾದರೆ ತಾನೇ ನನಗೇನು, ಎಂಬ ಮದೋದಯದೊಳ್ ಬಾಹುಬಲಿ ಬಲ್ದಿರ್ದಂ ದೇವ = ಎನ್ನುವ ಅಹಂಕಾರದಿಂದ ಬಾಹುಬಲಿ ಬಲಿತಿದ್ದಾನೆ, ಸ್ವಾಮಿ

**ಗದ್ಯಾನುಸರಣ:** ಆದಿತೀರ್ಥಂಕರನು ಕೊಟ್ಟಿರುವ ಈ ಭೂಮಿಗೆ ನಾನೂ ಒಡೆಯನೇ. ಭರತನ ಅಧಿಕಾರ ಕೊಂಚ ಹೆಚ್ಚಾದರೆ ನನಗೇನು ಎನ್ನುವ ಅಹಂಕಾರದಿಂದ ಬಾಹುಬಲಿ ಬಲಿತಿದ್ದಾನೆ, ಸ್ವಾಮಿ.

ನಿನಗೇನಂ ಪೇೞ್ವೆನಾತಂ ಸುಭಟಸಮರಸಂಘಟ್ಟದೋರ್ಗರ್ವವಿದ್ಧಂ
ಸನಕೇಳೀದೋಹಳಂ ವಿದ್ವಿಷದಿಭರದನಸ್ತಂಭಲೀಲಾಸಮುತ್ಪಾ
ಟನಕಾಂಕ್ಷಾದುರ್ಮದಂ ದುರ್ಜಯರಿಪುನೃಪಶೌರ್ಯೋನ್ನಮನ್ಮಸ್ತಕಾವ
ರ್ಜನವಾಂಛಾದುರ್ಧರಂ ದುರ್ಲಲಿತಚರಿತಸಂಕೇತಗೋಷ್ಠೀನಿಕೇತಂ ೫೮

**ಪದವಿಭಾಗ–ಅನ್ವಯ–ಅರ್ಥ:** ನಿನಗೆ + ಏನಂ ಪೇಳ್ವೆನ್ = ನಿನಗೆ ಏನೆಂದು ಹೇಳಲಿ? ಆತಂ ಸುಭಟಸಮರಸಂಘಟ್ಟದೋರ್ಗರ್ವವಿಧ್ವಂಸನಕೇಳೀದೋಹಳಂ = ಅವನು ಮಹಾ ವೀರರೊಡನೆ ಯುದ್ಧದಲ್ಲಿ ತೊಡಗಿ ಎದುರಾಳಿಯ ತೋಳ್ಬಲದ ಹೆಮ್ಮೆಯನ್ನು ಹುಡಿಗುಟ್ಟುವ ಆಟದಲ್ಲಿ ಆಸಕ್ತನಾದದವನು; ವಿದ್ವಿಷತ್ + ಇಭರದನಸ್ತಂಭಲೀಲಾಸಮುತ್ಪಾಟನಕಾಂಕ್ಷಾದುರ್ಮದಂ = ಶತ್ರುರಾಜರ ಮದಿಸಿದ ಆನೆಗಳ ದಂತಗಳನ್ನು ಸಲೀಸಾಗಿ ಕಿತ್ತುಹಾಕುವುದರಲ್ಲಿ ಹೆಮ್ಮೆ ತಾಳುವವನು, ದುರ್ಜಯರಿಪುನೃಪಶೌರ್ಯ + ಉನ್ನಮತ್ + ಮಸ್ತಕ + ಆವರ್ಜನವಾಂಛಾದುರ್ಧರಂ = ಗೆಲ್ಲಲರಿದಾದ ಶತ್ರುರಾಜರ ಪರಾಕ್ರಮದಿಂದ ಮೇಲೆತ್ತಿದ ತಲೆಗಳನ್ನು ಬಾಗಿಸುವ ಆಕಾಂಕ್ಷೆಯವನು, ದುರ್ಲಲಿತಚರಿತಸಂಕೇತಗೋಷ್ಠೀನಿಕೇತಂ = ಶೂರರ ಪರಿಯನ್ನು ಗುರುತಿಸುವ ಗೋಷ್ಠಿಗೆ ಆಶ್ರಯದಾತ.

**ಗದ್ಯಾನುಸರಣ:** ಆತನ ಬಗ್ಗೆ ನಿನಗೆ ಏನೆಂದು ಹೇಳಲಿ? ಅವನು ಮಹಾ ವೀರರೊಡನೆ ಯುದ್ಧದಲ್ಲಿ ತೊಡಗಿ ಎದುರಾಳಿಯ ತೋಳ್ಬಲದ ಹೆಮ್ಮೆಯನ್ನು ಹುಡಿಗುಟ್ಟುವ ಆಟದಲ್ಲಿ ಆಸಕ್ತನಾದವನು; ಶತ್ರುರಾಜರ ಮದಿಸಿದ ಆನೆಗಳ ದಂತಗಳನ್ನು ಸಲೀಸಾಗಿ ಕಿತ್ತುಹಾಕುವುದರಲ್ಲಿ ಹೆಮ್ಮೆ ತಾಳುವವನು; ಗೆಲ್ಲಲರಿದಾದ ಶತ್ರುರಾಜರ ಪರಾಕ್ರಮದಿಂದ ಮೇಲೆತ್ತಿದ ತಲೆಗಳನ್ನು ಬಾಗಿಸುವ ಆಕಾಂಕ್ಷೆಯವನು; ಮತ್ತು ಶೂರರ ಪರಿಯನ್ನು ಗುರುತಿಸುವ ಗೋಷ್ಠಿಗೆ ಆಶ್ರಯದಾತ.

**ಭರತೇಶ್ವರ ನಿನ್ನ ಪದಾಂ**
**ಬುರುಹಕ್ಕವರೆಱಗಿ ಸುಖಮನನುಭವಿಸುಗೆ ಮೇಣ್**
**ಪುರುಪರಮೇಶ್ವರನ ಪದಾಂ**
**ಬುರುಹಕ್ಕವರೆಱಗಿ ತಪಮನನುಭವಿಸುಗೆ ಮೇಣ್** ೫೯

**ಪದವಿಭಾಗ–ಅನ್ವಯ–ಅರ್ಥ:** ಭರತೇಶ್ವರ ಅವರ್ ನಿನ್ನ ಪದ + ಅಂಬುರುಹಕ್ಕೆ ಎಱಗಿ = ಭರತಚಕ್ರವರ್ತಿಯೇ ನಿನ್ನ ತಮ್ಮಂದಿರು ನಿನ್ನ ಅಡಿದಾವರೆಗಳಿಗೆ ಎರಗಿ, ಸುಖಮನ್ + ಅನುಭವಿಸುಗೆ ಮೇಣ್ = ಭೋಗಗಳನ್ನು ಅನುಭವಿಸಲಿ, ಇಲ್ಲವೇ, ಅವರ್ ಪುರುಪರಮೇಶ್ವರನ ಪದ + ಅಂಬುರುಹಕ್ಕೆ ಎಱಗಿ = ಅವರು ಪುರುದೇವನಿಗೆ ಶರಣಾಗಿ, ತಪಮನ್ + ಅನುಭವಿಸುಗೆ ಮೇಣ್ = ಇಲ್ಲ ತಪಸ್ಸಿನಲ್ಲಿ ತೊಡಗಲಿ.

**ಗದ್ಯಾನುಸರಣ:** ಭರತಚಕ್ರವರ್ತಿಯೇ, ನಿನ್ನ ತಮ್ಮಂದಿರು, ಇಲ್ಲವೇ ನಿನ್ನ ಅಡಿದಾವರೆಗಳಿಗೆ ಎರಗಿ ಭೋಗಗಳನ್ನು ಅನುಭವಿಸಲಿ, ಇಲ್ಲ ಪುರುದೇವನಿಗೆ ಶರಣಾಗಿ ತಪಸ್ಸಿನಲ್ಲಿ ತೊಡಗಲಿ.

**ಎನೆ ಬಳೆದ ಮುನಿಸಿನೊಳ್ ಕೆ**
**ಚ್ಚನಾದ ಕಣ್ ದೆಸೆಗೆ ಕೆಂಪನೊದವಿಸಿದುದು ದಿ**
**ಗ್ವನಿತೆಯರ್ಗೆ ರಕ್ತಬಲಿಯಂ**
**ಮನಕ್ಕೆ ವರೆ ಬಳೆದ ಮುನಿಸೆ ಕುಡುವಂತಾಗಳ್** ೬೦

**ಪದವಿಭಾಗ–ಅನ್ವಯ–ಅರ್ಥ:** ಎನೆ ಬಳೆದ ಮುನಿಸಿನೊಳ್ ಕೆಚ್ಚನಾದ ಕಣ್ = ಹೀಗೆಂದಾಗ ಅಧಿಕಗೊಂಡ ಕೋಪದಿಂದ ಕೆಂಪಗಾದ ಕಣ್ಣು, ಬಳೆದ ಮುನಿಸೆ ಮನಕ್ಕೆ ವರೆ = ಹೆಚ್ಚಾದ ಕೋಪವು ಮನಸ್ಸಿಗೆ ಬರಲು, ದಿಕ್ + ವನಿತೆಯರ್ಗೆ ರಕ್ತಬಲಿಯಂ ಕುಡುವಂತೆ = ದಿಕ್ಕನ್ಯೆಯರಿಗೆ ರಕ್ತಬಲಿಯನ್ನು ಕೊಡುವಂತೆ, ಆಗಳ್ ದೆಸೆಗೆ ಕೆಂಪನ್ + ಒದವಿಸಿದುದು = ಆಗ ದಿಕ್ಕುಗಳಿಗೆ ಕೆಂಪು ಬಣ್ಣವನ್ನು ನೀಡಿತು.

**ಗದ್ಯಾನುಸರಣ:** ಹೀಗೆನ್ನಲು ಅಧಿಕಗೊಂಡ ಕೋಪದಿಂದ ಭರತನ ಕಣ್ಣು ಕೆಂಪಗಾದವು; ಆ ಕೆಂಬಣ್ಣವು ಅವನ ಮನಸ್ಸಿನಲ್ಲಿಯೂ ತುಂಬಿಕೊಂಡು ದಿಕ್ಕನ್ಯೆಯರಿಗೆ ರಕ್ತಬಲಿಯನ್ನು ಕೊಡುವಂತೆ ದಿಕ್ಕುಗಳನ್ನೂ ಕೆಂಪಗಾಗಿಸಿದುವು.

**ವಿಕಸಿತನಾಸಾಪುಟನತಿ**
**ವಿಕಂಪಿತಾತಾಮ್ರದಶನವಸನಂ ಬದ್ಧ**
**ಭ್ರುಕುಟಿಪುಟಂ ಭರತೇಶ್ವರ**
**ನಕಾಲ ಯಮರಾಜಲೀಲೆಯಂ ಕೈಕೊಂಡಂ** ೬೧

**ಪದವಿಭಾಗ–ಅನ್ವಯ–ಅರ್ಥ:** ವಿಕಸಿತನಾಸಾಪುಟನ್ = ಅಗಲಗೊಂಡ ಮೂಗಿನ ಹೊಳ್ಳೆಗಳು, ಅತಿ ವಿಕಂಪಿತ + ಆತಾಮ್ರದಶನವಸನಂ = ಕಂಪಿಸುವ ಕೆಂಪು ತುಟಿಗಳು, ಬದ್ಧಭ್ರುಕುಟಿಪುಟಂ = ಗಂಟಿಕ್ಕಿಕೊಂಡ ಹುಬ್ಬುಗಳು, (ಉಂಟಾಗಿ) ಭರತೇಶ್ವರನ್ ಅಕಾಲಯಮರಾಜಲೀಲೆಯಂ ಕೈಕೊಂಡಂ = ಭರತಚಕ್ರವರ್ತಿಯು ಅಕಾಲ ಯಮರಾಜನಂತೆ ಆರ್ಭಟಿಸಿದ.

**ಗದ್ಯಾನುಸರಣ:** ಭರತನ ಮೂಗಿನ ಹೊಳ್ಳೆಗಳು ಅಗಲಗೊಂಡುವು, ಕೆಂಪು ತುಟಿಗಳು ಕಂಪಿಸತೊಡಗಿದುವು, ಹುಬ್ಬುಗಳು ಗಂಟಿಕ್ಕಿಕೊಂಡುವು; ಹೀಗೆ ಭರತಚಕ್ರವರ್ತಿಯು ಅಕಾಲ ಯಮನಂತೆ ಆರ್ಭಟಿಸಿದ.

**ಏನೇನೋ ಮದನುಜರೆನ**
**ಗಾನತರಣಮಾಗದಿರ್ದರಾ ಮದಮವರ್ಗೇ**
**ನೇನೇತಱಿಕೊಳಾಯ್ತದನಿನಿ**
**ಸಾನುಂ ಬೇಗದೊಳೆ ಕಳೆದು ತೋಱಿನೆ ರಣದೊಳ್** ೬೨

**ಪದವಿಭಾಗ–ಅನ್ವಯ–ಅರ್ಥ:** ಏನೇನೋ = ಏನು ಏನು? ಮತ್ + ಅನುಜರ್ + ಎನಗೆ + ಆನತರ್ + ಅಣಂ + ಆಗದಿರ್ದರ್ = ನನ್ನ ತಮ್ಮಂದಿರು ನನಗೆ ಕೊಂಚವೂ ವಿಧೇಯರಾಗಿಲ್ಲವೇ? ಆ ಮದಂ + ಅವರ್ಗೆ + ಏನೇನ್ + ಏತಱಿಕೊಳ್ + ಆಯ್ತು = ಅಂತಹ ಕೊಬ್ಬು ಅವರಿಗೆ ಯವುದರಿಂದ ಉಂಟಾಯಿತು, ಅದನ್ + ಇನಿಸಾನುಂ ಬೇಗದೊಳೆ ರಣದೊಳ್ ಕಳೆದು ತೋಱೆನೆ = ಅದನ್ನು ಆದಷ್ಟು ಬೇಗ ಯುದ್ಧದಲ್ಲಿ ಹೋಗಲಾಡಿಸದೇ ಇರುತ್ತೇನೆಯೇ.

**ಗದ್ಯಾನುಸರಣ:** ಏನು ಏನಂದಿರಿ? ನನ್ನ ತಮ್ಮಂದಿರು ನನಗೆ ಕೊಂಚವೂ ವಿಧೇಯರಾಗಿಲ್ಲವೇ? ಅಂತಹ ಕೊಬ್ಬು ಅವರಿಗೆ ಯಾವುದರಿಂದ ಉಂಟಾಯಿತು? ಆದಷ್ಟು ಬೇಗ ಅದನ್ನು ಯುದ್ಧದಲ್ಲಿ ಹೋಗಲಾಡಿಸದೇ ಇರುತ್ತೇನೆಯೇ!

**ಎನಿಬರರಸುಗಳುಮೆಱಗಿದೊ**
**ಡೆನಗೇವಂದಪುದೊ ಬಾಹುಬಲಿ ಪೊಱಗೆನೆ ಪೇ**
**ೞನಿತು ಪುರಮೇವುದೊ ಪೌ**
**ದನಪುರಮೆನ್ನಾಳ್ಕೆಗಿಂತು ಪೊಱಗೆನಿಪಾಗಳ್ ೬೩**

**ಪದವಿಭಾಗ-ಅನ್ವಯ-ಅರ್ಥ:** ಬಾಹುಬಲಿ ಪೊಱಗು + ಎನೆ = ಬಾಹುಬಲಿಯು ಹೊರತು ಎಂದಾಗ, ಎನಿಬರ್ + ಅರಸುಗಳುಂ + ಎಱಗಿದೊಡೆ + ಎನಗೆ + ಏವಂದಪುದೊ ಪೇೞ್ = ಎಷ್ಟು ಮಂದಿ ರಾಜರು ನನಗೆ ಬಾಗಿದರೆ ತಾನೇ ಏನು ಬಂದ ಹಾಗಾಯಿತು, ಇಂತು ಪೌದನಪುರಂ + ಎನ್ನ + ಆಳ್ಕೆಗೆ ಪೊಱಗೆ + ಎನಿಪಾಗಳ್ = ಹೀಗೆಯೇ ಪೌದನಪುರವು ನನ್ನ ಆಳ್ವಿಕೆಗೆ ಹೊರತು ಎನ್ನಿಸಲು, ಎನಿತು ಪುರಂ + ಏವುದೊ = ಎಷ್ಟು ಊರುಗಳಿಂದ ಏನು ಪ್ರಯೋಜನ?

**ಗದ್ಯಾನುಸರಣ:** ಬಾಹುಬಲಿಯು ಹೊರತು ಎನ್ನಲು, ಎಷ್ಟು ಮಂದಿ ರಾಜರು ನನಗೆ ಬಾಗಿದರೆ ತಾನೇ ಏನು ಬಂದ ಹಾಗಾಯಿತು, ಹೀಗೆಯೇ ಪೌದನಪುರವು ನನ್ನ ಅಧಿಕಾರದಿಂದ ಹೊರತು ಎನ್ನಿಸಲು, ನನ್ನ ಆಳ್ವಿಕೆಯಲ್ಲಿ ಎಷ್ಟು ಊರುಗಳಿದ್ದು ತಾನೇ ಏನು ಪ್ರಯೋಜನ?

**ಏವನೆಮಗೆಂಬ ಶೌರ್ಯಮ**
**ದಾವಷ್ಟಂಭದೊಳವಂದಿರಿಂತುಱದಿರೆ ಪೇ**
**ೞಾವುದೊ ಬಾಯ್ಕೇಳಿಸಿಯುಮಿ**
**ದೇವುದೊ ಷಟ್ಖಂಡಮಂಡಿತಂ ಭೂವಳಯಂ ೬೪**

**ಪದವಿಭಾಗ-ಅನ್ವಯ-ಅರ್ಥ:** ಎಮಗೆ ಏವನ್ ಎಂಬ = ನಮ್ಮನ್ನೇನು ಮಾಡಬಲ್ಲ ಎಂಬ. ಶೌರ್ಯಮದ + ಅವಷ್ಟಂಭದೊಳ್ = ತಮ್ಮ ಪರಾಕ್ರಮ ಮತ್ತು ಸೊಕ್ಕುಗಳ ಉರುಬಿನಲ್ಲಿ, ಇಂತು ಅವಂದಿರ್ ಉಱದೆ + ಇರೆ = ಹೀಗೆ ಅವರು ಲಕ್ಷಿಸದೆ ಇದ್ದರೆ, ಪೇೞ್ + ಆವುದೊ = ಪರ್ಯಾಯ ಏನು, ಬಾಯ್ಕೇಳಿಸಿಯುಂ ಇದು ಷಟ್ಖಂಡಮಂಡಿತಂ ಭೂವಳಯಂ ಏವುದೊ = ಆಜ್ಞಾಧೀನವಾಗಿಸಿಕೊಂಡಿದ್ದರೂ ಷಟ್ಖಂಡಗಳಿಂದ ಕೂಡಿದ ಈ ಭೂಮಂಡಲ ದಿಂದೇನು?

**ಗದ್ಯಾನುಸರಣ:** ನಮ್ಮನ್ನೇನು ಮಾಡಬಲ್ಲ ಎಂಬ ತಮ್ಮ ಪರಾಕ್ರಮ ಮತ್ತು ಸೊಕ್ಕುಗಳ ಉರುಬಿನಲ್ಲಿ ಹೀಗೆ ಅವರು ನನ್ನನ್ನು ಲಕ್ಷಿಸದೆ ಇದ್ದರೆ, ಏನು ಮಾಡುವುದು; ಆಜ್ಞಾಧೀನವಾಗಿಸಿಕೊಂಡಿದ್ದರೂ ಷಟ್ಖಂಡಗಳಿಂದ ಕೂಡಿದ ಈ ಭೂಮಂಡಲ ದಿಂದೇನು ಪ್ರಯೋಜನ?

**ಎಂದೊಡೆ ಪುರೋಹಿತಂ ನಿನ**
**ತೊಂದೋಲೆಗೆ ತೀರ್ವುದೊಂದು ಮನೆವಾರ್ತೆಗಿದೇ**
**ನೆಂದರಸ ಬಳೆಯೆ ನುಡಿವಪೆ**
**ಯೆಂದಟ್ಟಲೆವೇೞ್ದನವರ್ಗೆ ಶಾಸನಹರರಂ ೬೫**

**ಪದವಿಭಾಗ-ಅನ್ವಯ-ಅರ್ಥ:** ಎಂದೊಡೆ ಪುರೋಹಿತಂ = ಎಂದಾಗ ಪುರೋಹಿತನು ಹೀಗೆಂದ. ನಿನತು + ಒಂದು + ಓಲೆಗೆ ತೀರ್ವುದು = ನಿನ್ನ ಒಂದು ಓಲೆಯಿಂದ ಇದು ಬಗೆಹರಿಯುವಂತಹುದು. ಒಂದು ಮನೆವಾರ್ತೆಗೆ + ಇದೇನೆಂದು + ಅರಸ ಬಳೆಯೆ ನುಡಿದಪೆ = ಮನೆಯ ಒಂದು ವಿಷಯಕ್ಕೆ ಏನೆಂದು ಇಷ್ಟೊಂದು ಹೇಳುತಿದ್ದೀಯೆ. ಎಂದು ಅವರ್ಗೆ ಶಾಸನಹರರಂ ಅಟ್ಟಲೆ + ಪೇಟ್ಟಿನ್ = ಎಂದು ತಮ್ಮಂದಿರಿಗೆ ಆದೇಶವನ್ನು ಕಳಿಸಲು ಸಲಹೆಯಿತ್ತ.

**ಗದ್ಯಾನುಸರಣ:** ಎಂದಾಗ ಪುರೋಹಿತನು ಹೀಗೆಂದ: 'ನಿನ್ನ ಒಂದು ಓಲೆಯಿಂದ ಇದು ಬಗೆಹರಿಯುವಂತಹುದು, ಮನೆಯ ಒಂದು ವಿಷಯಕ್ಕೆ ಏನೆಂದು ಇಷ್ಟೊಂದು ಚಿಂತಿಸುತ್ತಿರುವೆ' ಎಂದು ತನ್ನ ತಮ್ಮಂದಿರಿಗೆ ಒಂದು ಆದೇಶವನ್ನು ಕಳಿಸಲು ಭರತನಿಗೆ ಸಲಹೆಯಿತ್ತ.

**ವ। ಆಗಳ್ ಭರತೇಶ್ವರಚಕ್ರವರ್ತಿಯಟ್ಟಿದ ದೂತಂ ಪುರುಪರಮೇಶ್ವರತನೂಜರಲ್ಲಿಗೆ ಪೋಗಿ,**

**ಅರ್ಥ:** ಆಗಳ್ ಭರತೇಶ್ವರಚಕ್ರವರ್ತಿ + ಅಟ್ಟಿದ ದೂತಂ ಪುರುಪರಮೇಶ್ವರ ತನೂಜರಲ್ಲಿಗೆ ಪೋಗಿ = ಭರತನು ಕಳಿಸಿದ ಆದೇಶವಾಹಕನು ಪುರುದೇವನ ಮಕ್ಕಳ ಬಳಿಗೆ ಹೋದ.

**ಎನಗೊರ್ವಂಗುಪಭೋಗ್ಯಮಲ್ತು ವಸುಧಾಸಾಮ್ರಾಜ್ಯಮೋರಂತೆ ನಿ**
**ಮ್ಮನಿಬರ್ಗಂ ಪಿರಿಯಣ್ಣನೇಂ ಜನಕನೇನೆಂಬೊಂದು ಕೊಂಡಾಟದಿಂ**
**ವಿನಯಂ ಸಲ್ವುದು ತಾಮುಮಾಮುಮೊಡನಿರ್ಪಂ ಬರ್ಪುದೆಂಬೀಶಶಾ**
**ಸನಮಂ ನೆತ್ತಿಯೊಳಾಂತು ಬನ್ನಿಮೆಱಗಿಂ ಚಕ್ರೇಶಪಾದಾಬ್ಜದೊಳ್** ೬೬

**ಪದವಿಭಾಗ-ಅನ್ವಯ-ಅರ್ಥ:** ವಸುಧಾಸಾಮ್ರಾಜ್ಯಂ = ಭೂಮಂಡಲದ ಸಾಮ್ರಾಜ್ಯವು, ಎನಗೆ + ಒರ್ವಂಗೆ + ಉಪಭೋಗ್ಯಂ + ಅಲ್ತು = ನನಗೊಬ್ಬನಿಗೇ ಅನುಭೋಗಕ್ಕೆ ಇರುವುದಲ್ಲ, ಓರಂತೆ ನಿಮ್ಮನಿಬರ್ಗಂ = ಹಾಗೆಯೇ ನಿಮ್ಮೆಲ್ಲರಿಗೂ, ಪಿರಿಯಣ್ಣನೇಂ ಜನಕನೇನ್ + ಎಂಬೊಂದು ಕೊಂಡಾಟದಿಂ = ಹಿರಿಯಣ್ಣನೇನು ತಂದೆಯೇನು ಎಂಬ ಗೌರವದಿಂದ, ವಿನಯಂ ಸಲ್ವುದು = ವಿಧೇಯತೆಯನ್ನು ತೋರಿಸಿರಿ, ತಾಮುಂ + ಆಮುಂ + ಒಡನೆ + ಇರ್ಪಂ ಬರ್ಪುದು = ನಾನೂ ನೀವೂ ಜೊತೆಯಲ್ಲಿರೋಣ, ಎಂಬ + ಈಶಶಾಸನಮಂ ನೆತ್ತಿಯೊಳ್ + ಆಂತು ಬನ್ನಿಂ = ಎಂಬ ಒಡೆಯನ ಆಜ್ಞೆಯನ್ನು ತಲೆಯಲ್ಲಿ ಹೊತ್ತು ಬನ್ನಿ, ಚಕ್ರೇಶಪಾದ + ಅಬ್ಜದೊಳ್ ಎಱಗಿಂ = ಚಕ್ರವರ್ತಿಯ ಅಡಿದಾವರೆಗಳಲ್ಲಿ ಎರಗಿರಿ.

**ಗದ್ಯಾನುಸರಣ:** 'ಈ ಭೂಮಂಡಲ ಸಾಮ್ರಾಜ್ಯವು ನನಗೊಬ್ಬನಿಗೇ ಅನುಭೋಗಕ್ಕೆ ಇರುವುದಲ್ಲ, ಹಾಗೆಯೇ ನಿಮ್ಮೆಲ್ಲರಿಗೂ; ಹಿರಿಯಣ್ಣನೇನು ತಂದೆಯೇನು ಎಂಬ ಗೌರವದಿಂದ ವಿಧೇಯತೆಯನ್ನು ತೋರಿಸಿರಿ; ನಾನೂ ನೀವೂ ಜೊತೆಯಲ್ಲಿರೋಣ ಎಂಬ ಒಡೆಯನ ಆಜ್ಞೆಯನ್ನು ತಲೆಯಲ್ಲಿ ಹೊತ್ತು ಬನ್ನಿ, ಚಕ್ರವರ್ತಿಯ ಅಡಿದಾವರೆಗಳಲ್ಲಿ ಎರಗಿರಿ.'

**ವ। ಎಂದು ನುಡಿದ ದೂತನ ನುಡಿಯುಮಂ ರಾಜಾದೇಶಮುಮನವಧಾರಿಸಿ ಬಂದ ದೂತನಂ ಮನ್ನಿಸಿ ಸಂತೋಷಂಬಡಿಸಿ ಪೋಗಲ್ವೇೞ್ದು,**

**ಅರ್ಥ:** ಎಂದು ನುಡಿದ ದೂತನ ನುಡಿಯುಮಂ ರಾಜ + ಆದೇಶಮುಮನ್ + ಅವಧಾರಿಸಿ ಬಂದ ದೂತನಂ ಮನ್ನಿಸಿ ಸಂತೋಷಂಬಡಿಸಿ ಪೋಗಲ್ + ಪೇೞ್ದು = ಎಂದು ಹೇಳಿದ ದೂತನ ಮಾತನ್ನೂ ರಾಜಾಜ್ಞೆಯನ್ನೂ ಗಮನಿಸಿ ಬಂದ ದೂತನಿಗೆ ಗೌರವವನ್ನಿತ್ತು ಸಂತಸಗೊಳಿಸಿ ಬೀಳ್ಕೊಟ್ಟರು.

**ಪಿರಿಯಣ್ಣಂ ಗುರು ತಂದೆಯೆಂದೆಱಗುವಂ ಮುನ್ನೆಲ್ಲಮಿಂತೀಗಳಾ**
**ಳರಸೆಂಬೊಂದು ವಿಭೇದಮಾದೊಡೆಱಕಂ ಚೀಃ ಕಷ್ಟಮಲ್ತೇ ವಸುಂ**
**ಧರೆಗಯ್ಯಂ ದಯೆಗೆಯ್ಯೆ ಮುಂ ಪಡೆದುದರ್ಕಿಂತೀತನೊಳ್ ತೊಟ್ಟ ಕಿಂ**
**ಕರಭಾವಂ ಎಮಗಕ್ಕಗೊಟ್ಟು ಮಡಗೂೞುಣ್ಬಂದಮಂ ಪೋಲದೇ ೬೭**

**ಪದವಿಭಾಗ–ಅನ್ವಯ–ಅರ್ಥ:** ಪಿರಿಯಣ್ಣಂ ಗುರು ತಂದೆಯೆಂದು ಮುನ್ನೆ + ಎಲ್ಲಂ ಎಱಗುವಂ = ಹಿರಿಯಣ್ಣನು ಗೌರವಾರ್ಹ ತಂದೆಗೆ ಸಮಾನ ಎಂದು ಮೊದಲು ಎಲ್ಲರೂ ನಮಿಸೋಣ, ಇಂತು + ಈಗಳ್ + ಆಳ್ + ಅರಸ + ಎಂಬ + ಒಂದು ವಿಭೇದಂ + ಆದೊಡೆ = ಆದರೆ ಹೀಗೆ ಈಗ ಯಜಮಾನ ಆಳು ಎಂಬ ವ್ಯತ್ಯಾಸ ಮಾಡಿದರೆ, ಎಱಕಂ ಚೀಃ ಕಷ್ಟಮಲ್ತೇ = ನಮಸ್ಕರಿಸುವುದು ಕಷ್ಟವಲ್ಲವೇ, ಅಯ್ಯಂ ದಯೆಗೆಯ್ಯೆ ಮುಂ ಪಡೆದುದರ್ಕೆ = ತಂದೆಯು ದಯಪಾಲಿಸಲು ಮೊದಲು ಪಡೆದ ಕಾರಣದಿಂದ, ವಸುಂಧರೆಗೆ ಇಂತು + ಈತನೊಳ್ ತೊಟ್ಟ ಕಿಂಕರಭಾವಂ = ರಾಜ್ಯಕ್ಕಾಗಿ ಹೀಗೆ ಈತನ ಬಗ್ಗೆ ತಾಳಿದ ಸೇವಾಭಾವವು, ಎಮಗೆ + ಅಕ್ಕ + ಕೊಟ್ಟು ಮಡಗೂೞ್ + ಉಣ್ಬ + ಅಂದಮಂ ಪೋಲದೇ = ನಾವೇ ಅಕ್ಕಿಯಿತ್ತು ಎಂಜಲನ್ನವನ್ನು ತಿಂದ ಬಗೆಯನ್ನು ಹೋಲುವುದಲ್ಲವೇ?

**ಗದ್ಯಾನುಸರಣ:** ಹಿರಿಯಣ್ಣನು ಗೌರವಾರ್ಹ ತಂದೆಗೆ ಸಮಾನ ಎಂದು ಮೊದಲು ಎಲ್ಲರೂ ನಮಿಸೋಣ, ಆದರೆ ಹೀಗೆ ಈಗ ಯಜಮಾನ ಆಳು ಎಂಬ ವ್ಯತ್ಯಾಸ ಮಾಡಿದರೆ ನಮಸ್ಕರಿಸುವುದು ಕಷ್ಟವಲ್ಲವೇ? ತಂದೆಯು ದಯಪಾಲಿಸಲು ರಾಜ್ಯವನ್ನು ಮೊದಲು ಪಡೆದ ಕಾರಣದಿಂದ ಈತನ ಬಗ್ಗೆ ಈಗ ಸೇವಾಭಾವವು ತಾಳಿದರೆ ನಾವೇ ಅಕ್ಕಿಯಿತ್ತು ಅವನ ಎಂಜಲನ್ನವನ್ನು ತಿಂದ ಹಾಗಲ್ಲವೇ?

**ವ॥ ಎಂದು ತಮ್ಮೊಳನಿಬರುಂ ಪರಿಚ್ಛೇದಿಸಿ, ಪರಿತ್ಯಕ್ತ ನಿಜರಾಜ್ಯಪರಿಚ್ಛೇದರಾಗಿ ಕುಮಾರರ್ ನೂರ್ವರುಂ ಸಮವಸರಣಭೂಮಂಡಲಮನೊಳ[ಪೊಕ್ಕು],**

**ಅರ್ಥ:** ಎಂದು ತಮ್ಮೊಳ್ + ಅನಿಬರುಂ ಪರಿಚ್ಛೇದಿಸಿ = ಎಂದು ತಾವೆಲ್ಲರೂ ಒಂದು ತೀರ್ಮಾನಕ್ಕೆ ಬಂದರು. ಪರಿತ್ಯಕ್ತ ನಿಜರಾಜ್ಯಪರಿಚ್ಛೇದರ್ + ಆಗಿ = ಎಂದು ತಮ್ಮ ರಾಜ್ಯವನ್ನು ತೊರೆಯಲು ನಿಶ್ಚಯಿಸಿದರು. ನೂರು ಮಂದಿ ರಾಜಕುವರರೂ ಬಂದು ಸಮವಸರಣ ಭೂಮಿಯನ್ನು ಸೇರಿದರು.

**ಭವದಂಘ್ರಿಕಮಳರಜದಿಂ**
**ಪವಿತ್ರಮಾದೆಮ್ಮ ಮಕುಟಮೆಱಗದು ಪೆಱರ್ಗಂ**
**ಭವಭಯಹರ ಭರತನನೆಮ**
**ಗವಯವದೆಱಗಿಸುವ ತಪಮನೀಗಳೆ ದಯೆಗೈ ೬೮**

**ಪದವಿಭಾಗ-ಅನ್ವಯ-ಅರ್ಥ:** ಭವತ್ + ಅಂಘ್ರಿಕಮಳರಜದಿಂ ಪವಿತ್ರಂ + ಆದ = ನಿನ್ನ ಅಡಿದಾವರೆಗಳ ಧೂಳಿನಿಂದ ಪಾವನವಾದ, ಎಮ್ಮ ಮಕುಟಂ ಪೆಱರ್ಗಂ ಎಱಗದು = ನಮ್ಮ ಕಿರೀಟಗಳು ಇತರರಿಗೆ ಬಾಗವು, ಭವಭಯಹರ = ಐಹಿಕತೆಯ ದಿಗಿಲನ್ನು ಹೋಗಲಾಡಿಸುವವನೇ, ಅವಯವದೆ ಭರತನನ್ + ಎಮಗೆ ಎಱಗಿಸುವ = ಭರತನನ್ನೇ ನಮಗೆ ಬಾಗುವಂತೆ ಸುಲಭವಾಗಿ ಮಾಡಿಕೊಳ್ಳುವ, ತಪಮನ್ + ಈಗಳೆ ದಯೆಗೈ = ತಪಸ್ಸನ್ನು ನಮಗೆ ಈಗಲೇ ದಯಪಾಲಿಸು.

**ಗದ್ಯಾನುಸರಣ:** 'ನಿನ್ನ ಅಡಿದಾವರೆಗಳ ಹುಡಿಯಿಂದ ಪಾವನವಾದ ನಮ್ಮ ತಲೆಗಳು ಇತರರಿಗೆ ಬಾಗವು. ಐಹಿಕತೆಯ ದಿಗಿಲನ್ನು ಹೋಗಲಾಡಿಸುವವನೇ, ಭರತನನ್ನೇ ನಮಗೆ ಬಾಗುವಂತೆ ಸುಲಭವಾಗಿ ಮಾಡಿಕೊಳ್ಳುವ ತಪಸ್ಸನ್ನು ನಮಗೆ ಈಗಲೇ ದಯಪಾಲಿಸು.'

**ಭರತಂಗೆಱಗುವರೆಂಬಿದೆ**
**ಪರಿಭವಮೆಮಗಿಂತು ಮಾನಭಂಗಂ ಬರೆ ಬ**
**ರ್ಪರಸೇವುದೆಂದು ಪೂಣ್ದರ್**
**ಪರಮತಪೋಭರಮನನಿಬರುಂ ಪುರುತನಯರ್** ೬೯

**ಪದವಿಭಾಗ-ಅನ್ವಯ-ಅರ್ಥ:** ಭರತಂಗೆ + ಎಱಗುವರ್ + ಎಂಬಿದೆ ಪರಿಭವಂ = ಭರತನಿಗೆ ಶರಣಾಗುತ್ತಾರೆ ಎಂಬುದೇ ಸೋಲು, ಎಮಗೆ + ಇಂತು ಮಾನಭಂಗಂ ಬರೆ ಬರ್ಪ + ಅರಸು + ಏವುದು = ಇಂತಹ ಮಾನಹಾನಿಯಾದರೆ ನಮಗೆಬರುವ ಅರಸುತನ ಏನು ಪ್ರಯೋಜನಕಾರಿ, ಎಂದು ಅನಿಬರುಂ ಪುರುತನಯರ್ = ಎಂದು ಭಾವಿಸಿದ ಎಲ್ಲ ಪುರುದೇವನ ಮಕ್ಕಳು, ಪರಮತಪೋಭರಮನ್ ಪೂಣ್ದರ್ = ಶ್ರೇಷ್ಠವಾದ ತಪಸ್ಸೆಂಬ ಸಂಪತ್ತಿಗಾಗಿ ಪ್ರತಿಜ್ಞೆಗೈದರು.

**ಗದ್ಯಾನುಸರಣ:** 'ಭರತನಿಗೆ ಶರಣಾಗುವುದೇ ಸೋಲು; ಇಂತಹ ಮಾನಹಾನಿಯಿಂದ ಬರುವ ಅರಸುತನದ ಲಾಭವಾದರೂ ಏನು' – ಎಂದು ಭಾವಿಸಿದ ಪುರುದೇವನ ಮಕ್ಕಳೆಲ್ಲರೂ ಶ್ರೇಷ್ಠವಾದ ತಪಸ್ಸನ್ನು ಕೈಗೊಳ್ಳಲು ನಿರ್ಧರಿಸಿದರು.

**ವ॥ ಅಂತಾ ಕುಮಾರರನಿಬರುಮಾದಿತೀರ್ಥಂಕರಸಮವಸರಣಸರೋವರರಾಜಹಂಸರಾದ ವ್ಯತಿಕರಮಂ ಭರತೇಶ್ವರಂ ಕೇಳ್ದು,**

**ಅರ್ಥ:** ಅಂತು + ಆ ಕುಮಾರರ್ + ಅನಿಬರುಂ + ಆದಿತೀರ್ಥಂಕರ ಸಮವಸರಣಸರೋವರರಾಜಹಂಸರಾದ ವ್ಯತಿಕರಮಂ ಭರತೇಶ್ವರಂ ಕೇಳ್ದು = ಹೀಗೆ ತನ್ನ ತಮ್ಮಂದಿರೆಲ್ಲರೂ ಆದಿದೇವನ ಸಮವಸರಣವೆಂಬ ಸರೋವರದಲ್ಲಿ ವಿಹರಿಸುವ ರಾಜಹಂಸರಾದರು ಎಂಬ ಸುದ್ದಿಯನ್ನು ತಿಳಿದ ಭರತನು.

**ಎನಗನುಜರಾಗಿಯುಂ ಚಲ**
**ದೆನಗೆಱಗದೆ ಪೋಗಿ ಭುವನಗುರುಗೆಱಗಿದರಂ**
**ತನಿಬರುಮವಱಿಂದಗ್ಗಳ**
**ಮೆನೆ ನೆಗಟ್ದಾ ಬಾಹುಬಲಿಯನೆಂತೆಱಗಿಸುವೆಂ** ೨೦

**ಪದವಿಭಾಗ–ಅನ್ವಯ–ಅರ್ಥ:** ಎನಗೆ + ಅನುಜರಾಗಿಯುಂ ಚಲದೆ + ಎನಗೆ + ಎಱಗದೆ ಪೋಗಿ = ನನ್ನತಮ್ಮಂದಿರಾದರೂ ಹಟದಿಂದ ನನಗೆ ಶರಣಾಗದೆ ಹೋಗಿ, ಅನಿಬರುಂ ಭುವನಗುರುಗೆ ಅಂತು ಎಱಗಿದರ್ = ಎಲ್ಲರೂ ಲೋಕಗುರುವಿಗೆ ಶರಣಾದರು. ಅವಱಿಂದೆ + ಅಗ್ಗಳಂ + ಎನೆ ನೆಗಟ್ಟ + ಆ ಬಾಹುಬಲಿಯನ್ + ಎಂತು + ಎಱಗಿಸುವೆಂ = ಆದರೆ ಅವರೆಲ್ಲರಿಗಿಂತ ಮಿಗಿಲು ಎನ್ನಿಸಿಕಂಡ ಬಾಹುಬಲಿಯನ್ನು ಹೇಗೆ ಬಾಗಿಸುವುದು.

**ಗದ್ಯಾನುಸರಣ:** 'ತಮ್ಮಂದಿರಾದರೂ ಹಟದಿಂದ ನನಗೆ ಶರಣಾಗದೆ ಹೋಗಿ ಎಲ್ಲರೂ ಲೋಕಗುರುವಿಗೆ ಶರಣಾದರು; ಆದರೆ ಅವರೆಲ್ಲರಿಗಿಂತ ಮಿಗಿಲು ಎನ್ನಿಸಿಕೊಂಡ ಬಾಹುಬಲಿಯನ್ನು ಹೇಗೆ ಬಾಗಿಸುವುದು!'

[**ವಿಶೇಷ ವಿಚಾರ:** ಆದಿದೇವನಿಗೆ ಶರಣಾದ ತಮ್ಮಂದಿರ ಬಗ್ಗೆ ಭರತನ ಮೆಚ್ಚಿಕೆಯೋ; ಅಥವಾ ಹಾಗೆ ಶರಣಾದ್ದರಿಂದ ತನೆ ಪ್ರತಿಸ್ಪರ್ಧಿಗಳು ಕಡಿಮೆಯಾದರು ಎಂಬ ನಿರಾಳವೋ? ಆದರೆ ಅವನ ಆತಂಕ ಬಾಹುಬಲಿಯನ್ನು ನಿವಾರಿಸಿ ಕೊಳುವುದು ಇಷ್ಟು ಸುಲಭವಲ್ಲವಲ್ಲ ಎಂಬುದು.]

**ಖರಕಿರಣಸ್ಫುರಿತಕ್ಕಿದಿ**
**ರುರಿವಂತಿರೆ ಸೂರ್ಯಕಾಂತಮೆನ್ನೀ ತೇಜ**
**ಸ್ಫುರಿತಕ್ಕೆ ಸೆಣಸಿನೊಳ್ ಮಾ**
**ಱುರಿಗುಂ ಸೈರಿಸದು ತೇಜಮಾ ಭುಜಬಲಿಯಾ** ೨೧

**ಪದವಿಭಾಗ–ಅನ್ವಯ–ಅರ್ಥ:** ಸೂರ್ಯಕಾಂತಂ ಖರಕಿರಣಸ್ಫುರಿತಕ್ಕೆ ಇದಿರು + ಉರಿವಂತಿರೆ = ಸೂರ್ಯಕಾಂತಖಡ್ಗವು ಸೂರ್ಯನ ಬಿಸಿಲಿಗೆ ಸ್ಪರ್ಧಿಯೆಂಬಂತೆ ಉರಿಯುವ ಹಾಗೆಯೇ, ಸೆಣಸಿನೊಳ್ ಎನ್ನ + ಈ ತೇಜಃ + ಸ್ಫುರಿತಕ್ಕೆ = ಯುದ್ಧದಲ್ಲಿ ನನ್ನ ಪ್ರತಾಪದ ಉರಿಯ ಸಿಡಿತಕ್ಕೆ, ಭುಜಬಲಿಯಾ ತೇಜಮಾ ಸೈರಿಸದು ಮಾಱುರಿಗುಂ = ಬಾಹುಬಲಿಯ ಶೌರ್ಯವು ಸಹಿಸಿಕೊಳ್ಳದೆ ಎದುರಾಗಿ ಸಿಡಿಯುತ್ತದೆ.

**ಗದ್ಯಾನುಸರಣ:** ಸೂರ್ಯಕಾಂತಖಡ್ಗವು ಸೂರ್ಯನ ಬಿಸಿಲಿಗೆ ಸ್ಪರ್ಧಿಯೆಂಬಂತೆ ಉರಿಯುವ ಹಾಗೆಯೇ ಯುದ್ಧದಲ್ಲಿ ನನ್ನ ಪ್ರತಾಪದ ಉರಿಯ ಸಿಡಿತಕ್ಕೆ ಬಾಹುಬಲಿಯ ಶೌರ್ಯವು ಸಹಿಸಿಕೊಳ್ಳದೆ ಎದುರಾಗಿ ಸಿಡಿಯುತ್ತದೆ.

[**ವಿಶೇಷ ವಿಚಾರ:** ಸೈರಿಸು ಎಂಬ ಶಬ್ದಕ್ಕೆ ಸಹಿಸು ಎಂಬುದೇನೋ ಅರ್ಥ, ನಿಜ; ಆದರೆ ಈ ಎರಡಕ್ಕೂ ಎರಡು ಅರ್ಥಗಳು: ಎದುರಿಸಿ ಅನುಭವಿಸು ಎಂಬುದು ಒಂದಾದರೆ, ತಾಳ್ಮೆಯಿಂದಿರು ಎಂಬುದು ಇನ್ನೊಂದು. ಈ ಎರಡೂ ಅರ್ಥಗಳು ಬಾಹುಬಲಿಯ ಮನೋಭಾವಕ್ಕೆ ಅನ್ವಯಿಸುತ್ತದೆ.]

ಅದಱಿಂದಮಾತನಂ ಸಾ
ಮದಿಂದಮಳವಡಿಸಿ ನೋಡುವೆಂ ಸಾಮದೊಳಂ
ಪದವಡದೊಡೆ ಬೞಿಕಿ
ಪ್ಪುದಲ್ತೆ ಪದವಡಿಸಲೆನ್ನ ಬಯಕೆಯ ದಂಡಂ ೭೨

**ಪದವಿಭಾಗ–ಅನ್ವಯ–ಅರ್ಥ:** ಅದಱಿಂದಂ + ಆತನಂ ಸಾಮದಿಂದಂ + ಅಳವಡಿಸಿ ನೋಡುವೆಂ = ಆದ್ದರಿಂದ ಅವನನ್ನು ಸಾಮೋಪಾಯದಿಂದ ವಶಪಡಿಸಿಕೊಳ್ಳಲು ಪ್ರಯತ್ನಿಸುತ್ತೇನೆ. ಸಾಮದೊಳಂ ಪದವಡದೊಡೆ = ಸಾಮೋಪಾಯದಿಂದಲೂ ಹದಗೊಳ್ಳದಿದ್ದರೆ. ಬೞಿಕ ಪದವಡಿಸಲ್ = ಆಮೇಲೆ ಹದಕ್ಕೆ ತರಲು, ಎನ್ನ ಬಯಕೆಯ ದಂಡಂ ಇಪ್ಪುದಲ್ತೆ = ನನಗಿಷ್ಟವಾದ ದಂಡೋಪಾಯವು ಇದ್ದೇ ಇದೆಯಲ್ಲ.

**ಗದ್ಯಾನುಸರಣ:** 'ಆದ್ದರಿಂದ ಅವನನ್ನು ಸಾಮೋಪಾಯದಿಂದ ವಶಪಡಿಸಿಕೊಳ್ಳಲು ಪ್ರಯತ್ನಿಸುತ್ತೇನೆ; ಸಾಮೋಪಾಯದಿಂದಲೂ ಹದಗೊಳ್ಳದಿದ್ದರೆ ಆಮೇಲೆ ಅವನನ್ನು ಹದಕ್ಕೆ ತರಲು ನನಗಿಷ್ಟವಾದ ದಂಡೋಪಾಯವು ಇದ್ದೇ ಇದೆಯಲ್ಲ' ಎಂದುಕೊಂಡ ಭರತ.

[**ವಿಶೇಷ ವಿಚಾರ:** 'ಅಳವಡಿಸು' ಎಂಬ ಶಬ್ದದ ಬಗ್ಗೆ ಒಂದಷ್ಟು ಜಿಜ್ಞಾಸೆ: ಇದು ಒಂದೇ ಶಬ್ದವೋ, ಕೂಡುಶಬ್ದವೋ? ನಿಘಂಟುಗಳಲ್ಲಿ ಒಂದೇ ಶಬ್ದದಂತೆ ಭಾವಿಸಿ ಅರ್ಥ ನೀಡಿದೆ. ಇದನ್ನು ಅಳವು + ಅಡಿಸು ಎಂದು ಬಿಡಿಸಿದರೆ ಹೇಗೆ? ಅಳವು ಎಂಬುದಕ್ಕೆ ಶಕ್ತಿ, ಸಾಮರ್ಥ್ಯ ಎಂಬ ಅರ್ಥಗಳಿರುವುದು ಸರಿಯೇ, ಅಡಿಸು ಎಂಬ ಶಬ್ದಕ್ಕೆ ಪರಿಷತ್ತಿನ ನಿಘಂಟು 'ಅಡುಗೆ ಮಾಡು' ಎಂಬ ಅರ್ಥವನ್ನು ನೀಡುತ್ತದೆ. ಇದು ಅಕ್ಷರಶಃ ಅರ್ಥ; ಆದರೆ ರೂಪಕಾತ್ಮಕವಾಗಿ ಅಡುಗೆ ಮಾಡುವುದು ಎಂದರೆ ಬೇಯಿಸು, ಮಿದುಗೊಳಿಸು ಎಂಬ ಅರ್ಥ ಬರುವುದಲ್ಲವೇ? ಹೀಗಾಗಿ ಅದನ್ನು ಬಳಸಿಕೊಂಡು, 'ಅಳವಡಿಸು' ಎಂದರೆ ಸಾಮರ್ಥ್ಯವನ್ನು ಮಿದುಗೊಳಿಸು ಅಥವಾ ಅಡಗಿಸು ಎಂಬ ಎಂದೇಕೆ ವ್ಯಾಖ್ಯಾನ ಮಾಡಬಾರದು?]

ವ॥ ಎಂದು ಮಂತ್ರಿವರ್ಗದೊಡನೆ ನಿರಾಕುಳಿತಕಾರ್ಯಪರ್ಯವಸನನಾಗಿ ಬಾಹುಬಲಿಕುಮಾರಂಗೆ ಲೇಖಮನ್ನಮ್ಯೂಖ ರತ್ನಾಭರಣಪ್ರಾಭೃತಸಮೇತಮನಟ್ಟುವಂತು ಮಹಾಸಂಧಿವಿಗ್ರಹಿಗೆ ಬೆಸಸಿದೊಡಾತಂ ಮಹತ್ತರನ ಕೈಯೊಳ್ ಸನ್ಮಾನದಾನಪುರಸ್ಸರಮಾಗೆ ಕೊಟ್ಟು [ಕಟಿಪಲ್] ಪೌದನಪುರಮನೆಯ್ದಿ ರಾಜಮಂದಿರಮನೆಯ್ದಿ ದೌವಾರಿಕನಿವೇದಿತಾತ್ಮೀಯವೃತ್ತಾಂತನಾಸ್ಥಾನ ಮಂಡಪಮಂ ಪೊಕ್ಕು ಲಲಾಟತಟಸಂಘಟ್ಟಿತ ಸಭಕುಟ್ಟಿಮನಾಗಿ, ಉಪಾಯನರತ್ನಕರಂಡಕಮಂ ಕೊಂಡು ದೇವ ಭವದೀಯಾಗ್ರಜಂ ರಾಜಾಧಿರಾಜಂ ನಿಮಗಟ್ಟಿದ ಮಹಾಪ್ರಸಾದಂ ಬಿನ್ನಪಮೆಂದು ಮುಂದಿಟ್ಟು ಮಹತ್ತರಂ ಯೋಗ್ಯಮಹೀನಿಹಿತಾಸನದೊಳಿರ್ಪುದುಂ ಅದಂ ಮಹಾಸಂಧಿವಿಗ್ರಹಿ ಕೊಂಡು ಅಪನೀತಮುದ್ರೆಯಂ ಮಾಡಿ ತದಂತಸ್ಸ್ಥಿತಂಗಳಪ್ಪ ರತ್ನಾಭರಣಂಗಳಂ ತೋಱಿ ಕೋಶಾಧ್ಯಕ್ಷಹಸ್ತನ್ಯಸ್ತಂಗಳ್ಮಾಡಿ ದೇವ ಲೇಖಮಿದೆಂದು ಗಂಭೀರನಾದದಿಂದ ಬಾಜಿಸಿದಂ. ಸ್ವಸ್ತಿ ಸಮಸ್ತವಿಷ್ಟಪಾಧೀಶ್ವರಪುರುಪರಮೇಶ್ವರಚರಣಸರಸಿಜರಜೋರಂಜಿತಮಣಿಕಿರೀಟಮಕರಿಕಾಚಕ್ರಂ ಚಕ್ರರತ್ನ ಪ್ರಭಾಸಾದಿತ ನಿಖಿಲದಿಕ್ಚಕ್ರಂ ಭರತೇಶ್ವರಚಕ್ರವರ್ತಿ ನಿಜ ಪ್ರಿಯಾನುಜಬಾಹುಬಲಿಕುಮಾರನಂ

**ಪರಮಾಶೀರ್ವಾದದಿಂ ಪರಸಿ ಕನಕಪತ್ರಾಂಕಿತ ಕಾರ್ಮುಕಲತಾಲಂಬನಂಗಳುಂ ವಿಜಯೋತ್ಸವತೋರಣಸ್ತಂಭಂಗಳುಂ ವೀರಶ್ರೀಭುಜಂಗೀಸಮಾಶ್ರಯ ಶ್ರೀಖಂಡಕಾಂಡಗಳುಮಪ್ಪ ದೋರ್ದಂಡಂಗಳಿಂದಮತಿನಿಬಿಡಾಲಿಂಗನಂಗೆಯ್ದು ಕಾರ್ಯಮಂ ಬೆಸಸಿರ್ಕುಂ ಎನಲೊಡಂ ಭೂಪೋತ್ತಮನಿರ್ದನೆ ಸುಖದಿಂ ಉದಾತ್ತಯಶಂ** [ಎಂದು ವಿಚಾರಿಸಿ]

**ಪದವಿಭಾಗ-ಅನ್ವಯ-ಅರ್ಥ:** ಎಂದು ಮಂತ್ರಿವರ್ಗದೊಡನೆ ನಿರಾಕುಳಿತ ಕಾರ್ಯಪರ್ಯವಸನನಾಗಿ = ಎಂದು ತನ್ನ ಮಂತ್ರಿಗಳ ಜೊತೆಯಲ್ಲಿ ಸಮಾಧಾನಚಿತ್ತದಿಂದ ಕಾರ್ಯದಲ್ಲಿ ತೊಡಗಿಕೊಂಡು, ಮಯೂಖರತ್ನಾಭರಣಪ್ರಾಭೃತಸಮೇತಮನ್ ಲೇಖಮನ್ = ಹೊಳೆಯುವ ರತ್ನಾಭರಣಗಳ ಉಡುಗೊರೆಗಳೊಡನೆ ತನ್ನ ಆದೇಶವನ್ನು, ಬಾಹುಬಲಿಕುಮಾರಂಗೆ ಅಟ್ಟುವಂತು ಮಹಾಸಂಧಿವಿಗ್ರಹಿಗೆ ಬೆಸಸಿದೊಡೆ = ಕಳಿಸಿಕೊಡುವಂತೆ ಮಹಾಸಂಧಿವಿಗ್ರಹಿಗೆ (ಯುದ್ಧ-ಸಂಧಿಗಳ ಉಸ್ತುವಾರಿ ಹೊತ್ತ ಹಿರಿಯ ಸಚಿವನಿಗೆ) ಆಜ್ಞಾಪಿಸಿದಾಗ, ಮಹತ್ತರನ ಕೈಯೊಳ್ = ಅಧಿಕಾರಿಯೊಬ್ಬನ ಬಳಿ. ಸನ್ಮಾನದಾನಪುರಸ್ಸರಮಾಗೆ ಕೊಟ್ಟು [ಕಟಿಪಲ್] = ಗೌರವದಾನಸಮೇತವಾಗಿ ಕಳಿಸಿಕೊಡಲು. ಆತನುಂ ಪೌದನಪುರಮನ್ + ಎಯ್ದಿ =ಆತನು ಪೌದನಪುರವನ್ನು ಸೇರಿ, ರಾಜಮಂದಿರಮನ್+ಎಯ್ದಿ = ಅರಮನೆಯನ್ನು ಸೇರಿ, ದೌವಾರಿಕನಿವೇದಿತ + ಆತ್ಮೀಯವೃತ್ತಾಂತನ್ = ದ್ವಾರಪಾಲಕನಿಗೆ ತನ್ನ ಪರಿಚಯವನ್ನು ಹೇಳಿಕೊಂಡು, ಆಸ್ಥಾನಮಂಡಪಮಂ ಪೊಕ್ಕು = ರಾಜನ ಓಲಗಶಾಲೆಯನ್ನು ಸೇರಿ, ಲಲಾಟತಟಸಂಘಟ್ಟಿತಸಭಾಕುಟ್ಟಿಮನ್ + ಆಗಿ = ಸಭಾಭವನದ ನೆಲಕ್ಕೆ ತನ್ನ ಹಣೆಯನ್ನು ತಾಕಿಸಿ, ಉಪಾಯನರತ್ನಕರಂಡಕಮಂ ಕೊಂಡು = ಉಡುಗೊರೆಯ ರತ್ನದ ಭರಣಿಯನ್ನು ಬಾಹುಬಲಿಯ ಮುಂದೆ ಇರಿಸಿ, ದೇವ ಭವದೀಯ + ಅಗ್ರಜಂ ರಾಜಾಧಿರಾಜಂ ನಿಮಗಟ್ಟಿದ ಮಹಾಪ್ರಸಾದಂ ಬಿನ್ನಪಂ = ದೇವಾ ಇದು ತಮ್ಮ ಅಣ್ಣನವರಾದ ಚಕ್ರವರ್ತಿಗಳು ನಿಮಗೆಂದು ಕಳಿಸಿರುವ ಕೃಪಾಶೀರ್ವಾದ ಒಪ್ಪಿಸಿಕೊಳ್ಳಿ, ಎಂದು ಮುಂದಿಟ್ಟು ಮಹತ್ತರಂ = ಎಂದು ಮುಂದೆ ಇರಿಸಿದ ಮಹತ್ತರನು, ಯೋಗ್ಯಮಹೀನಿಹಿತ + ಆಸನದೊಳ್ + ಇರ್ಪುದುಂ = ಮಹತ್ತರನಿಗೆ ತಕ್ಕುನಾದ ಪೀಠದಲ್ಲಿ ಕುಳಿತುಕೊಂಡ ಮೇಲೆ, ಅದಂ ಮಹಾಸಂಧಿವಿಗ್ರಹಿ ಕೊಂಡು = ಆ ಕರಂಡಕವನ್ನು ಬಾಹುಬಲಿಯ ಮಹಾಸಂಧಿವಿಗ್ರಹಿಯು ತೆಗೆದುಕೊಂಡು, ಅಪನೀತಮುದ್ರೆಯಂ ಮಾಡಿ = ಅದರ ಮುಚ್ಚಳವನ್ನು ತೆರೆದು, ದೇವ ಲೇಖಂ + ಇದು + ಎಂದು = ಪ್ರಭು, ಪತ್ರ ಹೀಗಿದೆ ಎಂದು, ಗಂಭೀರನಾದದಿಂದ ಬಾಜಿಸಿದಂ = ಎನ್ನುತ್ತ ಗಂಭೀರ ಕಂಠದಿಂದ ಓದತೊಡಗಿದ. ಸ್ವಸ್ತಿ = ಶುಭ, ಸಮಸ್ತವಿಷ್ಟಪ + ಅಧೀಶ್ವರ = ಜಗತ್ತಿಗೆಲ್ಲಕ್ಕೂ ಒಡೆಯನಾದ, ಪುರುಪರಮೇಶ್ವರಚರಣಸರಸಿಜರಜೋರಂಜಿತಮಣಿಕಿರೀಟ ಮಕರಿಕಾಚಕ್ರಂ = ಪುರುದೇವನ ಅಡಿದಾವರೆಗಳ ಧೂಳಿನಿಂದ ಕೆಂಪಾದ ಮಣಿಕಿರೀಟದ ಮೇಲೆ ಅಲಂಕಾರಚಿತ್ರವುಳ್ಳ, ಚಕ್ರರತ್ನಪ್ರಭಾ + ಆಸಾದಿತನಿಖಿಲದಿಕ್ + ಚಕ್ರಂ = ಚಕ್ರರತ್ನದ ಕಾಂತಿಯಿಂದ ಎಲ್ಲ ದಿಕ್ಕುಗಳನ್ನೂ ಹೊಳೆಯುವಂತೆ

ಮಾಡಿದ, ಭರತೇಶ್ವರಚಕ್ರವರ್ತಿ = ಭರತಚಕ್ರವರ್ತಿಯು. ನಿಜ ಪ್ರಿಯ + ಅನುಜ ಬಾಹುಬಲಿಕುಮಾರನಂ ಪರಮಾಶೀರ್ವಾದದಿಂ ಪರಸಿ = ತನ್ನ ಪ್ರೀತಿಯ ತಮ್ಮನಾದ ಬಾಹುಬಲಿಯನ್ನು ಉತ್ಕೃಷ್ಟ ಆಶೀರ್ವಚನಗಳಿಂದ ಹರಸಿ. ಕನಕಪತ್ರ + ಅಂಕಿತಕಾರ್ಮುಕಲತಾ + ಆಲಂಬನಂಗಳುಂ = ಚಿನ್ನದ ತಗಡನ್ನು ಹೊದಿಸಿದ ಬಿಲ್ಲೆಂಬ ಬಳ್ಳಿಗೆ ಆಶ್ರಯವಾದ. ವಿಜಯ + ಉತ್ಸವತೋರಣಸ್ತಂಭಂಗಳುಂ = ಗೆಲವಿನ ಹಬ್ಬದ ತೋರಣಗಂಬಗಳಾದ, ವೀರಶ್ರೀಭುಜಂಗೀಸಮಾಶ್ರಯ = ಗೆಲವುವೆಣ್ ಎಂಬ ನಾಗಿಣಿಯಿಂದ ರಕ್ಷಿತವಾದ. ಶ್ರೀಖಂಡಕಾಂಡಗಳುಂ + ಅಪ್ಪ = ಶ್ರೀಗಂಧದ ದಿಮ್ಮಿಗಳಂತಹ, ದೋರ್ + ದಂಡಂಗಳಿಂದಂ = ತನ್ನ ತೋಳುಗಳಿಂದ. ಅತಿನಿಬಿಡ + ಆಲಿಂಗನಂಗೆಯ್ದು ಕಾರ್ಯಮಂ ಬೆಸಸಿರ್ಪುಂ = ಬಿಗಿಯಾಗಿ ಅಪ್ಪಿಕೊಂಡು ಮಾಡಬೇಕಾದ ಕಾರ್ಯವನ್ನು ಅಪ್ಪಣೆಕೊಡಿಸಿದ್ದಾರೆ – ಎನಲೊಡಂ ಉದಾತ್ತಯಶಂ ಭೂಪೋತ್ತಮನ್ + ಇರ್ದನೆ ಸುಖದಿಂ [ಎಂದು ವಿಚಾರಿಸಿ] = ಎಂದಾಗ, ಮಹಾಕೀರ್ತಿಶಾಲಿಯಾದ ಮಹಾರಾಜರು ಸುಖದಿಂದಿರುವರೇ ಎಂದು ವಿಚಾರಿಸಿದ

**ಗದ್ಯಾನುಸರಣ:** ಎಂದು ತನ್ನ ಮಂತ್ರಿಗಳ ಜೊತೆಯಲ್ಲಿ ಸಮಾಧಾನಚಿತ್ತದಿಂದ ಪರ್ಯಾಲೋಚಿಸಿ ಹೊಳೆಯುವ ರತ್ನಾಭರಣಗಳ ಉಡುಗೊರೆಗಳೊಡನೆ ತನ್ನ ಆದೇಶವನ್ನು ಕಳಿಸಿಕೊಡುವಂತೆ ಮಹಾಸಂಧಿವಿಗ್ರಹಿಗೆ (ಯುದ್ಧ–ಸಂಧಿಗಳ ಉಸ್ತುವಾರಿ ಹೊತ್ತ ಹಿರಿಯ ಸಚಿವನಿಗೆ) ಭರತಚಕ್ರವರ್ತಿಯು ಆಜ್ಞಾಪಿಸಿದ; ಅದರಂತೆಯೇ ಆತನು ಹಿರಿಯ ಅಧಿಕಾರಿಯೊಡನೆ ಗೌರವಪೂರ್ವಕವಾಗಿ ಕೊಟ್ಟು ಕಳುಹಿಸಿದ; ಮಹತ್ತರನು ಕೆಲವು ದಿನಗಳು ಪ್ರಯಾಣ ಮಾಡಿ ಪೌದನಪುರವನ್ನು ಸೇರಿ, ಅರಮನೆಯನ್ನು ಹೊಕ್ಕ; ಆನಂತರ ದ್ವಾರಪಾಲಕನಿಗೆ ತನ್ನ ಪರಿಚಯವನ್ನು ಹೇಳಿಕೊಂಡು, ರಾಜನ ಓಲಗಶಾಲೆಯನ್ನು ಸೇರಿ, ಸಭಾಭವನದ ನೆಲಕ್ಕೆ ತನ್ನ ಹಣೆಯನ್ನು ತಾಕಿಸಿ ನಮಸ್ಕರಿಸಿ ಬಾಹುಬಲಿಯ ಮುಂದೆ ನಿಂತ. ರತ್ನದ ಭರಣಿಯನ್ನು ಮುಂದೆ ಇರಿಸಿ, 'ದೇವಾ. ಇದು ತಮ್ಮ ಅಣ್ಣನವರಾದ ಚಕ್ರವರ್ತಿಗಳು ನಿಮಗೆಂದು ಕಳಿಸಿರುವ ಕೃಪಾಶೀರ್ವಾದ, ಒಪ್ಪಿಸಿಕೊಳ್ಳಿ' ಎಂದು ಮಹತ್ತರನು ಮುಂದೆ ಇರಿಸಿದ; ಬಳಿಕ ಮಹತ್ತರನಿಗೆ ತಕ್ಕ ಪೀಠದಲ್ಲಿ ಕುಳಿತುಕೊಂಡ; ಬಾಹುಬಲಿಯ ಮಹಾಸಂಧಿವಿಗ್ರಹಿಯು ಆ ಕರಂಡಕವನ್ನು ತೆಗೆದುಕೊಂಡು ಅದರ ಮುಚ್ಚಳವನ್ನು ತೆರೆದು, ಪತ್ರವನ್ನು ಹಿಡಿದು 'ಪ್ರಭು, ಪತ್ರ ಹೀಗಿದೆ' ಎಂದು ಹೇಳಿ, 'ಶುಭ, ಜಗತ್ತಿಗೆಲ್ಲ ಒಡೆಯನಾದ. ಪುರುದೇವನ ಅಡಿದಾವರೆಗಳ ಧೂಳಿನಿಂದ ಕೆಂಪಾದ ಮಣಿಕಿರೀಟದ ಮೇಲೆ ಅಲಂಕಾರಚಿತ್ರವುಳ್ಳ, ತನ್ನ ಚಕ್ರರತ್ನದ ಕಾಂತಿಯಿಂದ ಎಲ್ಲ ದಿಕ್ಕುಗಳನ್ನೂ ಹೊಳೆಯುವಂತೆ ಮಾಡಿದ, ಭರತಚಕ್ರವರ್ತಿಯು, ತನ್ನ ಪ್ರೀತಿಯ ತಮ್ಮನಾದ ಬಾಹುಬಲಿಯನ್ನು ಶ್ರೇಷ್ಠ ಆಶೀರ್ವಚನಗಳಿಂದ ಹರಸಿ. ಚಿನ್ನದ ತಗಡನ್ನು ಹೊದಿಸಿದ ಬಿಲ್ಲೆಂಬ ಬಳ್ಳಿಗೆ ಆಶ್ರಯವಾದ. ಗೆಲವಿನ ಹಬ್ಬದ ತೋರಣಗಂಬಗಳಾದ, ಗೆಲವುವೆಣ್ ಎಂಬ ನಾಗಿಣಿಯಿಂದ ರಕ್ಷಿತವಾದ. ಶ್ರೀಗಂಧದ ದಿಮ್ಮಿಗಳಂತಹ

ತನ್ನ ತೋಳುಗಳಿಂದ ಬಿಗಿಯಾಗಿ ಅಪ್ಪಿಕೊಂಡು ತಾವು ಮಾಡಬೇಕಾದ ಕಾರ್ಯವನ್ನು ಅಪ್ಪಣೆಕೊಡಿಸಿದ್ದಾರೆ' –ಎಂದಾಗ, 'ಮಹಾಕೀರ್ತಿಶಾಲಿಯಾದ ಮಹಾರಾಜರು ಸುಖದಿಂದಿರುವರೇ?' ಎಂದು ಬಾಹುಬಲಿ ವಿಚಾರಿಸಿದ

**ಎಂತಾನುಂ ನೆನೆದಂ ಬಹು**
**ಚಿಂತಂ ಚಕ್ರೇಶನೆಮ್ಮ ದಿಗ್ವಿಜಯಮುಮಾ**
**ದಂತೆಡಜಿದೆಯ್ದೆ ನಡೆದುದೆ**
**ಸಂತಮೆ ದಕ್ಷಿಣಭುಜಕ್ಕೆ ಭೂವಲ್ಲಭನಾ** ೨೩

**ಪದವಿಭಾಗ–ಅನ್ವಯ–ಅರ್ಥ:** ಬಹು ಚಿಂತಂ ಚಕ್ರೇಶನ್ ಎಮ್ಮ ಎಂತಾನುಂ ನೆನೆದಂ = ಮಹಾ ಯೋಚನೆಗಳಲ್ಲಿ ಮುಳುಗಿರುವ ಚಕ್ರವರ್ತಿಯು ಹೇಗೋ ನನ್ನನ್ನು ನೆನಪಿಸಿಕೊಂಡನಲ್ಲಾ, ದಿಗ್ವಿಜಯಮುಂ + ಆದಂತೆ + ಎಡಜಿದೆ + ಎಯ್ದೆ ನಡೆದುದೆ = ಆತನ ವಿಜಯಯಾತ್ರೆಯು ಯಾವ ಅಡ್ಡಿಯೂ ಇಲ್ಲದೆ ಚೆನ್ನಾಗಿ ಆಯಿತೇನು, ಭೂವಲ್ಲಭನಾ ದಕ್ಷಿಣಭುಜಕ್ಕೆ ಸಂತಮೆ = ರಾಜನ ಬಲಭುಜವು ಕ್ಷೇಮದಿಂದಿರುವುದೇ.

**ಗದ್ಯಾನುಸರಣ:** 'ಮಹಾ ಯೋಚನೆಗಳಲ್ಲಿ ಮುಳುಗಿರುವ ಚಕ್ರವರ್ತಿಯು ಹೇಗೋ ನನ್ನನ್ನು ನೆನಪಿಸಿಕೊಂಡನಲ್ಲಾ, ಆತನ ವಿಜಯಯಾತ್ರೆಯು ಯಾವ ಅಡ್ಡಿಯೂ ಇಲ್ಲದೆ ಚೆನ್ನಾಗಿ ಆಯಿತೇನು, ರಾಜನ ಬಲಭುಜವು ಕ್ಷೇಮದಿಂದಿರುವುದೇ.'

[**ವಿಶೇಷ ವಿಚಾರ:** ಬಲಭುಜ ಅದುರುವುದು ಶುಭಸಂಕೇತವೆಂದು ನಂಬಿಕೆ. ಹೀಗಾಗಿ ಚಕ್ರವರ್ತಿಯ ವಿಷಯದಲ್ಲಿ ಎಲ್ಲವೂ ಶುಭಕರವೇ ಎದು ವಿಚಾರಿಸುವ ರೀತಿ ಅದು.]

**ಅರಸುಗಳೆಲ್ಲಂ ಬಾಯ್ಕೇ**
**ಳ್ದರೆಂದುಮಾಶಾಂತರಂಗಳಳ್ಕಿದುವೆಂದುಂ**
**ಧರಣೆತಳಂ ಕೀರ್ತಿಸೆ ಕೇ**
**ಳ್ದು ರಾಗಿಸುತ್ತಿರ್ಪೆವಿನ್ನುಮೇಂ ತೊದಳುಂಟೇ** ೨೪

**ಪದವಿಭಾಗ–ಅನ್ವಯ–ಅರ್ಥ:** ಅರಸುಗಳ್ + ಎಲ್ಲಂ ಬಾಯ್ಕೇಳ್ದರ್ + ಎಂದುಂ = ರಾಜರುಗಳೆಲ್ಲ ಆಜ್ಞಾಧೀನರಾದರೆಂದೂ, ಆಶಾಂತರಂಗಳ್ + ಅಳ್ಕಿದುವು + ಎಂದುಂ = ದಿಗ್ವಲಯಗಳೆಲ್ಲ ಆತನಿಗೆ ಹೆದರಿದುವು ಎಂದೂ, ಧರಣೀತಳಂ ಕೀರ್ತಿಸೆ ಕೇಳ್ದು ರಾಗಿಸುತ್ತಿರ್ಪೆವು = ಜಗತ್ತೇ ಹೊಗಳಿ ಹಾಡುತ್ತಿರುವುದನ್ನು ಕೇಳಿ ಸಂತಸಗೊಂಡಿದ್ದೇನೆ, ಇನ್ನುಂ + ಏಂ ತೊದಳ್ + ಉಂಟೇ = ಇನ್ನೇನಾದರೂ ಆಗಬೇಕಾದದ್ದಿದೆಯೇ,

**ಗದ್ಯಾನುಸರಣ:** 'ರಾಜರುಗಳೆಲ್ಲ ಆಜ್ಞಾಧೀನರಾದರೆಂದೂ, ದಿಗ್ವಲಯಗಳೆಲ್ಲ ಆತನಿಗೆ ಹೆದರಿದುವು ಎಂದೂ, ಜಗತ್ತೇ ಹಾಡಿ ಹೊಗಳುತ್ತಿರುವುದೆಂದೂ ಕೇಳಿ ಸಂತಸಗೊಂಡಿದ್ದೇನೆ, ಇನ್ನೇನಾದರೂ ಆಗಬೇಕಾದದ್ದಿದೆಯೇ?'

[**ವಿಶೇಷ ವಿಚಾರ:** ಈ ಪದ್ಯಗಳ ವ್ಯಂಗ್ಯವನ್ನು ಗಮನಿಸಬೇಕು. ಪತ್ರವನ್ನು ಅರ್ಧಕ್ಕೇ ನಿಲ್ಲಿಸಿ, ಮುಂದಿನದು ಗೊತ್ತಾಯಿತೆಂದು ಹೇಳಿ ಪ್ರಶ್ನೆಗಳನ್ನು ಕೇಳುತ್ತಿದ್ದಾನೆ

ಬಾಹುಬಲಿ. ಆತನು ತನ್ನ ಗೂಢಚಾರರಿಂದ ಈಗಾಗಲೇ ಚಕ್ರವರ್ತಿಯ ದಿಗ್ವಿಜಯಯಾತ್ರೆಯ ವಿಷಯವನ್ನೆಲ್ಲ ಸಂಗ್ರಹಿಸಿದ್ದಾನೆ; ತನಗೆ ಅಣ್ಣನು 'ಪ್ರೀತಿ'ಯಿಂದ ಪತ್ರ ಕಳಿಸಿರುವ ಉದ್ದೇಶ ಅವನಿಗೆ ಹೊಳೆದಿದೆ; ಹೀಗಾಗಿ ಕ್ಷೇಮಸಮಾಚಾರದ ಪ್ರಶ್ನೆಗಳಲ್ಲಿ ಮೊನಚಾದ ವ್ಯಂಗ್ಯವೂ ಅಡಗಿದೆ.]

ವ। ಎನೆ ದೂತಂ ನುಡಿದಂ = ಎಂದಾಗ ದೂತ ಹೀಗೆಂದ

**ನೃಸುರಾಸುರಖೇಚರರಂ**
**ಬೆಸಕೆಯ್ಸಿದನೆಡಱುವಹಿತರಂ ಚಕ್ರಮೆ ಸಾ**
**ಧಿಸಿದಪ್ಪುದು ನವನಿಧಿಗಳ್**
**ಪೊಸಯಿಸಿದಪ್ಪುವು ವಿಭೂತಿಯಂ ಪುರುಸುತನಾ** ೭೫

**ಪದವಿಭಾಗ-ಅನ್ವಯ-ಅರ್ಥ:** ನೃಸುರಾಸುರಖೇಚರರಂ ಬೆಸಕೆಯ್ಸಿದನ್ = ಮಾನವ ದೇವ ಅಸುರ ಹಾಗೂ ಖೇಚರರನ್ನು ಭರತನು ಆಜ್ಞಾಧೀನರನ್ನಾಗಿಸಿಕೊಂಡ. ಎಡಱುವ + ಅಹಿತರಂ ಚಕ್ರಮೆ ಸಾಧಿಸಿದಪ್ಪುದು = ಮಲೆತ ಶತ್ರುಗಳನ್ನು ಚಕ್ರವೇ ಮಣಿಸಿತು, ಪುರುಸುತನಾ ವಿಭೂತಿಯಂ ನವನಿಧಿಗಳ್ ಪೊಸಯಿಸಿದಪ್ಪುವು = ಪುರುದೇವಪುತ್ರನ ಸಿರಿಯನ್ನು ನವನಿಧಿಗಳು ಹೊಸತುಗೈದುವು.

**ಗದ್ಯಾನುಸರಣ:** ಹೀಗೆ ಮಾನವ ದೇವ ಅಸುರ ಹಾಗೂ ಖೇಚರರನ್ನು ಭರತನು ಆಜ್ಞಾಧೀನರನ್ನಾಗಿಸಿಕೊಂಡ; ಮಲೆತ ಶತ್ರುಗಳನ್ನು ಚಕ್ರವೇ ಮಣಿಸಿತು; ಆತನ ಸಿರಿಯನ್ನು ನವನಿಧಿಗಳು ಹೊಸತುಗೈದುವು.

**ಎನ್ನಣುಗದಮ್ಮನಿಲ್ಲದೆ**
**ಬಿನ್ನನೆ ಸಾಮ್ರಾಜ್ಯಮಿನಿತುಮಾದೆಱಕಮುಮ**
**ತ್ಯುನ್ನತಿಯಲ್ತೆನಗಾತಂ**
**ಮುನ್ನೆಱಗದೊಡೆಂದು ಬೆಸಸಿಯಟ್ಟಿದನೆನ್ನಂ** ೭೬

**ಪದವಿಭಾಗ-ಅನ್ವಯ-ಅರ್ಥ:** ಎನ್ನ + ಅಣುಗ + ತಮ್ಮನಿಲ್ಲದೆ = ನನ್ನ ಪ್ರೀತಿಯ ತಮ್ಮನಿಲ್ಲದೆ, ಸಾಮ್ರಾಜ್ಯಂ + ಇನಿತುಂ ಬಿನ್ನನೆ = ಸಾಮ್ರಾಜ್ಯವೆಲ್ಲ ನಿಸ್ಸಾರ್ಥಕ, ಆತಂ ಮುನ್ನೆ + ಎಱಗದೊಡೆ = ಬಾಹುಬಲಿಯು ಮೊದಲು ಬಾಗದಿದ್ದರೆ, ಆದ + ಎಱಕಮುಂ ಎನಗೆ ಅತ್ಯುನ್ನತಿ + ಅಲ್ತು = ಆದ ಎರಗುವಿಕೆಯು ನನಗೆ ದೊಡ್ಡದಲ್ಲ, ಎಂದು ಬೆಸಸಿ ಎನ್ನಂ ಅಟ್ಟಿದನ್ = ಹೀಗೆಂದು ಹೇಳಿ ನನ್ನನ್ನು ಕಳಿಸಿದ್ದಾನೆ.

**ಗದ್ಯಾನುಸರಣ:** 'ನನ್ನ ಪ್ರೀತಿಯ ತಮ್ಮನಿಲ್ಲದೆ ಸಾಮ್ರಾಜ್ಯವೆಲ್ಲ ನಿಸ್ಸಾರ್ಥಕ, ಬಾಹುಬಲಿಯು ಮೊದಲು ಬಾಗದಿದ್ದರೆ ಮಿಕ್ಕವರ ಎರಗುವಿಕೆಯು ದೊಡ್ಡದಲ್ಲ' ಹೀಗೆಂದು ಹೇಳಿ ನನ್ನನ್ನು ಕಳಿಸಿದ್ದಾನೆ.

ವ। **ಎಂಬುದುಂ ಬಾಹುಬಲಿಕುಮಾರಂ ಕೋಪಗರ್ಭಸ್ಮಿತಂ ಬೆರಸು,**

**ಪದವಿಭಾಗ-ಅನ್ವಯ-ಅರ್ಥ:** ಎಂಬುದುಂ = ಎನ್ನಲು, ಬಾಹುಬಲಿಕುಮಾರಂ = ಬಾಹುಬಲಿಯು, ಕೋಪಗರ್ಭಸ್ಮಿತಂ ಬೆರಸು = ಕೋಪವನ್ನಡಗಿಸಿಕೊಂಡ ಮುಗುಳ್ನಗೆಯೊಡನೆ,

**ಗದ್ಯಾನುಸರಣ:** ದೂತನ ಮಾತನ್ನು ಕೇಳಿದ ಬಾಹುಬಲಿಯು ಕೋಪದಿಂದ ಉರಿಯತೊಡಗಿದ; ಆದರೂ ಕೋಪವನ್ನಡಗಿಸಿಕೊಂಡ ಮುಗುಳ್ನಗೆಯೊಡನೆ.

**ಮುನ್ನಂ ಸಾಮಮನೆಮ್ಮ ಮ**
**ನನ್ನೋಡಲ್ ನುಡಿದು ಭೇದಮಂ ದಂಡಮುಮಂ**
**ನಿನ್ನಱಿವನಿತಂ ನುಡಿದೆಯಿ**
**ದೇನ್ನುಡಿಗಳೋ ಸಮಱಿಕೊಂಡ ನುಡಿಗಳ್ ನಿನ್ನಾ** ೭೭

**ಪದವಿಭಾಗ-ಅನ್ವಯ-ಅರ್ಥ:** ಎಮ್ಮ ಮನಂ + ನೋಡಲ್ = ನನ್ನ ಮನಸ್ಸನ್ನು ಪರೀಕ್ಷಿಸಲು, ನಿನ್ನ + ಅಱಿವನಿತಂ = ನಿನಗೆ ತಿಳಿದ ಮಟ್ಟಿಗೆ, ಮುನ್ನಂ ಸಾಮಮನ್ + ನುಡಿದು = ಮೊದಲು ಸಾಮೋಪಾಯದ ಮಾತುಗಳನ್ನಾಡಿ, ಭೇದಮಂ ದಂಡಮುಮಂ ನುಡಿದೆ = ಅನಂತರ ಭೇದ ಮತ್ತು ದಂಡೋಪಾಯಗಳ ಮಾತನ್ನಾಡಿದೆ, ನಿನ್ನಾ ಸಮಱಿಕೊಂಡ ನುಡಿಗಳ್ ಇದೇನ್ + ನುಡಿಗಳೋ = ನಿನ್ನ ನಯವಾದ ಮಾತುಗಳು ಎಂಥವೋ!

**ಗದ್ಯಾನುಸರಣ:** ನನ್ನ ಮನಸ್ಸನ್ನು ಪರೀಕ್ಷಿಸಲು ನಿನಗೆ ತಿಳಿದ ಮಟ್ಟಿಗೆ ಮೊದಲು ಸಾಮೋಪಾಯದ ಮಾತುಗಳನ್ನಾಡಿ, ಅನಂತರ ಭೇದ ಮತ್ತು ದಂಡೋಪಾಯಗಳ ಮಾತನ್ನಾಡಿದೆ; ನಿನ್ನ ನಯವಾದ ಮಾತುಗಳು ಚೆನ್ನಾಗಿವೆ!

**ನೀನ್ನಿನ್ನ ನೃಪನ ದಿಗ್ವಿಜ**
**ಯೋನ್ನತಿಯಂ ಪೊಗಟ್ಟು ಮೂರ್ಛೆವೋಪೈ ಪೊಗಟ್ಟುಂ**
**ನೀನ್ನಿನ್ನ ಮನದೊಳಿಂತಿದು**
**ಬನ್ನಮನೆತ್ತುವವೊಲಾಯ್ತು ನಿನ್ನವನಿಪನಾ** ೭೮

**ಪದವಿಭಾಗ-ಅನ್ವಯ-ಅರ್ಥ:** ನಿನ್ನ ನೃಪನ ದಿಗ್ವಿಜಯ + ಉನ್ನತಿಯಂ ನೀನ್ ಪೊಗಟ್ಟು ಮೂರ್ಛೆವೋಪೈ = ನಿನ್ನ ರಾಜನ ಗೆಲವಿನ ಹೆಚ್ಚಳವನ್ನು ನೀನೇನೋ ಹೊಗಳಿ ಮೂರ್ಚೆ ಹೋಗುತ್ತೀಯೆ, ಇಂತು + ಇದು ಪೊಗಟ್ಟುಂ = ಹೀಗೆ ಹೊಗಳಿದರೂ, ನೀನ್ + ನಿನ್ನ ಮನದೊಳ್ = ನಿನ್ನ ಮನಸ್ಸಿನಲ್ಲಿ ಅಡಗಿರುವ, ನಿನ್ನ + ಅವನಿಪನಾ ಬನ್ನಮನ್ = ನಿನ್ನ ಒಡೆಯನ ಸೋಲನ್ನೇ, ಎತ್ತುವವೊಲ್ + ಆಯ್ತು = ಎತ್ತಿ ಹಿಡಿದ ಹಾಗಾಯಿತು.

**ಗದ್ಯಾನುಸರಣ:** ನಿನ್ನ ರಾಜನ ಗೆಲವಿನ ಹೆಚ್ಚಳವನ್ನು ನೀನೇನೋ ಹೊಗಳಿ ಮೈಮರೆತೆ; ಆದರೆ ಹೀಗೆ ಹೊಗಳಿದರೂ ನಿನ್ನ ಮನಸ್ಸಿನಲ್ಲಿ ಅಡಗಿರುವ ನಿನ್ನ ಒಡೆಯನ ಸೋಲನ್ನೇ ಎತ್ತಿ ತೋರಿಸಿದಂತಾಯಿತು.

**ಮುಂದಿಟ್ಟು ಚಕ್ರಮಂ ತಿರಿ**
**ತಂದುದುಮಂ ಪೊಱಿದಿರ್ದು ಬಯ್ತಂಗೊಳ್ವೊಂ**
**ದಂದದೆ ಕೊಂಡುದುಮನದೇ**
**ನೆಂದುನ್ನತಿಮಾಡಿ ಪೊಗೞ್ವೆಯೊಳಗಱಿಯದುದೇ** ೭೯

**ಪದವಿಭಾಗ-ಅನ್ವಯ-ಅರ್ಥ:** ಚಕ್ರಮಂ ಮುಂದಿಟ್ಟು ತಿರಿ ತಂದುದುಮಂ = ಚಕ್ರರತ್ನವನ್ನು ಮುಂದಿಟ್ಟುಕೊಂಡು ಬೇಡಿ ತಂದುದನ್ನೂ, ಪೊಱಿದೆ + ಇರ್ದು

ಬಯ್ತಂಗೊಳ್ವ + ಒಂದು + ಅಂದದೆ = ಹೂತಿಡದಿದ್ದರೂ ಬಚ್ಚಿಡುವ ರೀತಿಯಲ್ಲಿ, ಕೊಂಡುದುಮನ್ = ಪಡೆದುದನ್ನೂ, ಇದೇನ್ + ಎಂದು + ಉನ್ನತಿಮಾಡಿ ಪೊಗಟ್ಟೆ = ಇದೇನೆಂದು ದೊಡ್ಡದು ಮಾಡಿ ಹೊಗಳುತ್ತಿದ್ದೀಯೆ, ಒಳಗು + ಅಱಿಯದುದೇ = ರಹಸ್ಯ ತಿಳಿಯದ್ದೇನು?

**ಗದ್ಯಾನುಸರಣ:** ಚಕ್ರರತ್ನವನ್ನು ಮುಂದಿಟ್ಟುಕೊಂಡು ಬೇಡಿ ತಂದುದನ್ನೂ, ಹೂತಿಡದಿದ್ದರೂ ಬಚ್ಚಿಡುವ ರೀತಿಯಲ್ಲಿ, ಪಡೆದುದನ್ನೂ, ಇದೇನೆಂದು ದೊಡ್ಡದು ಮಾಡಿ ಹೊಗಳುತ್ತಿದ್ದೀಯೆ, ಈ ರಹಸ್ಯ ತಿಳಿಯದ್ದೇನು?

[**ವಿಶೇಷ ವಿಚಾರ :** 'ಪೂಟದಿರ್ದು ಬಯ್ತಂಗೊಳ್ವೊಂದಂದದೆ' ಎಂಬುದರ ಬದಲು ಎಲ್. ಬಸವರಾಜು ಹಾಗೂ ನರಸಿಂಹಶಾಸ್ತ್ರಿಗಳು 'ಪಾಳಮಿರ್ದು ಬೈಕಂಗೊಳ್ವೊಂದಂದದೆ' ಎಂಬ ಪಾಠವನ್ನು ಸ್ವೀಕರಿಸುತ್ತಾರೆ]

**ಪಸಿದುಣ್ಣಪಟ್ಟು ಬಿರ್ದಿ**
**ರ್ದು ಸಮುದ್ರದ ತಡಿಯೊಳುದಕಮಂತ್ರದ ಬಲದಿಂ**
**ನುಸುಳ್ದೊಡೆ ಜಳನಿಧಿಯಂ ಕರು**
**ಣೆಸಿ ಕೊಟ್ಟರ್ ಧನಮನಂಜಿ ಕೊಟ್ಟರೆ ದಿವಿಜರ್** ೮೦

**ಪದವಿಭಾಗ–ಅನ್ವಯ–ಅರ್ಥ:** ಸಮುದ್ರದ ತಡಿಯೊಳ್ = ಸಮುದ್ರದ ದಡದಲ್ಲಿ, ಪಸಿದು + ಉಣ್ಣಪಟ್ಟು ಬಿರ್ದಿರ್ದು = ಹಸಿವಾದರೂ ಉಣ್ಣದೆ ಬಿದ್ದಿದ್ದು, ಉದಕಮಂತ್ರದ ಬಲದಿಂ ಜಳನಿಧಿಯಂ ನುಸುಳ್ದೊಡೆ = ಉದಕಮಂತ್ರದ ಸಹಾಯದಿಂದ ಸಮುದ್ರದಲ್ಲಿ ನುಸುಳಿದರೆ, ದಿವಿಜರ್ ಧನಮನ್ ಕರುಣೆಸಿ ಕೊಟ್ಟರ್ = ದೇವತೆಗಳು ಅಯ್ಯೋ ಪಾಪ ಎಂದು ಸಂಪತ್ತನ್ನು ನೀಡಿದರೇ ಹೊರತು, ಅಂಜಿ ಕೊಟ್ಟರೆ = ಹೆದರಿ ಕೊಟ್ಟರೇನು?

**ಗದ್ಯಾನುಸರಣ:** ಸಮುದ್ರದ ದಡದಲ್ಲಿ ಹಸಿವಾದರೂ ಉಣ್ಣದೆ ಬಿದ್ದುಕೊಂಡಿದ್ದು, ಉದಕಮಂತ್ರದ ಸಹಾಯದಿಂದ ಸಮುದ್ರದಲ್ಲಿ ನುಸುಳಿದರೆ ದೇವತೆಗಳು ಅಯ್ಯೋ ಪಾಪ ಎಂದು ಸಂಪತ್ತನ್ನು ನೀಡಿದರೇ ಹೊರತು, ಅವನಿಗೆ ಹೆದರಿ ಕೊಟ್ಟರೇನು?

**ಧರೆಯೊಳ್ ಕುಲಾಲಚಕ್ರಂ**
**ತಿರಿವಂತಿರೆ ತಿರಿಯೆ ಚಕ್ರಮದಱಿಯೆ ಬೞಿಯಂ**
**ತಿರಿತಿರಿದು ಮಾಡಿದಂ ಕುಲ**
**ಧರಕುಲದೊಳ್ ಪಿರಿದು ಮಹಿಮೆಯಂ ನಿಮ್ಮರಸಂ** ೮೧

**ಪದವಿಭಾಗ–ಅನ್ವಯ–ಅರ್ಥ:** ಧರೆಯೊಳ್ ಕುಲಾಲಚಕ್ರಂ ತಿರಿವಂತಿರೆ = ಭೂಮಿಯಲ್ಲಿ ಕುಂಬಾರನ ಚಕ್ರವು ತಿರುಗುವ ಹಾಗೆ, ಚಕ್ರಂ ತಿರಿಯೆ = ಚಕ್ರರತ್ನವು ತಿರುಗಲು, ಅದಱಿಯೆ ಬೞಿಯಂ ತಿರಿತಿರಿದು = ಅದರ ಹಿಂದೆಯೇ ಭಿಕ್ಷೆ ಬೇಡುತ್ತ ತಿರುಗಿ, ನಿಮ್ಮರಸಂ ಕುಲಧರಕುಲದೊಳ್ = ನಿಮ್ಮ ರಾಜನು ಮನುವಂಶದಲ್ಲಿ, ಪಿರಿದು ಮಹಿಮೆಯಂ ಮಾಡಿದಂ = ದೊಡ್ಡ ಪವಾಡವನ್ನೇ ಮಾಡಿಬಿಟ್ಟ.

**ಗದ್ಯಾನುಸರಣ:** ಭೂಮಿಯಲ್ಲಿ ಕುಂಬಾರನ ಚಕ್ರವು ತಿರುಗುವ ಹಾಗೆ ಚಕ್ರರತ್ನವು ತಿರುಗಲು, ಅದರ ಹಿಂದೆಯೇ ಭಿಕ್ಷೆ ಬೇಡುತ್ತ ತಿರುಗಿ ನಿಮ್ಮ ರಾಜನು ಮನುವಂಶದಲ್ಲಿ ದೊಡ್ಡ ಪವಾಡವನ್ನೇ ಮಾಡಿಬಿಟ್ಟ!

[**ವಿಶೇಷ ವಿಚಾರ:** ಇಲ್ಲಿನ 'ಚಕ್ರಮದಜಿಯೆ' ಭಾಗದ ಬದಲು ಎಲ್ ಬಸವರಾಜು ಆವೃತ್ತಿಯಲ್ಲಿ 'ಚಕ್ರಮದಱಿಯೆ' ರೂಪವಿದೆ.]

**ಉತ್ತರಭರತದೊಳಾದಾ**
**ಪತ್ತಂ ನೀನಱಿಯೆಯಕ್ಕುಮನಿತುಂ ಬಲಮಂ**
**ಮುತ್ತಿ ಚಿಳಾತಾವರ್ತರ್**
**ಸುತ್ತಲುಮೇಸಾಡಿ ಪಿರಿದು ತಿಣಿಕಂ ತಂದರ್** ೮೨

**ಪದವಿಭಾಗ–ಅನ್ವಯ–ಅರ್ಥ:** ಉತ್ತರಭರತದೊಳ್ + ಆದ + ಆಪತ್ತಂ = ಉತ್ತರ ಭರತಖಂಡದಲ್ಲಿ ಎದುರಾದ ದೊಡ್ಡ ಆಪತ್ತಿನ ವಿಚಾರ, ನೀನ್ + ಅಱಿಯೆ + ಅಕ್ಕುಂ = ನಿನಗೆ ತಿಳಿದಿಲ್ಲದಿರಬಹುದು, ಚಿಳಾತಾವರ್ತರ್ ಅನಿತುಂ ಬಲಮಂ ಮುತ್ತಿ = ಚಿಳಾತಾವರ್ತರು ಸೈನ್ಯವನ್ನೆಲ್ಲ ಮುತ್ತಿ, ಸುತ್ತಲುಂ + ಏಸಾಡಿ = ಸುತ್ತಲೂ ಬಾಣಗಳನ್ನು ಬಿಟ್ಟು, ಪಿರಿದು ತಿಣಿಕಂ ತಂದರ್ = ದೊಡ್ಡ ಸಂಕಟವನ್ನೇ ಉಂಟುಮಾಡಿದರು.

**ಗದ್ಯಾನುಸರಣ:** ಉತ್ತರ ಭರತಖಂಡದಲ್ಲಿ ಎದುರಾದ ದೊಡ್ಡ ಆಪತ್ತಿನ ವಿಚಾರ ನಿನಗೆ ತಿಳಿದಿಲ್ಲದಿರಬಹುದು; ಚಿಳಾತಾವರ್ತರು ಸೈನ್ಯವನ್ನೆಲ್ಲ ಮುತ್ತಿ ಸುತ್ತಲೂ ಬಾಣಗಳನ್ನು ಬಿಟ್ಟು ದೊಡ್ಡ ಸಂಕಟವನ್ನೇ ಉಂಟುಮಾಡಿದರು.

**ಮೇಘಮುಖರೆನಿಸಿ ಸಂದರ**
**ಗೌಘದಿನಂದೋಘಮೇಘಮಾದೊಡೆ ಮೞೆ ಶೌ**
**ರ್ಯಾಘಾತಂ ನೆಗೞೆ ಬಳ**
**ವ್ಯಾಘಾತಂ ನಿನ್ನ ಪತಿಗದಾದುದು ಪುಸಿಯೇ** ೮೩

**ಪದವಿಭಾಗ–ಅನ್ವಯ–ಅರ್ಥ:** ಮೇಘಮುಖರ್ + ಎನಿಸಿ ಸಂದ + ಉರಗ + ಓಘದಿನ್ = ಮೇಘಮುಖರೆಂದು ಹೆಸರಾದ ನಾಗಸಮೂಹದಿಂದ, ಅಂದು ಮೞೆ ಓಘಮೇಘಂ + ಆದೊಡೆ = ಮಳೆಯು ಧಾರಾಕಾರವಾಗಿ ಸುರಿಯಲು, ಶೌರ್ಯ + ಆಘಾತಂ ನೆಗೞೆ = ಭರತನ ಶೌರ್ಯಕ್ಕೆ ಆಘಾತವಾಗಿ, ನಿನ್ನ ಪತಿಗೆ ಬಳವ್ಯಾಘಾತಂ ಅದು ಆದುದು ಪುಸಿಯೇ = ನಿನ್ನ ಒಡೆಯನ ಸೇನೆಗೆ ನಷ್ಟವಾದುದೇನು ಸುಳ್ಳೇ?

**ಗದ್ಯಾನುಸರಣ:** ಮೇಘಮುಖರೆಂದು ಹೆಸರಾದ ನಾಗಸಮೂಹದಿಂದ ಅಂದು ಮಳೆಯು ಧಾರಾಕಾರವಾಗಿ ಸುರಿಯಿತು; ಇದರಿಂದ ನಿನ್ನ ಒಡೆಯನ ಶೌರ್ಯಕ್ಕೆ ಆಘಾತವಾಗಿ ಅವನ ಸೇನೆಗೆ ನಷ್ಟವಾದುದೇನು ಸುಳ್ಳೇ?

**ಬೇಡವಡೆ ಮುಸುಱಿಕೊಂಡೇ**
**ಸಾಡೆ ಸುರುಳ್ದಗಿದು ಕೊಡೆಯ ಚರ್ಮದ ಮಱಿಯೊಳ್**

**ಗೂಡುಗೊಳುತಿರ್ದ ಶೌರ್ಯ**
**ಕ್ರೀಡೆಯ ದಿಗ್ವಿಜಯಮೆಸೆದುದೆಮ್ಮಗ್ರಜನಾ** ೮೪

**ಪದವಿಭಾಗ–ಅನ್ವಯ–ಅರ್ಥ:** ಬೇಡ + ಪಡೆ ಮುಸುಜಿಕೊಂಡು + ಏಸಾಡೆ = ಬೇಡರ ಸೇನೆಯು ಮುತ್ತಿಕೊಂಡು ಬಾಣಪ್ರಯೋಗಿಸಲು, ಸುರುಳ್ದು + ಅಗಿದು = ಸುರುಟಿಕೊಂಡು ಹೆದರಿ, ಕೊಡೆಯ ಚರ್ಮದ ಮಱೆಯೊಳ್ ಗೂಡುಗೊಳುತಿರ್ದ = ಕೊಡೆಯ ಚರ್ಮದ ಹಿಂದೆ ಅಗಿಕೊಂಡಿದ್ದ, ಎಮ್ಮ + ಅಗ್ರಜನಾ ಶೌರ್ಯಕ್ರೀಡೆಯ ದಿಗ್ವಿಜಯಂ + ಎಸೆದುದು = ನಮ್ಮ ಅಣ್ಣನವರ ಪ್ರತಾಪದಾಟವು ಗೆಲವಿನಿಂದ ಮೆರೆಯಿತಲ್ಲವೇ?

**ಗದ್ಯಾನುಸರಣ:** ಬೇಡರ ಸೇನೆಯು ಮುತ್ತಿಕೊಂಡು ಬಾಣಪ್ರಯೋಗ ಮಾಡಿದಾಗ ಸುರುಟಿಕೊಂಡು ಹೆದರಿ, ಕೊಡೆಯ ಚರ್ಮದ ಹಿಂದೆ ಅಗಿಕೊಂಡಿದ್ದ ನಮ್ಮ ಅಣ್ಣನವರ ಪ್ರತಾಪದಾಟವು ಗೆಲವಿನಿಂದ ಮೆರೆಯಿತಲ್ಲವೇ?

**ಬರೆಯಿಸಿದಂ ಪೂರ್ವಮಹೀ**
**ಶ್ವರನಾಮಮನೆಯ್ದೆ ಕಳೆದು ವೃಷಭಾಚಲದೊಳ್**
**ಭರತಂ ನಿಜನಾಮಮನೆನೆ**
**ಪರಿಹಸಿತಂ ಬುಧಜನಕ್ಕಲ್ಲದೆ ಪೆಱತೇಂ** ೮೫

**ಪದವಿಭಾಗ–ಅನ್ವಯ–ಅರ್ಥ:** ವೃಷಭಾಚಲದೊಳ್ = ವೃಷಭಪರ್ವತದಲ್ಲಿ, ಪೂರ್ವಮಹೀಶ್ವರ ನಾಮಮನ್ + ಎಯ್ದೆ ಕಳೆದು = ಹಿಂದಿನ ರಾಜರುಗಳ ಹೆಸರುಗಳನ್ನು ಪೂರ್ತಿ ಒರೆಸಿಹಾಕಿ, ಭರತಂ ನಿಜನಾಮಮಂ ಬರೆಯಿಸಿದಂ ಎನೆ = ಭರತನು ತನ್ನ ಹೆಸರನ್ನು ಬರೆಸಿದನೆಂಬುದು, ಬುಧಜನಕ್ಕೆ ಪರಿಹಸಿತಂ ಅಲ್ಲದೆ ಪೆಱತು + ಏಂ = ತಿಳಿದವರಿಗೆ ಅಪಹಾಸ್ಯಕರವಲ್ಲದೆ ಇನ್ನೇನು.

**ಗದ್ಯಾನುಸರಣ:** ವೃಷಭಪರ್ವತದಲ್ಲಿ ಹಿಂದಿನ ರಾಜರುಗಳ ಹೆಸರುಗಳನ್ನು ಪೂರ್ತಿ ಒರೆಸಿಹಾಕಿ ಭರತನು ತನ್ನ ಹೆಸರನ್ನು ಬರೆಸಿದ; ಇದು ತಿಳಿದವರಿಗೆ ಅಪಹಾಸ್ಯಕರವಲ್ಲದೆ ಇನ್ನೇನು?

[**ವಿಶೇಷ ವಿಚಾರ :** ಬಹು ದೂರದಲ್ಲಿ ಭರತನು ನಡೆಸಿದ ಯುದ್ಧ ಹಾಗೂ ಅವನ ಪ್ರಚ್ಛನ್ನ ಸೋಲುಗಳ ಬಗೆಗಿನ ಈ ಸೂಕ್ಷ್ಮ ವಿವರಗಳು ಬಾಹುಬಲಿಗೆ ತಿಳಿದಿರಬೇಕಾದರೆ, ಅವನ ಕಡೆಯ ಗೂಢಚಾರರು ಭರತನ ಸೈನ್ಯವನ್ನು ಮಾರುವೇಷದಲ್ಲಿ ಹಿಂಬಾಲಿಸಿರಬೇಕು, ಅಥವಾ ಬಾಹುಬಲಿ ಪಕ್ಷಪಾತಿಗಳಾದ ಭರತನ ಸೈನಿಕರೇ ಈ ವಿವರಗಳನ್ನು ಬಾಹುಬಲಿಗೆ ದಾಟಿಸಿರಬಹುದು; ಬಾಹುಬಲಿ ಇಷ್ಟೆಲ್ಲ ಮಾಡಿರುವುದು ತನ್ನ ಮಲಮಗನು ದಿಗ್ವಿಜಯ ಮಾಡುವನೆಂಬ ಕಾರಣದಿಂದಲೇ ಅಥವಾ ಅವನು ತನ್ನ ಎದುರಾಳಿ ಎಂಬ ಭಾವನೆಯಿಂದಲೇ ಅಥವಾ ಸ್ವಾಭಿಮಾನದಿಂದಲೇ? ಭರತನು ತನ್ನ ಶರಣಾಗತಿಯನ್ನು ಬಯಸದಿದ್ದರೆ ಬಾಹುಬಲಿ ಹೀಗೆ ಚಲವನ್ನು ತೋರಿಸುತ್ತಿರಲಿಲ್ಲವೇ? ಅಧಿಕಾರ ರಾಜಕೀಯದ ಸ್ವರೂಪ ಎಲ್ಲ ಕಾಲದಲ್ಲಿಯೂ ಒಂದೇ ತಾನೇ! ಆದರೆ ರತ್ನಾಕರವರ್ಣಿ ತನ್ನ

'ಭರತೇಶ್ವರವೈಭವ'ದಲ್ಲಿ ಅಣ್ಣ-ತಮ್ಮದಿರ ಮುಖಾಮುಖಿಯನ್ನು ಚಿತ್ರಿಸಿರುವ ಪರಿ ವಿಭಿನ್ನವಾಗಿದೆ.]

**ಧನಮೆಂಬುದು ವಿಭುಗೆ ಯಶೋ**
**ಧನಮದನಿಂತಟಿಪಿ ಕಟಿಪಿ ಕಿಡೆ ಮಾಡಿರ್ದಾ**
**ತನ ಪಡೆದ ಧನಮದೇತಱ**
**ಧನಮದಱಿಂ ನಿಧನಮೆಯ್ದಿದರ್ ಪಲರರಸರ್** ೮೬

**ಪದವಿಭಾಗ-ಅನ್ವಯ-ಅರ್ಥ:** ವಿಭುಗೆ ಧನಮೆಂಬುದು ಯಶೋಧನಂ = ರಾಜನಿಗೆ ಸಿರಿಯೆಂದರೆ ಜಸದ ಸಿರಿ, ಅದನ್ + ಇಂತು + ಅಳಿಪಿ ಕಟಿಪಿ ಕಿಡೆ ಮಾಡಿರ್ದ = ಅದನ್ನು ಹೀಗೆ ಅಳಿಸಿ ನಾಶಪಡಿಸಿ, ಆತನ ಪಡೆದ ಧನಂ + ಅದು + ಏತಱ ಧನಂ = ಅವನು ಪಡೆದ ಸಿರಿಯು ಅದು ಎಂತಹ ಸಿರಿ, ಅದಱಿಂ ಪಲರರಸರ್ ನಿಧನಂ + ಎಯ್ದಿದರ್ = ಅದರಿಂದಾಗಿ ಹಲವಾರು ರಾಜರು ಹೇಳಹೆಸರಿಲ್ಲದಾದರು.

**ಗದ್ಯಾನುಸರಣ:** ರಾಜನಿಗೆ ಸಿರಿಯೆಂದರೆ ಜಸದ ಸಿರಿ; ಅದನ್ನು ಹೀಗೆ ಅಳಿಸಿ ನಾಶಪಡಿಸಿ ಅವನು ಪಡೆದ ಸಿರಿಯು ಅದೆಂತಹ ಸಿರಿ? ಅದರಿಂದಾಗಿ ಹಲವಾರು ರಾಜರು ಹೇಳಹೆಸರಿಲ್ಲದಾದರಲ್ಲ!

**ಪಿರಿಯಣ್ಣಂಗೆಱಗುವುದೇಂ**
**ಪರಿಭವಮೇ ಕೀಱ ನೆತ್ತಿಯೊಳ್ ಬಾಳಂ ನಿ**
**ರ್ನೆರಮೂಱ ಚಲದಿನೆಱಗಿಸ**
**ಲಿರೆ ಭರತಂಗೆಱಗುವೆಱಕಮಂಜುಮೆಯಲ್ತೇ** ೮೭

**ಪದವಿಭಾಗ-ಅನ್ವಯ-ಅರ್ಥ:** ಪಿರಿಯಣ್ಣಂಗೆ + ಎಱಗುವುದು + ಏಂ ಪರಿಭವಮೇ = ಹಿರಿಯಣ್ಣನಿಗೆ ನಮಸ್ಕರಿಸುವುದೇನು ಅವಮಾನಕರವೇ? ಕೀಱ ಬಾಳಂ ನಿರ್ನೆರಂ ನೆತ್ತಿಯೊಳ್ ಊಱ = ಕಿರಿಚಾಡಿ ಕತ್ತಿಯನ್ನು ನಿರ್ದಯನಾಗಿ ತಲೆಯಲ್ಲಿ ಊರಿ, ಚಲದಿನ್ + ಎಱಗಿಸಲ್ + ಇರೆ = ಹಟದಿಂದ ನಮಸ್ಕಾರ ಮಾಡುವಂತಾದರೆ, ಭರತಂಗೆ + ಎಱಗುವ + ಎಱಕಂ + ಅಂಜುಮೆ + ಅಲ್ತೇ = ಭರತನಿಗೆ ಮಾಡುವ ನಮಸ್ಕಾರವು ಅಂಜುಬುರುಕತನಲ್ಲವೇ?

**ಗದ್ಯಾನುಸರಣ:** ಹಿರಿಯಣ್ಣನಿಗೆ ನಮಸ್ಕರಿಸುವುದೇನು ಅವಮಾನಕರವೇ? ಉಹ್ಞೂ, ಕಿರಿಚಾಡಿ ಕತ್ತಿಯನ್ನು ನಿರ್ದಯನಾಗಿ ತಲೆಯಲ್ಲಿ ಊರಿ ಹಟದಿಂದಾಗಿ ನಮಸ್ಕಾರ ಮಾಡುವಂತಾದರೆ, ಭರತನಿಗೆ ಮಾಡುವ ನಮಸ್ಕಾರವು ಅಂಜುಬುರುಕತನವಲ್ಲವೇ?

**ಭರತಂ ಪಟ್ಖಂಡಭೂವಲ್ಲಭನೆನೆ ಸಿರಿಯಂ ಗೆಂಟಱೊಳ್ ಕೇಳ್ದು ರಾಗಂ**
**ಬೆರಸಿರ್ಪೀ ನಣ್ಪೆ ಸಾಲ್ಗುಂ ಕರೆಮೊಡೆ ಬೆಸನೇನೆಂಬ ಜೀಯೆಂಬ ದೇವೆಂ**
**ಬರಸೆಂಬಾಳೆಂಬ ದೈನ್ಯಕ್ಕೆಲವೊ ತನುವನಾನೊಡ್ಡುವಂತಾದಿದೇವಂ**
**ಪುರುದೇವಂ ದೇವದೇವಂ ಕುಡೆ ಪಡೆದ ನೆಲಕ್ಕಾರೊಳಂ ಪಂತಮುಂಟೇ** ೮೮

**ಪದವಿಭಾಗ-ಅನ್ವಯ-ಅರ್ಥ:** ಭರತಂ ಷಟ್ಖಂಡಭೂವಲ್ಲಭನ್ + ಎನೆ ಸಿರಿಯಂ = ಭರತನು ಷಟ್ಖಂಡಗಳಿಗೂ ಒಡೆಯನಾದ ಎಂಬ ಕೀರ್ತಿಯನ್ನು, ಗಂಟಜೊಳ್ ಕೇಳ್ದು = ದೂರದಿಂದಲೇ ಕೇಳಿ, ರಾಗಂ ಬೆರಸಿರ್ಪ + ಈ ನಣ್ಪೆ ಸಾಲ್ಗುಂ = ಪ್ರೀತಿಯಿಂದ ಕೂಡಿದ ನಂಟುತನವೇ ಸಾಕು, ಕರೆದೊಡೆ ಬೆಸಸ್ + ಏನ್ + ಎಂಬ = ಕರೆದರೆ ಏನಪ್ಪಣೆ ಎನ್ನುವ, ಜೀಯ + ಎಂಬ = ಮಹಾಸ್ವಾಮಿ ಎಂಬ, ದೇವ + ಎಂಬ = ದೇವರೇ ಎನ್ನುವ, ಅರಸೆಂಬ + ಆಳೆಂಬ ದೈನ್ಯಕ್ಕೆ = ರಾಜ-ಸೇವಕ ಎನ್ನುವ ದೈನ್ಯಕ್ಕೆ, ಎಲವೊ ತನುವನ್ + ಆನ್ + ಒಡ್ಡುವಂತು = ಎಲವೋ ನನ್ನ ದೇಹವನ್ನು ಈಡುಮಾಡಿಕೊಳ್ಳುವಂತೆ, ಆದಿದೇವಂ ಪುರುದೇವಂ ದೇವದೇವಂ ಕುಡೆ = ಆದಿದೇವನೂ ಪುರುದೇವನೂ ದೇವದೇವನೂ ದಯಪಾಲಿಸಿದ್ದರಿಂದ, ಪಡೆದ ನೆಲಕ್ಕೆ + ಆರೊಳಂ ಪಂತಂ + ಉಂಟೇ = ಪಡೆದ ಈ ನೆಲಕ್ಕೆ ಯಾರೊಡನೆಯಾದರೂ ಸ್ಪರ್ಧೆ ಯಾಕೆ ಬೇಕು?

**ಗದ್ಯಾನುಸರಣ:** ಭರತನು ಷಟ್ಖಂಡಗಳಿಗೂ ಒಡೆಯನಾದ ಎಂಬ ಕೀರ್ತಿಯನ್ನು ದೂರದಿಂದಲೇ ಕೇಳಿ ಸಂತಸಗೊಳ್ಳುವ ಈ ನಂಟುತನವೇ ಸಾಕು; ಅದು ಬಿಟ್ಟು ಕರೆದರೆ ಏನಪ್ಪಣೆ, ಮಹಾಸ್ವಾಮಿ ದೇವರೇ ಎನ್ನುವಂತಹ ರಾಜ-ಸೇವಕ ಎನ್ನುವ ದೈನ್ಯಕ್ಕೆ, ಏನಯ್ಯಾ, ನನ್ನ ದೇಹವನ್ನು ಏಕೆ ಈಡುಮಾಡಿಕೊಳ್ಳಲಿ? ಆದಿದೇವನೂ ಪುರುದೇವನೂ ದೇವದೇವನೂ ಆದ ತಂದೆಯು ದಯಪಾಲಿಸಿದ್ದರಿಂದ ಪಡೆದ ಈ ನೆಲಕ್ಕೆ ಯಾರೊಡನೆಯಾದರೂ ನನಗೆ ಸ್ಪರ್ಧೆ ಯಾಕೆ ಬೇಕು?

**ಧರೆಯಂ ಕುಡುವಂದೆನಗಂ**
**ಗುರು ತನಗಂ ರಾಜನಾಮಮಂ ಕೊಟ್ಟೊಡೆ ನೋ**
**ಡಿರೆ ತನಗೀಗಳ್ ರಾಜಾ**
**ಧಿರಾಜನೆಂದಿಟ್ಟುಕೊಂಡನಡಕಿಲ್ಪೆಸರಂ** ೮೯

**ಪದವಿಭಾಗ-ಅನ್ವಯ-ಅರ್ಥ:** ಗುರು ಎನಗಂ ತನಗಂ ಧರೆಯಂ ಕುಡುವಂದು = ತಂದೆಯು ನನಗೂ ಅವನಿಗೂ ರಾಜ್ಯವನ್ನು ವಹಿಸಿಕೊಟ್ಟಾಗ, ರಾಜನಾಮಮಂ ಕೊಟ್ಟೊಡೆ = ರಾಜ ಎಂಬ ಹೆಸರನ್ನಿತ್ತರೆ, ಈಗಳ್ ನೋಡಿರೆ = ಈಗ ನೋಡಿ, ತನಗೆ ರಾಜಾಧಿರಾಜನ್ ಎಂದು ಅಡಕಿಲ್ + ಪೆಸರಂ ಇಟ್ಟುಕೊಂಡನ್ = ತನಗೆ ರಾಜಾಧಿರಾಜ ಎಂಬ ಪೇರಿಸಿಕೊಂಡ ಹೆಸರನ್ನಿಟ್ಟುಕೊಂಡಿದ್ದಾನೆ.

**ಗದ್ಯಾನುಸರಣ:** ರಾಜ್ಯವನ್ನು ವಹಿಸಿಕೊಟ್ಟಾಗ ನಮ್ಮಿಬ್ಬರಿಗೂ ತಂದೆಯು ರಾಜ ಎಂಬ ಹೆಸರನ್ನಿತ್ತ; ಆದರೆ ಈಗ ನೋಡಿದರೆ ಭರತ ರಾಜಾಧಿರಾಜ ಎಂಬ ಪೇರಿಸಿಕೊಂಡ ಹೆಸರನ್ನಿಟ್ಟುಕೊಂಡಿದ್ದಾನೆ!

**ದೊರೆಯಲ್ಲದಂಗೆ ನುಡಿವುದು**
**ಪುರುಳಿಲ್ಲದ ಮಾತನೆಮ್ಮೊಳಂ ನುಡಿವುದೆ ಪೇಟಿಃ**
**ಎರಲೆಗೆ ಪಾಡುವ ಗೋರಿಯ**
**ನರಣ್ಯದೊಳ್ ಮೃಗವಿರೋಧಿಗಂ ಪಾಡುವುದೇ** ೯೦

**ಪದವಿಭಾಗ-ಅನ್ವಯ-ಅರ್ಥ:** ಪುರುಳಿಲ್ಲದ ಮಾತನ್ ದೊರೆಯಲ್ಲದಂಗೆ ನುಡಿವುದು = ಈ ಜೊಳ್ಳುಮಾತನ್ನು ಪುಕ್ಕಲನೊಡನೆ ಆಡಲಿ. ಎಮ್ಮೊಳಂ ನುಡಿವುದೆ ಪೇಟಿ್ = ನನ್ನ ಮುಂದೆಯೂ ಆಡಬಹುದೇ ನೀನೇ ಹೇಳು. ಅರಣ್ಯದೊಳ್ ಎರಲೆಗೆ ಪಾಡುವ ಗೋರಿಯನ್ = ಕಾಡಿನಲ್ಲಿ ಜಿಂಕೆಯನ್ನು ಬೇಟೆಯಾಡಲು ಮಾಡುವ ಶಬ್ದವನ್ನು, ಮೃಗವಿರೋಧಿಗಂ ಪಾಡುವುದೇ = ಸಿಂಹದ ಮುಂದೆಯೂ ಆಡುವುದೇ?

**ಗದ್ಯಾನುಸರಣ:** ಇಂತಹ ಜೊಳ್ಳುಮಾತನ್ನು ಪುಕ್ಕಲನೊಡನೆ ಆಡಲಿ, ನನ್ನ ಮುಂದೆಯೂ ಆಡಬಹುದೇ ನೀನೇ ಹೇಳು; ಕಾಡಿನಲ್ಲಿ ಜಿಂಕೆಯನ್ನು ಬೇಟೆಯಾಡಲು ಮಾಡುವ ಶಬ್ದವನ್ನು ಸಿಂಹದ ಮುಂದೆಯೂ ಮಾಡುವುದೇ?

**ಪುರುತನಯರ್ ಭುಜಬಲಿಯುಂ**
**ಭರತನುಮೆನೆ ದೊರೆಗೆವಂದೊಡಾರಳವುಮನೀ**
**ಧರೆಯಱಿಯಲೊಡಂ ತೂಗಲ್**
**ಧರೆಗೆ ತುಲಾದಂಡಮಲ್ತೆ ಮದ್ಭುಜದಂಡಂ** ೯೧

**ಪದವಿಭಾಗ-ಅನ್ವಯ-ಅರ್ಥ:** ಭುಜಬಲಿಯುಂ ಭರತನುಂ ಪುರುತನಯರ್ ಎನೆ = ಬಾಹುಬಲಿ ಮತ್ತು ಭರತರಿಬ್ಬರೂ ಪುರುದೇವನ ಮಕ್ಕಳಾಗಿರಬೇಕಾದರೆ, ದೊರೆಗೆ + ಬಂದೊಡೆ = ಹೋಲಿಕೆ ಮಾಡುವುದಾದರೆ, ಆರ + ಅಳವುಮನ್ + ಈ ಧರೆ + ಅಱಿಯಲೊಡಂ = ಯಾರು ಯಾರ ಸಾಮರ್ಥ್ಯವನ್ನು ಈ ಜಗತ್ತು ತಿಳಿಯುವಂತೆ. ತೂಗಲ್ ಮತ್ + ಭುಜದಂಡಂ ಧರೆಗೆ ತುಲಾದಂಡಂ + ಅಲ್ತೆ = ತೂಕ ಮಾಡಲು ಭೂಮಿಯಲ್ಲಿ ನನ್ನ ತೋಳದಂಡಗಳು ತಕ್ಕಡಿಯ ದಂಡದಂತಲ್ಲವೇ?

**ಗದ್ಯಾನುಸರಣ:** ಬಾಹುಬಲಿ ಮತ್ತು ಭರತರಿಬ್ಬರೂ ಪುರುದೇವನ ಮಕ್ಕಳು. ಆದರೆ ಅವರ ಹೋಲಿಕೆ ಮಾಡಿ ಸಾಮರ್ಥ್ಯವನ್ನು ಈ ಜಗತ್ತು ತಿಳಿಯುವಂತೆ ಅಳೆಯುವುದಾದರೆ, ತೂಕ ಮಾಡಲು ಭೂಮಿಯಲ್ಲಿ ನನ್ನ ತೋಳದಂಡಗಳು ತಕ್ಕಡಿಯ ದಂಡದಂತಾಗುತ್ತದೆ!

**ನೆಗಟ್ದೀ ಷಟ್ಖಂಡಭೂಮಂಡಲಮನನಿತುಮಂ ಗೆಲ್ದಖಂಡಪ್ರತಾಪಂ**
**ನೆಗಟ್ದಿಂತಾಱುಂ ಬಲಂಗಳ್ವೆರಸೊದವಿದ ಸಂಗ್ರಾಮಸಂರಂಭದಿಂದಂ**
**ಬಗೆಯಂ ಪ್ರಾಣಪ್ರಿಯಸ್ತ್ರೀಜನತನಯಧನವ್ರಾತಮೊಳ್ ಮಾಡದಾರ್ತಾ**
**ಜಿಗೆ ಬಂದೊಡ್ಡಲ್ಕೆ ಪೇಟ್ಬಿಂಗರನಿಕಷದೊಳೆಮ್ಮಂದಮಂ ನೀನೆ ಕಾಣ್ಬೈ** ೯೨

**ಪದವಿಭಾಗ-ಅನ್ವಯ-ಅರ್ಥ:** ನೆಗಟ್ದಿ + ಈ ಷಟ್ಖಂಡಭೂಮಂಡಲಮನ್ + ಅನಿತುಮಂ ಗೆಲ್ದು = ಪ್ರಸಿದ್ಧವಾದ ಆರೂ ಖಂಡಗಳನ್ನು ಗೆದ್ದು, ಅಖಂಡಪ್ರತಾಪಂ ನೆಗಟ್ದು = ಮಹಾಪ್ರತಾಪವನ್ನು ತೋರಿಸಿ, ಅಂತೆ + ಆಱುಂ ಬಲಂಗಳ್ + ಬೆರಸು + ಒದವಿದ ಸಂಗ್ರಾಮಸಂರಂಭದಿಂದಂ = ಹಾಗೆಯೇ ಆರು ಬಗೆಯ ಸೈನ್ಯಗಳಿಂದ ಕೂಡಿ ಮಾಡಿದ ಯುದ್ಧದ ಸಡಗರದಿಂದ, ಪ್ರಾಣಪ್ರಿಯ

ಸ್ತ್ರೀಜನತನಯಧನವ್ರಾತದೊಳ್ ಬಗೆಯಂ ಮಾಡದೆ = (ಭರತನು) ತನ್ನ ಪ್ರೀತಿಪಾತ್ರರಾದ ಸ್ತ್ರೀಯರು ಮಕ್ಕಳು ಮತ್ತು ಸಂಪತ್ತಿನಲ್ಲಿ ವಾಂಛಲ್ಯವನ್ನು ಹೊಂದದೆ, ಆರ್ತು + ಆಜಿಗೆ ಬಂದು + ಒಡ್ಡಲ್ಕೆ = ತಾನಾಗಿ ಯುದ್ಧದಲ್ಲಿ ಬಂದು ಎದುರಾದರೆ, ಪೇೞ್ + ಸಂಗರನಿಕಷದೊಳ್ + ಎಮ್ಮ + ಅಂದಮಂ ನೀನೆ ಕಾಣ್ಬೈ = ಯುದ್ಧದ ಒರೆಗಲ್ಲಿನಲ್ಲಿ ನನ್ನ ರೀತಿಯನ್ನು ನೀನೇ ಕಾಣುವೆ.

**ಗದ್ಯಾನುಸರಣ:** ಪ್ರಸಿದ್ಧವಾದ ಆರೂ ಖಂಡಗಳನ್ನು ಗೆದ್ದು ಮಹಾಪ್ರತಾಪೊವನ್ನು ತೋರಿಸಿಯೂ, ಆರು ಬಗೆಯ ಸೈನ್ಯಗಳಿಂದ ಕೂಡಿ ಮಾಡಿದ ಯುದ್ಧದ ಸಡಗರದಿಂದ ಕೂಡಿಯೂ ಭರತನು ತನ್ನ ಪ್ರೀತಿಪಾತ್ರರಾದ ಸ್ತ್ರೀಯರು ಮಕ್ಕಳು ಮತ್ತು ಸಂಪತ್ತಿನಲ್ಲಿ ವಾಂಛಲ್ಯವನ್ನು ಹೊಂದದೆ ತಾನಾಗಿ ಯುದ್ಧದಲ್ಲಿ ಎದುರಾದರೆ, ಆ ಯುದ್ಧವೆಂಬ ಒರೆಗಲ್ಲಿನಲ್ಲಿ ನನ್ನ ರೀತಿಯನ್ನು ನೀನೇ ಕಾಣುವೆ.

**ವ॥ ಎಂದು ಮನುನರೇಂದ್ರವೃಂದಾರಕಶಿಖಂಡಮಂಡನಮಣಿಯೆನಿಸಿದ ಬಾಹುಬಲಿ ಕುಮಾರಂ ಭರತೇಶ್ವರಚಕ್ರವರ್ತಿಯ ದೂತನಂ ಪೋಗಲ್ವೇೞ್ದಾಗಳ್ ಅನೇಕ ರಾಜನ್ಯಕಮಕುಟಸಂಘಟ್ಟನೋಚ್ಚಳನ್ಮಣಿಮರೀಚಿಗಳ್ ವಿಳಯಾನಳವಿಸ್ಫುಲಿಂಗಂಗಳಂತೆ ದೆಸೆದೆಸೆಗೆ ಕೆದಱೆ ಬಾಹುಬಲಿನೃಪಾಸ್ಥಾಯಿಕೆಯೊಳ್, ದೂತಂ ಸಾಕೇತಪುರಮನೆಯ್ದೆವಂದಾಸ್ಥಾನ ಮಂಟಪದೊಳಿರ್ದ ಚಕ್ರವರ್ತಿಯಂ ಕಂಡು ಪೊಡೆಮಟ್ಟು ಬಿನ್ನಪಂಗೆಯ್ದಾಗಳ್ ಬಿನ್ನಪಂಗೆಯ್ದಾಗಳ್**

**ಪದವಿಭಾಗ–ಅನ್ವಯ–ಅರ್ಥ:** ಎಂದು ಮನುನರೇಂದ್ರವೃಂದಾರಕ = ಎಂದು ಮಾನವ ರಾಜಸಮೂಹದ, ಶಿಖಂಡಮಂಡನಮಣಿಯೆನಿಸಿದ = ತಲೆವಣಿಯೆನಿಸಿ ಕೊಂಡ, ಬಾಹುಬಲಿಕುಮಾರಂ = ಬಾಹುಬಲಿಯು, ಭರತೇಶ್ವರಚಕ್ರವರ್ತಿಯ ದೂತನಂ ಪೋಗಲ್ + ಪೇೞ್ದು = ಭರತನ ದೂತನನ್ನು ಕಳುಹಿಸಿ, ಆಗಳನೇಕರಾಜನ್ಯಕಮಕುಟಸಂಘಟ್ಟನ = ಅನೇಕ ರಾಜರ ಮಣಿಖಚಿತ ಕಿರೀಟಗಳ ತಾಕುವಿಕೆಯಿಂದ, ಉಜ್ಜಳತ್ + ಮಣಿಮರೀಚಿಗಳ್ = ಹೊಮ್ಮಿದ ರತ್ನಕಿರಣಗಳ ಕಾಂತಿಯು, ವಿಳಯ + ಅನಳವಿಸ್ಫುಲಿಂಗಂಗಳಂತೆ ದೆಸೆದೆಸೆಗೆ = ಪ್ರಳಯಕಾಲದ ಬೆಂಕಿಯ ಕಿಡಿಗಳಂತೆ ದಿಕ್ಕದಿಕ್ಕುಗಳಲ್ಲೂ, ಬಾಹುಬಲಿನೃಪಾಸ್ಥಾಯಿಕೆಯೊಳ್ ಕೆದಱೆ = ಬಾಹುಬಲಿ ಮಹಾರಾಜನ ಆಸ್ಥಾನದ ಮೂಲೆಗಳಿಗೂ ಹರಡಲು, ದೂತಂ ಸಾಕೇತಪುರಮನ್ + ಎಯ್ದೆವಂದು + ಆಸ್ಥಾನಮಂಟಪದೊಳ್ + ಇರ್ದ ಚಕ್ರವರ್ತಿಯಂ ಕಂಡು ಪೊಡೆಮಟ್ಟು = ದೂತನು ಅಯೋಧ್ಯೆಗೆ ಮರಳಿ ಓಲಗಗೊಟ್ಟಿದ್ದ ಚಕ್ರವರ್ತಿಯನ್ನು ಕಂಡು ನಮಸ್ಕರಿಸಿ, ಬಿನ್ನಪಂಗೆಯ್ದಾಗಳ್ = ಬಿನ್ನವಿಸಲು,

**ಗದ್ಯಾನುಸರಣ:** ಎಂದು ಮಾನವ ರಾಜಸಮೂಹದ ತಲೆವಣಿಯೆನಿಸಿಕೊಂಡ ಬಾಹುಬಲಿಯು ಭರತನ ದೂತನನ್ನು ಕಳುಹಿಸಿಕೊಟ್ಟ; ಆಗ ಅನೇಕ ರಾಜರು ಬಂದು ನಮಿಸಲು ಅವರ ಮಣಿಖಚಿತ ಕಿರೀಟಗಳ ತಾಕುವಿಕೆಯಿಂದ ಹೊಮ್ಮಿದ

ರತ್ನಕಿರಣಗಳು ಪ್ರಳಯಕಾಲದ ಬೆಂಕಿಯ ಕಿಡಿಗಳಂತೆ ದಿಕ್ಕದಿಕ್ಕುಗಳಲ್ಲೂ ಹರಡಿದುವು. ಚಕ್ರವರ್ತಿಯ ದೂತನು ಅಯೋಧ್ಯೆಗೆ ಮರಳಿ ಓಲಗಗೊಟ್ಟಿದ್ದ ಚಕ್ರವರ್ತಿಯನ್ನು ಕಂಡು ನಮಸ್ಕರಿಸಿ ಬಿನ್ನವಿಸಿದ.

**ತುದಿಯೆಯ್ದಿತ್ತೆಮ್ಮ ವಿಶ್ವಕ್ಷಿತಿತಳಜಯಮಿಂತೆಮ್ಮ ದಾಯಾದನುಂ ಕೋ**
**ಪದಿನೆನ್ನೊಳ್ ಕಾದಲೆಂದುಬ್ಬರಿಸಿದ ಸಮರಾಟೋಪದಿಂ ನಿಂದೊಡಂ ಮಾ**
**ಣ್ಬುದು ಸೂಟಲ್ತೆಮ್ಮ ಸಾಪತ್ನನ ಭುಜಬಲಮಂ ನೋಟ್ಪೆಮೆಂದಾಗಳಾಸ್ಥಾ**
**ನದಿನೆರ್ದಂ ಚಕ್ರಿರಾಜನ್ಯಕಮಕುಟಮಣಿಪ್ರೋಜ್ಜ್ವಳದ್ವ್ಯೋಮಚಕ್ರಂ** ೯೩

**ಪದವಿಭಾಗ–ಅನ್ವಯ–ಅರ್ಥ:** ಎಮ್ಮ ವಿಶ್ವಕ್ಷಿತಿತಳಜಯಂ ಇಂತು ತುದಿ + ಎಯ್ದಿತ್ತು = ಜಗತ್ತನ್ನೇ ಗೆಲ್ಲುವ ನಮ್ಮ ಹಂಬಲ ಹೀಗೆ ಕೊನೆಯಾಯಿತು, ಎಮ್ಮ ದಾಯಾದನುಂ ಕೋಪದಿನ್ + ಎನ್ನೊಳ್ ಕಾದಲ್ + ಎಂದು = ನನ್ನ ದಾಯಾದಿಯು ಕೋಪದಿಂದ ನನ್ನೊಡನೆ ಹೋರಾಡಲು, ಉಬ್ಬರಿಸಿದ ಸಮರ + ಆಟೋಪದಿಂ ನಿಂದೊಡಂ = ವೆಗ್ಗಳವಾದ ಯುದ್ಧೋತ್ಸಾಹದಲ್ಲಿ ನಿಂತಿರಬೇಕಾದರೆ, ಮಾಣ್ಬುದು ಸೂಟಲ್ತು = ಸುಮ್ಮನಿರುವುದು ತರವಲ್ಲ, ಎಮ್ಮ ಸಾಪತ್ನನ ಭುಜಬಲಮಂ ನೋಟ್ಪಂ = ನನ್ನ ಮಲತಮ್ಮನ ತೋಳ್ಬಲವನ್ನು ನೋಡಿಬಿಡೋಣ, ಎಂದು + ಆಗಳ್ ರಾಜನ್ಯಕಮಕುಟಮಣಿಪ್ರ + ಉಜ್ವಳತ್ + ವ್ಯೋಮಚಕ್ರಂ ಚಕ್ರಿ = ಎನ್ನುತ್ತ ರಾಜರ ಕಿರೀಟಗಳ ರತ್ನಕಾಂತಿಯಿಂದ ಆಗಸವೆಲ್ಲ ಬೆಳಗಿರಲು ಚಕ್ರವರ್ತಿಯು, ಆಸ್ಥಾನದಿನ್ + ಎರ್ದಂ = ಓಲಗಶಾಲೆಯಿಂದ ಹೊರಟ.

**ಗದ್ಯಾನುಸರಣ:** ಜಗತ್ತನ್ನೇ ಗೆಲ್ಲುವ ನಮ್ಮ ಹಂಬಲ ಈ ಪರಿ ಕೊನೆಯಾಯಿತಲ್ಲ; ನನ್ನ ದಾಯಾದಿಯು ಕೋಪದಿಂದ ನನ್ನೊಡನೆ ಹೋರಾಡಲೆಂದು ವೆಗ್ಗಳವಾದ ಯುದ್ಧೋತ್ಸಾಹದಲ್ಲಿ ನಿಂತಿರಬೇಕಾದರೆ ನಾವು ಸುಮ್ಮನಿರುವುದು ತರವಲ್ಲ; ನನ್ನ ಮಲತಮ್ಮನ ತೋಳ್ಬಲವನ್ನು ನೋಡಿಬಿಡೋಣ – ಎನ್ನುತ್ತ ರಾಜರ ಕಿರೀಟಗಳ ರತ್ನಕಾಂತಿಯಿಂದ ಆಗಸವೆಲ್ಲ ಬೆಳಗಿರಲು ಚಕ್ರವರ್ತಿಯು ಓಲಗಶಾಲೆಯಿಂದ ಹೊರಟ.

**ವ॥ ಆಗಳ್ ದೂತಾಳಾಪ ವಿಳಯಸಮೀರಪ್ರೇರಿತಪ್ರಳಯಜಳನಿಧಿಪ್ರಧ್ವನಾನುಕಾರಿಯಪ್ಪ ಸಮರಸನ್ನಾಹಭೇರೀನಿನಾದಂ ಭುವನಾಂತರ್ಭಾಗಮಂ ಪರ್ಬಿಜಿ಼ ಭರತಂ ವಿಜಯಪರ್ವತಗಜೇಂದ್ರದ ಬೆಂಗೆ ವಂದು ಪೌದನಪುರಾಭಿಮುಖನಾಗಿ ನಡೆವಲ್ಲಿ,**

**ಪದವಿಭಾಗ–ಅನ್ವಯ–ಅರ್ಥ:** ಆಗಳ್ ದೂತ + ಆಳಾಪವಿಳಯಸಮೀರ ಪ್ರೇರಿತಪ್ರಳಯಜಳನಿಧಿಪ್ರಧ್ವನ + ಅನುಕಾರಿಯಾಗಿ = ಆಗ ದೂತನ ಮಾತುಗಳೆಂಬ ಪ್ರಳಯಕಾಲದ ಬಿರುಗಾಳಿಯಿಂದ ಕೆರಳಿ ಭೋರ್ಗರೆವ ಕಡಲಿನಂತಹ, ಸಮರಸನ್ನಾಹಭೇರೀನಿನಾದಂ ಭೂಭುವನ + ಅಂತರ್ಭಾಗಮಂ ಪರ್ಬಿದುದು = ಯುದ್ಧಸಿದ್ಧತೆಯ ಭೇರಿಗಳ ಭೋರ್ಗರೆತವು ಜಗತ್ತಿನ ಒಳಗನ್ನೆಲ್ಲ ವ್ಯಾಪಿಸಿರಲು, ಭರತಂ ವಿಜಯಪರ್ವತಗಜೇಂದ್ರದ ಬೆಂಗೆ ವಂದು = ಭರತನು ವಿಜಯಪರ್ವತವೆಂಬ

ತನ್ನ ಆನೆಯನ್ನೇರಿ, ಪೌದನಪುರಾಭಿಮುಖನಾಗಿ ನಡೆವಲ್ಲಿ = ಪೌದನಪುರದ ಕಡೆಗೆ ನಡೆಯಲು.

**ಗದ್ಯಾನುಸರಣ:** ಆಗ ದೂತನ ಮಾತುಗಳೆಂಬ ಪ್ರಳಯಕಾಲದ ಬಿರುಗಾಳಿಯಿಂದ ಕೆರಳಿ ಘೋರ್ಗರೆವ ಕಡಲಿನಂತಹ ಯುದ್ಧಸಿದ್ಧತೆಯ ಭೇರಿಗಳ ಘೋರ್ಗರೆತವು ಜಗತ್ತಿನ ಒಳಗನ್ನೆಲ್ಲ ವ್ಯಾಪಿಸಿರಲು, ಭರತನು ವಿಜಯಪರ್ವತವೆಂಬ ತನ್ನ ಆನೆಯನ್ನೇರಿ ಪೌದನಪುರದ ಕಡೆಗೆ ನಡೆದ.

**ರಜಮುಂ ದಿಗ್ಧೂಮಮುಂ ಸಂದಣಿಸೆ ಪರುಷವಾತಾಹತಿಪ್ರೋಚ್ಚಳತ್ಸಾ**
**ಮಜಸೇನಾಕುಂಭಸಿಂದೂರಮುಮೊದವಿದ ದಿಗ್ದಾಹಮುಂ ಕೂಡೆ ಭೂರಿ**
**ಧ್ವಜಿನೀಸಂಕ್ಷೋಭಮಾಕಂಪಮುಮಶುಭಮಹೀಕಂಪಮುಂ ತನ್ನೊಳೊಂದಾ**
**ಗೆ ಜಗಕ್ಕೇನಿಲ್ಲಿ ಪೇೞಾದಪುದೆನೆ ದೆಸೆ ಬರ್ಪಂತೆ ಬಂದೊಡ್ಡಿ ನಿಂದಂ** ೯೪

**ಪದವಿಭಾಗ–ಅನ್ವಯ–ಅರ್ಥ:** ರಜಮುಂ ದಿಗ್ಧೂಮಮುಂ ಸಂದಣಿಸೆ = ದೂಳೂ ದಿಕ್ಕುಗಳ ಹೊಗೆಯೂ ಸೇರಲು. ಪರುಷವಾತ + ಆಹತಿಪ್ರೋಚ್ಚಳತ್ + ಸಾಮಜಸೇನಾಕುಂಭಸಿಂದೂರಮುಂ = ಬಿರುಸಾದ ಗಾಳಿಯಿಂದ ಹಾರಿದ ಗಜಸೈನ್ಯದ ಗಂಡಸ್ಥಳಗಳ ಮೇಲಿನ ಕುಂಕುಮವೂ, ಒದವಿದ ದಿಕ್ + ದಾಹಮುಂ ಕೂಡೆ = ಉಂಟಾದ ದಿಕ್ಕುಗಳ ಬೆಂಕಿಯೂ ಒಂದಾಗಲು, ಭೂರಿಧ್ವಜಿನೀಸಂಕ್ಷೋಭಂ = ಭಾರಿ ಸೈನ್ಯದ ಕೋಲಾಹಲದಿಂದಾಗಿ, ಆಕಂಪಮುಂ ಅಶುಭಮಹೀಕಂಪಮುಂ ತನ್ನೊಳ್ + ಒಂದಾಗೆ = ನಡುಕವೂ ಅಮಂಗಳಕರ ಭೂಕಂಪವೂ ಸೇರಲು, ಪೇೞ್ ಇಲ್ಲಿ ಜಗಕ್ಕೆ + ಏನ್ ಆದಪುದು + ಎನೆ = ಈಗ ಜಗತ್ತಿಗೆ ಏನಾಗಿಬಿಡುತ್ತದೋ ಎನ್ನುವ ಹಾಗೆ, ದೆಸೆ ಬರ್ಪಂತೆ ಬಂದು + ಒಡ್ಡಿ ನಿಂದಂ = ದಿಕ್ಕುಗಳು ಬರುವ ಹಾಗೆ ಭರತನು ಬಂದು ಎದುರು ನಿಂತ.

**ಗದ್ಯಾನುಸರಣ:** ದೂಳೂ ದಿಕ್ಕುಗಳ ಹೊಗೆಯೂ ಸೇರಿಕೊಂಡುವು; ಬಿರುಸಾದ ಗಾಳಿಯಿಂದ ಹಾರಿದ ಗಜಸೈನ್ಯದ ಗಂಡಸ್ಥಳಗಳ ಮೇಲಿನ ಕುಂಕುಮವೂ ಉಂಟಾದ ದಿಕ್ಕುಗಳ ಬೆಂಕಿಯೂ ಒಂದಾದುವು; ಭಾರಿ ಸೈನ್ಯದ ಕೋಲಾಹಲವು ನಡುಕವನ್ನೂ ಅಮಂಗಳಕರ ಭೂಕಂಪವನ್ನೂ ಉಂಟುಮಾಡಿತು; ಈಗ ಜಗತ್ತಿಗೆ ಏನಾಗಿಬಿಡುತ್ತದೋ ಎನ್ನುವ ಹಾಗೆ ದಿಕ್ಕುಗಳೆಲ್ಲ ಒಮ್ಮೆಗೇ ಬರುವಂತೆ ಭರತನು ಬಂದು ಎದುರು ನಿಂತ.

**ವ| ಅನ್ನೆಗಮಿತ್ತ ಬಾಹುಬಲಿಕುಮಾರನ ವಿಜಯಸೈನ್ಯದೊಳ್,**

**ಅರ್ಥ:** ಅನ್ನೆಗಂ + ಇತ್ತ ಬಾಹುಬಲಿಕುಮಾರನ ವಿಜಯಸೈನ್ಯದೊಳ್ = ಆಗ ಈ ಕಡೆ ಬಾಹುಬಲಿಯ ಸೈನ್ಯದಲ್ಲಿ,

**ಇರದೆಂಟುಂ ದಿಗ್ಗಜಂಗಳ್ ನೆರೆದಿದಿರಿದಿರೊಳ್ ತಾಗೆಯುಂ ಮಂದರಕ್ಷ್ಮಾ**
**ಧರದೊಳ್ ಕೆಯ್ಗೂಡಿ ಗೋತ್ರಾದ್ರಿಗಳೆ ಗಜಘಟಾರೂಪದಿಂ ತಾಗೆಯುಂ ಮ**
**ತ್ಕರಿ ತಾಂಗಲ್ ತಾನೆ ಸಾಲ್ಗುಂ ಮನುಜಗಜಘಟಾಬಂಧಮೇಬಂಡಮೆಂಬೊಂ**
**ದು ರಣೋತ್ಸಾಹಂ ಮನಕ್ಕುಬ್ಬರಿಸಿರೆ ಸಮರೋತ್ಸಾಹಸಂಪನ್ನನಾದಂ** ೯೫

**ಪದವಿಭಾಗ-ಅನ್ವಯ-ಅರ್ಥ:** ಇರದೆ + ಎಂಟುಂ ದಿಗ್ಗಜಂಗಳ್ ನೆರೆದು + ಇದಿರಿದಿರೊಳ್ ತಾಗೆಯುಂ = ಒಂದೇ ಬಾರಿಗೆ ಅಷ್ಟ ದಿಗ್ಗಜಗಳೂ ಸೇರಿ ಮೇಲೆ ಬಿದ್ದರೂ, ಮಂದರಕ್ಷ್ಮಾಧರದೊಳ್ ಕೆಯ್ಗೂಡಿ ಗೋತ್ರ + ಅದ್ರಿಗಳೆ ಗಜಘಟಾರೂಪದಿಂ ತಾಗೆಯುಂ = ಮಂದರಪರ್ವತದ ಜೊತೆಗೆ ಕುಲಪರ್ವತಗಳೆಲ್ಲ ಒಗ್ಗೂಡಿ ಆನೆಗಳ ರೂಪದಿಂದ ದಾಳಿ ನಡೆಸಿದರೂ, ತಾಂಗಲ್ ಮತ್ + ಕರಿ ತಾನೆ ಸಾಲ್ಗುಂ = ಎದುರಿಸಲು ನನ್ನ ಆನೆಯೊಂದೇ ಸಾಕು, ಮನುಜಗಜಘಟಾ ಬಂಧಂ + ಏಬಂಡಂ + ಎಂಬ + ಒಂದು ರಣೋತ್ಸಾಹಂ = ಅಂದ ಮೇಲೆ ಮಾನವರೂ ಸಾಮಾನ್ಯ ಆನೆಗಳ ಹಿಂಡೂ ಏನು ಮಹಾ ಎಂಬ ಯುದ್ಧೋತ್ಸಾಹವು, ಮನಕ್ಕೆ + ಉಬ್ಬರಿಸಿರೆ ಸಮರ + ಉತ್ಸಾಹಸಂಪನ್ನನಾದಂ = ಮನಸ್ಸಿನಲ್ಲಿ ಹುಟ್ಟಿ ಬಾಹುಬಲಿಯೂ ಯುದ್ಧೋತ್ಸಾಹದಿಂದ ಕೂಡಿದ.

**ಗದ್ಯಾನುಸರಣ:** ಒಂದೇ ಬಾರಿಗೆ ಅಷ್ಟ ದಿಗ್ಗಜಗಳೂ ಸೇರಿ ಮೇಲೆ ಬಿದ್ದರೂ, ಮಂದರಪರ್ವತದ ಜೊತೆಗೆ ಕುಲಪರ್ವತಗಳೆಲ್ಲ ಒಗ್ಗೂಡಿ ಆನೆಗಳ ರೂಪದಿಂದ ದಾಳಿ ನಡೆಸಿದರೂ ಎದುರಿಸಲು ನನ್ನ ಆನೆಯೊಂದೇ ಸಾಕು; ಅಂದ ಮೇಲೆ ಮಾನವರೂ ಸಾಮಾನ್ಯ ಆನೆಗಳ ಹಿಂಡೂ ಏನು ಮಹಾ ಎಂಬ ಯುದ್ಧೋತ್ಸಾಹವು ಮನಸ್ಸಿನಲ್ಲಿ ಮೂಡಿ ಬಾಹುಬಲಿಯೂ ಯುದ್ಧೋತ್ಸಾಹದಿಂದ ಕೂಡಿದ.

**ವ॥ ಅಂತುಭಯಬಲದ ಸೆಜೆಗೋಲ್ಗಳೊಂದೊಂದಂ ಮುಟ್ಟುವಿನಮತ್ತ ರಾಜಾಧಿರಾಜನು ಮಿತ್ತ ಯುವರಾಜನುಂ ನಿಂದಾಗಳ್, ಉಭಯಬಲಮನ್ತ್ರಿಮುಖ್ಯರ್ ಇವರಿರ್ಬರರಸುಗಳಪ್ಪೊಡೆ ಚರಮದೇಹಧಾರಿಗಳವರ ಯುದ್ಧಮೆಂಬುದತಿಕ್ರೂರಗ್ರಹ ಯುದ್ಧದಂತೆ ಸಕಳಪ್ರಜಾ ವಿನಾಶಕರಮಲ್ಲದೆ ಪೆಜಿತಲ್ತು ಸಮಸ್ತಜನಸಂಹರಣಕಾರಣಮಪ್ಪ ರಣದೊಳೇವಂದಪುದೆಂದು ಧರ್ಮಯುದ್ಧಮನೆ ತಮ್ಮೊಳ್ ಸಮಕಟ್ಟಿ ಮುನ್ನಂ ಭರತೇಶ್ವರಚಕ್ರವರ್ತಿಯಲ್ಲಿಗೆ ಬಂದು,**

**ಪದವಿಭಾಗ-ಅನ್ವಯ-ಅರ್ಥ:** ಅಂತು + ಉಭಯಬಲದ ಸೆಜೆಕೋಲ್ಗಳ್ + ಒಂದೊಂದಂ ಮುಟ್ಟುವಿನಂ + ಅತ್ತ ರಾಜಾಧಿರಾಜನುಂ + ಇತ್ತ ಯುವರಾಜನುಂ ನಿಂದಾಗಳ್ = ಹೀಗೆ ಎರಡೂ ಸೈನ್ಯಗಳು ಬಿಟ್ಟ ಬಾಣಗಳು ಒಂದು ಇನ್ನೊಂದಕ್ಕೆ ತಾಕುವಂತೆ ಒಂದೆಡೆ ರಾಜಾಧಿರಾಜನು ನಿಂತರೆ, ಮತ್ತೊಂದೆಡೆ ಯುವರಾಜನು ನಿಂತ. ಆಗಳ್ + ಉಭಯಬಲ = ಆಗ ಎರಡೂ ಕಡೆಗಳ, ಮನ್ತ್ರಿಮುಖ್ಯರ್ = ಪ್ರಧಾನಮಂತ್ರಿಗಳು, ಇವರ್ + ಇರ್ಬರ್ + ಅರಸುಗಳ್ + ಅಪ್ಪೊಡೆ ಚರಮದೇಹಧಾರಿಗಳ್ = ಈ ಇಬ್ಬರೂ ರಾಜರು ಕೊನೆಯ ಜನ್ಮದವರು, ಇವರ ಯುದ್ಧಂ + ಎಂಬುದು = ಇವರ ನಡುವಣ ಯುದ್ಧವು, ಅತಿಕ್ರೂರಗ್ರಹಯುದ್ಧದಂತೆ = ಮಹಾ ಕ್ರೂರವಾದ ಗ್ರಹಗಳ ನಡುವಣ ಹೋರಾಟದಂತೆ, ಸಕಳಪ್ರಜಾವಿನಾಶಕರಂ + ಅಲ್ಲದೆ ಪೆಜಿತು + ಅಲ್ತು = ಎಲ್ಲ ಜನರನ್ನೂ ಕೊಲ್ಲುವಂತಹುದಲ್ಲದೆ ಬೇರೆಯಲ್ಲ, ಸಮಸ್ತಜನಸಂಹರಣಕಾರಣಂ + ಅಪ್ಪ = ಜನರನ್ನೆಲ್ಲ ಕೊಲ್ಲುವಂತಹ, ರಣದೊಳ್ + ಏ + ಬಂದಪುದು + ಎಂದು = ಯುದ್ಧದಿಂದ ಆಗುವ ಪ್ರಯೋಜನವಾದರೂ ಏನು ಎಂದು, ಧರ್ಮಯುದ್ಧಮನೆ ತಮ್ಮೊಳ್ ಸಮಕಟ್ಟಿ =

ಧರ್ಮಯುದ್ಧವನ್ನೇ ತಮ್ಮತಮ್ಮಲ್ಲಿ ತೀರ್ಮಾನಿಸಿಕೊಂಡು, ಮುನ್ನಂ ಭರತೇಶ್ವರಚಕ್ರವರ್ತಿಯಲ್ಲಿಗೆ ಬಂದು = ಮೊದಲು ಭರತನ ಬಳಿಗೆ ಬಂದು.

**ಗದ್ಯಾನುಸರಣ:** ಹೀಗೆ ಎರಡೂ ಸೈನ್ಯಗಳು ಬಿಟ್ಟ ಬಾಣಗಳು ಒಂದು ಇನ್ನೊಂದಕ್ಕೆ ತಾಕುವಂತೆ ಒಂದೆಡೆ ರಾಜಾಧಿರಾಜನು ನಿಂತರೆ, ಮತ್ತೊಂದೆಡೆ ಯುವರಾಜನು ನಿಂತ. ಆಗ ಎರಡೂ ಕಡೆಗಳ ಪ್ರಧಾನಮಂತ್ರಿಗಳು ತಮ್ಮಲ್ಲಿಯೇ ಸಮಾಲೋಚಿಸಿದರು; ಭರತ-ಬಾಹುಬಲಿಗಳಿಗೆ ಇದೇ ಕೊನೆಯ ಜನ್ಮ; ಇವರ ನಡುವಣ ಯುದ್ಧವು ಮಹಾ ಕ್ರೂರವಾದ ಗ್ರಹಗಳ ನಡುವಣ ಹೋರಾಟದಂತೆ ಜನರನ್ನು ಕೊಲ್ಲುವಂತಹುದಲ್ಲದೆ ಬೇರೆಯಲ್ಲ; ಜನರನ್ನೆಲ್ಲ ಕೊಲ್ಲುವಂತಹ ಇಂತಹ ಯುದ್ಧದಿಂದ ಆಗುವ ಪ್ರಯೋಜನವಾದರೂ ಏನು ಎಂದು ಅವರಿಬ್ಬರ ನಡುವೆ ಧರ್ಮಯುದ್ಧವಷ್ಟೇ ನಡೆಯಬೇಕೆಂದು ತಮ್ಮತಮ್ಮಲ್ಲಿ ತೀರ್ಮಾನಿಸಿಕೊಂಡರು; ಆನಂತರ ಒಟ್ಟಿಗೇ ಅವರು ಹಿರಿಯನಾದ ಮೊದಲು ಭರತನ ಬಳಿಗೆ ಬಂದರು.

**ಜಯಮಂ ಕೈಕೊಳ್ವುದು ದೃ**
**ಷ್ಟಿಯುದ್ಧಜಳಯುದ್ಧಮಲ್ಲಯುದ್ಧದೊಳ್ ಜನ**
**ಕ್ಷಯಕಾರಣದೊಳೇಂ ಪಾಪಮು**
**ಮಯಶಮುಮಪ್ಪನಿತೆ ದೇವ ಕಡೆಗಣಿಪುದಿದಂ** ೯೬

**ಪದವಿಭಾಗ-ಅನ್ವಯ-ಅರ್ಥ:** ದೇವ ದೃಷ್ಟಿಯುದ್ಧಜಳಯುದ್ಧಮಲ್ಲಯುದ್ಧದೊಳ್ = ಮಹಾಸ್ವಾಮಿ, ನಿಮ್ಮಿಬ್ಬರ ನಡುವೆ ದೃಷ್ಟಿಯುದ್ಧ ಜಲಯುದ್ಧ ಮತ್ತು ಮಲ್ಲಯುದ್ಧಗಳ ಮೂಲಕ, ಜಯಮಂ ಕೈಕೊಳ್ವುದು = ಸೋಲುಗೆಲವುಗಳನ್ನು ನಿರ್ಧರಿಸಿಕೊಳ್ಳಿ, ಜನಕ್ಷಯಕಾರಣದೊಳೇಂ = ಜನರ ಅಳಿವಿಗೆ ಕಾರಣವಾದ, ಅನಿತೆ ಪಾಪಮುಂ + ಅಪಯಶಮುಂ + ಅಪ್ಪ + ಅನಿತೆ = ಹಾಗೆಯೇ ಪಾಪ ಮತ್ತು ಕೆಟ್ಟ ಹೆಸರಿಗೆ ಕಾರಣವಾದ, ಇದಂ ಕಡೆಗಣಿಪುದು = ಈ ಯುದ್ಧವನ್ನು ತಿರಸ್ಕರಿಸಿ.

**ಗದ್ಯಾನುಸರಣ:** 'ಮಹಾಸ್ವಾಮಿ, ನಿಮ್ಮಿಬ್ಬರ ನಡುವೆ ಸೋಲುಗೆಲವುಗಳನ್ನು ದೃಷ್ಟಿಯುದ್ಧ ಜಲಯುದ್ಧ ಮತ್ತು ಮಲ್ಲಯುದ್ಧಗಳ ಮೂಲಕ, ನಿರ್ಧರಿಸಿ ಕೊಳ್ಳಬಹುದಲ್ಲವೇ? ಯುದ್ಧ ಎಂಬುದು ಜನರ ಅಳಿವಿಗೆ ಕಾರಣವಾದುದು ಮಾತ್ರವಲ್ಲ, ಪಾಪಕರವಾದುದು ಮತ್ತು ತಮ್ಮಿಬ್ಬರಿಗೂ ಕೆಟ್ಟ ಹೆಸರು ತರುವಂತಹುದು; ದಯವಿಟ್ಟು ಇಂತಹ ಯುದ್ಧವನ್ನು ಕೈಬಿಡಿರಿ.'

**ವ॥ ಎನೆ ಭರತೇಶ್ವರಚಕ್ರವರ್ತಿಯಿಂತಾದೊಡೆಮಗೆ ಬಾಹುಬಲಿಯ ಸಮರಸಂಘಟ್ಟ ದೋಹಳಮಿದು ದರಿದ್ರಗೇಹಿನೀ ಗರ್ಭದೋಹಳದಂತಾದುದೆಂದು ಸಿಂಧುರಸ್ಕಂಧಪೀಠದೊಳ್ ಸುಖಾಸೀನನಾಗಿರ್ದಾಗಳ್ ಬಾಹುಬಲಿಕುಮಾರನಲ್ಲಿಗೆ ಮನ್ತ್ರಿಗಳ್ ಬಂದು ಪೂರ್ವೋಕ್ತಕ್ರಮದೊಳ್ ಧರ್ಮಯುದ್ಧವ್ಯತಿಕರಮಂ ಬಿನ್ನಪಂಗೆಯ್ದು**

**ಪದವಿಭಾಗ-ಅನ್ವಯ-ಅರ್ಥ:** ಎನೆ ಭರತೇಶ್ವರಚಕ್ರವರ್ತಿ = ಎಂದಾಗ ಭರತನು, ಇಂತು + ಆದೊಡೆ = ಹೀಗಾದರೆ, ಎಮಗೆ ಬಾಹುಬಲಿಯ ಇದು

ಸಮರಸಂಘಟ್ಟದೋಹಳಂ = ಬಾಹುಬಲಿಯೊಡನೆ ಯುದ್ಧಮಾಡಬೇಕೆಂಬ ಈ ನನ್ನ ಆಸೆಯು, ದರಿದ್ರಗೇಹಿನೀಗರ್ಭದೋಹಳದಂತೆ + ಆದುದು = ಬಡ ಕುಟುಂಬದ ಬಸಿರಿಯ ಬಯಕೆಯಂತೆ ನೆರವೇರದುದೇ ಸೈ, ಎಂದು(ಕೊಂಡು). ಸಿಂಧುರಸ್ಕಂಧಪೀಠದೊಳ್ = ಆನೆಯ ಹೆಗಲ ಮೇಲಿನ ಪೀಠದಲ್ಲಿ, ಸುಖ + ಆಸೀನನ್ + ಆಗಿರ್ದಾಗಳ್ = ಆರಾಮವಾಗಿ ಕುಳಿತುಕೊಳ್ಳಲು, ಮನ್ತ್ರಿಗಳ್ ಬಾಹುಬಲಿಕುಮಾರನಲ್ಲಿಗೆ ಬಂದು = ಇಬ್ಬರೂ ಮಂತ್ರಿಗಳು ಬಾಹುಬಲಿಯ ಬಳಿ ಬಂದು, ಪೂರ್ವ + ಉಕ್ತಕ್ರಮದೊಳೆ = ಹಿಂದೆ ಭರತನಿಗೆ ಹೇಳಿದ ರೀತಿಯಲ್ಲಿಯೇ, ಧರ್ಮ್ಮಯುದ್ಧವ್ಯತಿಕರಮಂ ಬಿನ್ನಪಂಗೆಯ್ವಾಗಳ್ = ಧರ್ಮಯುದ್ಧದ ವಿಷಯವನ್ನು ಪ್ರಸ್ತಾಪಿಸಿ,

**ಗದ್ಯಾನುಸರಣ:** ಎಂದಾಗ ಭರತನು, ಹೀಗಾದರೆ ಬಾಹುಬಲಿಯೊಡನೆ ಯುದ್ಧಮಾಡಬೇಕೆಂಬ ನನ್ನ ಆಸೆಯು ಬಡ ಕುಟುಂಬದ ಬಸಿರಿಯ ಬಯಕೆಯಂತೆ ನೆರವೇರದುದೇ ಸೈ ಎಂದುಕೊಂಡ; ಅಂಬಾರಿಯನ್ನು ಒರಗಿಕೊಂಡು ಆನೆಯ ಹೆಗಲ ಮೇಲಿನ ಪೀಠದಲ್ಲಿ ಆರಾಮವಾಗಿ ಕುಳಿತುಕೊಂಡ; ಮುಂದೆ ಇಬ್ಬರೂ ಮಂತ್ರಿಗಳು ಬಾಹುಬಲಿಯ ಬಳಿ ಬಂದರು; ಹಿಂದೆ ಭರತನಿಗೆ ಹೇಳಿದ ರೀತಿಯಲ್ಲಿಯೇ ಆತನ ಮುಂದೆಯೂ ಧರ್ಮಯುದ್ಧದ ವಿಷಯವನ್ನು ಪ್ರಸ್ತಾಪಿಸಿದರು.

**ಬಿಸುಡುವುದಸದಾಗ್ರಹಮಂ**
**ಪ್ರಸನ್ನಗಂಭೀರಚಿತ್ತದಿಂದಿದನವಧಾ**
**ರಿಸುವುದು ಯುವರಾಜ ಮನಂ**
**ಬಸದೊರ್ಮೆಗೆ ಸಲಿಪುದೆಮ್ಮ ಮುದುಗಣ್ತನಮಂ** ೯೭

**ಪದವಿಭಾಗ-ಅನ್ವಯ-ಅರ್ಥ:** ಯುವರಾಜ ಅಸತ್ + ಆಗ್ರಹಮಂ ಬಿಸುಡುವುದು = ಯುವರಾಜರೇ ನಿಮ್ಮ ಕೆಟ್ಟ ಹಟವನ್ನು ಬಿಡಿರಿ, ಇದನ್ = ನಮ್ಮ ಸಲಹೆಯನ್ನು ಕುರಿತಂತೆ, ಪ್ರಸನ್ನಗಂಭೀರಚಿತ್ತದಿಂದೆ = ಪ್ರಶಾಂತವಾದ ಮನಸ್ಥಿತಿಯಲ್ಲಿ, ಮನಂಬಸದೆ ಅವಧಾರಿಸುವುದು = ಮನಸ್ಸಿನ ಸ್ತಿಮಿತತೆಯಲ್ಲಿ ಆಲೋಚಿಸಿರಿ, ಒರ್ಮೆಗೆ ಎಮ್ಮ ಮುದುಗಣ್ತನಮಂ ಸಲಿಪುದು = ಇದೊಂದು ಸಲ ನಮ್ಮ ಮುದಿ ಮಾತುಗಳನ್ನು ನಡೆಸಿಕೊಡಿರಿ.

**ಗದ್ಯಾನುಸರಣ:** 'ಯುವರಾಜರೇ ನಿಮ್ಮ ಕೆಟ್ಟ ಹಟವನ್ನು ಬಿಡಿ, ನಮ್ಮ ಸಲಹೆಯನ್ನು ಕುರಿತಂತೆ ಪ್ರಶಾಂತವಾದ ಮನಸ್ಥಿತಿಯಲ್ಲಿ ಆಲೋಚಿಸಿರಿ, ಇದೊಂದು ಸಲ ನಮ್ಮ ಮುದಿ ಮಾತುಗಳನ್ನು ನಡೆಸಿಕೊಡಿರಿ.'

[**ವಿಶೇಷ ವಿಚಾರ:** ಮನಂಬಸು (ಮನಂ + ಪಸು; ಪಸು ಪಚ್ಚು ಎಂದರೆ ಮನಸ್ಸು ಎರಡು ಭಾಗವಾಗು ಎಂದರ್ಥ; ಹಾಗಾಗಿ ಮನಂಬಸದೆ ಎಂದರೆ ಒಂದೇ ಮನಸ್ಸಿನಿಂದ ಎಂದಾಗುತ್ತದೆ; ಆದರೆ ಎಲ್. ಬಸವರಾಜು ಅವರು ತಮ್ಮ ಆವೃತ್ತಿಯ ಶಬ್ದಕೋಶದಲ್ಲಿ 'ಮನಂಬಸೆದು' ಎಂಬ ರೂಪವಿತ್ತು, 'ಮನೋನಿಗ್ರಹ ಮಾಡಿ' ಎಂಬರ್ಥ ನೀಡುತ್ತಾರೆ.]

ವ॥ ಎಂದು ನುಡಿದೊಡಂಬಡಿಸಿ ಧರ್ಮಯುದ್ಧಮನುಭಯಬಲಂಗಳೊಳಮಾನಂದ ಭೇರಿಯಂ ಪೊಯ್ಸಿ ಘೋಷಿಸಲ್ವೇಳ್ದು ಬಾಹುಬಲಿಕುಮಾರನ ಭರತೇಶ್ವರನ ಪಕ್ಷದ ರಾಜಲೋಕಮನೆರಡುಂ ದೆಸೆಯೊಳಂ ಮಧ್ಯಸ್ಥರಾಗಿ ಮಿಡುಕದೆ ನೋಡುತ್ತಿರ್ಪಂತು ನಿಯಮಿಸಿದಾಗಳಿರ್ಬರುಂ ನೀಲನಿಷಧಗಿರಿಗಳೊಂದೊಂದಜಿಸೊಳ್ ಬಂದು ಪೊಣರ್ದು ನಿಲ್ವಂತೆ ನಿಂದೊರ್ವರೊರ್ವರೆಮೆಯಿಕ್ಕದೆ ನೋಡುವಲ್ಲಿ,

**ಪದವಿಭಾಗ–ಅನ್ವಯ–ಅರ್ಥ:** ಎಂದು ನುಡಿದು ಧರ್ಮಯುದ್ಧಮನ್ ಒಡಂಬಡಿಸಿ = ಎಂದು ಹೇಳಿ ಧರ್ಮಯುದ್ಧಕ್ಕೆ ಅವನನ್ನು ಒಪ್ಪಿಸಿ, ಉಭಯಬಲಂಗಳೊಳಂ + ಆನಂದಭೇರಿಯಂ ಪೊಯ್ಸಿ = ಎರಡೂ ಸೈನ್ಯಗಳಲ್ಲಿ ಆನಂದಭೇರಿಯನ್ನು ಹೊಡೆಸಿ, ಘೋಷಿಸಲ್ + ಪೇಳ್ದು = ಈ ವಿಷಯವನ್ನು ಘೋಷಿಸಲು ಹೇಳಿ, ಬಾಹುಬಲಿಕುಮಾರನ ಭರತೇಶ್ವರನ ಪಕ್ಷದ ರಾಜಲೋಕಮನ್ = ಬಾಹುಬಲಿ ಮತ್ತು ಭರತ ಇವರಿಬ್ಬರ ಕಡೆಗಳಲ್ಲಿನ ರಾಜಸಮೂಹವನ್ನು, ಎರಡುಂ ದೆಸೆಯೊಳಂ ಮಧ್ಯಸ್ಥರಾಗಿ = ಎರಡೂ ಕಡೆಗಳಲ್ಲಿ ಮಧ್ಯಸ್ಥಿಕೆದಾರರಾಗಿ, ಮಿಡುಕದೆ ನೋಡುತ್ತಿರ್ಪಂತು ನಿಯಮಿಸಿದಾಗಳ್ = ರೆಪ್ಪೆ ಮಿಟುಕಿಸದೆ ನೋಡುವಂತೆ ನೇಮಿಸಿದಾಗ, ನೀಲನಿಷಧಗಿರಿಗಳ್ + ಒಂದೊಂದಜಿಸೊಳ್ = ನೀಲಪರ್ವತ ಮತ್ತು ನಿಷಧಪರ್ವತಗಳು ಒಂದರೊಡನೊಂದು, ಬಂದು ಪೊಣರ್ದು ನಿಲ್ವಂತೆ = ಬಂದು ಪೈಪೋಟಿಯಿಂದ ನಿಲ್ಲುವ ಹಾಗೆ, ಇರ್ಬರುಂ ನಿಂದು = ಬಾಹುಬಲಿ–ಭರತರು ನಿಂತು, ಒರ್ವರ್ + ಒರ್ವರ್ + ಎಮೆಯಿಕ್ಕದೆ ನೋಡುವಲ್ಲಿ = ಒಬ್ಬರನ್ನೊಬ್ಬರು ರೆಪ್ಪೆ ಬಡಿಯದೆ ನೋಡುವಾಗ,

**ಗದ್ಯಾನುಸರಣ:** ಎಂದು ಹೇಳಿ ಧರ್ಮಯುದ್ಧಕ್ಕೆ ಅವನನ್ನು ಒಪ್ಪಿಸಿದರು; ಅನಂತರ ಎರಡೂ ಸೈನ್ಯಗಳಲ್ಲಿ ಆನಂದಭೇರಿಯನ್ನು ಹೊಡೆಸಿ, ಈ ವಿಷಯವನ್ನು ಘೋಷಿಸಲು ಹೇಳಿದರು; ಅಲ್ಲದೆ ಬಾಹುಬಲಿ ಮತ್ತು ಭರತ ಇವರಿಬ್ಬರ ಕಡೆಗಳಲ್ಲಿನ ರಾಜಸಮೂಹವನ್ನು ಧರ್ಮಯುದ್ಧದ ಮಧ್ಯಸ್ಥಿಕೆದಾರರಾಗಿ ಏಕಾಗ್ರತೆಯಿಂದ ನೋಡುವಂತೆ ನೇಮಿಸಿದರು; ಸರಿ, ಧರ್ಮಯುದ್ಧದ ಮೊದಲ ಭಾಗ – ದೃಷ್ಟಿಯುದ್ಧ – ಆರಂಭವಾಯಿತು; ನೀಲಪರ್ವತ ಮತ್ತು ನಿಷಧಪರ್ವತಗಳು ಪೈಪೋಟಿಯಿಂದ ನಿಲ್ಲುವ ಹಾಗೆ ಇಬ್ಬರೂ ಒಬ್ಬರನ್ನೊಬ್ಬರು ರೆಪ್ಪೆ ಬಡಿಯದೆ ನೋಡತೊಡಗಿದರು.

**ಲಲಿತಮುಖಸರಸಿಜಂ ನಿ**
**ಶ್ಚಳಪಕ್ಷ್ಮಂ ಸ್ತಿಮಿತತಾರಕಂ ಭುಜಬಲಿ ಕ**
**ಣ್ಣೊಳೆ ತವೆ ಪೀರ್ವವೊಲೆ ನಿ**
**ಶ್ಚಳತನು ನಡೆ ನೋಡೆ ಭರತರಾಜಂ ಸೋಲ್ತಂ** ೯೮

**ಪದವಿಭಾಗ–ಅನ್ವಯ–ಅರ್ಥ:** ಲಲಿತಮುಖಸರಸಿಜಂ = ಚೆಲುವಾದ ಮೊಗದಾವರೆಯಿಂದ ಕೂಡಿದ, ಭುಜಬಲಿ, ನಿಶ್ಚಳಪಕ್ಷ್ಮಂ ಸ್ತಿಮಿತತಾರಕಂ = ರೆಪ್ಪೆಯಾಡಿಸದೆ ಸ್ಥಿರವಾದ ನಕ್ಷತ್ರದಂತೆ, ಕಣ್ಣೊಳೆ ತವೆ ಪೀರ್ವವೊಲೆ = ಕಣ್ಣಿನಲ್ಲಿಯೇ ಹೀರಿಬಿಡುವ ಹಾಗೆ, ನಿಶ್ಚಳತನು ನಡೆ ನೋಡೆ = ಸ್ಥಿರದೇಹಿಯಾಗಿ ನೋಡಲು, ಭರತರಾಜಂ ಸೋಲ್ತಂ = ಭರತನು ಸೋತುಹೋದ.

**ಗದ್ಯಾನುಸರಣ:** ಚೆಲುವಾದ ಮೊಗದಾವರೆಯಿಂದ ಕೂಡಿದ ಭುಜಬಲಿಯು ರೆಪ್ಪೆಯಾಡಿಸದೆ ಸ್ಥಿರವಾದ ನಕ್ಷತ್ರದಂತಹ ಕಣ್ಣಿನಿಂದಲೇ ಹೀರಿಬಿಡುವ ಹಾಗೆ ಸ್ಥಿರದೇಹಿಯಾಗಿ ನೋಡುತ್ತಿದ್ದ; ಇದರಿಂದಾಗಿ ಭರತನು ಸೋತುಹೋದ.

**ಕರಿಯೂಥಪತಿಗಳೆರಡುಂ**
**ಸರಸೀಜಳಮಂ ವಿಳಾಸದಿಂ ಪುಗುವವೊಲಾ**
**ದರದಿಂದೆ ಪೊಕ್ಕು ತುಳ್ಕಿದ**
**ರರವಿಂದರಜಃಪಿಂಜಿತಾಚ್ಛೋದಕಮಂ** ೯೯

**ಪದವಿಭಾಗ–ಅನ್ವಯ–ಅರ್ಥ:** ಎರಡುಂ ಕರಿಯೂಥಪತಿಗಳ್ = ಎರಡು ಸಲಗಗಳು. ವಿಳಾಸದಿಂ ಸರಸೀಜಳಮಂ ಪುಗುವವೊಲ್ = ವಿಲಾಸದಿಂದ ಕೊಳವನ್ನು ಹೊಗುವ ಹಾಗೆ, ಆದರದಿಂದೆ ಪೊಕ್ಕು = ಗತ್ತಿನಿಂದ ಹೊಕ್ಕು, ಅರವಿಂದರಜಃಪಿಂಜಿತ = ತಾವರೆಗಳ ಪರಾಗದಿಂದ ಹೊಂಬಣ್ಣವಾದ, ಅಚ್ಛೋದಕಮಂ ತುಳ್ಕಿದರ್ = ತಿಳಿನೀರನ್ನು (ಒಬ್ಬರ ಮೇಲೊಬ್ಬರು) ಉಗ್ಗಿದರು.

**ಗದ್ಯಾನುಸರಣ:** ಎರಡು ಸಲಗಗಳು ವಿಲಾಸದಿಂದ ಕೊಳವನ್ನು ಹೊಗುವ ಹಾಗೆ ಅವರಿಬ್ಬರೂ ಪೊಕ್ಕು ಗತ್ತಿನಿಂದ ಹೊಕ್ಕು, ತಾವರೆಗಳ ಪರಾಗದಿಂದ ಹೊಂಬಣ್ಣವಾದ ತಿಳಿನೀರನ್ನು ಒಬ್ಬರ ಮೇಲೊಬ್ಬರು ಉಗ್ಗಿದರು.

**ಭರತನ ಮುಖದೊಳ್ ಪರ್ವಿದ**
**ಖರಕೋಪಾನಳನನೆಯ್ದೆ ನಂದಿಸುವವೊಲಾ**
**ಮರಕತವರ್ಣಂ ಕರಿಕರ**
**ಪರಿಘದಿನೊಡನೊಡನೆ ತುಳ್ಕಿದಂ ತಿಳಿನೀರಂ** ೧೦೦

**ಪದವಿಭಾಗ–ಅನ್ವಯ–ಅರ್ಥ:** ಭರತನ ಮುಖದೊಳ್ ಪರ್ವಿದ = ಭರತನ ಮುಖದಲ್ಲಿ ತುಂಬಿಕೊಂಡಿದ್ದ, ಖರಕೋಪ + ಅನಳನನ್ = ಉರಿಯುವ ಕೋಪವೆಂಬ ಬೆಂಕಿಯನ್ನು, ಎಯ್ದೆ ನಂದಿಸುವವೊಲ್ = ಪೂರ್ತಿ ಆರಿಸುವ ರೀತಿಯಲ್ಲಿ, ಮರಕತವರ್ಣಂ = ಪಚ್ಚೆಯ (ನಸುಗಪ್ಪು) ಬಣ್ಣದ ಬಾಹುಬಲಿಯು, ಕರಿಕರಪರಿಘದಿನ್ = ಸೊಂಡಿಲಿನಂತಹ ತನ್ನ ಬೊಗಸೆಯೆಂಬ ಪರಿಘದಿಂದ, ಒಡನೊಡನೆ ತಿಳಿನೀರಂ ತುಳ್ಕಿದಂ = ಬೇಗ ಬೇಗ ತಿಳಿನೀರನ್ನು ಉಗ್ಗಿದ.

**ಗದ್ಯಾನುಸರಣ:** ಭರತನ ಮುಖದಲ್ಲಿ ಅವಮಾನದಿಂದಾದ ಉರಿಯುವ ಕೋಪ ತುಂಬಿತ್ತು; ಅದನ್ನು ಪೂರ್ತಿ ಆರಿಸುವ ರೀತಿಯಲ್ಲಿ ನಸುಗಪ್ಪು ಬಣ್ಣದ ಬಾಹುಬಲಿಯು ಸೊಂಡಿಲಿನಂತಹ ತನ್ನ ಬೊಗಸೆಯೆಂಬ ಪರಿಘಾಯುಧದಿಂದ ಭರತನ ಮೇಲೆ ತಿಳಿನೀರನ್ನು ಒಂದೇ ಸಮನೆ ಉಗ್ಗಿದ.

**ವ॥ ಭರತೇಶ್ವರಂ ಪಂಚಶತಶರಾಸನೋತ್ಸೇಧನಪ್ಪುದಱಿಂ ಪಂಚವಿಂಶತ್ಯುತ್ತರ ಪಂಚಶತಶರಾಸನೋತ್ಸೇಧನಪ್ಪ ಬಾಹುಬಲಿಕುಮಾರನ ಮೇಗೆ,**

**ಅರ್ಥ:** ಭರತೇಶ್ವರಂ ಪಂಚಶತಶರಾಸನ + ಉತ್ಸೇಧನಪ್ಪುದಱಿಂ ಪಂಚವಿಂಶತಿ + ಉತ್ತರಪಂಚಶತಶರಾಸನ + ಉತ್ಸೇಧನಪ್ಪ ಬಾಹುಬಲಿಕುಮಾರನ ಮೇಗೆ =

ಭರತನು ಐನೂರು ಬಿಲ್ಲುಗಳಷ್ಟು ಎತ್ತರದವನಾದ್ದರಿಂದ ಐನೂರ ಇಪ್ಪತ್ತೈದು ಬಿಲ್ಲುಗಳಷ್ಟು ಎತ್ತರವಿದ್ದ ಬಾಹುಬಲಿಯ ಮೇಲೆ.

**ಭರದಿಂದಂ ತುಳ್ಕಿದ ನೀ**
**ರುರದೊಳ್ ಹಾರಾಂಶುರುಚಿಯನಿರ್ಕುಟಿಗೊಳೆ ದು**
**ರ್ಧರಜಳಯುದ್ಧಮುಮಾದಮೆ**
**ಪರಿಭವಮಂ ಚಕ್ರವರ್ತಿಗಿತ್ತತ್ತಾಗಳ್** ೧೦೧

**ಪದವಿಭಾಗ–ಅನ್ವಯ–ಅರ್ಥ:** ಭರದಿಂದಂ ತುಳ್ಕಿದ ನೀರ್ = ಜೋರಾಗಿ ಉಗ್ಗಿದ ನೀರು, ಉರದೊಳ್ = ಬಾಹುಬಲಿಯ ಎದೆಯ ಮೇಲೆ ಬಿದ್ದು, ಹಾರ + ಅಂಶುರುಚಿಯನ್ + ಇರ್ಕುಟಿಗೊಳೆ = ಮುತ್ತಿನ ಹಾರದ ಕಿರಣಗಳಂತೆ ಸಾಲುಗಟ್ಟಲು, ದುರ್ಧರಜಳಯುದ್ಧಮುಂ = ಎದುರಿಸಲಸಾಧ್ಯವಾದ ಜಲಯುದ್ಧವೂ, ಆಗಳ್ ಚಕ್ರವರ್ತಿಗೆ ಆದಮೆ ಪರಿಭವಮಂ ಇತ್ತತ್ತು = ಬಹುಬೇಗ ಭರತನಿಗೆ ಪೂರ್ಣ ಸೋಲನ್ನೇ ತಂದಿತು.

**ಗದ್ಯಾನುಸರಣ:** ಭರತನು ಜೋರಾಗಿ ಉಗ್ಗಿದ ನೀರು ಬಾಹುಬಲಿಯ ಎದೆಯ ಮೇಲೆ ಮುತ್ತಿನ ಹಾರದ ಕಿರಣಗಳಂತೆ ಸಾಲುಗಟ್ಟಿದುವು, ಅಷ್ಟೇ ಆದ್ದರಿಂದ ಜಲಯುದ್ಧವೂ ಭರತನಿಗೆ ಎದುರಿಸಲಸಾಧ್ಯವಾಯಿತು; ಇದರಿಂದಾಗಿ ಅವನು ಬಹುಬೇಗ ಪೂರ್ತಿ ಸೋತ.

**ವ। ಅಂತು ಬಾಹುಬಲಿಯ ಸುರಕರಿಕರಾನುಕಾರಿಯಪ್ಪ ಬಾಹುಗಳಿಂದಂ ತುಳ್ಕಿದ ನೀರ್ಗೆ ಮೊಗಮನೊಡ್ಡಿ ಮೊಗಂ ಸೋಲ್ವುದುಂ ಕುಮಾರಂಗೆ ಘೋಷಿಸುವ ಜಯಘೋಷಣೆಯಂ ಕೇಳಲಾಜಿದೆ ಮಣಿಮಯಕಿರೀಟೋದಗ್ರಸ್ಫುರಿತಸಂಚೂಳಿಕಾ ಕನಕಾಚಳಮನೆ ಪೋಲ್ತು ಮಲ್ಲಯುದ್ಧದೊಳ್ ಬಂದು ಪೊಣರ್ದು,**

**ಪದವಿಭಾಗ–ಅನ್ವಯ–ಅರ್ಥ:** ಅಂತು ಬಾಹುಬಲಿಯ ಸುರಕರಿಕರ + ಅನುಕಾರಿ + ಅಪ್ಪ = ಬಾಹುಬಲಿಯು ಆನೆಯ ಸೊಂಡಿಲಿನಂತಹ, ಬಾಹುಗಳಿಂದಂ ತುಳ್ಕಿದ ನೀರ್ಗೆ = ತನ್ನ ತೋಳುಗಳಿಂದ ಉಗ್ಗಿದ ನೀರಿನ ರಭಸಕ್ಕೆ, ಮೊಗಮನ್ + ಒಡ್ಡಿ ಮೊಗಂ ಸೋಲ್ವುದುಂ = ಮುಖ ಎದುರಾಗಿ ಮುಖವು ದಣಿಯಲು, ಕುಮಾರಂಗೆ ಘೋಷಿಸುವ ಜಯಘೋಷಣೆಯಂ ಕೇಳಲಾಜಿದೆ = ಇದರಲ್ಲೂ ಗೆದ್ದ ಬಾಹುಬಲಿಯ ಪರವಾದ ಜಯಕಾರವನ್ನು ಸಹಿಸಿಕೊಳ್ಳಲಾರದೆ, ಮಣಿಮಯಕಿರೀಟ = ರತ್ನಖಚಿತಕಿರೀಟದಿಂದ, ಉದಗ್ರಸ್ಫುರಿತಸಂಚೂಳಿಕಾ = ಕಾಂತಿಯು ಉಕ್ಕುವ ಶಿಖರವಿರುವ, ಕನಕ + ಅಚಳಮನೆ ಪೋಲ್ತು = ಚಿನ್ನದ ಬೆಟ್ಟದಂತಿದ್ದ ಭರತನು, ಮಲ್ಲಯುದ್ಧದೊಳ್ ಬಂದು ಪೊಣರ್ದು = ಮಲ್ಲಯುದ್ಧಕ್ಕೆಂದು ಬಂದು ಬಾಹುಬಲಿಗೆ ಎದುರಾಗಿ,

**ಗದ್ಯಾನುಸರಣ:** ಬಾಹುಬಲಿಯು ಆನೆಯ ಸೊಂಡಿಲಿನಂತಹ ತನ್ನ ತೋಳುಗಳಿಂದ ನೀರನ್ನು ಉಗ್ಗತೊಡಗಿದ; ಅದರ ರಭಸಕ್ಕೆ ಎದುರಾಗಿ ಭರತನ ಮುಖವು ದಣಿಯಿತು; ಇದರಲ್ಲೂ ಗೆದ್ದ ಬಾಹುಬಲಿಯ ಪರವಾದ ಜಯಕಾರವು

ಎಲ್ಲೆಡೆ ಹಬ್ಬಿತು; ಅದನ್ನು ಸಹಿಸಿಕೊಳ್ಳಲಾರದೆ ರತ್ನಖಚಿತಕಿರೀಟದಿಂದ ಉಕ್ಕುವ ಕಾಂತಿಯ ಶಿಖರವಿರುವ ಚಿನ್ನದ ಬೆಟ್ಟದಂತಿದ್ದ ಭರತನು ಮಲ್ಲಯುದ್ಧಕ್ಕೆಂದು ಬಂದು ಬಾಹುಬಲಿಗೆ ಎದುರಾದ.

**ಮರಕತಮಣಿಶೈಲಮನನು**
**ಕರಿಸುವ ಭುಜಬಲಿಯೊಳಿರದೆ ಪೊಣರ್ವುದುಮಾಗಳ್**
**ಸುರವಿದ್ಯಾಧರನರಬಲ**
**ಮೆರಡುಂ ದೆಸೆಯೊಳ್ ತೆರಳ್ದು ನೋಡಿತ್ತೆತ್ತಂ** ೧೦೨

**ಪದವಿಭಾಗ–ಅನ್ವಯ–ಅರ್ಥ:** ಮರಕತಮಣಿಶೈಲಮನ್ + ಅನುಕರಿಸುವ = ಪಚ್ಚೆಯ ಪರ್ವತದಂತಿದ್ದ, ಭುಜಬಲಿಯೊಳ್ = ಬಾಹುಬಲಿಯೊಡನೆ, ಇರದೆ ಪೊಣರ್ವುದುಂ = ಸೆಣಸಲು ತೊಡಗಿದಾಗ, ಆಗಳ್ ಸುರವಿದ್ಯಾಧರನರಬಲಂ = ದೇವತೆಗಳ ಮತ್ತು ವಿದ್ಯಾಧರ ಸೇನೆಗಳು, ಎರಡುಂ ದೆಸೆಯೊಳ್ ತೆರಳ್ದು ಎತ್ತಂ ನೋಡಿತ್ತು = ಎರಡೂ ಕಡೆಗಳಲ್ಲಿ ಹೋಗಿ ನಿಂತುಕೊಂಡು ನೋಡಿದುವು.

**ಗದ್ಯಾನುಸರಣ:** ಚಿನ್ನದ ಬೆಟ್ಟದಂತಿದ್ದ ಭರತನು ಪಚ್ಚೆಯ ಪರ್ವತದಂತಿದ್ದ ಬಾಹುಬಲಿಯೊಡನೆ ಸೆಣಸಲು ಸಿದ್ಧನಾದ; ಆಗ ದೇವತೆಗಳ ಮತ್ತು ವಿದ್ಯಾಧರ ಸೇನೆಗಳು ಅವರ ಅಪೂರ್ವ ಸೆಣಸಾಟವನ್ನು ನೋಡಲು ಎರಡೂ ಕಡೆಗಳಲ್ಲಿ ನೆರೆದುವು.

**ಕನಕಾಚಳಮಂ ಪೊತ್ತುದು**
**ಘನಮರಕತಶೈಲಮೆನಿಸಿ ಭುಜಬಲಿ ಸಕಳಾ**
**ವನಿತಳವಲ್ಲಭನಂ ಭೋಂ**
**ಕನೆತ್ತಿ ಪೊತ್ತಿರ್ದನಿಕ್ಕಲೊಲ್ಲದೆ ನೆಲದೊಳ್** ೧೦೩

**ಪದವಿಭಾಗ–ಅನ್ವಯ–ಅರ್ಥ:** ಘನಮರಕತಶೈಲಂ ಕನಕ + ಅಚಳಮಂ ಪೊತ್ತುದು ಎನಿಸಿ = ದೊಡ್ಡ ಪಚ್ಚೆಯ ಬೆಟ್ಟವು ಚಿನ್ನದ ಬೆಟ್ಟವನ್ನು ಎತ್ತಿದೆಯೋ ಎನ್ನುವ ಹಾಗೆ, ಭೋಂಕನೆ ಭುಜಬಲಿ ಸಕಳ + ಅವನಿತಳವಲ್ಲಭನಂ ಎತ್ತಿ = ಒಮ್ಮೆಗೇ ಬಾಹುಬಲಿಯು ಜಗದೊಡೆಯನಾದ ಭರತನನ್ನು ಎತ್ತಿಕೊಂಡು, ನೆಲದೊಳ್ ಇಕ್ಕಲೊಲ್ಲದೆ ಪೊತ್ತಿರ್ದನ್ = ನೆಲದ ಮೇಲೆ ಕುಕ್ಕದೆ ಹಾಗೆಯೇ ಹೊತ್ತು ನಿಂತ.

**ಗದ್ಯಾನುಸರಣ:** ದೊಡ್ಡ ಪಚ್ಚೆಯ ಬೆಟ್ಟವು ಚಿನ್ನದ ಬೆಟ್ಟವನ್ನು ಎತ್ತಿದೆಯೋ ಎನ್ನುವ ಹಾಗೆ ಒಮ್ಮೆಗೇ ಬಾಹುಬಲಿಯು ಭರತನನ್ನು ಮೇಲೆತ್ತಿದ; ಆದರೆ ಅವನನ್ನು ನೆಲದ ಮೇಲೆ ಕುಕ್ಕದೆ ಹಾಗೆಯೇ ಹೊತ್ತು ನಿಂತ.

**ಭರತಾವನೀಶ್ವರಂ ಗುರು**
**ಪಿರಿಯಣ್ಣಂ ಚಕ್ರವರ್ತಿ ಮಹಿಮಾಕರನೀ**
**ದೊರೆಯನುಮಳವಟಿಯೆ ವಸುಂ**
**ಧರೆಯೊಳ್ ತಂದಿಕ್ಕಿ ಭಂಗಮಂ ಮಾಡುವೆನೇ** ೧೦೪

**ಪದವಿಭಾಗ-ಅನ್ವಯ-ಅರ್ಥ:** ಭರತ + ಅವನೀಶ್ವರಂ = ಭರತ ಮಹಾರಾಜನು. ಗುರು ಪಿರಿಯಣ್ಣಂ ಚಕ್ರವರ್ತಿ ಮಹಿಮಾಕರನ್ = ಹಿರಿಯ ಅಣ್ಣ ಚಕ್ರವರ್ತಿ ಮತ್ತು ಮಹಿಮಾವಂತ, ಈ ದೊರೆಯನುಂ = ಇಂತಹವನ~. ಅಳವು + ಅಟಿಯೆ = ಶಕ್ತಿಗುಂದಿದನೆಂದು. ವಸುಂಧರೆಯೊಳ್ ತಂದು + ಇಕ್ಕಿ = ನೆಲದ ಮೇಲೆ ಎತ್ತಿ ಬಿಸಾಕಿ. ಭಂಗಮಂ ಮಾಡುವೆನೇ = ಅವಮಾನವನ್ನುಂಟುಮಾಡಬೇಕೇ.

**ಗದ್ಯಾನುಸರಣ:** 'ಭರತ ಮಹಾರಾಜನು ಹಿರಿಯ ಅಣ್ಣ ಚಕ್ರವರ್ತಿ ಮತ್ತು ಮಹಿಮಾವಂತ; ಇಂತಹವನನ್ನು ಶಕ್ತಿಗುಂದಿದನೆಂಬ ಕಾರಣದಿಂದ ನೆಲದ ಮೇಲೆ ಎತ್ತಿ ಬಿಸಾಕಿ ಅವಮಾನಿಸುವುದೇ!'

**ಎಂದೊಯ್ಯನಿಟಿಪೆ ನೆಲದೊಳ್**
**ದುಂದುಭಿರವಮೊಡನೆ ವಿಜಯಘೋಷಣೆ ನೆಗಟ್ದು**
**ತ್ತಂದು ಭುಜಬಲಿಯ ಬಲದೊಳ್**
**ಕರಂ ಪಿರಿದುಮಾಯ್ತು ಭರತನ ಬಲದೊಳ್** ೧೦೫

**ಪದವಿಭಾಗ-ಅನ್ವಯ-ಅರ್ಥ:** ಎಂದು + ಒಯ್ಯನೆ ನೆಲದೊಳ್ ಇಟಿಪೆ = ಎಂದು ಯೋಚಿಸಿ ನೆಲದ ಮೇಲೆ ನಿಧಾನವಾಗಿ ಇಳಿಸಲು, ಅಂದು ಒಡನೆ ಭುಜಬಲಿಯ ಬಲದೊಳ್ = ತಕ್ಷಣವೇ ಆಗ ಬಾಹುಬಲಿಯ ಸೈನ್ಯದಲ್ಲಿ, ದುಂದುಭಿರವಂ ವಿಜಯಘೋಷಣೆ ನೆಗಟ್ದಿತ್ತು = ದುಂದುಭಿಯ ಶಬ್ದ ಮತ್ತು ಜಯಕಾರಗಳು ಮೊಳಗಿದುವು. ಭರತನ ಬಲದೊಳ್ ಕರಂ ಪಿರಿದುಂ + ಆಯ್ತು = ಭರತನ ಸೈನ್ಯದಲ್ಲಿ ಮತ್ತಷ್ಟು ಜೋರಾಗಿ ಮೊರೆದುವು.

**ಗದ್ಯಾನುಸರಣ:** ಎಂದು ಯೋಚಿಸಿ ನೆಲದ ಮೇಲೆ ನಿಧಾನವಾಗಿ ಇಳಿಸಿದ; ತಕ್ಷಣವೇ ಆಗ ಬಾಹುಬಲಿಯ ಸೈನ್ಯದಲ್ಲಿ ದುಂದುಭಿಯ ಶಬ್ದ ಮತ್ತು ಜಯಕಾರಗಳು ಮೊಳಗಿದುವು; ಅವು ಭರತನ ಸೈನ್ಯದಲ್ಲಿ ಮತ್ತಷ್ಟು ಜೋರಾಗಿ ಮೊರೆದುವು.

**ನೆರೆವೆರಡುಂ ಬಲದರಸುಗ**
**ಳಿರೆ ಪರಿಭವಮಂತು ತನಗೆ ಬರೆ ಮುಳಿಸಿನ ದ**
**ಳ್ಳುರಿಗಳನುಗುಟುತ್ತುಂ ಚ**
**ಕ್ರರತ್ನಮಂ ಬಗೆದು ಬೆಸಸಿದಂ ಭರತೇಶಂ** ೧೦೬

**ಪದವಿಭಾಗ-ಅನ್ವಯ-ಅರ್ಥ:** ಎರಡುಂ ಬಲದ + ಅರಸುಗಳ್ ನೆರೆದ ಇರೆ = ಎರಡೂ ಕಡೆಯ ಸೈನ್ಯಗಳು ಸೇರಿರಲು, ಅಂತು ತನಗೆ ಪರಿಭವಂ ಬರೆ = ತನಗೆ ಆ ರೀತಿಯ ಸೋಲುಂಟಾಗಲು. ಮುಳಿಸಿನ ದಳ್ಳುರಿಗಳನ್ + ಉಗುಟುತ್ತುಂ = ಕೋಪದ ಜ್ವಾಲೆಗಳಿಂದ ಬುಸುಗುಡುತ್ತ, ಭರತೇಶಂ ಚಕ್ರರತ್ನಮಂ ಬಗೆದು ಬೆಸಸಿದಂ = ಭರತನು ಚಕ್ರರತ್ನವನ್ನು ನೆನೆದು ಆಜ್ಞೆಮಾಡಿದ.

**ಗದ್ಯಾನುಸರಣ:** ಎರಡೂ ಕಡೆಯ ಸೈನ್ಯಗಳು ಸೇರಿರಲು ತನಗೆ ಆ ರೀತಿಯ ಸೋಲುಂಟಾಯಿತಲ್ಲ ಎಂಬ ಕೋಪದ ಜ್ವಾಲೆಗಳಿಂದ ಬುಸುಗುಡುತ್ತ ಭರತನು ಚಕ್ರರತ್ನವನ್ನು ನೆನೆದು ಆಜ್ಞೆಮಾಡಿದ.

[**ವಿಶೇಷ ವಿಚಾರ:** ಮೂರೂ ಯುದ್ಧಗಳಲ್ಲಿ ಬಾಹುಬಲಿ ಗೆಲ್ಲುತ್ತ ಹೋಗುವುದು ಎದುರಿಗೆ ಶತ್ರುವಿನಂತಿದ್ದ ಭರತನನ್ನು; ಅದರ ಕೊನೆಯ ಹಂತದಲ್ಲಿ ಅನಾಮತ್ತಾಗಿ ಅವನನ್ನು ಮೇಲೆತ್ತಿ ಹಿಡಿದು ಕೆಳಕ್ಕೆ ಕುಕ್ಕುವ ಆಲೋಚನೆ ಬಂದಾಗ ಅವನು ತಡೆದು ಯೋಚಿಸಲು ತೊಡಗಿದ ಕ್ಷಣದಿಂದ ಅವನು ಗೆಲ್ಲತೊಡಗಿದ್ದು ಒಳಗಿನ ಶತ್ರುವಾದ ದ್ವೇಷವನ್ನು. ಅತ್ಯಂತ ನವುರಾಗಿ ಈ ಪ್ರಸಂಗವನ್ನು ಕವಿ ನಿರ್ವಹಿಸಿರುವ ರೀತಿ ಅವನ ಪ್ರತಿಭೆಯ ಒಂದು ಹೊಳಹು.]

**ಬೆಸಸಿದೊಡದು ಮಾರ್ಕೊಳ್ಳದೆ**
**ಬೆಸನಂ ಬಲವಂದು ಬಾಹುಬಲಿಯನಣಂ ಭೇ**
**ದಿಸಲಾಱದುದಱನಿರ್ದುದು**
**ಮಸುಳ್ದೆಸಕಂಗೆಟ್ಟು ಬಲದ ಮುಯ್ಯಿನ ಕೆಲದೊಳ್** ೧೦೭

**ಪದವಿಭಾಗ–ಅನ್ವಯ–ಅರ್ಥ:** ಬೆಸಸಿದೊಡೆ = ಹೀಗೆ ಆಜ್ಞಾಪಿಸಲು, ಅದು ಬೆಸನಂ ಮಾರ್ಕೊಳ್ಳದೆ = ಚಕ್ರರತ್ನವು ಆಜ್ಞೆಯನ್ನು ವಿರೋಧಿಸದೆ, ಬಾಹುಬಲಿಯನ್ ಬಲವಂದು = ಬಾಹುಬಲಿಗೆ ಪ್ರದಕ್ಷಿಣೆ ಹಾಕಿ, ಅಣಂ ಭೇದಿಸಲ್ + ಆಱದುದಱನ್ = ಸ್ವಲ್ಪವೂ ಘಾತಿಗೊಳಿಸಲಾರದ್ದರಿಂದ. ಮಸುಳ್ದು + ಎಸಕಂಗೆಟ್ಟು = ಮಂಕಾಗಿ ಕರ್ತವ್ಯಚ್ಯುತವಾಗಿ, ಬಲದ ಮುಯ್ಯಿನ ಕೆಲದೊಳ್ ಇರ್ದುದು = ಅವನ ಬಲಭುಜದ ಬಳಿ ನಿಂತುಕೊಂಡಿತು.

**ಗದ್ಯಾನುಸರಣ:** ಭರತ ಹೀಗೆ ಆಜ್ಞಾಪಿಸಿದಾಗ ಚಕ್ರರತ್ನವು ಆಜ್ಞೆಯನ್ನು ವಿರೋಧಿಸಲಿಲ್ಲ; ಆದರೆ ಅದು ಬಾಹುಬಲಿಯನ್ನು ಘಾತಿಗೊಳಿಸಲು ಸಾಧ್ಯವಿರಲಿಲ್ಲ; ಹೀಗಾಗಿ ಪ್ರದಕ್ಷಿಣೆ ಹಾಕಿ ಅವನ ಬಲಭುಜದ ಬಳಿ ಮಂಕಾಗಿ ನಿಂತುಕೊಂಡಿತು.

[**ವಿಶೇಷ ವಿಚಾರ:** ಗೆದ್ದಿರುವವನು ಬಾಹುಬಲಿ, ಅವನೇ ಈಗ ಚಕ್ರವರ್ತಿಯಾಗತಕ್ಕವನು, ಚಕ್ರರತ್ನ ಚಕ್ರವರ್ತಿಯ ಆಜ್ಞಾಧಾರಕ, ಹಾಗಾಗಿ ಅವನನ್ನು ಘಾತಿಗೊಳಿಸಲಾರದು, ಆದ್ದರಿಂದಲೇ ಅದು ಸುಮ್ಮನೆ ಮಂಕಾಗಿ ನಿಂತುಕೊಂಡಿತು. ಬಾಹುಬಲಿಯ ಪ್ರತಾಪತೇಜದ ಮುಂದೆ ಅದು ಮಂಕಾಗಿರಬೇಕು. ಕವಿ ಈ ವರ್ಣನೆಯ ಮೂಲಕ ಪಟ್ಟಾಭಿಷಿಕ್ತನಾಗದಿದ್ದರೂ ಈಗ ಬಾಹುಬಲಿಯೇ (ವೈರಾಗ್ಯ)ಚಕ್ರವರ್ತಿ ಎಂಬುದನ್ನು ಸೂಚಿಸುತ್ತಾನೆ.]

**ತನಗಲ್ಲದುದಂ ಮಾಡಿದ**
**ನಿನಿಸಂ ಚಕ್ರೇಶನೆಂಬ ಕುಲವೃದ್ಧರ ಭೂ**
**ವನಿತಾಧೀಶರ ನುಡಿಗ**
**ಳ್ಗೆ ನಾಣ್ಚಿದಂ ಭರತರಾಜನವನತಮಕುಟಂ** ೧೦೮

**ಪದವಿಭಾಗ–ಅನ್ವಯ–ಅರ್ಥ:** ಚಕ್ರೇಶನ್ ತನಗೆ + ಅಲ್ಲದುದಂ ಇನಿಸಂ ಮಾಡಿದನ್ = ಭರತನು ತನಗೆ ತಕ್ಕುದಲ್ಲದ ಈ ಕಾರ್ಯವನ್ನು ಮಾಡಿದ, ಎಂಬ ಕುಲವೃದ್ಧರ ಭೂವನಿತಾ + ಅಧೀಶರ ನುಡಿಗಳ್ಗೆ = ಎನ್ನುವ ಹಿರಿಯರ ಹಾಗೂ ರಾಜರುಗಳ ಮಾತು ಕೇಳಿ, ಅವನತಮಕುಟಂ ಭರತರಾಜನ್ ನಾಣ್ಚಿದಂ = ತಲೆಯನ್ನು ತಗ್ಗಿಸಿಕೊಂಡು ಭರತನು ನಾಚಿಕೊಂಡ.

**ಗದ್ಯಾನುಸರಣ:** 'ಭರತನು ತನಗೆ ತಕ್ಕುದಲ್ಲದ ಕಾರ್ಯವನ್ನು ಮಾಡಿದ' ಎಂದು ಹಿರಿಯರು ಹಾಗೂ ರಾಜರುಗಳು ಮಾತನಾಡಿಕೊಂಡರು; ಇದನ್ನು ಕೇಳಿ ಭರತನು ನಾಚಿಕೆಯಿಂದ ತಲೆತಗ್ಗಿಸಿಕೊಂಡು ನಿಂತ.

**ವ॥ ತನ್ನ ದಕ್ಷಿಣ ಬಾಹುವ ಕೆಲದಲ್ಲಿ ನಿಂದ ಚಕ್ರರತ್ನಮಂ ಕಂಡು ಬಾಹುಬಲಿ**

**ಪದವಿಭಾಗ–ಅನ್ವಯ–ಅರ್ಥ:** ತನ್ನ ದಕ್ಷಿಣ ಬಾಹುವ ಕೆಲದಲ್ಲಿ ನಿಂದ = ತನ್ನ ಬಲತೋಳಿನೆಡೆ ನಿಂತ, ಚಕ್ರಮನ್ ಬಾಹುಬಲಿ ಕಂಡು = ಚಕ್ರವನ್ನು ಬಾಹುಬಲಿ ನೋಡಿ,

**ಗದ್ಯಾನುಸರಣ:** ತನ್ನ ಬಲತೋಳಿನೆಡೆ ನಿಂತ ಚಕ್ರವನ್ನು ಬಾಹುಬಲಿ ನೋಡಿ.

**ಕಳೆದಿಡುವುದೆ ಕಷ್ಟಂ ಭೂ**
**ತಳರಾಜ್ಯವಿಮೋಹಮಚಿರರುಚಿಸಂಚಳಮಿಂ**
**ತಳವುಗಿಡಿಸಿದುದು ಮನುಕುಲ**
**ತಿಳಕನುಮಂ ಖಳಮಹೀಶರುಟಿದವರಳವೇ** ೧೦೯

**ಪದವಿಭಾಗ–ಅನ್ವಯ–ಅರ್ಥ:** ಭೂತಳರಾಜ್ಯವಿಮೋಹಂ ಕಳೆದಿಡುವುದೆ ಕಷ್ಟಂ = ರಾಜ್ಯದ ಬಗೆಗಿನ ವ್ಯಾಮೋಹವನ್ನು ಕಳಚಿಡುವುದು ಕಷ್ಟ, ಅಚಿರರುಚಿಸಂಚಳಂ = ಅದು ಮಿಂಚಿನ ಹೊಳಹು, ಮನುಕುಲತಿಳಕನುಮಂ ಇಂತು ಅಳವು + ಕಿಡಿಸಿದುದು = ಅದು ಮನುಕುಲಶ್ರೇಷ್ಠನಾದ ಭರತನನ್ನೂ ಈ ರೀತಿ ದುರ್ಬಲನನ್ನಾಗಿಸಿತು, ಖಳಮಹೀಶರ್ ಉಟಿದವರ ಅಳವೇ = ಇನ್ನು ದುಷ್ಟರಾಜರಿಗೆ ಹಾಗೆ ಮಾಡುವುದು ಶಕ್ಯವೇ.

**ಗದ್ಯಾನುಸರಣ:** 'ರಾಜ್ಯವ್ಯಾಮೋಹವನ್ನು ಕಳಚಿಡುವುದು ಕಷ್ಟ, ಅದು ಮಿಂಚಿನ ಹೊಳಹಿನಂತೆ; ಅದು ಮನುಕುಲಶ್ರೇಷ್ಠನಾದ ಭರತನನ್ನೂ ಈ ರೀತಿ ದುರ್ಬಲನನ್ನಾಗಿಸಿತು, ಅಂದ ಮೇಲೆ ದುಷ್ಟರಾಜರಿಗೆ ಹಾಗೆ ಮಾಡುವುದು ಶಕ್ಯವೇ!'

**ಸೋದರರೊಳ್ ಸೋದರರಂ**
**ಕಾದಿಸುವುದು ಸುತರ ತಂದೆಯೆಡೆಯೊಳ್ ಬಿಡದು**
**ತ್ಪಾದಿಸುವುದು ಕೋಪಮನಳ**
**ವೀ ದೊರೆತೆನೆ ತೊಡರ್ವುದೆಂತು ರಾಜ್ಯಶ್ರೀಯೊಳ್** ೧೧೦

**ಪದವಿಭಾಗ–ಅನ್ವಯ–ಅರ್ಥ:** ಸೋದರರೊಳ್ ಸೋದರರಂ ಕಾದಿಸುವುದು = ಅದು ಅಣ್ಣತಮ್ಮಂದಿರು ಹೋರಾಡುವಂತೆ ಮಾಡುತ್ತದೆ, ಸುತರ ತಂದೆಯೆಡೆಯೊಳ್ ಬಿಡದೆ ಕೋಪಮನ್ ಉತ್ಪಾದಿಸುವುದು = ತಂದೆಮಕ್ಕಳ ನಡುವೆ ಕೋಪವನ್ನುಕ್ಕಿಸುತ್ತದೆ, ಅಳವು + ಈ ದೊರೆತು + ಎನೆ = ಅದರ ಶಕ್ತಿಯು ಇಂತಹದು ಎಂದಮೇಲೆ, ರಾಜ್ಯಶ್ರೀಯೊಳ್ ಎಂತು ತೊಡರ್ವುದು = ರಾಜ್ಯಲಕ್ಷ್ಮಿಯೊಡನೆ ಹೇಗೆ ಕೂಡಿಕೊಳ್ಳುವುದು.

**ಗದ್ಯಾನುಸರಣ:** 'ರಾಜ್ಯವ್ಯಾಮೋಹವು ಅಣ್ಣತಮ್ಮಂದಿರು ಹೋರಾಡುವಂತೆ ಮಾಡುತ್ತದೆ, ತಂದೆಮಕ್ಕಳ ನಡುವೆ ಕೋಪವನ್ನುಕ್ಕಿಸುತ್ತದೆ; ಅದರ ಶಕ್ತಿಯು ಇಂತಹದು ಎಂದಮೇಲೆ, ನಾನು ರಾಜ್ಯಲಕ್ಷ್ಮಿಯೊಡನೆ ಹೇಗೆ ಹೊಂದಿಕೊಳ್ಳಲಿ!'

**ಇನಿಯವು ಮೊದಲೊಳ್ ನಂಜಿನ**
**ಪನಿವೊಲ್ ಬಟಿಕೆಯ್ದೆ ಮುಳಿದು ಕೊಂದಿಕ್ಕುವುವಿಂ**
**ತೆನೆಯೆನೆ ವಿಷಯಸುಖಾಸ್ವಾ**
**ದನದೊಳ್ ಲಂಪಟರಿದೇಕೆಯೋ ನರಪಶುಗಳ್** ೧೧೧

**ಪದವಿಭಾಗ-ಅನ್ವಯ-ಅರ್ಥ:** ಮೊದಲೊಳ್ ನಂಜಿನ ಪನಿವೊಲ್ ಇನಿಯವು = ಮೊದಲಲ್ಲಿ ವಿಷದ ಹನಿಗಳಂತೆ ಸಿಹಿಯಾದವು. ಬಟಿಕೆ + ಎಯ್ದೆ ಮುಳಿದು ಕೊಂದಿಕ್ಕುವುವು = ಆನಂತರ ಸೇಡಿನಿಂದೆಂಬಂತೆ ಕೊಲ್ಲುತ್ತವೆ. ಇಂತು + ಎನೆ + ಎನೆ ವಿಷಯಸುಖಾಸ್ವಾದನದೊಳ್ = ಹೀಗಿದ್ದರೂ ವಿಷಯಸುಖವನ್ನು ಸವಿಯುವುದರಲ್ಲಿ, ನರಪಶುಗಳ್ ಇದೇಕೆಯೋ ಲಂಪಟರ್ = ಮಾನವಮೃಗಗಳು ಏತಕ್ಕೆ ಲಂಪಟರಾಗಿದ್ದಾರೆ.

**ಗದ್ಯಾನುಸರಣ:** 'ಮೊದಲಲ್ಲಿ ವಿಷದ ಹನಿಗಳಂತೆ ಸಿಹಿಯಾದವು, ಆದರೆ ಆನಂತರ ಸೇಡಿನಿಂದೆಂಬಂತೆ ಅವು ನಮ್ಮನ್ನು ಕೊಲ್ಲುತ್ತವೆ; ಹೀಗಿದ್ದರೂ ವಿಷಯಸುಖವನ್ನು ಸವಿಯುವುದರಲ್ಲಿ ಮಾನವಮೃಗಗಳು ಏತಕ್ಕೆ ಲಂಪಟರಾಗಿದ್ದಾರೆ!'

**ಕಿಡುವೊಡಲ ಕಿಡುವ ರಾಜ್ಯದ**
**ಪಡೆಮಾತುಗೊಳಲ್ಕಮೆನ್ನ ಮೆಯ್ಯಗಿದಪುದೀ**
**ಗಡೆ ಜೈನದೀಕ್ಷೆಯಂ ಕೊಂ**
**ಡಡಿಗೆಱಗಿಸುವೆಂ ಸಮಸ್ತಸುರಸಮುದಯಮಂ** ೧೧೨

**ಪದವಿಭಾಗ-ಅನ್ವಯ-ಅರ್ಥ:** ಕಿಡುವ + ಒಡಲ = ನಶ್ವರವಾದ ದೇಹದ, ಕಿಡುವ ರಾಜ್ಯದ = ನಾಶವಾಗುವ ರಾಜ್ಯದ, ಪಡೆಮಾತುಗೊಳಲ್ಕಂ = ವಿಷಯವನ್ನು ಕುರಿತು ಆಲೋಚಿಸಿದರೇ, ಎನ್ನ ಮೆಯ್ + ಅಗಿದಪುದು = ನನ್ನ ದೇಹ ನಡುಗುತ್ತದೆ, ಈಗಡೆ ಜೈನದೀಕ್ಷೆಯಂ ಕೊಂಡು = ಈಗಲೇ ಜಿನದೀಕ್ಷೆಯನ್ನು ಪಡೆದು, ಸಮಸ್ತಸುರಸಮುದಯಮಂ ಅಡಿಗೆ + ಎಱಗಿಸುವೆಂ = ದೇವಸಮೂಹವನ್ನೆಲ್ಲ ನನ್ನ ಅಡಿಗಳಿಗೆ ಬೀಳುವಂತೆ ಮಾಡುತ್ತೇನೆ.

**ಗದ್ಯಾನುಸರಣ:** ನಶ್ವರವಾದ ದೇಹ ಮತ್ತು ರಾಜ್ಯಗಳ ವಿಷಯವನ್ನು ಕುರಿತು ಆಲೋಚಿಸಿದರೇ ನನ್ನ ದೇಹ ನಡುಗುತ್ತದೆ; ಆದ್ದರಿಂದ ಈಗಲೇ ಜಿನದೀಕ್ಷೆಯನ್ನು ಪಡೆದು ದೇವಸಮೂಹವನ್ನೆಲ್ಲ ನನ್ನ ಅಡಿಗಳಿಗೆ ಬೀಳುವಂತೆ ಮಾಡುತ್ತೇನೆ.

**ಎಂದಿಂತು ಬಗೆದು ಭರತನ**
**ನೆಂದಂ ಚಕ್ರೇಶ ಸಿಗ್ಗನುಟಿ ಮುಳಿಸಂ ನೀ**
**ನೆಂದಿಂಗಂ ಬಿಸುಡೀ ತ**
**ಮ್ಮಂದಿರೊಳಿಂತಿಂತು ಕಡ್ಡುವರ್ಪುದು ಪೆಂಪೇ** ೧೧೩

**ಪದವಿಭಾಗ-ಅನ್ವಯ-ಅರ್ಥ:** ಇಂತು ಎಂದು ಬಗೆದು = ಹೀಗೆಂದು ಆಲೋಚಿಸಿದ ಬಾಹುಬಲಿಯು. ಭರತನನ್ + ಎಂದಂ = ಭರತನಿಗೆ ಹೀಗೆಂದು ಹೇಳಿದ. ಚಕ್ರೇಶ ಸಿಗ್ಗನ್ + ಉಟಿ = ಚಕ್ರವರ್ತಿಯೇ ನಾಚಿಕೆ ಪಡಬೇಡ,

ಎಂದಿಂಗಂ ನೀನ್ ಮುಳಿಸಂ ಬಿಸುಡು = ಎಲ್ಲ ಕಾಲಕ್ಕೂ ನೀನು ಕೋಪವನ್ನು ತೊರೆ. ತಮ್ಮಂದಿರೊಳ್ + ಇಂತು + ಇಂತು ಕಡ್ಡು + ಬರ್ಪುದು ಪೆಂಪೇ = ತಮ್ಮಂದಿರ ಬಗ್ಗೆ ಹೀಗೆಲ್ಲ ನಿಷ್ಠುರವಾಗುವುದು ಸಮಂಜಸವೇ.

**ಗದ್ಯಾನುಸರಣ:** ಹೀಗೆಂದು ಆಲೋಚಿಸಿದ ಬಾಹುಬಲಿಯು ಭರತನಿಗೆ ಹೀಗೆಂದು ಹೇಳಿದ: 'ಚಕ್ರವರ್ತಿಯೇ ಸಿಗ್ಗು ಪಡಬೇಡ, ಎಲ್ಲ ಕಾಲಕ್ಕೂ ನೀನು ಕೋಪವನ್ನು ತೊರೆ, ತಮ್ಮಂದಿರ ಬಗ್ಗೆ ಹೀಗೆಲ್ಲ ನಿಷ್ಠುರವಾಗುವುದು ಸಮಂಜಸವೇ?'

[**ವಿಶೇಷ ವಿಚಾರ:** ಬಸವರಾಜು ಅವರು 'ಕಡ್ಡುವರ್ಪುದು' ಎಬ ಪಾಠವ ಬದಲು 'ಕಡ್ಡುದರ್ಪುದು' ಎಂಬುದನ್ನು ಸ್ವೀಕರಿಸಿ, 'ಕಡ್ಡು' ಎಂಬ ಶಬ್ದಕ್ಕೆ ವೈಷಮ್ಯ, ವಿರಸ ಎಂಬ ಅರ್ಥಗಳನ್ನು ನೀಡಿ, 'ಕಡ್ಡುದರ್' ಎಂದರೆ ವೈಮನಸ್ಯ ಉಂಟುಮಾಡು ಎಂದು ಅರ್ಥೈಸುತ್ತಾರೆ; ನರಸಿಂಹಶಾಸ್ತ್ರಿಗಳು 'ಕಟ್ಟುವರ್ಪುದು' ಎಂಬ ಪಾಠವನ್ನಿಟ್ಟುಕೊಂಡು ನಿಗ್ರಹಬುದ್ಧಿಯನ್ನಿರಿಸುವುದು ಎಂದು ವಿವರಣೆ ನೀಡುತ್ತಾರೆ.]

**ನಿನ್ನೀ ಬೆಸಸಿದ ಚಕ್ರಮ**
**ದೆನ್ನೀ ದೇಹಾದ್ರಿಯಂ ಗೆಲಲ್ ನೆಱಿಯದು ನೀಂ**
**ಬಿನ್ನನಿದೇಕಿರ್ಪೆಯದೆಂ**
**ತೆನ್ನ ಗೆಲಲ್ ವಜ್ರಗಿರಿಯನಾರ್ಕುಮೆ ವಜ್ರಂ** ೧೧೪

**ಪದವಿಭಾಗ-ಅನ್ವಯ-ಅರ್ಥ:** ನಿನ್ನ ಬೆಸಸಿದ ಈ ಚಕ್ರಂ + ಅದು = ನೀನು ಆಜ್ಞಾಪಿಸಿದ ಈ ಚಕ್ರರತ್ನವು, ಎನ್ನ + ಈ ದೇಹಾದ್ರಿಯಂ ಗೆಲಲ್ ನೆಱಿಯದು = ನನ್ನ ಈ ಮೈಯೆಂಬ ಪರ್ವತವನ್ನು ಗೆಲ್ಲಲು ಸಮರ್ಥವಲ್ಲ, ನೀಂ ಇದೇಕೆ ಬಿನ್ನನೆ ಇರ್ಪೆ = ನೀನು ಹೀಗೇಕೆ ಮೌನವಾಗಿದ್ದೀಯೆ, ಅದೆಂತು + ಎನ್ನ = ಅದು ಹೇಗೆ ನನ್ನನ್ನು ಗೆಲ್ಲ(ಬಲ್ಲುದು), ವಜ್ರಗಿರಿಯನ್ ವಜ್ರಂ ಗೆಲಲ್ ಆರ್ಕುಮೆ = ವಜ್ರಗಿರಿಯನ್ನು ವಜ್ರವು ಗೆಲ್ಲಲು ಸಾಧ್ಯವೇ.

**ಗದ್ಯಾನುಸರಣ:** 'ನೀನು ಆಜ್ಞಾಪಿಸಿದ ಈ ಚಕ್ರರತ್ನವು ನನ್ನ ಈ ಮೈಯೆಂಬ ಪರ್ವತವನ್ನು ಗೆಲ್ಲಲಾರದು;ಏಕೆ ಸುಮ್ಮನಾದೆ? ಅದು ಹೇಗೆ ನನ್ನನ್ನು ಗೆಲ್ಲ(ಬಲ್ಲುದು), ವಜ್ರಗಿರಿಯನ್ನು ವಜ್ರವು ಗೆಲ್ಲಲು ಸಾಧ್ಯವೇ?'

**ನೆಲಸುಗೆ ನಿನ್ನ ವಕ್ಷದೊಳೆ ನಿಶ್ಚಳಮೀ ಭಟಖಡ್ಗಮಂಡಲೋ**
**ತ್ಪಲವನವಿಭ್ರಮಭ್ರಮರಿಯಪ್ಪ ಮನೋಹರಿ ರಾಜ್ಯಲಕ್ಷ್ಮಿ ಭೂ**
**ವಲಯಮನಯ್ಯನಿತ್ತುದುಮನಾಂ ನಿನಗಿತ್ತೆನಿದೇವುದಣ್ಣ ನೀ**
**ನೊಲಿದ ಲತಾಂಗಿಗಂ ಧರೆಗಮಾಟಸಿದಂದು ನೆಗಟ್ತೆ ಮಾಸದೇ** ೧೧೫

**ಪದವಿಭಾಗ-ಅನ್ವಯ-ಅರ್ಥ:** ಭಟಖಡ್ಗಮಂಡಲ + ಉತ್ಪಲವನ = ಸೈನಿಕರ ಕತ್ತಿಗಳ ಗುಂಪೆಂಬ ಉತ್ಪಲವನದಲ್ಲಿ, ವಿಭ್ರಮಭ್ರಮರಿಯಪ್ಪ = ವಿಲಾಸದಿಂದ ತಿರುಗುವ, ಈ ಮನೋಹರಿ ರಾಜ್ಯಲಕ್ಷ್ಮಿ = ಈ ಸುಂದರಿಯಾದ ರಾಜ್ಯಲಕ್ಷ್ಮಿಯು. ನಿನ್ನ ವಕ್ಷದೊಳೆ ನಿಶ್ಚಳಂ ನೆಲಸುಗೆ = ನಿನ್ನ ಎದೆಯಲ್ಲಿಯೇ ಶಾಶ್ವತವಾಗಿ ನಿಲ್ಲಲಿ, ಅಯ್ಯನಿತ್ತುದುಮನ್ ಭೂವಲಯಮನ್ = ತಂದೆಯು ನಮಗಿತ್ತ ಈ

ಭೂಮಂಡಾಧಿಪತ್ಯವನ್ನು, ಅಂ ನಿನಗಿತ್ತೆನ್ = ನಾನು ನಿನಗೆ ವಹಿಸಿಕೊಡುತ್ತಿದ್ದೇನೆ. ಅಣ್ಣ ಇದು + ಏವುದು = ಅಣ್ಣನೇ ಈ ರಾಜ್ಯದಿಂದ ಏನು ಉಪಯೋಗ. ನೀನು + ಒಲಿದ ಲತಾಂಗಿಗಂ ಧರೆಗಂ + ಆಟಿಸಿದಂದು = ಅಲ್ಲದೆ ನೀನು ಇಷ್ಟಪಡುವ ಹೆಣ್ಣನ್ನಾಗಲೀ ನೆಲವನ್ನಾಗಲೀ ನಾನು ಇಷ್ಟಪಟ್ಟರೆ, ನೆಗಟ್ತೆ ಮಾಸದೇ = ನನ್ನ ಒಳ್ಳೆಯ ಹೆಸರೆಲು ಕೆಡುವುದಿಲ್ಲವೇ.

**ಗದ್ಯಾನುಸರಣ:** 'ಸೈನಿಕರ ಕತ್ತಿಗಳ ಗುಂಪೆಂಬ ಉತ್ಪಲವನದಲ್ಲಿ ವಿಲಾಸದಿಂದ ತಿರುಗುವ ಈ ಸುಂದರಿಯಾದ ರಾಜ್ಯಲಕ್ಷ್ಮಿಯು ನಿನ್ನ ಎದೆಯಲ್ಲಿಯೇ ಶಾಸ್ವತವಾಗಿ ನಿಲ್ಲಲಿ; ತಂದೆಯು ನಮಗಿತ್ತ ಈ ಭೂಮಂಡಾಧಿಪತ್ಯವನ್ನು ನಾನು ನಿನಗೆ ವಹಿಸಿಕೊಡುತ್ತಿದ್ದೇನೆ; ಅಣ್ಣನೇ ಈ ರಾಜ್ಯದಿಂದ ಏನು ಉಪಯೋಗ? ಅಲ್ಲದೆ ನೀನು ಇಷ್ಟಪಡುವ ಹೆಣ್ಣನ್ನಾಗಲೀ ನೆಲವನ್ನಾಗಲೀ ನಾನು ಇಷ್ಟಪಟ್ಟರೆ ನನ್ನ ಒಳ್ಳೆಯ ಹೆಸರು ಕೆಡುವುದಿಲ್ಲವೇ?

[**ವಿಶೇಷ ವಿಚಾರ:** ಈ ಪದ್ಯದ ಬಗ್ಗೆ ಪ್ರೊ॥ ಜಿ. ಎಚ್. ನಾಯಕರು ಬರೆದ ವ್ಯಾಖ್ಯಾನ ಬಹು ಸುಂದರವಾಗಿದೆ; ರಾಜ್ಯಾಧಿಕಾರ ಎಂಬುದು ಖಡ್ಗಗಳ ಮೇಲೆ ಅವಲಂಬಿಸಿರುವಂಥದು. ಅಂದರೆ ಹಿಂಸೆಯ ಹಿನ್ನೆಲೆಯದು; ಜೊತೆಗೆ ಅದು ಕ್ಷಣಿಕ, ಅಂತಹುದು ನಿನ್ನ ವಕ್ಷದಲ್ಲಿ ಶಾಶ್ವತವಾಗಿ ನೆಲಸಲಿ ಎಂಬ ಹಾರೈಕೆಯಲ್ಲಿ ಹಾಗೆ ನೆಲಸಲಾರದು ಎಂಬ ಎಚ್ಚರಿಕೆಯೂ ಧ್ವನಿತವಾಗುತ್ತದೆ. ತಮ್ಮನಾದ ತಾನು ಅಣ್ಣ ಒಲಿದ ಹೆಣ್ಣು ಭೂಮಿಗಳನ್ನು ಬಯಸಬಾರದೆಂಬ ಮಾತಿನಲ್ಲಿ ಬಾಹುಬಲಿಯ ನೈತಿಕಪ್ರಜ್ಞೆ ಸೂಚಿತವಾಗಿದೆ, ನಿಜ.. ಆದರೆ ಹೆಣ್ಣು-ಭೂಮಿಗಳನ್ನು ಸಮೀಕರಿಸುವುರ ಹಿಂದೆ ರಾಜತ್ವದ 'ವೀರಭೋಜ್ಯಾ ವಸುಂಧರಾ' ಎಂಬ ಆದರ್ಶವೂ ಧ್ವನಿತವಾಗಿದೆ; ರಾಜರು ಭೂಮಿಯನ್ನು ತಾಯಿಯೆಂದು ಕಾಣದೆ ಹೆಣ್ಣೆಂದು ಭೋಗಿಸಲಾಶಿಸಿದ್ದನ್ನು ಕುರಿತೇ ಬೇಂದ್ರೆ ತಮ್ಮ 'ಮೊದಲಗಿತ್ತಿ' ಕವನದಲ್ಲಿ 'ಪಾತಾಳ ಕಂಡರು ಕೆಲ ತಾಯಿಗ್ಗಂಡರು' ಎಂಬ ಮಾತಿನ ಮೂಲಕ ಚುಚ್ಚಿ ನುಡಿಯುತ್ತಾರೆ.]

**ಅವಧರಿಸದೆ ನಿನ್ನೊಳ್ ಪಿರಿ**
**ದವಿನಯಮಂ ನೆಗಟ್ದಿ ದೋಷಮಂ ತಪದೊಳ್ ನೀ**
**ಗುವೆನಸದಾಗ್ರಹಮಂ ಬಿಸು**
**ಡುವುದೊರ್ಮೆಗೆ ಮಱೆವುದೆನ್ನ ದುರ್ವಿಳಸನಮಂ** ೧೧೬

**ಪದವಿಭಾಗ-ಅನ್ವಯ-ಅರ್ಥ:** ಅವಧರಿಸದೆ = ವಿವೇಚನೆಯಿಲ್ಲದೆ, ನಿನ್ನೊಳ್ ಪಿರಿದು + ಅವಿನಯಮಂ ನೆಗಟ್ದಿ ದೋಷಮಂ = ನಿನ್ನ ಬಗ್ಗೆ ಮಹಾ ಅವಿನಯವನ್ನು ತೋರಿಸಿದ ತಪ್ಪನ್ನು, ತಪದೊಳ್ ನೀಗುವೆನ್ = ತಪಸ್ಸುಗೈದು ಹೋಗಲಾಡಿಸಿ ಕೊಳ್ಳುತ್ತೇನೆ. ಅಸತ್ + ಆಗ್ರಹಮಂ ಒರ್ಮೆಗೆ ಬಿಸುಡುವುದು = ನನ್ನ ಬಗೆಗಿನ ಕೋಪವನ್ನು ಪೂರ್ತಿ ಬಿಟ್ಟುಬಿಡು. ಎನ್ನ ದುರ್ವಿಳಸನಮಂ ಮಱೆವುದು = ನನ್ನ ಕೆಟ್ಟ ನಡವಳಿಕೆಯನ್ನು ಮರೆತುಬಿಡು.

**ಗದ್ಯಾನುಸರಣ:** 'ವಿವೇಚನೆಯಿಲ್ಲದೆ ನಿನ್ನ ಬಗ್ಗೆ ಮಹಾ ಅವಿನಯವನ್ನು ತೋರಿಸಿದ ನನ್ನ ತಪ್ಪನ್ನು ತಪಸ್ಸುಗೈದು ಹೋಗಲಾಡಿಸಿಕೊಳ್ಳುತ್ತೇನೆ; ನನ್ನ ಬಗೆಗಿನ ಕೋಪವನ್ನು ಬಿಡು. ನನ್ನ ಕೆಟ್ಟ ನಡವಳಿಕೆಯನ್ನು ಮರೆತುಬಿಡು.

**ವ॥ ಎಂದು ಬಾಹುಬಲಿಕುಮಾರಂ ತಪಶ್ಚರಣನಿಶ್ಚಳನಿಶ್ಚಯಮನನಾದಾಗಳ್,**

**ಅರ್ಥ:** ಎಂದು ಬಾಹುಬಲಿಕುಮಾರಂ ತಪಃ + ಚರಣನಿಶ್ಚಳನಿಶ್ಚಯಮನನ್ + ಆದಾಗಳ್ = ಎಂದು ಬಾಹುಬಲಿಯು ತಪಸ್ಸನ್ನು ಮಾಡುವ ಅಚಲವಾದ ನಿರ್ಧಾರವನ್ನು ಮಾಡಿದ.

**ಮನದೊಳ್ ಮುಂ ಪುದಿದಿರ್ದ ಕೋಪಮನಿತುಂ ತೂಳ್ದಾಗಳೆತ್ತೆತ್ತ ಗೆ**
**ಯ್ದೆನಿದಂ ತಮ್ಮನೊಳೆಂಬುದೊಂದುಪಶಮಂ ಕೈಗಣ್ಮೆ ನೀನೊರ್ಬನೈ**
**ಮನುವಂಶಕ್ಕೆ ಲಲಾಮನಪ್ಪನುಜನೈ ಬೇಡಮ್ಮ ನೀನುಂ ತಪೋ**
**ವನಮಂ ಸಾರ್ವುದುಮಾನದಾರ್ಗೆ ಮೆಱೆವೆಂ ಮತ್ಪ್ರಾಜ್ಯಸಾಮ್ರಾಜ್ಯಮಂ** ೧೧೭

**ಪದವಿಭಾಗ-ಅನ್ವಯ-ಅರ್ಥ:** ಮುಂ ಮನದೊಳ್ ಪುದಿದಿರ್ದ = ಈ ಮುಂಚೆ ತನ್ನ ಮನಸ್ಸಿನಲ್ಲಿ ತುಂಬಿಕೊಂಡಿದ್ದ, ಕೋಪಂ + ಅನಿತುಂ ತೂಳ್ದಾಗಲ್ = ಕೋಪವೆಲ್ಲ ಕೊಚ್ಚಿಹೋಗಲು, ಇದಂ ತಮ್ಮನೊಳ್ ಎತ್ತೆತ್ತ ಗೆಯ್ದೆನ್ = ನನ್ನ ತಮ್ಮನ ಬಗ್ಗೆ ಏನೇನು ಮಾಡಿಬಿಟ್ಟೆ, ಎಂಬುದು + ಒಂದು + ಉಪಶಮಂ ಕೈಗಣ್ಮೆ = ಎನ್ನುವ ಒಂದು ಪಶ್ಚಾತ್ತಾಪವು ಉಂಟಾಗಿ, ಮನುವಂಶಕ್ಕೆ ಲಲಾಮನ್ + ಅಪ್ಪ + ಅನುಜನೈ ನೀನ್ + ಒರ್ಬನೈ = ಮನುವಂಶಶ್ರೇಷ್ಠನಾದ ತಮ್ಮ ನೀನು, ಬೇಡ + ಅಮ್ಮ ನೀನುಂ ತಪೋವನಮಂ ಸಾರ್ವುದುಂ = ಬೇಡ ಅಣ್ಣ ನೀನೂ ತಪೋವನವನ್ನು ಸೇರಿದರೆ, ಆನ್ ಮತ್ + ಪ್ರಾಜ್ಯಸಾಮ್ರಾಜ್ಯಮಂ = ಈ ನನ್ನ ವಿಶಾಲ ಸಾಮ್ರಾಜ್ಯವನ್ನು, ಅದು + ಆರ್ಗೆ ಮೆಱೆವೆಂ = ನಾನು ಯಾರಿಗೋಸುಗವಾಗಿ ಮೆರೆಯಲಿ.

**ಗದ್ಯಾನುಸರಣ:** ಇದುವರೆಗೆ ಭರತನ ಮನಸ್ಸಿನಲ್ಲಿ ತುಂಬಿಕೊಂಡಿದ್ದ ಕೋಪವೆಲ್ಲ ಕೊಚ್ಚಿಹೋಯಿತು; ತಮ್ಮನ ಬಗ್ಗೆ ಏನೇನು ಮಾಡಿಬಿಟ್ಟೆ ಎನ್ನುವ ಪಶ್ಚಾತ್ತಾಪವು ಉಂಟಾಯಿತು; ಆಗ ಭರತ ಬಾಹುಬಲಿಯನ್ನು ಕುರಿತು, 'ನನ್ನ ತಮ್ಮನಾದ ನೀನೇ ಮನುವಂಶಶ್ರೇಷ್ಠ, ಬೇಡ ಅಣ್ಣ ನೀನೂ ತಪೋವನವನ್ನು ಸೇರಿದರೆ ಈ ನನ್ನ ವಿಶಾಲ ಸಾಮ್ರಾಜ್ಯವನ್ನು ಯಾರಿಗೋಸುಗವಾಗಿ ಮೆರೆಯಲಿ?'

**ವ॥ ಎಂದು**

**ಅರ್ಥ:** ಎಂದು = ಎಂಬುದಾಗಿ,

**ನಿಜಪಾದಾಂಬುರುಹಕ್ಕೆ ಪಾದ್ಯವಿಧಿಯಂ ನೇತ್ರಾಂಬುವಿಂ ಮಾಡುವ**
**ಗ್ರಜನತ್ಯುನ್ನತಮಪ್ಪ ಮಸ್ತಕದ ಮೇಗೋರಂತೆ ಪಾಯ್ವಾತ್ಮ ಬಾ**
**ಷ್ಪಜಳೌಘಂಗಳಿನಂದು ಬಾಹುಬಲಿ ತನ್ನಿಂದಂ ನಿಧೀಶಂಗೆ ವಂ**
**ಶಜರಾಜ್ಯಾಭಿಷವೋತ್ಸವಂ ನೆಗಟ್ಟುದೆಂಬಾಶಂಕೆಯಂ ಮಾಡಿದಂ** ೧೧೮

**ಪದವಿಭಾಗ-ಅನ್ವಯ-ಅರ್ಥ:** ನಿಜಪಾದ + ಅಂಬುರುಹಕ್ಕೆ = ತನ್ನ ಅಡಿದಾವರೆಗಳಿಗೆ. ನೇತ್ರಾಂಬುವಿಂ ಪಾದ್ಯವಿಧಿಯಂ ಮಾಡುವ = ತನ್ನ ಕಣ್ಣೀರಿನಿಂದ

ತೊಳೆಯುವ ಕಾರ್ಯವನ್ನು ಮಾಡುವ, ಅಗ್ರಜನ + ಅತಿ + ಉನ್ನತಂ + ಅಪ್ಪ ಮಸ್ತಕದ ಮೇಗೆ = ಅಣ್ಣನ ಮಹಿಮಾಸ್ಪದವಾದ ನೆತ್ತಿಯ ಮೇಲೆ, ಓರಂತೆ ಪಾಯ್ವ = ಒಂದೇ ಸಮನೆ ಸುರಿಯುವ, ಆತ್ಮ ಬಾಷ್ಪಜಳ + ಓಘಂಗಳಿನ್ = ತನ್ನ ಕಣ್ಣೀರಿನ ಧಾರೆಯಿಂದ, ಅಂದು ನಿಧೀಶಂಗೆ ಬಾಹುಬಲಿ = ಆಗಲೇ ಭರತನಿಗೆ ಬಾಹುಬಲಿಯು, ತನ್ನಿಂದಂ = ತನ್ನ ಕೈಯಾರೆ, ವಂಶಜರಾಜ್ಯ + ಅಭಿಷವ + ಉತ್ಸವಂ = ತನ್ನ ವಂಶದ ಹಿರಿಯನಿಗೆ ಪಟ್ಟಾಭಿಷೇಕವನ್ನು, ನೆಗಬ್ಗುದು + ಎಂಬ + ಆಶಂಕೆಯಂ ಮಾಡಿದಂ = ಮಾಡುತ್ತಿರುವನೇನೋ ಎಂಬ ಭಾವನೆಯನ್ನುಂಟುಮಾಡಿದ.

**ಗದ್ಯಾನುಸರಣ:** ಬಾಹುಬಲಿಯ ಮುಂದೆ ತಲೆತಗ್ಗಿಸಿ ನಿಂತು ಕಣ್ಣಿರು ಸುರಿಸುವ ಭರತನು ಬಾಹುಬಲಿಯ ಅಡಿದಾವರೆಗಳಿಗೆ ತನ್ನ ಕಣ್ಣೀರಿನಿಂದ ತೊಳೆದು ಪೂಜೆಗೈಯುವನೇನೋ ಎಂಬಂತೆ ಕಾಣಿಸಿತು; ಅಣ್ಣನ ಮಹಿಮಾಸ್ಪದವಾದ ನೆತ್ತಿಯ ಮೇಲೆ ಬಾಹುಬಲಿಯ ಕಣ್ಣೀರು ಒಂದೇ ಸಮನೆ ಸುರಿಯುತ್ತಿತ್ತು; ಇದನ್ನು ನೋಡಿದರೆ ಬಾಹುಬಲಿ ಭರತನಿಗೆ ಬಾಹುಬಲಿಯು ಆಗಲೇ ತನ್ನ ಕೈಯಾರೆ ಪಟ್ಟಾಭಿಷೇಕವನ್ನು ಮಾಡುತ್ತಿರುವನೇನೋ ಎಂಬಂತಿತ್ತು.

[**ವಿಶೇಷ ವಿಚಾರ:** ಈ ಪದ್ಯದ ಸೊಗಸನ್ನು ಪರಿಭಾವಿಸಬೇಕು: ಎತ್ತರವಾದ ಬಾಹುಬಲಿಯ ಮುಂದೆ ಸಿಗ್ಗಿನಿಂದ ಭರತ ನಿಂತು ಪಶ್ಚಾತ್ತಾಪದ ಕಣ್ಣೀರು ಸುರಿಸುತ್ತಿದ್ದಾನೆ, ಬಾಗಿದ ಅವನ ತಲೆಯ ಮೇಲೆ ಅಣ್ಣನ ಸ್ಥಿತಿಯಿಂದ ಪರಿತಾಪಗೊಂಡ ತಮ್ಮನ ಕಣ್ಣೀರು ಸುರಿಯುತ್ತಿದೆ. ಒಬ್ಬನದು, ಸಹಜವಾದ ಚಿತ್ರ. ಆದರೆ ಒಬ್ಬ ತಮ್ಮನಾದರೂ ಎಲ್ಲ ದೃಷ್ಟಿಯಿಂದ ಎತ್ತರಕ್ಕೆ ಬೆಳೆದವನು, ಜೊತೆಗೆ ತಪಸ್ಸು ಮಾಡುವ ನಿರ್ಧಾರ ಕೈಗೊಂಡವನು, ವಯಸ್ಸಿನಿಂದ ಚಿಕ್ಕವನಾದರೂ ಮಹಿಮೆಯಲ್ಲಿ ಹಿರಿಯ, ಹೀಗಾಗಿ ಭರತ ಅವನಿಗೆ ಮಣಿಯುವ ದೃಶ್ಯ ಇದು. ವಯಸ್ಸಿನಲ್ಲಿ ದೊಡ್ಡವನಾದ ಅಣ್ಣನಿಗೆ ನೈತಿಕವಾಗಿ ಬೆಳೆದ ಹಿರಿಯನು ಆಶೀರ್ವಾದ ರೂಪವಾಗಿ ಕಣ್ಣೀರ ಹನಿಯ ಅಕ್ಷತೆಗಳನ್ನು ಸುರಿಸುವನೇನೋ ಎಂಬ ರೀತಿ – ಪರಿಭಾವಿಸಿದಷ್ಟೂ ಮನದುಂಬುವ ಪದ್ಯ.]

**ವ॥ ಅಂತು ಭರತೇಶ್ವರನಂ ಬಾಹುಬಲಿಕುಮಾರನೆಂತಾನುಮೊಡಂಬಡಿಸಿ ಮಹಾಬಲಿಯೆಂಬ ನಿಜತನೂಜನನಾತ್ಮೀಯ ಪದವಿಯೊಳ್ ನಿಜೆಸಿ,**

**ಅರ್ಥ:** ಅಂತು ಭರತೇಶ್ವರನಂ ಬಾಹುಬಲಿಕುಮಾರನ್ + ಎಂತಾನುಂ + ಒಡಂಬಡಿಸಿ ಮಹಾಬಲಿಯೆಂಬ ನಿಜತನೂಜನನ್ + ಆತ್ಮೀಯಪದವಿಯೊಳ್ ನಿಜೆಸಿ = ಈ ಬಗೆಯಲ್ಲಿ ಬಾಹುಬಲಿಯು ಭರತನನ್ನು ಕೊನೆಗೂ ಒಪ್ಪಿಸಿ ತನ್ನ ಮಗನಾದ ಮಹಾಬಲಿಯನ್ನು ತನ್ನ ಸ್ಥಾನದಲ್ಲಿ ಕೂರಿಸಿದ.

**ಕ್ಷಿತಿತಳದೊಳ್ ನೆಗಟ್ದೆರ್ದ**<br>
**ಪ್ರತಿಮಲ್ಲನನಿಕ್ಕಿ ಮುಯ್ವನಣಮಾನದೆ ದ**<br>
**ರ್ಪಿತದುರಿತಮಲ್ಲನುಮನುಡಿ**<br>
**ವ ತಕ್ಕಿನಿಂ ಸಭೆಗೆ ನಡೆದನಿಂದ್ರಾರ್ಚಿತನಾ** ೧೧೯

**ಪದವಿಭಾಗ-ಅನ್ವಯ-ಅರ್ಥ:** ಕ್ಷಿತಿತಳದೊಳ್ ಸೆಗಟ್ಟಿರ್ದ = ಭೂಮಿಯ ಮೇಲೆ ಪ್ರಸಿದ್ಧನಾದ ಅಪ್ರತಿಮಲ್ಲನನ್ + ಇಕ್ಕಿ = ಸಾಟಿಯಿಲ್ಲದಂತಹ ವೀರನನ್ನು ಸೋಲಿಸಿ, ಮುಯ್ವನ್ + ಅಣಂ + ಆನದೆ = ಸೇಡನ್ನು ಕೊಂಚವಾದರೂ ಉಳಿಸಿಕೊಳ್ಳದೆ, ದರ್ಪಿತದುರಿತಮಲ್ಲನುಮನ್ + ಉಡಿವ ತಕ್ಕಿನಿಂ = ದರ್ಪಿಷ್ಟನಾದ ಪಾಪವೆಂಬ ಜಟ್ಟಿಯನ್ನೂ ಮಣಿಸುವ ಗತ್ತಿನಿಂದ, ಇಂದ್ರ + ಅರ್ಚಿತನಾ ಸಭೆಗೆ ನಡೆದನ್ = (ಬಾಹುಬಲಿಯು) ಇಂದ್ರಪೂಜಿತನಾದ ಪುರುದೇವನ ಸಮವಸರಣ ಸಭೆಗೆ ಹೋದ.

**ಗದ್ಯಾನುಸರಣ:** ಭೂಮಿಯ ಮೇಲೆ ಪ್ರಸಿದ್ಧನಾದ ಸಾಟಿಯಿಲ್ಲದಂತಹ ಭರತನನ್ನು ಸೋಲಿಸಿದ ಬಾಹುಬಲಿಯ ಮನಸ್ಸಿನಲ್ಲಿ ಕೊಂಚವಾದರೂ ಸೇಡಿನ ಭಾವನೆ ಉಳಿಸಿಯಲಿಲ್ಲ; ಮುಂದೆ ದರ್ಪಿಷ್ಟನಾದ ಪಾಪವೆಂಬ ಜಟ್ಟಿಯನ್ನೂ ಮಣಿಸುವ ಗತ್ತಿನಿಂದ ಆತನು ಇಂದ್ರಪೂಜಿತನಾದ ಪುರುದೇವನ ಸಮವಸರಣ ಸಭೆಗೆ ಹೋದ.

**ವ॥ ಅಂತು ಭಗವದಾಸ್ಥಾನಾರವಿಂದಿನಿಯಂ ರಾಜಹಂಸನಂತಳಂಕರಿಸುತ್ತುಂ ಬಂದು ಭಗವತ್ಪಾದಪೀಠೋಪಕಂಠದೊಳ್ ಸರ್ವಾಂಗೋಪನತನಾಗಿ ನಿಂದು, ನಿಟಿಲತಟಘಟಿತ ಕರಕುಶೇಶಯಕುಟ್ಮಲನಾಗಿ**

**ಪದವಿಭಾಗ-ಅನ್ವಯ-ಅರ್ಥ:** ಅಂತು ಭಗವತ್ + ಆಸ್ಥಾನ + ಅರವಿಂದಿನಿಯಂ ರಾಜಹಂಸನಂತೆ = ಹೀಗೆ ತೀರ್ಥಂಕರನ ಸಭೆಯೆಂಬ ತಾವರೆಗೊಳದಲ್ಲಿ ತೇಲುವ ರಾಜಹಂಸದಂತೆ, ಅಳಂಕರಿಸುತ್ತುಂ ಬಂದು ಭಗವತ್ + ಪಾದಪೀಠ + ಉಪಕಂಠದೊಳ್ ಸರ್ವಾಂಗ + ಉಪನತನಾಗಿ ನಿಂದಾಗಳ್ = ಬಂದ ಬಾಹುಬಲಿಯ ಪುರುದೇವನ ಪಾದಪೀಠದ ಬಳಿ ಸಾಷ್ಟಾಂಗವೆರಗಿ ನಿಂತುಕೊಂಡು, ನಿಟಿಲತಟಘಟಿತ ಕರಕುಶೇಶಯಕುಟ್ಮಲನಾಗಿ = ತನ್ನ ಕೈಗಳೆಂಬ ಕಮಲದ ಮೊಗ್ಗುಗಳನ್ನು ಹಣೆಯಲ್ಲಿ ಇರಿಸಿಕೊಂಡು

**ಅರ್ಥ:** ಹೀಗೆ ತೀರ್ಥಂಕರನ ಸಭೆಯೆಂಬ ತಾವರೆಗೊಳದಲ್ಲಿ ತೇಲುವ ರಾಜಹಂಸದಂತೆ ಬಂದ ಬಾಹುಬಲಿಯ ಪುರುದೇವನ ಪಾದಪೀಠದ ಬಳಿ ಸಾಷ್ಟಾಂಗವೆರಗಿ ನಿಂತುಕೊಂಡು, ಮುಗಿದ ತನ್ನ ಕೈಗಳೆಂಬ ಕಮಲದ ಮೊಗ್ಗುಗಳನ್ನು ಹಣೆಯಲ್ಲಿ ಇರಿಸಿಕೊಂಡು

> **ಮೊದಲೊಳ್ ದೇವರ ದಯೆಗೆ**
> **ಯ್ದುದಲ್ತೆ ಯುವರಾಜಪದವಿಯೆನಗೀಗಳುಮ**
> **ಭ್ಯುದಯಕರಪ್ರವ್ರಜ್ಯದ**
> **ಪದವಿಯ ಯುವರಾಜಪದವಿಯಂ ದಯೆಗೆಯ್ಯಿಂ** ೧೨೦

**ಪದವಿಭಾಗ-ಅನ್ವಯ-ಅರ್ಥ:** ಮೊದಲೊಳ್ ಎನಗೆ ಯುವರಾಜಪದವಿ ದೇವರ ದಯೆಗೆಯ್ದುದೆ + ಅಲ್ತೆ = ಮೊದಲು ನನಗೆ ತಾವೇ ಅಲ್ಲವೇ ಯುವರಾಜಪದವಿಯನ್ನು ದಯಪಾಲಿಸಿದುದು. ಈಗಳುಂ +

ಅಭ್ಯುದಯಕರಪ್ರವ್ರಜ್ಯದ ಪದವಿಯ = ಈಗಲೂ ಶ್ರೇಯಸ್ಕರವಾದ ಸನ್ಯಾಸದೀಕ್ಷೆಯೆಂಬ, ಯುವರಾಜಪದವಿಯಂ ದಯೆಗೆಯ್ಯಿಂ = ಯುವರಾಜಪದವಿಯನ್ನು ದಯಪಾಲಿಸಿರಿ.

**ಗದ್ಯಾನುಸರಣ:** 'ಈ ಮೊದಲು ನನಗೆ ತಾವೇ ಅಲ್ಲವೇ ಯುವರಾಜಪದವಿಯನ್ನು ದಯಪಾಲಿಸಿದುದು; ಈಗಲೂ ಶ್ರೇಯಸ್ಕರವಾದ ಸನ್ಯಾಸದೀಕ್ಷೆಯೆಂಬ ಯುವರಾಜಪದವಿಯನ್ನು ದಯಪಾಲಿಸಿರಿ.'

**ಗುರುಪದಪದ್ಮಾಂತಿಕದೊಳ್**
**ಪರಮೇಶ್ವರದೀಕ್ಷೆಯಂ ಮನಂ ಬಿಡೆ ಕೊಂಡೀ**
**ಧರೆಯಂ ಪೊಗಟೆಸಿದನಿದೇಂ**
**ಪುರುಪರಮೇಶ್ವರಸುತರ್ ಪರಿಚ್ಛೇದಿಗಳೋ** ೧೨೧

**ಪದವಿಭಾಗ-ಅನ್ವಯ-ಅರ್ಥ:** ಗುರುಪದಪದ್ಮ + ಅಂತಿಕದೊಳ್ = ಗುರುವಿನ ಅಡಿದಾವರೆಗಳ ಬಳಿ, ಪರಮೇಶ್ವರದೀಕ್ಷೆಯಂ = ಜಿನದೀಕ್ಷೆಯನ್ನು, ಮನಂ ಬಿಡೆ ಕೊಂಡು = ಮನಃಪೂರ್ವಕವಾಗಿ ಹೊಂದಿ, ಈ ಧರೆಯಂ ಪೊಗಟೆಸಿದನ್ = ಇಡೀ ಜಗತ್ತೇ ಹೊಗಳುವಂತೆ ಮಾಡಿಕೊಂಡ, ಪುರುಪರಮೇಶ್ವರಸುತರ್ ಇದೇಂ ಪರಿಚ್ಛೇದಿಗಳೋ = ಪುರುದೇವನ ಮಕ್ಕಳು ಅದೆಂತಹ ದೃಢಮನಸ್ಸಿನವರೋ!

**ಗದ್ಯಾನುಸರಣ:** ಗುರುವಿನ ಅಡಿದಾವರೆಗಳ ಬಳಿ ಬಾಹುಬಲಿಯು ಜಿನದೀಕ್ಷೆಯನ್ನು ಮನಃಪೂರ್ವಕವಾಗಿ ಕೈಗೊಂಡ; ಇಡೀ ಜಗತ್ತೇ ಅವನನ್ನು ಹೊಗಳಿತು; ಪುರುದೇವನ ಮಕ್ಕಳು ಅದೆಂತಹ ದೃಢಮನಸ್ಸಿನವರು!

**ವ॥ ಅಂತು ಜೈನದೀಕ್ಷೆಯಂ ಕೈಕೊಂಡು ಗುರುವಿನನುಮತದಿಂ ದ್ವಾದಶಾಂಗಚತುರ್ದಶ ಪೂರ್ವಂಗಳಂ ಕಲ್ತು ತದನುಮತದೊಳ್ ಬಟೆಯಮೇಕವಿಹಾರಿಯಾಗಿ ಸಂವತ್ಸರಾವಧಿವರಂ ಪ್ರತಿಮಾಯೋಗದೊಳ್ ನಿಲೆ,**

**ಅರ್ಥ:** ಅಂತು ಜೈನದೀಕ್ಷೆಯಂ ಕೈಕೊಂಡು ಗುರುವಿನ + ಅನುಮತದಿಂ ದ್ವಾದಶಾಂಗಚತುರ್ದಶಪೂರ್ವಂಗಳಂ ಕಲ್ತು ತತ್ + ಅನುಮತದೊಳ್ ಬಟೆಯಂ + ಏಕವಿಹಾರಿಯಾಗಿ ಸಂವತ್ಸರ + ಅವಧಿವರಂ ಪ್ರತಿಮಾಯೋಗದೊಳ್ ನಿಲೆ = ಹೀಗೆ ಜಿನದೀಕ್ಷೆಯನ್ನು ಹೊಂದಿ ಪುರುದೇವನ ಅಪ್ಪಣೆಯಂತೆ ದ್ವಾದಶಾಂಗಚತುರ್ದಶಪೂರ್ವಗಳನ್ನು ಅಭ್ಯಾಸ ಮಾಡಿದ; ಆನಂತರ ಗುರುವಿನ ಅನಿಜ್ಞೆಯಂತೆ ಒಂದು ವರ್ಷದವರೆಗೆ ಪ್ರತಿಮಾಯೋಗದಲ್ಲಿ ನಿಂತ.

**ಅಡಿವಿಡಿದಿಟ್ಟ ಪುತ್ತುಗಳ ನೆತ್ತಿಗಳಿಂ ನಿಮಿರ್ದಿರ್ದ ಬಳ್ಳಿಗ**
**ಳ್ವಿಡಿದು ವಿಷೋರಗಪ್ರತತಿ ನೋಟಿಸ್ಪೊಡಗುರ್ವಿಸೆ ಸುಯ್ವ ಸುಯ್ಗಳಿಂ**
**ಕಿಡಿ ಪೊಱಪೊಣ್ಮೆ ಬಾಹುಬಲಿಯೋಗಿಯ ಘೋರತಪೋಮಹಾಗ್ನಿಯಿಂ**
**ಸುಡೆ ಸುಟೆಮುಣ್ಮುತಿರ್ಪ ಕಿಡಿಗಳ್ಗೆಣೆಯಾದುವು ತತ್ಪ್ರದೇಶದೊಳ್** ೧೨೨

**ಪದವಿಭಾಗ-ಅನ್ವಯ-ಅರ್ಥ:** ತತ್ + ಪ್ರದೇಶದೊಳ್ = ಆ (ತಪಸ್ಸಿನ) ಜಾಗದಲ್ಲಿ, ಅಡಿ + ಪಿಡಿದು + ಇಟ್ಟ ಪುತ್ತುಗಳ ನೆತ್ತಿಗಳಿಂ = ಅಡಿಗಳಿಂದ

ಒಡಿದು ಬೆಳೆದ ಹುತ್ತಗಳ ಬಾಯಿಗಳಿಂದ, ನಿಮಿರ್ದಿರ್ದ ಬಳ್ಳಿಗಳ್ + ಪಿಡಿದು = ಹಬ್ಬಿದ್ದ ಬಳ್ಳಿಗಳನ್ನು ಅನುಸರಿಸಿ, ವಿಷ + ಉರಗಪ್ರತತಿ = ವಿಷಸರ್ಪಗಳ ಸಮೂಹವು, ನೋೞ್ಪೊಡೆ + ಅಗುರ್ವಿಸೆ = ನೋಡಲು ಭೀಕರವಾಗಿ, ಸುಯ್ವ ಸುಯ್ಗಳಿಂ = ಹೊಮ್ಮುವ ಘೂತ್ಕಾರದಿಂದ, ಕಿಡಿ ಪೊಜಪೊಣ್ಮೆ = ಕಿಡಿಗಳು ಹೊರಸೂಸಲು, ಬಾಹುಬಲಿಯೋಗಿಯ ಘೋರತಪೋಮಹಾ + ಅಗ್ನಿಯಿಂ = ಬಾಹುಬಲಿಯೋಗಿಯ ಅದ್ಭುತವಾದ ತಪಸ್ಸೆಂಬ ಉರಿಯುವ ಬೆಂಕಿಯಿಂದ, ಸುಡೆ ಸುೞಿದು + ಉಣ್ಮುತಿರ್ಪ ಕಿಡಿಗಳ್ಗೆ + ಎಣೆಯಾದುವು = ಸುಡುತ್ತ ಸುಳಿಯುವ ಕಿಡಿಗಳಂತೆ ಕಾಣಿಸಿದುವು.

**ಗದ್ಯಾನುಸರಣ:** ಆತನ ತಪಸ್ಸಿನ ಜಾಗದಲ್ಲಿ ಅಡಿಗಳಿಂದ ಹಿಡಿದು ಹುತ್ತಗಳು ಬೆಳೆದುವು; ಹಬ್ಬಿದ್ದ ಬಳ್ಳಿಗಳನ್ನು ಅನುಸರಿಸಿ ಹುತ್ತಗಳ ಬಾಯಿಗಳಿಂದ ವಿಷಸರ್ಪಗಳ ಸಮೂಹವು ಭೀಕರವಾಗಿ, ಬುಸುಗುಡುತ್ತಿದ್ದುವು; ಅದರಿಂದ ಕಿಡಿಗಳು ಹೊರಸೂಸಿ ಅವು ಬಾಹುಬಲಿಯೋಗಿಯ ಅದ್ಭುತವಾದ ತಪಸ್ಸೆಂಬ ಉರಿಯುವ ಬೆಂಕಿಯಿಂದ ಹೊಮ್ಮುವ ಕಿಡಿಗಳಂತೆ ಕಾಣಿಸಿದುವು.

**ಬಳೆದ ಜಡೆ ನಿಮಿರ್ದ ಬಳ್ಳಿಗ**
**ಳೊಳೆ ಪೆಣೆದು ವಿಷೋರಗಾನಳಾರ್ಚಿಗಳಿಂದಂ**
**ಮಿಳಿರ್ದುವು ಮುನಿಪಧ್ಯಾನಾ**
**ನಳನಿರ್ಯದ್ಧೂಮವೇಣಿಕಾನಿಕರದವೋಲ್** ೧೨೩

**ಪದವಿಭಾಗ–ಅನ್ವಯ–ಅರ್ಥ:** ಬಳೆದ ಜಡೆ = ಗಂಟುಕಟ್ಟಿದ ತಲೆಗೂದಲು, ನಿಮಿರ್ದ ಬಳ್ಳಿಗಳೊಳೆ ಪೆಣೆದು = ಹಬ್ಬಿಕೊಂಡಿದ್ದ ಬಳ್ಳಿಗಳೊಡನೆ ಹೆಣೆದುಕೊಂಡು, ಮುನಿಪಧ್ಯಾನ + ಅನಳನಿರ್ಯತ್ = ಯೋಗಿಯ ತಪಸ್ಸಿನ ಬೆಂಕಿಯಿಂದ ಹೊಮ್ಮುವ, ಧೂಮವೇಣಿಕಾನಿಕರದವೋಲ್ = ಹೊಗೆಯ ಬಳ್ಳಿಗಳಂತೆ, ವಿಷ + ಉರಗ + ಅನಳ + ಅರ್ಚಿಗಳಿಂದಂ = ವಿಷಸರ್ಪಗಳ ಬೆಂಕಿಯ ಜ್ವಾಲೆಗಳಿಂದ, ಮಿಳಿರ್ದುವು = ಅಲುಗಾಡುತ್ತಿದ್ದುವು.

**ಗದ್ಯಾನುಸರಣ:** ಗಂಟುಕಟ್ಟಿದ ತಲೆಗೂದಲು ಹಬ್ಬಿಕೊಂಡಿದ್ದ ಬಳ್ಳಿಗಳೊಡನೆ ಹೆಣೆದುಕೊಂಡು, ಯೋಗಿಯ ತಪಸ್ಸಿನ ಬೆಂಕಿಯಿಂದ ಹೊಮ್ಮುವ ಹೊಗೆಯ ಬಳ್ಳಿಗಳಂತೆ ಕಾಣಿಸುತ್ತ, ವಿಷಸರ್ಪಗಳ ಬೆಂಕಿಯ ಜ್ವಾಲೆಗಳಿಂದ ಅಲುಗಾಡುತ್ತಿದ್ದುವು.

[**ವಿಶೇಷ ವಿಚಾರ:** ಪಂಪ ಇಲ್ಲಿ ನೀಡಿರುವ ಬಾಹುಬಲಿಯ ಪ್ರತಿಮಾಯೋಗದ ಚಿತ್ರವು ತಟ್ಟನೆ ಶ್ರವಣಬೆಳುಗೊಳದ ಬಾಹುಬಲಿ ಮೂರ್ತಿಯನ್ನು ನೆನಪಿಗೆ ತರುತ್ತದೆ; ಅದೂ ಈ ವರ್ಣನೆಗೆ ಅನುಗುಣವಾಗಿದೆ.. ಆ ಮೂರ್ತಿಯನ್ನು ನಿರ್ಮಿಸಿದ್ದು ಚಾವುಂಡರಾಯ, ಪಂಪನಿಗಿಂತ ಸುಮಾರು ನಲುವತ್ತು ವರ್ಷ ಈಚಿನವನು. ಆ ಮೂರ್ತಿಯನ್ನು ಕೆತ್ತಿದವನು ಯಾರೇ ಆಗಿರಲಿ, ಪಂಪನ ಈ ವರ್ಣನೆಯನ್ನು ನೋಡಿಯೇ ತನ್ನ ಮೂರ್ತಿಯನ್ನು ಮನಸ್ಸಿನಲ್ಲಿ ಕಲ್ಪಿಸಿಕೊಂಡು ಆನಂತರ ಕಲ್ಲಿನಲ್ಲಿ ಕಂಡರಸಿರಬೇಕು. ಅಂದರೆ ಕಾವ್ಯ ಶಿಲ್ಪವೊಂದಕ್ಕೆ ಸ್ಫೂರ್ತಿಯಿತ್ತಿದೆ; ಮುಂದೆ ಈ

ಮೂರ್ತಿಯನ್ನು ಕುರಿತು ಅನೇಕ ಕಾವ್ಯಗಳು ಬಂದಿವೆ. ಅಂದರೆ ಶಿಲ್ಪವು ಕಾವ್ಯಕ್ಕೆ ಸ್ಫೂರ್ತಿಯೊದಗಿಸಿದೆ. ಎರಡು ವಿಭಿನ್ನ ಕಲೆಗಳ ಈ ಅನುಸಂಧಾನ ಬಹು ಮುಖ್ಯ ಘಟನೆ]

**ವ। ಅಂತುಗ್ರೋಗ್ರತಪದೊಳಮಾ ಬಾಹುಬಲಿಮುನೀಂದ್ರಂಗೆ ಕೇವಲಜ್ಞಾನಾವಾಪ್ತಿ ಯಾಗದುದರ್ಕೆ ಭರತೇಶ್ವರಂ ವಿಸ್ಮಯಮುತ್ತು ಪೋಗಿ ವೃಷಭನಾಥನಂ ಬೆಸಗೊಳೆ ತಪದೊಳ್ ನಿಂದುಂ ನಿನ್ನ ನೆಲದೊಳ್ ನಿಂದೆವೆಂಬ ಮಾನಕಷಾಯಮವರ್ಗಿನ್ನುಂ ಪತ್ತುವಿಟ್ಟುದಲ್ತದಱಿಂ ಕೇವಲಜ್ಞಾನೋತ್ಪತ್ತಿಯಾಗದಿರ್ದುದು ನೀಂ ಪೋಗಿ ಕಾಲ್ಗೆಱಗಲೊಡಂ ಕೇವಲಜ್ಞಾನಮಕ್ಕುಮೆಂದು ಬೆಸಸಿದೊಡೆ ಲಬ್ಧೋಪದೇಶನಾಗಿ ವಿವಿಧಾರ್ಚನಾಸಮಗ್ರಪರಿಜನ ಪರಿವೃತಂ ರಾಜರಾಜಂ ಮುನಿರಾಜಚರಣಾಂಭೋಜದೊಳ್ ಬಂದೆಱಗಿ ವಿವಿಧಾರ್ಚನೆಗಳಿಂದಮರ್ಚಿಸಿ,**

**ಪದವಿಭಾಗ–ಅನ್ವಯ–ಅರ್ಥ:** ಅಂತು + ಉಗ್ರೋಗ್ರತಪದೊಳಂ = ಹಾಗೆ ಮಹಾ ಉಗ್ರವಾದ ತಪ್ಪನ್ನು ಮಾಡಿಯೂ, ಬಾಹುಬಲಿಮುನೀಂದ್ರಂಗೆ ಕೇವಲಜ್ಞಾನ + ಆವಾಪ್ತಿಯಾಗದುದರ್ಕೆ = ಬಾಹುಬಲಿಗೆ ಕೇವಲಜ್ಞಾನವು ದೊರಕದುದಕ್ಕೆ, ಭರತೇಶ್ವರಂ ವಿಸ್ಮಯಂ + ಉತ್ತು = ಭರತನು ಆಶ್ಚರ್ಯಪಟ್ಟು, ಪೋಗಿ ವೃಷಭನಾಥನಂ ಬೆಸಗೊಳೆ = ಹೋಗಿ ವೃಷಭೇಶ್ವರನನ್ನು ಕೇಳಿದಾಗ, ತಪದೊಳ್ ನಿಂದುಂ ನಿನ್ನ ನೆಲದೊಳ್ ನಿಂದೆವು = ತಪಸ್ಸಿನಲ್ಲಿ ನಿಂತಿದ್ದರೂ ಅದು ನಿನಗೆ ಸೇರಿದ ಜಾಗದ ಮೇಲೆ, ಎಂಬ ಮಾನಕಷಾಯಂ = ಎಂಬ ಮನೋವ್ಯಾಕುಲ, ಅವರ್ಗೆ + ಇನ್ನುಂ ಪತ್ತುವಿಟ್ಟುದಲ್ತು = ಅವರಿಗೆ ಇನ್ನೂ ನಿಂತಿಲ್ಲ, ಅದಱಿಂ ಕೇವಲಜ್ಞಾನ + ಉತ್ಪತ್ತಿ + ಆಗದೆ + ಇರ್ದುದು = ಅದರಿಂದಾಗಿಯೇ ಇನ್ನೂ ಕೇವಲಜ್ಞಾನ ಪ್ರಾಪ್ತವಾಗಿಲ್ಲ, ನೀಂ ಪೋಗಿ ಕಾಲ್ಗೆ + ಎಱಗಲೊಡಂ = ನೀನು ಹೋಗಿ ನಮಸ್ಕರಿಸಿದಾಕ್ಷಣವೇ, ಕೇವಲಜ್ಞಾನಂ + ಅಕ್ಕುಂ = ಕೇವಲಜ್ಞಾನ ದೊರೆಯುತ್ತದೆ, ಎಂದು ಬೆಸಸಿದೊಡೆ = ಎಂದು ಹೇಳಿದಾಗ, ಲಬ್ಧ + ಉಪದೇಶನಾಗಿ = ಆ ಉಪದೇಶವನ್ನು ಪಡೆದವನಾಗಿ, ವಿವಿಧ + ಅರ್ಚನ + ಅಸಮಗ್ರಪರಿಜನ ಪರಿವೃತಂ = ಬಗೆಬಗೆಯ ಪೂಜಾಸಾಮಗ್ರಿಗಳಿಂದಲೂ ಮಿತವಾದ ಪರಿಜನರಿಂದಲೂ ಕೂಡಿ, ರಾಜರಾಜಂ = ಭರತನು, ಬಂದು, ಮುನಿರಾಜಚರಣ + ಅಂಭೋಜದೊಳ್ ಎಱಗಿ = ಮುನಿಶ್ರೇಷ್ಠನ ಅಡಿದಾವರೆಗಳಿಗೆ ಎರಗಿ, ವಿವಿಧ + ಅರ್ಚನೆಗಳಿಂದಂ + ಅರ್ಚಿಸಿ = ನಾನಾ ಬಗೆಯ ಸಾಮಗ್ರಿಗಳಿಂದ ಅವನನ್ನು ಪೂಜಿಸಿ,

**ಗದ್ಯಾನುಸರಣ:** ಹಾಗೆ ಮಹಾ ಉಗ್ರವಾದ ತಪ್ಪನ್ನು ಮಾಡಿಯೂ ಬಾಹುಬಲಿಗೆ ಕೇವಲಜ್ಞಾನವು ದೊರಕದುದಕ್ಕೆ ಭರತನಿಗೆ ಆಶ್ಚರ್ಯವಾಯಿತು; ಹೋಗಿ ವೃಷಭೇಶ್ವರನನ್ನು ವಿಚಾರಿಸಿದ; 'ತಪಸ್ಸಿನಲ್ಲಿ ನಿಂತಿದ್ದರೂ ಅದು ನಿನಗೆ ಸೇರಿದ ಜಾಗದ ಮೇಲೆ ಎಂಬ ಮನೋವ್ಯಾಕುಲ ಅವರಿಗೆ ಇನ್ನೂ ನಿಂತಿಲ್ಲ, ಅದರಿಂದಾಗಿಯೇ ಇನ್ನೂ ಕೇವಲಜ್ಞಾನ ಪ್ರಾಪ್ತವಾಗಿಲ್ಲ, ನೀನು ಹೋಗಿ ನಮಸ್ಕರಿಸಿದಾಕ್ಷಣವೇ ಕೇವಲಜ್ಞಾನ ದೊರೆಯುತ್ತದೆ' ಎಂದು ಪುರುದೇವನು

ಹೇಳಿದ; ಆ ಉಪದೇಶವನ್ನು ಪಡೆದ ಭರತನು ಬಗೆಬಗೆಯ ಪೂಜಾ ಸಾಮಗ್ರಿಗಳಿಂದಲೂ ಮಿತವಾದ ಪರಿಜನರಿಂದಲೂ ಕೂಡಿ ಬಂದು ಆ ಮುನಿಶ್ರೇಷ್ಠನ ಅಡಿದಾವರೆಗಳಿಗೆ ಎರಗಿ, ನಾನಾ ಬಗೆಯಲ್ಲಿ ಪೂಜಿಸಿದ.

**ನಿನ್ನ ಮಡಗೂೞ್ನೆಲಂ ಮಾ**
**ನೋನ್ನತ ನೀನೀಯೆ ಬಂದುದೆನಗಿದನೆನತಂ**
**ದೇನ್ನಿನಗೆ ಬಗೆಯಲಪ್ಪುದೆ**
**ನಿನ್ನನೆ ನೀಂ ಬಗೆಯ ಬಗೆಯದಿರ್ ಪೆಱಪೆಱತಂ** ೧೨೪

**ಪದವಿಭಾಗ–ಅನ್ವಯ–ಅರ್ಥ:** ಮಾನ + ಉನ್ನತ = ಮಹಾ ಸ್ವಾಭಿಮಾನಿಯೇ, ನಿನ್ನ ಮಡಗೂೞ್ + ನೆಲಂ = ಇದು ನಿನ್ನ ಎಂಜಲು ನೆಲ, ನೀನೀಯೆ ಎನಗೆ ಬಂದುದು = ನೀನು ದಯಪಾಲಿಸಿದ್ದರಿಂದಾಗಿ ನನಗೆ ಸಿಕ್ಕಿತು, ಇದನ್ + ಎನತು + ಎಂದು ನಿನಗೆ ಏನ್ ಬಗೆಯಲ್ + ಅಪ್ಪುದೆ = ಇದನ್ನು ನನ್ನದು ಎಂದು ನೀನು ಯೋಚಿಸಬಹುದೇ, ನಿನ್ನನೆ ನೀಂ ಬಗೆಯ = ನಿನ್ನ ಒಳಗನ್ನು ಕುರಿತು ಚಿಂತಿಸು, ಪೆಱಪೆಱತಂ ಬಗೆಯದಿರ್ = ಬೇರೇನನ್ನೂ ಆಲೋಚಿಸಬೇಡ.

**ಗದ್ಯಾನುಸರಣ:** 'ಮಹಾ ಸ್ವಾಭಿಮಾನಿಯೇ, ಇದು ನಿನ್ನ ಎಂಜಲು ನೆಲ, ನೀನು ದಯಪಾಲಿಸಿದ್ದರಿಂದಾಗಿ ನನಗೆ ಸಿಕ್ಕಿತು; ಇದನ್ನು ನನ್ನದು ಎಂದು ನೀನು ಯೋಚಿಸಬಹುದೇ; ನಿನ್ನ ಒಳಗನ್ನು ಕುರಿತು ಚಿಂತಿಸು, ಬೇರೇನನ್ನೂ ಆಲೋಚಿಸಬೇಡ.'

**ಎನಲೊಡಮಂತಃಕರಣದೊ**
**ಳಿನಿಸಾನುಂ ನಿಂದುದೊಂದು ಮಾನಕಷಾಯಂ**
**ಮುನಿಪತಿಗೆ ಪೋಗೆ ಪುಟ್ಟಿದು**
**ದನಂತವಸ್ತುಪ್ರಕಾಶಿಕೇವಳಬೋಧಂ** ೧೨೫

**ಪದವಿಭಾಗ–ಅನ್ವಯ–ಅರ್ಥ:** ಎನಲೊಡಂ = ಎಂದ ತಕ್ಷಣವೇ, ಅಂತಃಕರಣದೊಳ್ ನಿಂದುದು + ಒಂದು ಇನಿಸಾನುಂ ಮಾನಕಷಾಯಂ = ಮನಸ್ಸಿನಲ್ಲಿ ಉಳಿದಿದ್ದ ಅಲ್ಪ ಮನೋವ್ಯಾಕುಲತೆಯು, ಮುನಿಪತಿಗೆ ಪೋಗೆ = ಮುನಿಶ್ರೇಷ್ಠನಲ್ಲಿ ಹೋಗಲು, ಅನಂತವಸ್ತುಪ್ರಕಾಶಿಕೇವಳಬೋಧಂ ಪುಟ್ಟಿದುದು = ಎಲ್ಲ ವಸ್ತುಗಳನ್ನೂ ಬೆಳಗುವ ಕೇವಲಜ್ಞಾನವು ಪ್ರಾಪ್ತವಾಯಿತು.

**ಗದ್ಯಾನುಸರಣ:** ಎಂದ ತಕ್ಷಣವೇ ಬಾಹುಬಲಿಯ ಮನಸ್ಸಿನಲ್ಲಿ ಉಳಿದಿದ್ದ ಅಲ್ಪ ಮನೋವ್ಯಾಕುಲತೆಯೂ ಮುನಿಶ್ರೇಷ್ಠನಲ್ಲಿ ಇಲ್ಲವಾಯಿತು; ಆಗ ಎಲ್ಲ ವಸ್ತುಗಳನ್ನೂ ಬೆಳಗುವ ಕೇವಲಜ್ಞಾನವು ಪ್ರಾಪ್ತವಾಯಿತು.

**ಜಯನಿನದಂ ಸುರದುಂದುಭಿ**
**ಚಯನಿನದಂ ಪುಷ್ಪವರ್ಷಮೊರ್ಮೆಯೆ ಸಕಲೋ**
**ರ್ವಿಯನೆಯ್ದೆ ಪರ್ವುತಿರೆ ಚಿ**
**ತ್ತೆಯ ಸರಿಯಂತೆಱಗಿ ಪೋಮದಮರಸಮಾಜಂ** ೧೨೬

**ಪದವಿಭಾಗ-ಅನ್ವಯ-ಅರ್ಥ:** ಜಯನಿನದಂ = ಜಯಕಾರವೂ, ಸುರದುಂದುಭಿಚಯನಿನದಂ = ದೇವದುಂದುಭಿಸಮೂಹದ ಧ್ವನಿಯೂ. ಪುಷ್ಪವರ್ಷಂ = ಹೂಮಳೆಯೂ, ಸಕಲ + ಉರ್ವಿಯನ್ = ಭೂಮಿಯನ್ನೆಲ್ಲ, ಒರ್ಮೆಯೆ ಎಯ್ದೆ ಪರ್ವುತಿರೆ = ಒಮ್ಮೆಗೇ ಹಬ್ಬುತ್ತಿರಲು, ಅಮರಸಮಾಜಂ = ದೇವಸಮೂಹವು, ಚಿತ್ತೆಯ ಸರಿಯಂತೆ + ಎಱಗಿ ಪೋದುದು = ಚಿತ್ತೆಯ ಮಳೆಯ ಹಾಗೆ ನಮಸ್ಕರಿಸಿ ಹೋದರು.

**ಗದ್ಯಾನುಸರಣ:** ಜಯಕಾರವೂ, ದೇವದುಂದುಭಿಸಮೂಹದ ಧ್ವನಿಯೂ, ಹೂಮಳೆಯೂ ಒಮ್ಮೆಗೇ ಉಂಟಾಗಿ ಭೂಮಿಯನ್ನೆಲ್ಲ ಹಬ್ಬಿತು; ದೇವಸಮೂಹವು ಚಿತ್ತೆಯ ಮಳೆಯ ಹಾಗೆ ನಮಸ್ಕರಿಸಿ ಹೋದರು.

**ವ॥ ಅಂತು ಬಾಹುಬಲಿಕೇವಳಿಯುಂ ನಾನಾದೇಶವಿಹಾರದೊಳ್ ವಿಶ್ವಜನಮಂ ನಿಜವಚೋಮೃತದಿಂ ಭವ್ಯಜನಸಾರ್ಥಮುಮಂ ತಣಿಪಲೆಂದು ಬಂದು ಕೈಲಾಸಶೈಲದೊಳಾದಿ ದೇವರ ಸನ್ನಿಧಿಯೊಳಿರ್ದಂ**

**ಅರ್ಥ:** ಅಂತು ಬಾಹುಬಲಿಕೇವಳಿಯುಂ ನಾನಾದೇಶವಿಹಾರದೊಳ್ ವಿಶ್ವಜನಮಂ ನಿಜವಚೋಮೃತದಿಂ ಭವ್ಯಜನಸಾರ್ಥಮಂ ತಣಿಪಲೆಂದು ಬಂದು ಕೈಲಾಸಶೈಲದೊಳಾದಿದೇವರ ಸನ್ನಿಧಿಯೊಳಿರ್ದಂ ಇಂತು ಭರತೇಶ್ವರನುಮಾ ಮುನೀಶ್ವರನಂ ಪೂಜಿಸಿ = ಹಾಗೆ ಬಾಹುಬಲಿಕೇವಲಿಯು ವಿವಿಧ ದೇಶಗಳನ್ನು ಸುತ್ತುತ್ತ ಎಲ್ಲೆಡೆಯ ಜನರನ್ನು ತನ್ನ ಅಮೃತವಾಕ್ಕುಗಳಿಂದ ತೃಪ್ತಿಪಡಿಸುತ್ತ ಬಂದು ಕೈಲಾಸಪರ್ವತದಲ್ಲಿ ಆದಿದೇವನ ಸಾನ್ನಿಧ್ಯದಲ್ಲಿ ನೆಲಸಿದ.

**ಮನುಕುಳತಿಳಕಂ ವೃಪಭಾ**
**ಗ್ರನಂದನಂ ರಾಜರಾಜನಧಿರಾಜಂ ಚ**
**ಕ್ರನಿಧೀಶನಾದಿಭೂಭುಜ**
**ನೆನೆ ನೆಗಲ್ದಂ ಭರತಚಕ್ರಿ ವಿಶ್ವಂಭರೆಯೊಳ್** ೧೨೭

**ಪದವಿಭಾಗ-ಅನ್ವಯ-ಅರ್ಥ:** ಮನುಕುಳತಿಳಕಂ = ಮನುಕುಲದ ಶ್ರೇಷ್ಠನೂ, ವೃಷಭ + ಅಗ್ರನಂದನಂ = ವೃಷಭನಾಥನ ಹಿರಿಯ ಮಗನೂ, ರಾಜರಾಜನ್ = ರಾಜರರಾಜನೂ, ಅಧಿರಾಜಂ = ಎಲ್ಲ ರಾಜರನ್ನೂ ಅಧೀನಪಡಿಸಿಕೊಂಡವನೂ, ಚಕ್ರನಿಧೀಶನ್ = ಚಕ್ರರತ್ನವನ್ನೂ ನವನಿಧಿಗಳನ್ನೂ ಪಡೆದವನೂ, ಭರತಚಕ್ರಿ = ಆದ ಭರತಚಕ್ರವರ್ತಿಯು, ವಿಶ್ವಂಭರೆಯೊಳ್ ಆದಿಭೂಭುಜನ್ + ಎನೆ ನೆಗಲ್ದಂ = ಜಗತ್ತಿನಲ್ಲಿ ಮೊದಲ ಚಕ್ರವರ್ತಿ ಎಂಬುದಾಗಿ ಪ್ರಸಿದ್ಧನಾದ.

**ಗದ್ಯಾನುಸರಣ:** ಮನುಕುಲದ ಶ್ರೇಷ್ಠನೂ, ವೃಷಭನಾಥನ ಹಿರಿಯ ಮಗನೂ, ರಾಜರ ರಾಜನೂ, ಎಲ್ಲ ರಾಜರನ್ನು ಅಧೀನಪಡಿಸಿಕೊಂಡವನೂ, ಚಕ್ರರತ್ನವನ್ನೂ ನವನಿಧಿಗಳನ್ನೂ ಪಡೆದವನೂ ಆದ ಭರತಚಕ್ರವರ್ತಿಯು, ಜಗತ್ತಿನಲ್ಲಿ ಮೊದಲ ಚಕ್ರವರ್ತಿ ಎಂಬುದಾಗಿ ಪ್ರಸಿದ್ಧನಾದ.

**ಹಿಮದಿಂದಂ ಲವಣಾಂಬುರಾಶಿವರೆಗಂ ಪಟ್ಖಂಡಭೂಮಂಡಳಂ**
**ನಿಮಿರ್ದಾಜ್ಞಾಪ್ರಸರಕ್ಕಗುರ್ವುಗೊಳೆಯುಂ ವಿದ್ಯಾಧರರ್ ಮಾಗಧಾ**

ದ್ಯಮರರ್ ತನ್ನನೆ ನಿಚ್ಚಮೋಲಗಿಸೆಯುಂ ಚಕ್ರೇಶ್ವರಂ ಕೀರ್ತಿವಿ
ಭ್ರಮದಿಂ ಪಜ್ಜಳಿಪನ್ನಮುಜ್ಜಳಿಸಿದಂ ವ್ಯೋಮಾವನೀಭಾಗಮಂ ೧೨೮

**ಪದವಿಭಾಗ–ಅನ್ವಯ–ಅರ್ಥ:** ಹಿಮದಿಂದಂ ಲವಣಾಂಬುರಾಶಿವರೆಗಂ = ಹಿಮಾಲಯದಿಂದ ಉಪ್ಪು ಸಮುದ್ರದವರೆಗಿನ, ಷಟ್ಖಂಡಭೂಮಂಡಳಂ = ಆರು ಖಂಡಗಳುಳ್ಳ ಭೂಮಂಡಲದಲ್ಲಿ, ನಿಮಿರ್ದು + ಆಜ್ಞಾಪ್ರಸರಕ್ಕೆ + ಅಗುರ್ವುಗೊಳೆಯುಂ = ಹಬ್ಬಿ ಅವನ ಆಜ್ಞೆಯನ್ನು ನೆರವೇರಿಸಲು ಹೆದರಿಕೆಯಿಂದ ಕಾಯುತ್ತಿರಲು, ವಿದ್ಯಾಧರರ್ ಮಾಗಧ + ಆದಿ + ಅಮರರ್ = ವಿದ್ಯಾಧರರೂ ಮಾಗಧನೇ ಮುಂತಾದ ದೇವತೆಗಳೂ, ತನ್ನನೆ ನಿಚ್ಚಂ + ಓಲಗಿಸೆಯುಂ = ತನ್ನನ್ನು ಸದಾಕಾಲ ಓಲೈಸುತ್ತಿರಲು, ವ್ಯೋಮ + ಅವನೀಭಾಗಮಂ = ಆಗಸ ಮತ್ತು ಭೂಭಾಗಗಳನ್ನು, ಪಜ್ಜಳಿಪನ್ನಂ = ಬೆಳಗುವ ಹಾಗೆ, ಚಕ್ರೇಶ್ವರಂ ಕೀರ್ತಿವಿಭ್ರಮದಿಂ = ಚಕ್ರವರ್ತಿಯು ತನ್ನ ಕೀರ್ತಿಯ ವಿಲಾಸದಿಂದ, ಉಜ್ಜಳಿಸಿದಂ = ಪ್ರಜ್ವಲಿಸುತ್ತಿದ್ದ.

**ಗದ್ಯಾನುಸರಣ:** ಹಿಮಾಲಯದಿಂದ ಉಪ್ಪು ಸಮುದ್ರದವರೆಗಿನ ಆರು ಖಂಡಗಳುಳ್ಳ ಭೂಮಂಡಲದಲ್ಲಿ ಅವನ ಆಜ್ಞೆಯನ್ನು ನೆರವೇರಿಸಲು ಎಲ್ಲರೂ ಹೆದರಿಕೆಯಿಂದ ಎದುರು ನೋಡುತ್ತಿದ್ದರು; ವಿದ್ಯಾಧರರೂ ಮಾಗಧನೇ ಮುಂತಾದ ದೇವತೆಗಳೂ ಅವನನ್ನು ಸದಾಕಾಲ ಓಲೈಸುತ್ತಿದ್ದರು; ಹೀಗೆ ಆಗಸ ಮತ್ತು ಭೂಭಾಗಗಳನ್ನು ಬೆಳಗುವ ಹಾಗೆ ಚಕ್ರವರ್ತಿಯು ತನ್ನ ಕೀರ್ತಿಯ ವಿಲಾಸದಿಂದ ಪ್ರಜ್ವಲಿಸುತ್ತಿದ್ದ.

**ವ। ಅಂತು ಭರತಮಂಡಳಮನೇಕಚ್ಛತ್ರಚ್ಛಾಯೆಯಿಂದಂ ಪ್ರತಿಪಾಲಿಸುತ್ತುಮಿರೆಯಿರೆ ಸಕಲಚಕ್ರವರ್ತಿ,**

**ಅರ್ಥ:** ಅಂತು ಸಕಲಚಕ್ರವರ್ತಿ ಭರತಮಂಡಳಮನೇಕಚ್ಛತ್ರಚ್ಛಾಯೆಯಿಂದಂ ಪ್ರತಿಪಾಲಿಸುತ್ತುಮಿರೆಯಿರೆ = ಹೀಗೆ ಭರತನು ಇಡೀ ಭರತಮಂಡಲವನ್ನು ತನ್ನ ಒಂದೇ ಬೆಳ್ಗೊಡೆಯ ನೆರಳಿನಲ್ಲಿ ಕಾಪಿಡುತ್ತಿರಲು,

**ಪುರನಿಧಿಶಯ್ಯಾಸನರಾ**
**ಜ್ಯರತ್ನವಾಹನವರೂಥಿನೀನಾಟ್ಯಸಭಾ**
**ಪರಿಕರಸಹಿತಂ ಭರತೇ**
**ಶ್ವರಂಗೆ ಸಮಸಂದುದೀ ದಶಾಂಗಂ ಭೋಗಂ** ೧೨೯

**ಪದವಿಭಾಗ–ಅನ್ವಯ–ಅರ್ಥ:** ಪುರ ನಿಧಿ ಶಯ್ಯಾ + ಆಸನ ರಾಜ್ಯ ರತ್ನ ವಾಹನ ವರೂಥಿನೀ ನಾಟ್ಯಸಭಾ ಪರಿಕರ ಸಹಿತಂ = ಪುರ ನಿಧಿ ಹಾಸಿಗೆ ಪೀಠ ರಾಜ್ಯ ರತ್ನಗಳು ವಾಹನ ಸೈನ್ಯ ನಾಟ್ಯಶಾಲೆ ಮತ್ತು ಪಾತ್ರೆಪಡುಗಗಳೆಂಬ, ಈ ದಶಾಂಗಂ ಭೋಗಂ ಭರತೇಶ್ವರಂಗೆ ಸಮಸಂದುದು = ಭರತನಿಗೆ ದಶಾಂಗಭೋಗವು ಪ್ರಾಪ್ತವಾಯಿತು.

**ಗದ್ಯಾನುಸರಣ:** ಪುರ ನಿಧಿ ಹಾಸಿಗೆ ಪೀಠ ರಾಜ್ಯ ರತ್ನಗಳು ವಾಹನ ಸೈನ್ಯ ನಾಟ್ಯಶಾಲೆ ಮತ್ತು ಪಾತ್ರೆಪಡುಗಗಳೆಂಬ ದಶಾಂಗ ಭೋಗವು ಭರತನಿಗೆ ಪ್ರಾಪ್ತವಾಯಿತು.

**ವ। ಇಂತಯೋಧ್ಯಾಸಿಂಹಾಸನಾಸೀನನುಮುದಿತೋದಿತಸಾಮ್ರಾಜ್ಯಸುಖಾನುಭವನುಂ ಕೃತಕೃತ್ಯನುಮಪ್ಪ ಸಕಲಚಕ್ರವರ್ತಿ,**

**ಅರ್ಥ:** ಇಂತು + ಅಯೋಧ್ಯಾಸಿಂಹಾಸನ + ಆಸೀನನುಂ + ಉದಿತೋದಿತಸಾಮ್ರಾಜ್ಯಸುಖಾನುಭವನುಂ ಕೃತಕೃತ್ಯನುಂ + ಅಪ್ಪ ಸಕಲಚಕ್ರವರ್ತಿ ಹೀಗೆ ಅಯೋಧ್ಯೆಯ ಸಿಂಹಾಸನದಲ್ಲಿ ಕುಳಿತು ಏಳಿಗೆ ಹೊಂದುತ್ತಿರುವ ಸಾಮ್ರಾಜ್ಯಸುಖವನ್ನನುಭವಿಸುತ್ತ ಮಾಡಬೇಕಾದ ಕಾರ್ಯಗಳನ್ನೆಲ್ಲ ನಿರ್ವಹಿಸುತ್ತ ಭರತನು ಸಕಲಚಕ್ರವರ್ತಿಯಾಗಿದ್ದ.

**ಜಿನಪೂಜೋತ್ಸವಮಂ ಮಹಾಮಹಮುಮಂ ತಾಂ ಮಾಡಿ ಸಲ್ವನ್ನೆಗಂ**
**ಧನಮಂ ತಕ್ಕವರ್ಗೀಯವೇೞ್ಪುದದನಂತೇಗೆಯ್ದುಮೊಲ್ಲರ್ ತಪೋ**
**ಧನರಾರಾಧ್ಯಗೃಹಸ್ಥರಾದರೊಳಮಿನ್ನಾರ್ ತಕ್ಕರಾರ್ಯೈವೆನೊ**
**ಯ್ಯನುಪಾಯಾಂತರದಿಂದಮೆಂದೊಸಗೆಯಂ ತದ್ವ್ಯಾಜದಿಂ ಮಾಡಿದಂ** ೧೩೦

**ಪದವಿಭಾಗ–ಅನ್ವಯ–ಅರ್ಥ:** ಜಿನಪೂಜಾ + ಉತ್ಸವಮಂ = ಜಿನಪೂಜೆಯನ್ನೂ, ಮಹಾಮಹಮುಮಂ = ಮಹಾಮಹವೆಂಬ ಪೂಜೆಯನ್ನೂ, ತಾಂ ಮಾಡಿ = ನಾನು ಮಾಡಿ, ತಕ್ಕವರ್ಗೆ ಸಲ್ವನ್ನೆಗಂ = ಯೋಗ್ಯರಿಗೆ ಸಲ್ಲುವಂತೆ, ಧನಮಂ ಈಯವೇೞ್ಪುದು = ಧನವನ್ನು ನೀಡಬೇಕು, ತಪೋಧನರ್ ಅದನ್ ಅಂತು + ಏಗೆಯ್ದುಂ + ಒಲ್ಲರ್ = ಆದರೆ ತಪೋನಿಷ್ಠರು ಅಂಥ ಹಣವನ್ನು ಏನು ಮಾಡಿದರೂ ಸ್ವೀಕರಿಸಲು ಒಪ್ಪರು, ಆರಾಧ್ಯಗೃಹಸ್ಥರಾದರೊಳಂ ಇನ್ನಾರ್ ತಕ್ಕರ್ = ಗೌರವನೀಯ ಗೃಹಸ್ಥರಾದವರು ಇನ್ನು ಯಾರು ಯೋಗ್ಯರು, ಉಪಾಯ + ಅಂತರದಿಂದಂ ಒಯ್ಯನೆ ಆರ್ಯೈವೆನ್ = ಉಪಾಯದಿಂದ ನಯವಾಗಿ ಅದನ್ನು ತಿಳಿಯುತ್ತೇನೆ, ಎಂದು ತತ್ + ವ್ಯಾಜದಿಂ ಒಸಗೆಯಂ ಮಾಡಿದಂ = ಎಂದು ಆಲೋಚಿಸಿ ಆ ಕಾರಣದಿಂದಾಗಿಯೇ ಸತ್ಕಾರ ಸಮಾರಂಭವೊಂದನ್ನು ಏರ್ಪಡಿಸಿದ.

**ಗದ್ಯಾನುಸರಣ:** 'ಜಿನಪೂಜೆಯನ್ನೂ, ಮಹಾಮಹವೆಂಬ ಪೂಜೆಯನ್ನೂ ನಾನು ಮಾಡಿ ಯೋಗ್ಯರಿಗೆ ಧನವನ್ನು ನೀಡಬೇಕು; ಆದರೆ ತಪೋನಿಷ್ಠರು ಅಂಥ ಹಣವನ್ನು ಏನು ಮಾಡಿದರೂ ಸ್ವೀಕರಿಸಲು ಒಪ್ಪರು; ಹೀಗಾಗಿ ಗೌರವನೀಯ ಗೃಹಸ್ಥರಾದವರು ಇನ್ನು ಯಾರು ಯೋಗ್ಯರು. ಉಪಾಯದಿಂದ ನಯವಾಗಿ ಅದನ್ನು ತಿಳಿಯುತ್ತೇನೆ', ಎಂದು ಆಲೋಚಿಸಿದ ಭರತನು ಆ ಕಾರಣದಿಂದಾಗಿಯೇ ಸತ್ಕಾರ ಸಮಾರಂಭವೊಂದನ್ನು ಏರ್ಪಡಿಸಿದ.

**ವ। ಅಂತು ಮಾಡಿ,**

**ಅರ್ಥ:** ಅಂತು ಮಾಡಿ = ಹಾಗೆ ಏರ್ಪಡಿಸಿ.

**ಹರಿತಾಂಕುರಫಳಪುಷ್ಪೋ**
**ತ್ಕರಂಗಳಂ ಪೊಸತೆ ಮೊಳೆತ ಧಾನ್ಯಂಗಳನಾ**
**ಧರಣೀಶಂ ಕೆದಱಿಸಿದಂ**
**ನಿರಂತರಂ ರಾಜಗೇಹದೊಳಗಂ ಪೊಱಗಂ** ೧೩೧

**ಪದವಿಭಾಗ-ಅನ್ವಯ-ಅರ್ಥ:** ಹರಿತ + ಅಂಕುರ ಫಳ ಪುಷ್ಪ + ಉತ್ಕರಂಗಳಂ = ಹಸುರು ಕುಡಿಗಳು ಹಣ್ಣು ಹೂಗಳ ರಾಶಿಯನ್ನೂ, ಪೊಸತೆ ಮೊಳೆತ ಧಾನ್ಯಂಗಳನ್ = ಅದೇ ತಾನೆ ಮೊಳಕೆಯೊಡೆದ ಧಾನ್ಯಗಳನ್ನೂ ಅರಮನೆಯ ಒಳಗೂ ಹೊರಗೂ, ಧರಣೀಶಂ ನಿರಂತರಂ ಕೆದಱಿಸಿದಂ = ರಾಜನು ದಟ್ಟವಾಗಿ ಚೆಲ್ಲಿಸಿದ.

**ಗದ್ಯಾನುಸರಣ:** ಹಸುರು ಕುಡಿಗಳು ಹಣ್ಣು ಹೂಗಳ ರಾಶಿಯನ್ನೂ, ಅದೇ ತಾನೆ ಮೊಳಕೆಯೊಡೆದ ಧಾನ್ಯಗಳನ್ನೂ ಅರಮನೆಯ ಒಳಗೂ ಹೊರಗೂ, ರಾಜನು ದಟ್ಟವಾಗಿ ಚೆಲ್ಲಿಸಿದ.

**ಕೆದಱಿಸಿ ಬೞಿಯಂ ಬರವೇ**
**ೞ್ವುದುಮಲ್ಲಿ ಕೆಲರ್ ಪಿವೇಕರಹಿತರ್ ಬಂದರ್**
**ಮೊದಲೊಳ್ ಪೊಕ್ಕರ್ ಬ್ರತಮಿ**
**ಲ್ಲದವರ್ ತುೞಿಯುತ್ತುಮಂಕುರಂಗಳನಾಗಳ್** ೧೩೨

**ಪದವಿಭಾಗ-ಅನ್ವಯ-ಅರ್ಥ:** ಕೆದಱಿಸಿ ಬೞಿಯಂ ಬರವೇೞ್ವುದುಂ = ಹಾಗೆ ಚೆಲ್ಲಿಸಿದ ಬಳಿಕ ಜನರನ್ನು ಬರಹೇಳುವುದೂ, ಅಲ್ಲಿ ಕೆಲರ್ ಪಿವೇಕರಹಿತರ್ ='ವರಲ್ಲಿ ಕೆಲವು ಮಂದಿ ಅವಿವೇಕಿಗಳೂ, ಬ್ರತಮಿಲ್ಲದವರ್ = ವ್ರತಹೀನರೂ, ಆಗಳ್ ಅಂಕುರಂಗಳನ್ ತುೞಿಯುತ್ತುಂ = ಎಳೆಯ ಕುಡಿಗಳನ್ನು ತುಳಿದುಕೊಂಡೇ, ಬಂದರ್ ಮೊದಲೊಳ್ ಪೊಕ್ಕರ್ = ಬಂದು ಮೊದಲು ಒಳಸೇರಿದರು.

**ಗದ್ಯಾನುಸರಣ:** ಹಾಗೆ ಚೆಲ್ಲಿಸಿದ ಬಳಿಕ ಜನರನ್ನು ಬರಹೇಳಿದ; ಆಗ ಅವರಲ್ಲಿ ಕೆಲವು ಮಂದಿ ಅವಿವೇಕಿಗಳೂ ವ್ರತಹೀನರೂ ಎಳೆಯ ಕುಡಿಗಳನ್ನು ತುಳಿದುಕೊಂಡೇ ಆತುರದಿಂದ ಒಳಗೆ ಬಂದರು.

**ಸಾವದ್ಯಭೀರುಗಳ್ ಕೆಲ**
**ರಾ ವಿವಿಧಫಲಪ್ರಸೂನಪಲ್ಲವತತಿಯಿಂ**
**ತೀವಿದ ರಾಜಾಂಗಣಮನಿ**
**ಳಾವಂದ್ಯರ್ ಮೆಟ್ಟಲೊಲ್ಲದಲ್ಲಿಯೆ ನಿಂದರ್** ೧೩೩

**ಪದವಿಭಾಗ-ಅನ್ವಯ-ಅರ್ಥ:** ಸಾವದ್ಯಭೀರುಗಳ್ ಇಳಾವಂದ್ಯರ್ ಕೆಲರ್ = ಪಾಪಭೀತರೂ ಗೌರವಭಾಜನರೂ ಆದ ಕೆಲವರು, ವಿವಿಧಫಲಪ್ರಸೂನ ಪಲ್ಲವತತಿಯಿಂ ತೀವಿದ = ಬಗೆ ಬಗೆಯ ಹಣ್ಣು ಹೂ ಚಿಗುರುಗಳಿಂದ ತುಂಬಿದ್ದ, ರಾಜಾಂಗಣಮನ್ = ಅರಮನೆಯ ಅಂಗವಳನ್ನು ಮೆಟ್ಟಲ್ + ಒಲ್ಲದೆ + ಅಲ್ಲಿಯೆ ನಿಂದರ್ = ತುಳಿಯಲು ಇಷ್ಟಪಡದೆ ಅಲ್ಲಿಯೇ ನಿಂತುಕೊಂಡರು.

**ಗದ್ಯಾನುಸರಣ:** ಪಾಪಭೀತರೂ ಗೌರವಭಾಜನರೂ ಆದ ಕೆಲವರು ಬಗೆ ಬಗೆಯ ಹಣ್ಣು ಹೂ ಚಿಗುರುಗಳಿಂದ ತುಂಬಿದ್ದ ಅರಮನೆಯ ಅಂಗವಳನ್ನು ತುಳಿಯಲು ಇಷ್ಟಪಡದೆ ಅಲ್ಲಿಯೇ ನಿಂತುಕೊಂಡರು.

**ನಿಲಲೊಡಮನಿಬರುಮಂ ಭೂ**
**ತಲಪತಿ ಬಟಿಯಟ್ಟಿ ಬರಿಸೆ ಪೆಜತೊಂದೆಡೆಯೊಳ್**
**ಮಲರಹಿತರ್ ಬಂದು ಧರಾ**
**ಲಲನಾಧೀಶಂಗೆ ವಿನತಮಸ್ತಕರಾದರ್** ೧೩೪

**ಪದವಿಭಾಗ–ಅನ್ವಯ–ಅರ್ಥ:** ನಿಲಲೊಡಂ = ಹಾಗೆ ನಿಂತಾಗ, ಭೂತಲಪತಿ ಬಟಿಯಟ್ಟಿ = ರಾಜನು ದೂತರನ್ನು ಕಳಿಸಿ, ಪೆಜತು + ಒಂದು + ಎಡೆಯೊಳ್ = ಮತ್ತೊಂದು ದಾರಿಯಿಂದ, ಅನಿಬರುಮಂ ಬರಿಸೆ = ಅವರೆಲ್ಲರನ್ನೂ ಬರಮಾಡಿಕೊಳ್ಳಲು, ಮಲರಹಿತರ್ ಬಂದು = ಆ ನಿರ್ಮಲರು ಬಂದು, ಧರಾಲಲನಾ + ಅಧೀಶಂಗೆ = ಮಹಾರಾಜನಿಗೆ, ವಿನತಮಸ್ತಕರ್ + ಆದರ್ = ತಲೆಬಾಗಿದವರಾದರು.

**ಗದ್ಯಾನುಸರಣ:** ಹಾಗೆ ನಿಂತಾಗ ರಾಜನು ದೂತರನ್ನು ಕಳಿಸಿ ಮತ್ತೊಂದು ದಾರಿಯಿಂದ ಅವರೆಲ್ಲರನ್ನೂ ಬರಮಾಡಿಕೊಂಡ; ಆ ನಿರ್ಮಲರು ಬಂದು ಮಹಾರಾಜನಿಗೆ ತಲೆಬಾಗಿ ನಿಂತರು.

**ವ॥ ಆಗಳ್ ಭರತೇಶ್ವರಚಕ್ರವರ್ತಿ ನೀಮಿನಿಬರುಮಿವರ್ ಬಂದ ಮಾರ್ಗದೊಳ್ ಬಾರದೆ ಪೆಜತೊಂದು ಮಾರ್ಗದೊಳೇಕೆ ಬಂದಿರೆಂದು ಬೆಸಗೊಳೆ,**

**ಪದವಿಭಾಗ–ಅನ್ವಯ–ಅರ್ಥ:** ಆಗಳ್ ಭರತೇಶ್ವರಚಕ್ರವರ್ತಿ = ಆಗ ಭರತಚಕ್ರವರ್ತಿಯು, ನೀಂ + ಇನಿಬರುಂ + ಇವರ್ ಬಂದ ಮಾರ್ಗದೊಳ್ ಬಾರದೆ = ನೀವಿಷ್ಟೂ ಜನರು ಇತರರು ಬಂದ ದಾರಿಯಲ್ಲಿ ಬಾರದೆ, ಪೆಜತೆ + ಒಂದು ಮಾರ್ಗದೊಳ್ + ಏಕೆ ಬಂದಿರ್ = ಬೇರೊಂದು ದಾರಿಯಲ್ಲೇಕೆ ಬಂದಿರಿ, ಎಂದು ಬೆಸಗೊಳೆ = ಎಂದು ಕೇಳಲು,

**ಗದ್ಯಾನುಸರಣ:** ಆಗ ಭರತಚಕ್ರವರ್ತಿಯು, 'ನೀವಿಷ್ಟೂ ಜನರು ಇತರರು ಬಂದ ದಾರಿಯಲ್ಲಿ ಬಾರದೆ ಬೇರೊಂದು ದಾರಿಯಲ್ಲೇಕೆ ಬಂದಿರಿ?' ಎಂದು ಕೇಳಿದ.

**ಫಳಕುಸುಮಪ್ರವಾಳಹರಿತಾಂಕುರರಾಜಿಯೊಳಲ್ಲಿ ಜೀವಸಂ**
**ಕುಳಮಳವಲ್ಲದುಂಟದಜಿನಾಗದು ಪರ್ವದಿನಂಗಳೊಳ್ ಬ್ರತಂ**
**ಗಳನೊಡಗೂಡಿ ನಿಂದೆಮಗೆ ಮೆಟ್ಟಲಿಳೇಶ್ವರ ಕೇಳ್ದಪಾವಿದಂ**
**ತಿಳಿಯೆ ಗಣಾಧಿಪರ್ ಬೆಸಸೆ ರುಂದ್ರಜಿನೇಂದ್ರಸಭಾಂತರಾಳದೊಳ್** ೧೩೫

**ಪದವಿಭಾಗ–ಅನ್ವಯ–ಅರ್ಥ:** ಫಳ ಕುಸುಮ ಪ್ರವಾಳ ಹರಿತ + ಅಂಕುರರಾಜಿಯೊಳ್ + ಅಲ್ಲಿ = ಹಣ್ಣು ಹೂ ಮೊಗ್ಗು ಹಸಿರು ಕುಡಿಗಳಲ್ಲಿ, ಜೀವಸಂಕುಳಂ + ಅಳವಲ್ಲದೆ + ಉಂಟು = ಜೀವಸಮುದಾಯವು

ತುಂಬಿಕೊಂಡಿದೆ. ಅದಱಿನ್ = ಆ ಕಾರಣದಿಂದ, ಪರ್ವದಿನಂಗಳೊಳ್ ಬ್ರತಂಗಳನ್ + ಒಡಗೂಡಿ ನಿಂದ + ಎಮಗೆ ಮೆಟ್ಟಲ್ ಆಗದು = ಹಬ್ಬಗಳಂದು ವ್ರತವನ್ನು ತೊಟ್ಟ ನಾವು ತುಳಿಯಬಾರದು, ಇಳೇಶ್ವರ = ಮಹಾರಾಜ, ರುಂದ್ರಜಿನೇಂದ್ರಸಭಾ + ಅಂತರಾಳದೊಳ್ = ತೀರ್ಥಂಕರನ ಮಹಾ ಸಮವಸರಣದಲ್ಲಿ, ಗಣಾಧಿಪರ್ ಇದಂ ತಿಳಿಯೆ ಬೆಸಸೆ = ಗಣಧರರು ಇದನ್ನು ತಿಳಿಯಹೇಳಿದ್ದರಿಂದ, ಆವು ಕೇಳ್ದೆವು = ನಾವು ತಿಳಿದುಕೊಂಡೆವು.

**ಗದ್ಯಾನುಸರಣ:** 'ಹಣ್ಣು ಹೂ ಮೊಗ್ಗು ಹಸಿರು ಕುಡಿಗಳಲ್ಲೆಲ್ಲ ಜೀವವು ತುಂಬಿಕೊಂಡಿದೆ; ಆದ್ದರಿಂದ ಹಬ್ಬಗಳಂದು ವ್ರತವನ್ನು ತೊಟ್ಟ ನಾವು ತುಳಿಯಬಾರದು; ಮಹಾರಾಜ, ತೀರ್ಥಂಕರನ ಮಹಾ ಸಮವಸರಣದಲ್ಲಿ ಗಣಧರರು ಇದನ್ನು ತಿಳಿಯಹೇಳಿದ್ದರು; ಅದನ್ನು ಕೇಳಿ ನಾವು ತಿಳಿದುಕೊಂಡೆವು.'

**ವ॥ ಅದಱಿಂ ಪ್ರವಾಳಪತ್ರಪುಷ್ಪಾಂಕುರಂಗಳಿಂದಂ ಸಂಕೀರ್ಣಮಪ್ಪ ರಾಜಾಂಗಣಮಂ ಮೆಟ್ಟದೆ ಪೆಱತೊಂದು ಬಟ್ಟೆಯೊಳ್ ಬಂದೆವೆಂಬುದುಂ ನಾಭಿನಂದನನಂದನನವರ ದೃಢವ್ರತಕ್ಕೆ ಮೆಚ್ಚಿ ದಾನಸನ್ಮಾನಯೋಗ್ಯರಪ್ಪರೆಂದು ಪದ್ಮನಿಧಿಯೆಂಬ ನಿಧಿಯಂ ತರಿಸಿ ತಪನೀಯ ಸೂತ್ರದೊಳೇಕಾದ್ಯೇಕೋತ್ತರದಶಾಂತಂಬರಮವರ ನೆಲೆಗಳೊಳ್ ಬ್ರಹ್ಮಸೂತ್ರಾಭಿಧಾನ ಯಜ್ಞೋಪವೀತದಿಂ ಪವಿತ್ರಗಾತ್ರರ್ಮಾಡಿ,**

**ಪದವಿಭಾಗ–ಅನ್ವಯ–ಅರ್ಥ:** ಅದಱಿಂ ಪ್ರವಾಳ ಪತ್ರ ಪುಷ್ಪ + ಅಂಕುರಂಗಳಿಂದಂ = ಹೀಗಾಗಿ ಮೊಗ್ಗು ಎಲೆ ಹೂ ಚಿಗುರುಗಳಿಂದ, ಸಂಕೀರ್ಣಂ + ಅಪ್ಪ ರಾಜ + ಅಂಗಣಮಂ ಮೆಟ್ಟದೆ = ತುಂಬಿದ್ದ ಅರಮನೆಯ ಅಂಗಳದಲ್ಲಿ ನಡೆಯದೆ, ಪೆಱತೊಂದು ಬಟ್ಟೆಯೊಳ್ ಬಂದೆವು = ಬೇರೆಯೇ ದಾರಿಯಲ್ಲಿ ಬಂದೆವು, ಎಂಬುದುಂ = ಎನ್ನಲು, ನಾಭಿನಂದನನಂದನನ್ + ಅವರ ದೃಢವ್ರತಕ್ಕೆ ಮೆಚ್ಚಿ = ನಾಭಿರಾಜನ ಮಗನ ಮಗನಾದ ಭರತನು ಅವರ ದೃಢವ್ರತಕ್ಕೆ ಮೆಚ್ಚಿ, ದಾನಸನ್ಮಾನಯೋಗ್ಯರ್ + ಅಪ್ಪರ್ + ಎಂದು = ಇವರು ತನ್ನ ದಾನ ಮತ್ತು ಸತ್ಕಾರಗಳಿಗೆ ಅರ್ಹರೆಂದು, ಪದ್ಮನಿಧಿಯೆಂಬ ನಿಧಿಯಂ ತರಿಸಿ = ಪದ್ಮನಿಧಿಯೆಂಬ ನಿಧಿಯನ್ನು ತರಿಸಿ, ತಪನೀಯಸೂತ್ರದೊಳ್ = ಚಿನ್ನದ ಎಳೆಯಿಂದ, ಏಕ + ಆದಿ + ಏಕೋತ್ತರದಶಾಂತಂಬರಂ = ಒಂದರಿಂದ ಹನ್ನೊಂದರವರೆಗೂ, ಅವರ ನೆಲೆಗಳೊಳ್ = ಅವರ ಮಟ್ಟಗಳಿಗನುಸಾರವಾಗಿ, ಬ್ರಹ್ಮಸೂತ್ರ + ಅಭಿಧಾನ = ಬ್ರಹ್ಮಸೂತ್ರ ಎಂಬ ಹೆಸರಿನ, ಯಜ್ಞೋಪವೀತದಿಂ ಪವಿತ್ರಗಾತ್ರರ್ + ಮಾಡಿ = ಯಜ್ಞೋಪವೀತದಿಂದ ಪವಿತ್ರದೇಹಿಗಳನ್ನಾಗಿ ಮಾಡಿ.

**ಗದ್ಯಾನುಸರಣ:** 'ಹೀಗಾಗಿ ಮೊಗ್ಗು ಎಲೆ ಹೂ ಚಿಗುರುಗಳಿಂದ ತುಂಬಿದ್ದ ಅರಮನೆಯ ಅಂಗಳದಲ್ಲಿ ನಡೆಯದೆ ಬೇರೆಯೇ ದಾರಿಯಲ್ಲಿ ಬಂದೆವು' ಎಂದರು; ಅವರ ದೃಢವ್ರತದ ಬಗ್ಗೆ ಭರತನಿಗೆ ಮೆಚ್ಚಿಕೆಯುಂಟಾಯಿತು; ಇವರು ತನ್ನ ದಾನ ಮತ್ತು ಸತ್ಕಾರಗಳಿಗೆ ಅರ್ಹರೆಂದು ತಿಳಿದು ಪದ್ಮನಿಧಿಯೆಂಬ ನಿಧಿಯನ್ನು ತರಿಸಿದ; ಅದರಲ್ಲಿನ ಚಿನ್ನದಿಂದ ಒಂದರಿಂದ ಹನ್ನೊಂದು ಚಿನ್ನದ ಎಳೆಗಳಿಂದ ಕೂಡಿದ

ಬ್ರಹ್ಮಸೂತ್ರ ಎಂಬ ಹೆಸರಿನ ಯಜ್ಞೋಪವೀತಗಳನ್ನು ಅವರವರ ಮಟ್ಟಗಳಿಗನು ಸಾರವಾಗಿ ನೀಡಿ ಅವರನ್ನು ಪವಿತ್ರದೇಹಿಗಳನ್ನಾಗಿ ಮಾಡಿದ.

**ಬ್ರತಹೀನರನನಿಬರುಮಂ**
**ಕ್ಷಿತಿಪತಿ ಬೇರ್ಜಿಸಿ ಮಾನ್ಯರಂ ಮನ್ನಿಸೆ ತ**
**ದ್ವ್ರತಹೀನರುಮಂದಖಿಳ**
**ಬ್ರತಮಂ ಕೈಕೊಳ್ವ ಬಗೆಗೆ ಬಗೆಯಂ ತಂದರ್** ೧೩೬

**ಪದವಿಭಾಗ–ಅನ್ವಯ–ಅರ್ಥ:** ಕ್ಷಿತಿಪತಿ ಅನಿಬರುಮಂ ಬ್ರತಹೀನರನ್ ಬೇರ್ಜಿಸಿ = ಚಕ್ರವರ್ತಿಯು ಎಲ್ಲ ವ್ರತಹೀನರನ್ನೂ ಬೇರೆಯಾಗಿಸಿ, ಮಾನ್ಯರಂ ಮನ್ನಿಸೆ = ಶ್ರೇಷ್ಠರಾದವರನ್ನು ಗೌರವಿಸಿದಾಗ, ಅಂದು ತತ್ + ವ್ರತಹೀನರುಂ = ಆಗ ಆ ವ್ರತಹೀನರು ಕೂಡ, ಅಖಿಳಬ್ರತಮಂ ಕೈಕೊಳ್ವ ಬಗೆಗೆ = ವ್ರತಗಳನ್ನೆಲ್ಲ ಕೈಕೊಳ್ಳುವ ಕುರಿತು, ಬಗೆಯಂ ತಂದರ್ = ನಿರ್ಧಾರ ಮಾಡಿದರು.

**ಗದ್ಯಾನುಸರಣ:** ಚಕ್ರವರ್ತಿಯು ಎಲ್ಲ ವ್ರತಹೀನರನ್ನೂ ಬೇರೆಯಾಗಿಸಿ ಶ್ರೇಷ್ಠರಾದವರನ್ನು ಗೌರವಿಸಿದಾಗ ಆ ವ್ರತಹೀನರು ಕೂಡ, ವ್ರತಗಳನ್ನು ಕೈಕೊಳ್ಳುವ ನಿರ್ಧಾರ ಮಾಡಿದರು.

**ವ॥ ಭರತೇಶ್ವರಂ ತಾನುಂ ಭಟ್ಟಾರಕರ ಸಮಕ್ಷದೊಳ್ ಸಮಾಕರ್ಣಿತೋಪಾಸಕಾಧ್ಯಯ ನನಪ್ಪುದಜೆಂದಂ ಆರೇನಂ ಬೇಟ್ಟಿರವರ್ಗದನೆ ಕೊಟ್ಟು ಪೂಜೆ ವಾರ್ತೆ ದತ್ತಿ ಸ್ವಾಧ್ಯಾಯ ಸಂಯಮ ತಪೋನುಷ್ಠಾನಂಗಳಿವು ನಿಮಗೆ ಕುಲಾಚಾರಗಳೆಂದಜಿಯೆ ಪೇೞ್ದು ಕೈಕೊಳಿಸಿ**

**ಪದವಿಭಾಗ–ಅನ್ವಯ–ಅರ್ಥ:** ಭರತೇಶ್ವರಂ ತಾನುಂ = ಭರತನು ತಾನೂ, ಮುನ್ನೆ ಭಟ್ಟಾರಕರ ಸಮಕ್ಷದೊಳ್ = ಮೊದಲು ಭಟ್ಟಾಕರ ಸನ್ನಿಧಿಯಲ್ಲಿ, ಸಮಾಕರ್ಣಿತ = ಕೇಳೀ, ಉಪಾಸಕ + ಅಧ್ಯಯನನ್ + ಅಪ್ಪುದಜೆಂದಂ = ಉಪಾಸಕಾಧ್ಯಯನಯನವನ್ನು ಮಾಡಿದ್ದರಿಂದ, ಆರ್ + ಏನಂ ಬೇಟ್ಟಿರ್ = ಯಾರು ಏನು ಕೇಳುತ್ತಾರೆಯೋ, ಅವರ್ಗೆ + ಅದನೆ ಕೊಟ್ಟು = ಅವರಿಗೆ ಅದನ್ನಿತ್ತು, ಪೂಜೆ ವಾರ್ತೆ ದತ್ತಿ ಸ್ವಾಧ್ಯಾಯ ಸಂಯಮ ತಪೋನುಷ್ಠಾನಂಗಂ ಬೆರಸು ಆರ್ಯಷಟ್ಕರ್ಮಂಗಳಂ = ಪೂಜೆ ವಾರ್ತೆ ದತ್ತಿ ಸ್ವಾಧ್ಯಾಯ ಸಂಯಮ ತಪೋನುಷ್ಠಾನಗಳು ಆರ್ಯ ಷಟ್ಕರ್ಮಗಳನ್ನು, ನಿಮಗೆ + ಇವು ಕುಲ + ಆಚಾರಂಗಳ್ + ಎಂದು + ಅಜಿಯೆ ಪೇೞ್ದು ಕೈಕೊಳಿಸಿ = ಇವು ನಿಮಗೆ ಕುಲಾಚಾರಗಳು ಎಂದು ತಿಳಿಯ ಹೇಳಿ ಅವುಗಳನ್ನು ಕೈಗೊಳ್ಳುವಂತೆ ಮಾಡಿ,

**ಗದ್ಯಾನುಸರಣ:** ಭರತನು ತಾನೂ ಈ ಮೊದಲು ಭಟ್ಟಾಕರ ಸನ್ನಿಧಿಯಲ್ಲಿ ಉಪದೇಶ ಪಡೆದ = ಉಪಾಸಕಾಧ್ಯಯನಯನವನ್ನು ಮಾಡಿದ್ದರಿಂದ, ಯಾರು ಏನು ಕೇಳುತ್ತಾರೆಯೋ ಅವರಿಗೆ ಅದನ್ನಿತ್ತ; ಅನಂತರ, ಪೂಜೆ ವಾರ್ತೆ ದತ್ತಿ ಸ್ವಾಧ್ಯಾಯ ಸಂಯಮ ತಪೋನುಷ್ಠಾನಗಳು ಇವುಗಳ ಆಚರಣೆಯಿಂದ ಕೂಡಿದ ಆರ್ಯ ಷಟ್ಕರ್ಮಗಳನ್ನು – 'ಇವು ನಿಮಗೆ ಕುಲಾಚಾರಗಳು' ಎಂದು ತಿಳಿಯ ಹೇಳಿ ಅವುಗಳನ್ನು ಕೈಗೊಳ್ಳುವಂತೆ ಮಾಡಿದ.

**ಆಱುಂ ವೃತ್ತಿಗಳನಿವಂ**
**ಮೀರಿದರಲ್ಲರ್ ದ್ವಿಜನ್ಮರೀ ವೃತ್ತಿಗಳಿಂ**
**ಬೇಱಾದರ್ ದ್ವಿಜರುಂತೇಂ**
**ಬೇಱುಂಟೆ ಮನುಷ್ಯಜಾತಿ ತಾನೊಂದೆ ವಲಂ** ೧೩೭

**ಪದವಿಭಾಗ–ಅನ್ವಯ–ಅರ್ಥ:** ಇವಂ ಆಱುಂ ವೃತ್ತಿಗಳನ್ ಮೀರಿದರ್ = ಈ ಆರು ಕರ್ತವ್ಯಗಳನ್ನು ಮೀರುವವರು. ದ್ವಿಜನ್ಮರ್ ಅಲ್ಲರ್ = ದ್ವಿಜರೇ ಅಲ್ಲ, ದ್ವಿಜರ್ ಈ ವೃತ್ತಿಗಳಿಂ ಬೇಱ್ + ಆದರ್ = ದ್ವಿಜರು ಈ ಕರ್ತವ್ಯಗಳ ಕಾರಣದಿಂದಲೇ ಭಿನ್ನರಾದವರು. ಉಂತೇಂ ಬೇಱ್ + ಉಂಟೆ = ಅಲ್ಲವೆ ಬೇರೆಯಿದೆಯೇ, ಮನುಷ್ಯಜಾತಿ ತಾನೊಂದೆ ವಲಂ = ಮನುಷ್ಯಸಂಕುಲವೆಲ್ಲ ಒಂದೇ ಅಲ್ಲವೇ!

**ಗದ್ಯಾನುಸರಣ:** ಈ ಆರು ಕರ್ತವ್ಯಗಳನ್ನು ಮೀರುವವರು ದ್ವಿಜರೇ ಅಲ್ಲ; ದ್ವಿಜರು ಈ ಕರ್ತವ್ಯಗಳ ಕಾರಣದಿಂದಲೇ ಭಿನ್ನರಾದವರು. ಉಂತುಮಂ = ಅಷ್ಟಲ್ಲದೆ ಬೇರೆಯಿದೆಯೇ? ಮನುಷ್ಯಜಾತಿ ತಾನೊಂದೆ ವಲಂ = ಮನುಷ್ಯಸಂಕುಲವೆಲ್ಲ ಒಂದೇ ಅಲ್ಲವೇ!

[**ವಿಶೇಷ ವಿಚಾರ:** 'ಮನುಷ್ಯಜಾತಿ ತಾನೊಂದೆ ವಲಂ' ಎಂಬ ಮಾತು ಪೂರ್ವ ಪುರಾಣದ 'ಮನುಷ್ಯಜಾತಿರೇಕೈವ' ಎಂಬ ಮಾತಿನ (ಪೂ.ಪು. ೩೮.೪೫) ಭಾಷಾಂತರ. ಆ ಶ್ಲೋಕದ ಮುಂದಿನ ಭಾಗವಾದ 'ವೃತ್ತಿಭೇದಾಚ್ಚಾತುರ್ವಿಧ್ಯ ಮಿಹಾಶ್ನುತೇ' ಎಂದರೆ 'ವೃತ್ತಿಗಳ ಭೇದದಿಂದ ನಾಲ್ಕು (ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ) ಭೇದವನ್ನು ಹೊಂದುತ್ತದೆ' ಎಂಬ ಮಾತು 'ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮವಿಭಾಗಶಃ' ಎಂಬ ಗೀತೆಯ ಮಾತನ್ನು ಹೋಲುತ್ತದೆ. ಪೂರ್ವಪುರಾಣದ ಹೊತ್ತಿಗೇ ಗೀತೆಯಲ್ಲಿ ಈ ಶ್ಲೋಕ ಇದ್ದಿರಬಹುದು. ಇಲ್ಲಿ ಇನ್ನೊಂದು ಅಂಶವನ್ನು ಗಮನಿಸಬೇಕು: ಮನುಷ್ಯಸಂಕುಲವೆಲ್ಲ ಒಂದೇ ಎನ್ನುವಾಗ ಪುರಾಣಕಾರರ ಅಭಿಪ್ರಾಯ ಏನಿರಬಹುದು? ಏಕೆಂದರೆ ಆದಿಪುರಾಣದ (ಅಥವಾ ಪೂರ್ವಪುರಾಣದ) ಈ ಕ್ಷತ್ರಿಯ, ವೈಶ್ಯ ಮತ್ತು ಶೂದ್ರರೆಂಬ ವರ್ಣವಿಂಗಡಣೆಯನ್ನು ಮಾಡಿದವನು ಜಿನನೇ; ಹೀಗಾಗಿ ಈ ಮಾತು ಜೈನರಿಗೆ ಮಾತ್ರ ಅನ್ವಯಿಸಿ, ಎಲ್ಲ ಭವ್ಯರೂ ಒಂದೇ ಎಂಬ ಅಭಿಪ್ರಾಯವನ್ನು ಸೂಸುತ್ತಿದೆಯೇ? ಏಕೆಂದರೆ ಮನುಗಳ ವಿಚಾರ ಹೇಳುವಾಗ ಪುರಾಣಕಾರ ಮಾಂಸಾಹಾರಿಗಳ ಬಗ್ಗೆ ಏನನ್ನೂ ಹೇಳುವುದಿಲ್ಲ, ಅಂದರೆ ಅಲ್ಲಿನ ವಿವರಣೆ ಕೇವಲ ಶಾಕಾಹಾರಿಗಳನ್ನು ಕುರಿತಾದುದು; ಹಾಗೆ ನೋಡಿದರೆ ಜನರೆಲ್ಲ ಮೊದಲು ಮಾಂಸಾಹಾರಿಗಳೇ ಆಗಿದ್ದರೆಂಬುದು ಮಾನವಶಾಸ್ತ್ರಜ್ಞರ ಅಭಿಪ್ರಾಯವಲ್ಲವೇ!]

**ಮೊದಲಿಂ ತಗುಳ್ದು ತುದಿವರ**
**ಮಿದರ್ಕಿದಾಚರಣಮಿದಱ ವಿಧಿಯಿಂತುಟು ತ**
**ಪ್ಪದೆ ಮನ್ತ್ರಪೂರ್ವಕಂ ನೆಗ**
**ಳ್ವುದೆಂದು ಚಕ್ರಾಧಿಪ, ಮನಂಗೊಳೆ ಪೇೞ್ದಂ** ೧೩೮

**ಪದವಿಭಾಗ–ಅನ್ವಯ–ಅರ್ಥ:** ಇದರ್ಕೆ + ಇದು + ಆಚರಣಂ = ಈ ಗರ್ಭಾನ್ವಯಕ್ರಿಯೆಗೆ ಇದು ಆಚರಣರೀತಿ, ಇದಱ ವಿಧಿ + ಇಂತುಟು= ಇದರ ಆಚರಣೆಯ ಬಗೆ ಹೀಗೆ, ತಪ್ಪದೆ ಮನ್ತ್ರಪೂರ್ವಕಂ ನೆಗೞ್ವುದು = ಒಂದೊಂದನ್ನೂ ಕ್ರಮ ತಪ್ಪದೆ ಮಂತ್ರಗಳೊಂದಿಗೆ ನೆರವೇರಿಸಿ, ಎಂದು ಮೊದಲಿಂ ತಗುಳ್ದು ತುದಿವರಂ = ಎಂದು ಮೊದಲಿನದರಿಂದ ಕೊನೆಯದರವರೆಗೂ, ಚಕ್ರಾಧಿಪಂ ದೊರೆಯು ಮನಂಗೊಳೆ ಪೇೞ್ದಂ = ಮನಸ್ಸಿಗೆ ನಾಟುವ ಹಾಗೆ ವಿವರಿಸಿದ.

**ಗದ್ಯಾನುಸರಣ:** ಈ ಗರ್ಭಾನ್ವಯಕ್ರಿಯೆಗೆ ಇದು ಆಚರಣರೀತಿ, ಇದರ ಆಚರಣೆಯ ಬಗೆ ಹೀಗೆ, ಒಂದೊಂದನ್ನೂ ಕ್ರಮ ತಪ್ಪದೆ ಮಂತ್ರಗಳೊಂದಿಗೆ ನೆರವೇರಿಸಿ, ಎಂದು ಮೊದಲಿನದರಿಂದ ಕೊನೆಯದರವರೆಗೂ ದೊರೆಯ ಮನಸ್ಸಿಗೆ ನಾಟುವ ಹಾಗೆ ವಿವರಿಸಿದ.

**ಪರಮಬ್ರಹ್ಮತನೂಭವರ್ ದ್ವಿಜವರರ್ ವರ್ಣೋತ್ತಮರ್ ಲೋಕಪೂ**
**ಜ್ಯರಿಳಾವಲ್ಲಭಮಾನ್ಯರುನ್ನತಗುಣರ್ ಚಾರಿತ್ರಶುದ್ಧರ್ ಧರಾ**
**ಮರರೀ ಬ್ರಾಹ್ಮಣರೆಂದು ಕೊಂಡುಕೊನೆದಾ ಷಟ್ಖಂಡಭೂಮಂಡಲೇ**
**ಶ್ವರನೋರಂತೆ ನೆಗಳಟ್ಟೆ ಕೂಡೆ ನೆಗೞ್ದಿತ್ತೆತ್ತಂ ದ್ವಿಜನ್ಮಾನ್ವಯಂ** ೧೫೬

**ಪದವಿಭಾಗ–ಅನ್ವಯ–ಅರ್ಥ:** ದ್ವಿಜವರರ್ ಪರಮಬ್ರಹ್ಮತನೂಭವರ್ = ದ್ವಿಜಶ್ರೇಷ್ಠರು ಪರಮಬ್ರಹ್ಮನ ಮಕ್ಕಳು, ವರ್ಣ + ಉತ್ತಮರ್ = ನಾಲ್ಕೂ ವರ್ಣಗಳಲ್ಲಿ ಉತ್ತಮರಾದವರು, ಲೋಕಪೂಜ್ಯರ್ = ಇಡೀ ಜಗತ್ತಿನ ಗೌರವಕ್ಕೆ ಭಾಜನರಾದವರು, ಇಳಾವಲ್ಲಭಮಾನ್ಯರ್ = ರಾಜರಿಂದ ಮಾನ್ಯತೆ ಪಡೆದವರು, ಉನ್ನತಗುಣರ್ = ಶ್ರೇಷ್ಠ ಗುಣಗಳುಳ್ಳವರು, ಚಾರಿತ್ರಶುದ್ಧರ್ = ಪರಿಶುದ್ಧ ನಡವಳಿಕೆಯವರು, ಈ ಧರಾ + ಅಮರರ್ = ಇಂಥ ಭೂದೇವರುಗಳೇ, ಬ್ರಾಹ್ಮಣರ್ + ಎಂದು = ಬ್ರಾಹ್ಮಣರು ಎಂದು, ಆ ಷಟ್ಖಂಡಭೂಮಂಡಲೇಶ್ವರನ್ ಕೊಂಡುಕೊನೆದು = ಆ ಆರೂ ಖಂಡಗಳ ಒಡೆಯನಾದ ಭರತನು ಕೊಂಡಾಡಿ, ಓರಂತೆ ನೆಗೞ್ಚೆ = ನಿರಂತರವಾಗಿ ಸಾರಲು, ಕೂಡೆ ದ್ವಿಜನ್ಮ + ಅನ್ವಯಂ ಎತ್ತಂ ನೆಗೞ್ದಿತ್ತು =ಆಗ ಬ್ರಾಹ್ಮಣ ವಂಶವು ಎಲ್ಲೆಡೆ ಪ್ರಖ್ಯಾತವಾಯಿತು.

**ಗದ್ಯಾನುಸರಣ:** ದ್ವಿಜಶ್ರೇಷ್ಠರು ಪರಮಬ್ರಹ್ಮನ ಮಕ್ಕಳು, ನಾಲ್ಕೂ ವರ್ಣಗಳಲ್ಲಿ ಉತ್ತಮರಾದವರು, ಇಡೀ ಜಗತ್ತಿನ ಗೌರವಕ್ಕೆ ಭಾಜನರಾದವರು, ರಾಜರಿಂದ ಮಾನ್ಯತೆ ಪಡೆದವರು, ಶ್ರೇಷ್ಠ ಗುಣಗಳುಳ್ಳವರು, ಪರಿಶುದ್ಧ ನಡವಳಿಕೆಯವರು; ಇಂಥ ಭೂದೇವರುಗಳೇ ಬ್ರಾಹ್ಮಣರು ಎಂದು ಆ ಆರೂ ಖಂಡಗಳ ಒಡೆಯನಾದ ಭರತನು ಕೊಂಡಾಡಿ ನಿರಂತರವಾಗಿ ಸಾರಲು ಬ್ರಾಹ್ಮಣ ವಂಶವು ಎಲ್ಲೆಡೆ ಪ್ರಖ್ಯಾತವಾಯಿತು.

[**ವಿಶೇಷ ವಿಚಾರ:** ಇಲ್ಲಿ ಎರಡು ಅಂಶಗಳನ್ನು ಗಮನಿಸಬಹುದು: ಒಂದು, ಷಟ್ಕರ್ಮಗಳಿಂದಷ್ಟೇ ದ್ವಿಜರು ಶ್ರೇಷ್ಠರೇ ಹೊರತು ಮಿಕ್ಕಂತೆ ಎಲ್ಲರೂ ಒಂದೆ ಎಂದ ಭರತ ಇಲ್ಲಿ ಬ್ರಾಹ್ಮಣರೇ ಶ್ರೇಷ್ಠ ಎಂದು ಸಾರುತ್ತಿದ್ದಾನೆ; ಎರಡು, ಮುಂದೆ

ಬ್ರಾಹಣರು ಭ್ರಷ್ಟರಾಗುತ್ತಾರೆಂಬ ಸೂಚನೆಯಾಗಿ ಭರತನ ಕೆಟ್ಟ ಕನಸು ಕಾಣುತ್ತಾನೆ; ಅಲ್ಲದೆ, ಜೈನರಿಗೆ ಕ್ಷತ್ರಿಯನೇ ಅತ್ಯಂತ ಶ್ರೇಷ್ಠ ಎಂಬ ನಂಬಿಕೆಯೂ ಇತ್ತು, 'ಕ್ಷತ್ರಿಯನೆ ಧಾತ್ರಿಗೊಡೆಯಂ ಕ್ಷತ್ರಿಯನಾರ್ಗೇನನಿತ್ತರದು ದೆಯ್ವಕೃತಂ ಕ್ಷತ್ರಿಯನೆ ತೀರ್ಥಕರನಾ ಕ್ಷತ್ರಿಯನದಜೆಂದೆ ಪಿರಿಯನೆಲ್ಲಂದದೊಳಂ' ('ಸಮಯ ಪರೀಕ್ಷೆ': ೨. ೨೩).]

**ವ॥ ಅಂತು ಭರತೇಶ್ವರಂ ತಾನೆ ಮಾಡಿದ ತನ್ನ ಕೊಂಡಾಟದಿಂ ಪ್ರಸಿದ್ಧಮಾದ ವಿಪ್ರಸಂತತಿ ಕೆಲವು ಕಾಲಂ ನಡೆವನ್ನೆಗಮೊಂದುದಿವಸಂ ಆಶ್ಚರ್ಯಭೂತಂಗಳುಂ ದೂರಾರಿಷ್ಟಫಲ ಸೂಚಕಂಗಳುಮಪ್ಪ ಸ್ವಪ್ನಂಗಳಂ ಕಂಡು ಭಗವದರ್ಹತ್ ಸಮೀಪಕ್ಕೆ ಪೋಗಿ ಸಮವಸೃತಿಯಂ ಪೊಕ್ಕು ಕುಳ್ಳಿರ್ದು, ದೇವ, ನೀನಿರ್ದಂತೆ ಆನಾದ ಮರುಳ್ತನದಿಂದೆ ಉತ್ಪಾದಿಸಿದೆಂ ಬ್ರತಸಮೇತ ವಿಪ್ರಾನ್ವಯಮಂ**

**ಪದವಿಭಾಗ–ಅನ್ವಯ–ಅರ್ಥ:** ಅಂತು ಭರತೇಶ್ವರಂ = ಹೀಗೆ ಭರತನು, ತಾನೆ ಮಾಡಿದ = ತಾನೇ ಸೃಷ್ಟಿಸಿದ, ತನ್ನ ಕೊಂಡಾಟದಿನ್ + ಅತಿಪ್ರಸಿದ್ಧಮಾದ = ತನ್ನ ಹೊಗಳಿಕೆಯಿಂದ ತುಂಬ ಪ್ರಸಿದ್ಧಿಗೆ ಬಂದಿದ್ದ, ವಿಪ್ರಸಂತತಿ ಕೆಲವು ಕಾಲಂ ನಡೆವನ್ನೆಗಂ = ಕೆಲಕಾಲ ಮಾತ್ರ ವಿಪ್ರವರ್ಗವು ನಡೆದುಕೊಂಡಿರಲು, ಒಂದುದಿವಸಂ ಆಶ್ಚರ್ಯಭೂತಂಗಳುಂ ದೂರ + ಅರಿಷ್ಟಫಲಸೂಚಕಂಗಳುಂ ಅಪ್ಪ = ಒಂದು ದಿನ ಆಶ್ಚರ್ಯಕರವಾದವೂ ಮುಂದೆಂದೋ ಕೆಟ್ಟದ್ದಾಗುವುದೆಂಬುದನ್ನು ಸೂಚಿಸುವಂತಿದ್ದ, ಸ್ವಪ್ನಂಗಳಂ ಕಂಡು ಬೆರ್ಚಿದಂತೆ + ಎರ್ದುಮೀಗಳೆನ್ನ = ಕನಸುಗಳನ್ನು ಕಂಡು ಬೆದರಿ ಧಿಗ್ಗನೆದ್ದು, ಭಗವತ್ + ಅರ್ಹತ್ + ಸಮೀಪಕ್ಕೆ ಪೋಗಿ = ಆದಿದೇವನ ಸನ್ನಿಧಿಗೆ ತೆರಳಿ, ಸಮವಸೃತಿಯಂ ಪೊಕ್ಕು ಕುಳ್ಳಿರ್ದು = ಸಮವಸರಣ ಮಂಟಪವನ್ನು ಸೇರಿ ಕುಳಿತುಕೊಂಡು, ದೇವ, ನೀನಿರ್ದಂತೆ = ಭಗವಂತನೇ, ನೀನು ಇರುವಾಗಲೇ, ಆನಾದ ಮರುಳ್ತನದಿಂದೆ = ನನ್ನ ಹುಚ್ಚುತನದಿಂದ, ಬ್ರತಸಮೇತ ವಿಪ್ರ + ಅನ್ವಯಮಂ ಉತ್ಪಾದಿಸಿದೆಂ = ವ್ರತಗಳಿಂದ ಕೂಡಿದ ಬ್ರಾಹ್ಮಣವರ್ಣವನ್ನು ಸೃಷ್ಟಿಸಿದೆ.

**ಗದ್ಯಾನುಸರಣ:** ಹೀಗೆ ಭರತನು ತಾನೇ ಸೃಷ್ಟಿಸಿ ತನ್ನ ಹೊಗಳಿಕೆಯಿಂದ ಭರತಕ್ಷೇತ್ರದಲ್ಲಿ ತುಂಬ ಪ್ರಸಿದ್ಧಿಗೆ ಬಂದಿದ್ದ ವಿಪ್ರವರ್ಗವು ಕೆಲಕಾಲ ನಡೆದುಕೊಂಡಿತ್ತು; ಆದರೆ ಒಂದು ದಿನ ಬೆಳಗು ಜಾವದಲ್ಲಿ ಆಶ್ಚರ್ಯಕರವಾದವೂ ಮುಂದೆಂದೋ ಕೆಟ್ಟದ್ದಾಗುವುದೆಂಬುದನ್ನು ಸೂಚಿಸುವಂತಿದ್ದ ಕನಸುಗಳನ್ನು ಕಂಡು ಬೆದರಿ ಧಿಗ್ಗನೆದ್ದು ಕೂತ; ಆ ಬಳಿಕ ಆದಿದೇವನ ಸನ್ನಿಧಿಗೆ ತೆರಳಿ, ಸಮವಸರಣ ಮಂಟಪವನ್ನು ಸೇರಿ ಕುಳಿತುಕೊಂಡು, "ಭಗವಂತನೇ, ನೀನು ಇರುವಾಗಲೇ ನನ್ನ ಹುಚ್ಚುತನದಿಂದ ವ್ರತಗಳಿಂದ ಕೂಡಿದ ಬ್ರಾಹ್ಮಣವರ್ಣವನ್ನು ಸೃಷ್ಟಿಸಿದೆ."

**ಇದಱೊಳ್ ಗುಣಮೋ ದೋಷಮೋ**
**ಪೊದಳ್ದು ನಿಂದಪುದಯುಕ್ತಮೋ ಯುಕ್ತಮೊ ಪೇ**
**ೞದು ಹಾನಿಯೊ ವೃದ್ಧಿಯೊ ತಾ**
**ನದಾವುದಂ ಪೊರ್ದಿ ನಿಲ್ಕುಮಘವಿಘಟಪಟೂ** ೧೪೦

**ಪದವಿಭಾಗ–ಅನ್ವಯ–ಅರ್ಥ:** ಅಘವಿಘಟಪಟೂ = ಪಾಪವಿನಾಶದಲ್ಲಿ ಸಮರ್ಥನೇ, ಇದಱೊಳ್ ಗುಣಮೋ ದೋಷಮೋ = ಇದು ಸರಿಯೋ

ತಪ್ಪೋ, ಪೊದಳ್ದು ನಿಂದಪುದು + ಅಯುಕ್ತಮೋ ಯುಕ್ತಮೊ = ವ್ಯಾಪಿಸಿ ನಿಲ್ಲಿಸುವುದು ಸಮಂಜಸವೋ ಅಲ್ಲವೋ, ಇದು ಹಾನಿಯೊ ವೃದ್ಧಿಯೊ = ಇದರಿಂದ ತೊಂದರೆಯೋ ಏಳಿಗೆಯೋ, ತಾನ್ + ಅದು + ಆವುದಂ ಪೊರ್ದಿ ನಿಲ್ಕುಂ ಪೇಟ್ = ಇದು ಯಾವುದನ್ನು ನೆಚ್ಚಿ ನಿಲ್ಲುತ್ತದೆ, ಹೇಳು.

**ಗದ್ಯಾನುಸರಣ:** ಪಾಪವಿನಾಶದಲ್ಲಿ ಸಮರ್ಥನೇ, ಇದು ಸರಿಯೋ ತಪ್ಪೋ, ಇದನ್ನು ವ್ಯಾಪಿಸಿ ನಿಲ್ಲಿಸುವುದು ಸಮಂಜಸವೋ ಅಲ್ಲವೋ, ಇದರಿಂದ ತೊಂದರೆಯೋ ಏಳಿಗೆಯೋ, ಇದು ಯಾವುದನ್ನು ನೆಚ್ಚಿ ನಿಲ್ಲುತ್ತದೆ, ಹೇಳು.

**ವ। ಅದಲ್ಲದೆಯುಮಿಂದಿನ ದಿನಂ ಬೆಳಗಪ್ಪ ಜಾವದೊಳ್ ಪದಿನಾಱು ಕನಸುಗಳಂ ಕಂಡೆನಾ ಕನಸುಗಳನಿಷ್ಟಫಲಸೂಚಕಂಗಳೆಬುದಂ ಸಾಮಾನ್ಯದಿನುಪಲಕ್ಷಿಸಿದೆನವಱ ಫಲಮು ಮನಱೆಯೆ ಬೆಸಸಿಮೆಂದು, ಅವಧಿಜ್ಞಾನದಿಂ ತಾನಾ ಕನಸುಗಳನಱೆವವನಾಗಿಯುಂ ಸಭಾಜನಕ್ಕಮಱೆಪಲೆಂದು, ಬೆಸಗೊಳ್ವುದುಂ ಪ್ರಶ್ನಾನುಕ್ರಮದಿಂ ತ್ರಿಲೋಕಗುರುವಿಂತೆಂದು ಬೆಸಸಿದಂ**

**ಪದವಿಭಾಗ–ಅನ್ವಯ–ಅರ್ಥ:** ಅದಲ್ಲದೆಯುಂ = ಅದೂ ಅಲ್ಲದೆ, ಇಂದಿನ ದಿನಂ ಬೆಳಗಪ್ಪ ಜಾವದೊಳ್ = ಈ ದಿನ ಬೆಳಗಗಿನ ಜಾವದಲ್ಲಿ, ಪದಿನಾಱು ಕನಸುಗಳಂ ಕಂಡೆನ್ = ಹದಿನಾರು ಕನಸುಗಳನ್ನು ಕಂಡೆ, ಆ ಕನಸುಗಳ್ + ಅನಿಷ್ಟಫಲಸೂಚಕಂಗಳೆಬುದಂ = ಆ ಕನಸುಗಳು ಕೆಟ್ಟುದನ್ನು ಸೂಚಿಸುವುದೆಂಬುದನ್ನು, ಸಾಮಾನ್ಯದಿನ್ + ಉಪಲಕ್ಷಿಸಿದೆನ್ = ಸಾಮಾನ್ಯ ತಿಳಿವಿನಿಂದಲೇ ಕಂಡುಕೊಂಡೆ, ಅವಱ ಫಲಮುಮನ್ + ಅಱೆಯೆ ಬೆಸಸಿಂ = ಅವುಗಳ ಫಲವನ್ನು ತಿಳಿಯುವಂತೆ ಹೇಳಿ, ಎಂದು ತಾನ್ ಅವಧಿಜ್ಞಾನದಿಂ ಆ ಕನಸುಗಳನ್ + ಅಱೆವನಾಗಿಯುಂ = ಎಂದು ಹೇಳಿ ತನಗೆ ಅವಧಿಜ್ಞಾನದಿಂದ ಆ ಕನಸುಗಳು ತಿಳಿದಿದ್ದರೂ, ಸಭಾಜನಕ್ಕಂ + ಅಱೆಪಲ್ + ಎಂದು ಬೆಸಗೊಳ್ವುದುಂ = ಸಭಾಜನರಿಗೂ ತಿಳಿಯಲೆಂದು ಕೇಳಿಕೊಂಡಾಗ, ತ್ರಿಲೋಕಗುರು ಪ್ರಶ್ನ + ಅನುಕ್ರಮದಿಂ = ಮೂಲೋಕದೊಜನು ಪ್ರಶ್ನೆ ಕೇಳಿದ ಕ್ರಮದಲ್ಲಿಯೇ, ಇಂತೆಂದು ಬೆಸಸಿದಂ = ಹೀಗೆಂದು ಉತ್ತರಿಸಿದ.

**ಗದ್ಯಾನುಸರಣ:** 'ಅದೂ ಅಲ್ಲದೆ, ಈ ದಿನ ಬೆಳಗಗಿನ ಜಾವದಲ್ಲಿ ನಾನು ಹದಿನಾರು ಕನಸುಗಳನ್ನು ಕಂಡೆ; ಅವು ಕೆಟ್ಟುದನ್ನು ಸೂಚಿಸುವುದೆಂಬುದನ್ನು ಸಾಮಾನ್ಯ ತಿಳಿವಿನಿಂದಲೇ ಕಂಡುಕೊಂಡೆ; ಆದರೂ ಅವುಗಳ ಫಲವನ್ನು ತಿಳಿಯುವಂತೆ ಹೇಳಿ' ಎಂದು ಹೇಳಿ ತನಗೆ ಅವಧಿಜ್ಞಾನದಿಂದ ಆ ಕನಸುಗಳು ತಿಳಿದಿದ್ದರೂ, ಸಭಾಜನರಿಗೂ ತಿಳಿಯಲೆಂದು ಕೇಳಿಕೊಂಡಾಗ, ಮೂಲೋಕದೊಜನು ಪ್ರಶ್ನೆ ಕೇಳಿದ ಕ್ರಮದಲ್ಲಿಯೇ ಹೀಗೆಂದು ಉತ್ತರಿಸಿದ:

**ಧರೆಯೊಳ್ ಧರ್ಮಾರ್ಥದಿಂ ನೀಂ ಸೃಜಿಯಿಸಿ ನೆಗಟ್ದೀ ವಿಪ್ರಸಂತಾನದೊಂದು**
**ಚರಣಂ ನೀನೆಂದ ಪಾಂಗಿಂ ಕೃತಯುಗದೊಳೆ ದಲ್ಸಲ್ಗುಮಿನ್ನತ್ತ ನಪ್ಪಾ**
**ಚರಣಂ ಸನ್ಮಾರ್ಗದೊಳ್ ಮಚ್ಚರಿಸಿ ಕಲಿಯುಗಾಭ್ಯರ್ಣದೊಳ್ ದ್ರವ್ಯಲೋಭಾ**
**ತುರರುನ್ಮಾರ್ಗೋಪದೇಶೋದ್ಯತಮತಿಗಳತಿಕ್ರೂರರಪ್ಪರ್ ದ್ವಿಜನ್ಮರ್ ೧೪೧**

ಪದವಿಭಾಗ-ಅನ್ವಯ-ಅರ್ಥ: ಧರೆಯೊಳ್ ಧರ್ಮಾರ್ಥದಿಂ ನೀಂ ಸೃಜಿಯಿಸಿ ನೆಗಟ್ದಿ = ಭೂಮಿಯಲ್ಲಿ ಧರ್ಮದ ಕಾರಣದಿಂದಾಗಿ ನೀನು ಸೃಷ್ಟಿಸಿದ, ಈ ವಿಪ್ರಸಂತಾನದ + ಒಂದು ಚರಣಂ = ಈ ವಿಪ್ರಸಂತತಿಯ ಆಚರಣೆಯು, ನೀನೆಂದ ಪಾಂಗಿಂ = ನೀನು ಹೇಳಿದ ಬಗೆಯಲ್ಲಿಯೇ, ಕೃತಯುಗದೊಳೆ ಸಲ್ಗುಂ ದಲ್ = ಕೃತಯುಗದಲ್ಲಿ ನೆರವೇರುತ್ತದೆ ನಿಜ, ಇನ್ + ಅತ್ತ ನಷ್ಟ + ಆಚರಣಂ = ಆನಂತರ ಆಚರಣೆಯು ಇಲ್ಲವಾಗುತ್ತದೆ, ಕಲಿಯುಗ + ಅಭ್ಯರ್ಣದೊಳ್ = ಕಲಿಯುಗದ ಹಿಂದೆ ಮುಂದೆ, ಸತ್ + ಮಾರ್ಗದೊಳ್ ಮಚ್ಚರಿಸಿ = ಒಳ್ಳೆಯ ದಾರಿಯ ಬಗ್ಗೆ ತಿರಸ್ಕಾರ ಹೊಂದಿ, ದ್ರವ್ಯಲೋಭ + ಆತುರರ್ ದ್ವಿಜನ್ಮರ್ = ಹಣದಾಸೆಯುಳ್ಳವರಾಗಿ ಬ್ರಾಹ್ಮಣರು, ಉನ್ಮಾರ್ಗ + ಉಪದೇಶ + ಉದ್ಯತಮತಿಗಳ್ + ಅತಿಕ್ರೂರರ್ + ಅಪ್ಪರ್ = ಕೆಟ್ಟ ದಾರಿಯನ್ನು ತೋರಿಸುತ್ತ ಮಹಾ ಕ್ರೂರಿಗಳಾಗುತ್ತಾರೆ.

ಗದ್ಯಾನುಸರಣ: 'ಭೂಮಿಯಲ್ಲಿ ಧರ್ಮದ ಕಾರಣದಿಂದಾಗಿ ನೀನು ಸೃಷ್ಟಿಸಿದ ಈ ವಿಪ್ರಸಂತತಿಯ ಆಚರಣೆಯು ಕೃತಯುಗದಲ್ಲಿ ನೀನು ಹೇಳಿದ ಬಗೆಯಲ್ಲಿಯೇ ನೆರವೇರುತ್ತದೆಂಬುದು ನಿಜ; ಆದರೆ ಆನಂತರ ಆ ಆಚರಣೆಯು ಇಲ್ಲವಾಗುತ್ತದೆ; ಕಲಿಯುಗದ ಹಿಂದೆ ಮುಂದೆಯಂತೂ ಒಳ್ಳೆಯ ದಾರಿಯ ಬಗ್ಗೆ ತಿರಸ್ಕಾರ ಹೊಂದಿ ಹಣದಾಸೆಯುಳ್ಳವರಾಗಿ ಬ್ರಾಹ್ಮಣರು ಕೆಟ್ಟ ದಾರಿಯನ್ನು ತೋರಿಸುತ್ತ ಮಹಾ ಕ್ರೂರಿಗಳಾಗುತ್ತಾರೆ.'

**ವ। ಅಂತು ಪೇೞ್ದು ಮತ್ತಮಾತನ ಕಂಡ ಷೋಡಶಸ್ವಪ್ನಸೂಚಿತಫಲಂಗಳನಿಂತೆಂದು ಬೆಸಸಿದರ್: ಇರ್ಪತ್ತನಾಲ್ಕು ಕೇಸರಿಗಳಂ ಕಂಡುದಱಿಂದನಿಬರೆ ತೀರ್ಥಕರರ್ಕಳಪ್ಪರ್; ಧರೆಯೊಳ್ ಪಾಷಂಡಿಗಳರೆಬರ್ ಪುಟ್ಟಿಯುಮಡಂಗುವರ್; ಕುಲಿಂಗಿಗಳ್ ವಿಕೃತಿಗಳಿಂ ವಿರಹಿತರಪ್ಪರ್; ಇನಿತಳವಿಲ್ಲದೆ ಕಿಡುವರಲ್ತೆ ದುಷ್ಷಮಯತಿಗಳ್; ಒರ್ವರೆ ವಿಹರಿಪುದು ಬಿಸುಟಂಬರಾಂಬರರ್ ತಮ್ಮ ಸಮುದಯಮಂ ಬೆರಸಿರ್ಪರ್; ಎಸೆಯದು ದುಷ್ಷಮಕಾಲದೊಳಸದೃಶಕೈವಲ್ಯಬೋಧ ದಿನಕರಬಿಂಬಂ; ನರನಾರೀಕುಳಮನುಪಮಸತ್ಯಶೌಚವಿರಹಿತಮಕ್ಕುಂ; ಸಮಯಿಗಳುಂ ಚಾತುರ್ವರ್ಣಮುಮುಚಿತಚರಿತ್ರಮಂ ಬಿಸುಟ್ಟಾದಂ ಪೊಲ್ಲಮೆಯೊಳ್ ಸಲೆ ನಡೆವರ್ ದುಷ್ಷಮಮೆಂಬಯ್ದನೆಯ ಕಾಲದೊಳ್; ಆದಿಭೂಪರ್ ಕಿಡೆ ಬೇಡರುಮಕುಲೀನರುಮತಿ ದುಶ್ಚರಿತ್ರರುಂ ಭೂಪರಪ್ಪರನ್ಯಾಯಪರರ್; ಜೈನಾಗಮವಿದರಂ ಸಾರದೆ ಪೋಗಿ ಕುಲಿಂಗಿಗಳಂ ಜನಂ ಸೇವಿಸುಗುಂ; ಮಕ್ಕಳ್ಗಂ ಕೂಡೆ ಪೆಸರಿಟ್ಟು ಸಲೆ ಕೊಂಡಾಡಿದಪರ್ ವ್ಯಂತರರ್ಕಳಂ ಜಡಮತಿಗಳ್; ನಡುನಾಡೊಳಱಿಂ ನೆಲಸದೆ ಕಡೆಯೊಳ್ ನೆಲೆಗೊಳ್ಗುಂ; ಧರಣೀಪಾಳಕಮುನಿಪರ್ ಪಂಚಮಕಾಳದೊಳಣಮಾಗರಲ್ತೆ ಋದ್ಧಿಪ್ರಾಪ್ತರ್; ವ್ರತಹೀನರ್ ಸನ್ಮಾರ್ಗಪ್ರತಿಕೂಲರ್ ವ್ಯಸನವಶಗತರ್ ಪಾಪಿಗಳಿಂತತಿಕಷ್ಟರಪ್ಪರವನಿಯೊಳತಿಥಿಗಳಿನ್ನನ್ನದಾನಮಂ ಕುಡುವೆಡೆಯೊಳ್; ಜೈನದೀಕ್ಷೆಗೆ ಮೆಯ್ಯಂ ತರುಣಜನಂಗಳೆ ತರ್ಪರ್ ಪರಿಣತವಯಸರ್ಕಳಪ್ಪವರ್ ಮೆಯ್ದಾರರ್; ಮುನಿನಿಕರಕ್ಕಾದರದವಧಿಮನಃಪರ್ಯಯಮೆರಡುಮಣಂ ಪುಟ್ಟವು; ಧಾನ್ಯಸಮಿತಿ ನೀರಸಮಕ್ಕುಂ**

ಪದವಿಭಾಗ-ಅನ್ವಯ-ಅರ್ಥ: ಅಂತು ಪೇೞ್ದು = ಹಾಗೆ ಹೇಳಿ, ಮತ್ತಂ + ಆತನ ಕಂಡ ಷೋಡಶಸ್ವಪ್ನಸೂಚಿತಫಲಂಗಳನ್ + ಇಂತು + ಎಂದು ಬೆಸಸಿದರ್

= ಭರತನು ಕಂಡಿದ್ದ ಹದಿನಾರು ಕನಸುಗಳ ಫಲಗಳನ್ನು ಹೀಗೆಂದು ವಿವರಿಸಿದರು: ಇರ್ಪತ್ತನಾಲ್ಕು ಕೇಸರಿಗಳನ್ = ಇಪ್ಪತನಾಲ್ಕು ಸಿಂಹಗಳನ್ನು, ಕಂಡುದಱಿಂದೆ = ಕನಸಿನಲ್ಲಿ ಕಂಡದ್ದರಿಂದ, ಅನಿಬರೆ ತೀರ್ಥಕರರ್ಕಳಪ್ಪರ್ = ಅಷ್ಟು ಮಂದಿ ಮಾತ್ರವೇ ತೀರ್ಥಂಕರರು; ಅರೆಬರ್ ಪಾಷಂಡಿಗಳ್ = ಕೆಲವರು ಧರ್ಮರಹಿತರು, ಪುಟ್ಟಿಯುಂ + ಅಡಂಗುವರ್ = ಹುಟ್ಟಿದರೂ ನಾಶವಾಗುತ್ತಾರೆ; ಕುಲಿಂಗಿಗಳ್ = ಧರ್ಮಭ್ರಷ್ಟರು, ವಿಕೃತಿಗಳಿಂ ವಿರಹಿತರಪ್ಪರ್ = ವಿಕಾರಗಳಿಂದಾಗಿ ಧರ್ಮವಿರಹಿತರಾಗುತ್ತಾರೆ; ಇನಿತು = ಅಳವು + ಇಲ್ಲದೆ = ಶಕ್ತಿಯಿಲ್ಲದೆ, ದುಷ್ಷಮಯತಿಗಳ್ = ದುಷ್ಷಮಕಾಲದ ಮುನಿಗಳು, ಕಿಡುವರ್ + ಅಲ್ತೆ = ಕೆಡುತ್ತಾರೆ; ಅಂಬರ + ಅಂಬರರ್ = ದಿಗಂಬರರು, ಒರ್ವರೆ ವಿಹರಿಪುದು ಬಿಸುಟು = ಏಕಾಂಗಿಯಾಗಿ ವಿಹರಿಸುವುದನ್ನು ಬಿಟ್ಟು, ತಮ್ಮ ಸಮುದಯಂ ಬೆರಸಿ + ಇರ್ಪರ್ = ಗುಂಪನ್ನು ಸೇರಿ ಇರುತ್ತಾರೆ; ದುಷ್ಷಮಕಾಲದೊಳ್ = ದುಷ್ಷಮ ಕಾಲದಲ್ಲಿ, ಅಸದೃಶಕೈವಲ್ಯಬೋಧ ದಿನಕರಬಿಂಬಂ ಎಸೆಯದು = ಎಣೆಯಿಲ್ಲದ ಕೈವಲ್ಯಬೋಧೆ ಎಂಬ ಸೂರ್ಯನು ಬೆಳಗುವುದಿಲ್ಲ; ನರನಾರೀ ಕುಳಂ = ಸಾಮರ್ಥ್ಯರ್ಯವಿಲ್ಲ ಗಂಡುಹೆಣ್ಣುಗಳು, ಅನುಪಮಸತ್ಯಶೌಚವಿರಹಿತಂ + ಅಕ್ಕುಂ = ಅನುಪಮವಾದ ಶೌಚಗುಣದೂರರಾಗುತ್ತಾರೆ; ಸಮಯಿಗಳುಂ = ಜಿನಧರ್ಮಾವಲಂಬಿಗಳೂ, ದುಷ್ಷಮಂ + ಎಂಬ + ಅಯ್ದನೆಯ ಕಾಲದೊಳ್ = ದುಷ್ಷಮ ಎಂಬ ಐದನೆಯ ಕಾಲದಲ್ಲಿ, ಚಾತುರ್ವರ್ಣ್ಯಮುಂ + ಉಚಿತಚರಿತ್ರಮಂ ಬಿಸುಟ್ಟು = ನಾಲ್ಕು ವರ್ಣಗಳನ್ನೂ ತಕ್ಕ ನಡವಳಿಕೆಯನ್ನೂ ತೊರೆದು, ಅದಂ ಪೊಲ್ಲಮೆಯೊಳ್ ಸಲೆ ನಡೆವರ್ = ಮಹಾ ಹೊಲಸು ದಾರಿಯಲ್ಲಿ ನಡೆಯುತ್ತಾರೆ; ಆದಿಭೂಪರ್ ಕಿಡೆ = ಹಿರಿಯ ರಾಜರು ನಾಶವಾಗಿ, ಬೇಡರುಂ + ಅಕುಲೀನರುಂ + ಅತಿದುಶ್ಚರಿತ್ರರುಂ = ಬೇಡರೂ ಕೀಳುಕುಲದವರೂ ಕೆಟ್ಟ ನಡವಳಿಕೆಯವರೂ, ಅನ್ವಯಾಯಪರರ್ ಭೂಪರಪ್ಪರ್ = ಅನ್ಯಾಯವೆಸಗುವವರೂ ರಾಜರಾಗುತ್ತಾರೆ; ಜೈನ + ಆಗಮವಿದರಂ ಸಾರದೆ = ಜೈನಶಾಸ್ತ್ರಗಳನ್ನು ಬಲ್ಲವರ ಬಳಿ ಹೋಗದೆ, ಜನಂ ಪೋಗಿ ಕುಲಿಂಗಿಗಳಂ ಸೇವಿಸುಗುಂ = ಜನರು ಕುಧರ್ಮಿಗಳನ್ನು ಸೇವಿಸುತ್ತಾರೆ; ಮಕ್ಕಳ್ಗಂ ವ್ಯಂತರ್ಕಳಂ ಪೆಸರಿಟ್ಟು= ಮಕ್ಕಳಿಗೂ ವ್ಯಂತರಗಳಂತಹ ಹೆಸರುಗಳನ್ನಿಟ್ಟು, ಸಲೆ ಕೊಂಡಾಡಿದಪರ್ = ಸಂತಸಪಡುತ್ತಾರೆ; ಅಱಂ ನಡುನಾಡೊಳ್ ನೆಲಸದೆ = ಧರ್ಮವು ನಾಡಿನ ಮಧ್ಯಭಾಗದಲ್ಲಿ ನೆಲಸದೆ, ಕಡೆಯೊಳ್ ನೆಲೆಗೊಳ್ಗುಂ = ಗಡಿಭಾಗಗಳಲ್ಲಿ ನೆಲಸುತ್ತದೆ; ಧರಣೀಪಾಳಕ ಮುನಿಪರ್ = ರಾಜರೂ ಮುನಿಶ್ರೇಷ್ಠರೂ, ಪಂಚಮಕಾಳದೊಳ್ = ಐದನೆಯ ಕಾಲವಾದ ದುಷ್ಷಮದಲ್ಲಿ, ಅಣಂ ಋದ್ಧಿಪ್ರಾಪ್ತರ್ ಆಗರ್ + ಅಲ್ತೆ = ಸ್ವಲ್ಪವೂ ಮಹಿಮಾವಂತರಾಗಿರುವುದಿಲ್ಲ; ಅವನಿಯೊಳ್ = ಜಗತ್ತಿನಲ್ಲಿ, ಇನ್ನು = ಇನ್ನು ಮುಂದೆ, ಅನ್ನದಾನಮಂ ಕುಡುವೆಡೆಯೊಳ್ = ಅನ್ನದಾನ ನಡೆಯುವಲ್ಲಿ, ವ್ರತಹೀನರ್ = ವ್ರತಭ್ರಷ್ಟರೂ, ಸನ್ಮಾರ್ಗಪ್ರತಿಕೂಲರ್ = ಒಳ್ಳೆಯ ಹಾದಿಗೆ ವಿರುದ್ಧವಾದವರೂ,

ವ್ಯಸನವಶಗತರ್ = ವ್ಯಸನಗಳಿಗೊಳಗಾದವರೂ, ಪಾಪಿಗಳ್ = ಪಾಪಿಗಳೂ, ಇಂತು + ಅತಿಕಷ್ಟರ್ + ಅಪ್ಪರ್ + = ಇಂತಹ ಕೆಟ್ಟ ಜನರು, ಅತಿಥಿಗಳ್ = ಅತಿಥಿಗಳಾಗುತ್ತಾರೆ; ಜೈನದೀಕ್ಷೆಗೆ ತರುಣಜನಂಗಳೆ ಮೆಯ್ಯಂ ತರ್ಪರ್ = ಜೈನದೀಕ್ಷೆಯನ್ನು ಪಡೆಯಲು ಯುವಜನರೇ ಮೈಯೊಡ್ಡುತ್ತಾರೆ, ಪರಿಣತವಯಸರ್ಕಳ್ + ಅಪ್ಪವರ್ ಮೆಯ್ದಾರರ್ = ಹೆಚ್ಚು ವಯಸ್ಸಾದವರು ಮುಂದಾಗುವುದಿಲ್ಲ; ಮುನಿನಿಕರಕ್ಕೆ = ಆಗ ಮುನಿಗಳ ಸಮೂಹಕ್ಕೆ, ಆದರದ + ಅವಧಿ ಮನಃಪರ್ಯಯಂ + ಎರಡುಂ = ಶ್ರೇಷ್ಠವಾದ ಅವಧಿಜ್ಞಾನ ಮತ್ತು ಮನಃಪರ್ಯರಜ್ಞಾನಗಳು, ಅಣಂ ಪುಟ್ಟವು = ಕೊಂಚವೂ ಉಂಟಾಗುವುದಿಲ್ಲ; ಧಾನ್ಯಸಮಿತಿ ನೀರಸಂ + ಅಕ್ಕುಂ = ಧಾನ್ಯಸಮೂಹವು ರಸವಿಹೀನವಾಗುತ್ತವೆ,

**ಗದ್ಯಾನುಸರಣ:** ಹಾಗೆ ಹೇಳಿ, ಭರತನು ಕಂಡಿದ್ದ ಹದಿನಾರು ಕನಸುಗಳ ಫಲಗಳನ್ನು ಹೀಗೆಂದು ವಿವರಿಸಿದರು: ಇಪ್ಪತನಾಲ್ಕು ಸಿಂಹಗಳನ್ನು ನೀನು ಕನಸಿನಲ್ಲಿ ಕಂಡದ್ದರಿಂದ ಅಷ್ಟು ಮಂದಿ ಮಾತ್ರವೇ ತೀರ್ಥಂಕರರು; ಧರೆಯೊಳ್ = ಭೂಮಿಯಲ್ಲಿ ಸಾಗಲು, ಕೆಲವರು ಧರ್ಮರಹಿತರು ಹುಟ್ಟಿದರೂ ನಾಶವಾಗುತ್ತಾರೆ; ಧರ್ಮಭ್ರಷ್ಟರು ವಿಕಾರಗಳಿಂದಾಗಿ ಧರ್ಮವಿರಹಿತರಾಗುತ್ತಾರೆ; ಅಪಾರ ಭಾರವನ್ನು ಹೊರುವಷ್ಟು ಶಕ್ತಿ ದುಷ್ಷಮಕಾಲದ ಮುನಿಗಳಿಗೆ ಇಲ್ಲದೆ ಕೆಡುತ್ತಾರೆ; ದಿಗಂಬರರು ಏಕಾಂಗಿಯಾಗಿ ವಿಹರಿಸುವುದನ್ನು ಬಿಟ್ಟು ತಮ್ಮ ಗುಂಪನ್ನು ಸೇರಿ ಇರುತ್ತಾರೆ; , ದುಷ್ಷಮ ಕಾಲದಲ್ಲಿ ಎಣೆಯಿಲ್ಲದ ಕೈವಲ್ಯಬೋಧೆ ಎಂಬ ಸೂರ್ಯನು ಬೆಳಗುವುದಿಲ್ಲ; ಸಾಮರ್ಥ್ಯವಿಲ್ಲದ ಗಂಡುಹೆಣ್ಣುಗಳು ಅನುಪಮವಾದ ಶೌಚಗುಣದೂರರಾಗುತ್ತಾರೆ; ಭರತ ಚಕ್ರವರ್ತಿಯೇ, ಜಿನಧರ್ಮಾವಲಂಬಿಗಳು ಕೂಡ ದುಷ್ಷಮ ಎಂಬ ಐದನೆಯ ಕಾಲದಲ್ಲಿ ನಾಲ್ಕು ವರ್ಣಗಳನ್ನೂ ಅವಕ್ಕೆ ತಕ್ಕ ನಡವಳಿಕೆಯನ್ನೂ ತೊರೆದು ಮಹಾ ಹೊಲಸು ದಾರಿಯಲ್ಲಿ ನಡೆಯುತ್ತಾರೆ; ಹಿರಿಯ ರಾಜರು ನಾಶವಾಗಿ ಬೇಡರೂ ಕೀಳುಕುಲದವರೂ ಕೆಟ್ಟ ನಡವಳಿಕೆಯವರೂ ಅನ್ಯಾಯವೆಸಗುವವರೂ ರಾಜರಾಗುತ್ತಾರೆ; ಜೈನಶಾಸ್ತ್ರಗಳನ್ನು ಬಲ್ಲವರ ಬಳಿ ಹೋಗದೆ ಜನರು ಕುಧರ್ಮಿಗಳನ್ನು ಸೇವಿಸುತ್ತಾರೆ; ಮೂಢಮತಿಗಳು ತಮ್ಮ ಮಕ್ಕಳಿಗೂ ವ್ಯಂತರಗಳಂತಹ ಹೆಸರುಗಳನ್ನಿಟ್ಟು ಸಂತಸಪಡುತ್ತಾರೆ; ಧರ್ಮವು ನಾಡಿನ ಮಧ್ಯಭಾಗದಲ್ಲಿ ನೆಲಸದೆ ಗಡಿಭಾಗಗಳಲ್ಲಿ ನೆಲಸುತ್ತದೆ; ಐದನೆಯ ಕಾಲವಾದ ದುಷ್ಷಮದಲ್ಲಿ ರಾಜರೂ ಮುನಿಶ್ರೇಷ್ಠರೂ ಸ್ವಲ್ಪವೂ ಮಹಿಮಾವಂತರಾಗಿರುವುದಿಲ್ಲ; ಜಗತ್ತಿನಲ್ಲಿ ಅನ್ನದಾನ ನಡೆಯುವಲ್ಲಿ ಇನ್ನು ಮುಂದೆ ವ್ರತಭ್ರಷ್ಟರು, ಒಳ್ಳೆಯ ಹಾದಿಗೆ ವಿರುದ್ಧವಾದವರು, ವ್ಯಸನಗಳಿಗೊಳಗಾದವರು, ಪಾಪಿಗಳು – ಇಂತಹ ಕೆಟ್ಟ ಜನರು ಅತಿಥಿಗಳಾಗುತ್ತಾರೆ; ಜೈನದೀಕ್ಷೆಯನ್ನು ಪಡೆಯಲು ಯುವಜನರೇ ಮೈಯೊಡ್ಡುತ್ತಾರೆ, ಹೆಚ್ಚು ವಯಸ್ಸಾದವರು ಮುಂದಾಗುವುದಿಲ್ಲ; ದುಷ್ಷಮದಲ್ಲಿ ಮುನಿಸಮೂಹಕ್ಕೆ ಅವಧಿಜ್ಞಾನವಾಗಲೀ ಮನಃಪರ್ಯರಜ್ಞಾನವಾಗಲೀ ಉಂಟಾಗುವುದಿಲ್ಲ; ಧಾನ್ಯಸಮೂಹವು ರಸವಿಹೀನವಾಗುತ್ತವೆ.

**ಇವು ದೂರಫಲಂಗಳ್ ಸ್ವ**
**ಪ್ನವಿಶೇಷಂಗಳ್ ತನೂಜ ಕೊಕ್ಕರಿಸದಿರಿ**
**ನ್ನಿವಱಿಡೆಗೆ ನಿನಗೆ ಸಲೆ ಮಾ**
**ಟ್ಕಿ ವಿಶ್ವವಿಘ್ನೋಪಶಾಂತಿಯಂ ಜಿನಧರ್ಮಂ** ೧೪೨

**ಪದವಿಭಾಗ–ಅನ್ವಯ–ಅರ್ಥ:** ತನೂಜ = ಮಗನೇ, ಇವು ಸ್ವಪ್ನವಿಶೇಷಂಗಳ್ ದೂರಫಲಂಗಳ್ = ಇವೆಲ್ಲ ಕನಸುಗಳ ದೂರಪರಿಣಾಮಗಳು, ಇನ್ನು + ಇವಱಿಡೆಗೆ ಕೊಕ್ಕರಿಸದಿರ್ = ಮುಂದೆ ಇವುಗಳ ಬಗ್ಗೆ ಚಿಂತಿಸಬೇಡ, ಜಿನಧರ್ಮಂ ನಿನಗೆ ವಿಶ್ವವಿಘ್ನ + ಉಪಶಾಂತಿಯಂ ಸಲೆ ಮಾಟ್ಕಿ = ಜಿನಧರ್ಮವು ನಿನಗೆ ಸಕಲ ವಿಘ್ನಗಳಿಗೂ ಪರಿಹಾರವನ್ನು ಒದಗಿಸಲಿ.

**ಗದ್ಯಾನುಸರಣ:** ಮಗನೇ, ಇವೆಲ್ಲ ಕನಸುಗಳ ದೂರಪರಿಣಾಮಗಳು; ಮುಂದೆ ಇವುಗಳ ಬಗ್ಗೆ ಚಿಂತಿಸಬೇಡ; ಜಿನಧರ್ಮವು ನಿನಗೆ ಸಕಲ ವಿಘ್ನಗಳಿಗೂ ಪರಿಹಾರವನ್ನು ಒದಗಿಸಲಿ.

**ವ॥ ಎಂಬುದುಂ ಭರತೇಶ್ವರಂ ಪ್ರಸನ್ನಮನನಾಗಿ ಪುರುಪರಮೇಶ್ವರಂಗೆಱಗಿ ಬಂದಯೋಧ್ಯಾಪುರಮಂ ಪೊಕ್ಕು ದುಃಸ್ವಪ್ನದರ್ಶನಕರ್ಷಣಾರ್ಥಮಾಗಿ ಶಾಂತಿಕಕ್ರಿಯೆಗಳಂ ನೆಗಟ್ಟಿ,**

**ಪದವಿಭಾಗ–ಅನ್ವಯ–ಅರ್ಥ:** ಎಂಬುದುಂ ಭರತೇಶ್ವರಂ ಪ್ರಸನ್ನಮನನಾಗಿ = ಎಂದು ಹೇಳಲು, ಭರತನು ಸಂತಸ ಮನಸ್ಸಿನಿಂದ ಕೂಡಿ, ಪುರುಪರಮೇಶ್ವರಂಗೆ + ಎಱಗಿ ಬಂದು + ಅಯೋಧ್ಯಾಪುರಮಂ ಪೊಕ್ಕು = ಪುರುದೇವನಿಗೆ ನಮಸ್ಕರಿಸಿ ಬಂದು ಅಯೋಧ್ಯಾಪುರಮಂ ಪೊಕ್ಕು = ಅಯೋಧ್ಯೆಯನ್ನು ತಲುಪಿ, ದುಃಸ್ವಪ್ನದರ್ಶನಕರ್ಷಣ + ಅರ್ಥಂ + ಆಗಿ = ಕೆಟ್ಟ ಕನಸುಗಳನ್ನು ಕಂಡ ಫಲಗಳನ್ನು ದೂರಮಾಡಲು. ಶಾಂತಿಕಕ್ರಿಯೆಗಳಂ ನೆಗಟ್ಟಿ = ಶಾಂತಿಕ್ರಿಯೆಗಳನ್ನು ನೆರವೇರಿಸಿ,

**ಗದ್ಯಾನುಸರಣ:** ಎಂದು ಹೇಳಲು ಭರತನು ಪ್ರಸನ್ನಮನನಾದ; ಪುರುದೇವನಿಗೆ ನಮಸ್ಕರಿಸಿ ಬಂದು ಅಯೋಧ್ಯೆಯನ್ನು ತಲುಪಿ, ಕೆಟ್ಟ ಕನಸುಗಳನ್ನು ಕಂಡ ಫಲಗಳನ್ನು ದೂರಮಾಡಲು, ಶಾಂತಿಕ್ರಿಯೆಗಳನ್ನು ನೆರವೇರಿಸಿದ.

**ವಿವಿಧದ್ವೀಪಂಗಳೊಳ್ ಮಂದರಗಿರಿತಟದೊಳ್ ಜ್ಯೋತಿರಾವಾಸದೊಳ್ ದೇ**
**ವವಿಮಾನಾನೀಕದೊಳ್ ಶೋಭಿಸುವ ಜಿನಗೃಹವ್ರಾತಮಂ ಗೆಲ್ದು ರತ್ನ**
**ಚ್ಛವಿಯಿಂ ದಿಗ್ಭಿತ್ತಿಯಂ ಚಿತ್ರಿಸುವ ಜಿನನಿಕೇತಂಗಳಂ ಮಾಡಿಸುತ್ತುಂ**
**ದಿವಿಜೇಂದ್ರಸ್ತುತ್ಯನಾದಂ ಸುಕವಿಜನಮನೋಮಾನಸೋತ್ತಂಸಹಂಸಂ** ೧೪೩

**ಪದವಿಭಾಗ–ಅನ್ವಯ–ಅರ್ಥ:** ಸುಕವಿಜನಮನೋಮಾನಸೋತ್ತಂಸಹಂಸಂ = ಭರತನು, ವಿವಿಧದ್ವೀಪಂಗಳೊಳ್ = ಬೇರೆ ಬೇರೆ ದ್ವೀಪಗಳಲ್ಲಿಯೂ, ಮಂದರಗಿರಿತಟದೊಳ್ = ಮಂದರಪರ್ವತದ ತಪ್ಪಲಿನಲ್ಲಿಯೂ, ಜ್ಯೋತಿರ್ + ಆವಾಸದೊಳ್ = ಜ್ಯೋತಿರ್ಲೋಕಗಳಲ್ಲಿಯೂ, ದೇವವಿಮಾನ + ಆನೀಕದೊಳ್ = ದೇವವಿಮಾನಸಮೂಹದಲ್ಲಿಯೂ, ಶೋಭಿಸುವ ಜಿನಗೃಹವ್ರಾತಮಂ ಗೆಲ್ದು

= ಸೊಗಯಿಸುವ ಜಿನಗುಡಿಗಳನ್ನು ಮೀರಿ, ರತ್ನಚ್ಛವಿಯಿಂ ದಿಗ್ಭಿತ್ತಿಯಂ ಚಿತ್ರಿಸುವ = ರತ್ನಕಾಂತಿಯಿಂದ ದಿಕ್ಕುಗಳೆಂಬ ಗೋಡೆಗಳನ್ನು ಬೆಳಗಿಸಿ, ಜಿನನಿಕೇತಂಗಳಂ ಮಾಡಿಸುತ್ತುಂ = ಜಿನಗೃಹಗಳನ್ನು ಕಟ್ಟಿಸುತ್ತ, ದಿವಿಜೇಂದ್ರಸ್ತುತ್ಯನಾದಂ = ದೇವೇಂದ್ರನ ಹೊಗಳಿಕೆಗೆ ಪಾತ್ರನಾದ.

**ಗದ್ಯಾನುಸರಣ:** ಸುಕವಿಜನಮನೋಮಾನಸೋತ್ತಂಸಹಂಸನಾದ ಭರತನು ಬೇರೆ ಬೇರೆ ದ್ವೀಪಗಳಲ್ಲಿಯೂ, ಮಂದರಪರ್ವತದ ತಪ್ಪಲಿನಲ್ಲಿಯೂ, ಜ್ಯೋತಿರ್ಲೋಕಗಳಲ್ಲಿಯೂ, ದೇವವಿಮಾನಸಮೂಹದಲ್ಲಿಯೂ ಸೊಗಯಿಸುವ ಜಿನಗುಡಿಗಳನ್ನು ಮೀರಿಸುವ ಹಾಗೆಯೂ, ರತ್ನಕಾಂತಿಯಿಂದ ದಿಕ್ಕುಗಳೆಂಬ ಗೋಡೆಗಳನ್ನು ಬೆಳಗುವಂತೆಯೂ ಜಿನಗೃಹಗಳನ್ನು ಕಟ್ಟಿಸಿ ದೇವೇಂದ್ರನ ಹೊಗಳಿಕೆಗೆ ಪಾತ್ರನಾದ.

**ಪ್ರಿಯಧರ್ಮನೃಪತಿಯಂ ನೋ**
**ಡಿ ಯಥಾ ರಾಜಾ ತಥಾ ಪ್ರಜಾ ಎಂಬವೊಲೋ**
**ಜೆಯೊಳೋಜೆಗೊಂಡು ಧರ್ಮ**
**ಪ್ರಿಯರಾದರ್ ಪ್ರಜೆಗಳುಂ ಸಮಸ್ತಾವನಿಯೊಳ್ ೧೪೪**

**ಪದವಿಭಾಗ–ಅನ್ವಯ–ಅರ್ಥ:** ಪ್ರಿಯಧರ್ಮನೃಪತಿಯಂ ನೋಡಿ = ಬೇಕಾದವನೂ ಧರ್ಮಪರನೂ ಆದ ರಾಜನನ್ನು ನೋಡಿ, ಯಥಾ ರಾಜಾ ತಥಾ ಪ್ರಜಾ = ಹೇಗೆ ರಾಜನೋ ಹಾಗೆ ಪ್ರಜೆಗಳು, ಎಂಬವೊಲ್ + ಓಜೆಯೊಳ್ + ಓಜೆಗೊಂಡು = ಎನ್ನುವಂತೆ ಅವನ ರೀತಿಯಲ್ಲಿಯೇ ತಾವೂ ನಡೆದು, ಸಮಸ್ತ + ಅವನಿಯೊಳ್ = ಇಡೀ ಜಗತ್ತಿನಲ್ಲಿ, ಪ್ರಜೆಗಳುಂ ಧರ್ಮಪ್ರಿಯರ್ + ಆದರ್ = ಪ್ರಜೆಗಳು ಕೂಡ ಧರ್ಮಪ್ರಿಯರಾದರು.

**ಗದ್ಯಾನುಸರಣ:** ಬೇಕಾದವನೂ ಧರ್ಮಪರನೂ ಆದ ತಮ್ಮ ರಾಜನನ್ನು ನೋಡಿ, 'ಹೇಗೆ ರಾಜನೋ ಹಾಗೆ ಪ್ರಜೆಗಳು' ಎನ್ನುವಂತೆ ಅವನ ರೀತಿಯಲ್ಲಿಯೇ ತಾವೂ ನಡೆದು ಇಡೀ ಜಗತ್ತಿನಲ್ಲಿ ಪ್ರಜೆಗಳು ಕೂಡ ಧರ್ಮಪ್ರಿಯರಾದರು.

[ವಿಶೇಷ ವಿಚಾರ: ಈ ಪದ್ಯವು 'ಧರ್ಮಶೀಲೇ ಮಹೀಪಾಲೇ ಯಾಂತಿ ತಚ್ಛೀಲತಾಂ ಪ್ರಜಾಃ। ಅತಾಚ್ಛೀಲ್ಯಮತಚ್ಛೀಲೇ ಯಥಾ ರಾಜಾ ತಥಾ ಪ್ರಜಾಃ' ಎಂಬ ಪೂರ್ವಪುರಾಣದ (೪೧. ೯೭) ಶ್ಲೋಕವನ್ನು ಅನುಸರಿಸಿದೆ.]

**ವ॥ ಮತ್ತಿತ್ತ ವೃಷಭನಾಥಂ ಗಣಧರದೇವರುಂ ಸಕಳಪೂರ್ವಧರರುಂ ನಾಲ್ಸಾಸಿರದೈನೂಱಯ್ವದಿಂಬರ್ ಶಿಕ್ಷಕರುಂ ಅವಧಿಜ್ಞಾನಿಗಳುಂ ಕೇವಳಜ್ಞಾನಿಗಳುಂ ವಿಕ್ರಿಯರ್ಧಿಪ್ರಾಪ್ತರುಂ ಮನಃಪರ್ಯಯಜ್ಞಾನಿಗಳುಂ ವಾದಿಗಳುಂ ಮೊದಲಾಗೆ ಮುನಿಪತಿಗಳುಂ ಆರ್ಯಿಕಾಗಣಮುಂ ಶ್ರಾವಕರುಂ ಶ್ರಾವಕಿಯರುಂ ಅಯ್ದುಲಕ್ಕೆ ಚತುರ್ವಿಧದೇವನಿಕಾಯಮುಂ ಪಕ್ಷಿಚತುಷ್ಪದಸರೀಸೃಪಾದಿ ತಿರ್ಯಗ್ಜಾತಿಗಳುಂ ಬೆರಸು ಧರ್ಮಾಮೃತವರ್ಷದಿಂ ಧರ್ಮಕ್ಷೇತ್ರಂಗಳೊಳ್ ಭವ್ಯಸಸ್ಯಂಗಳನನೇಕ ಬ್ರತಫಲವಿನತಂಗಳ್ ಮಾಡಿ ಪದಿನಾಲ್ಕು ದಿವಸದಾಯುಷ್ಯಮುಂಟೆನೆ ಕೈಳಾಸಪರ್ವತದ ಸಿದ್ಧಕೂಟದೊಳ್ ಪೌಷ್ಯಮಾಸದ ಪೌರ್ಣಮೀ ದಿನದಂದು ಯೋಗಪಲ್ಯಂಕಾಸನದಿಂದಂ ಯೋಗನಿರೋಧದೊಳ್ ಪೂರ್ವಾಭಿಮುಖನಾಗಿರ್ದಂ**

**ಅನ್ನೆಗಮಿತ್ತಲ್ ಭರತಂ, ಯುವರಾಜಂ, ಗೃಹಪತಿ, ಭರತಮಂತ್ರಿಮುಖ್ಯರ್, ಚಮೂಪತಿ ಜಯಪ್ರಿಯತನೂಜಂ, ಅನಂತವೀರ್ಯಂ, ಸುಭದ್ರೆಯರ್ [ವಿವಿಧ ಕನಸುಗಳಂ ಕಂಡರ್]. ಭರತಾದಿಗಳನಿಬರುಂ ತಂತಮ್ಮ ಕಂಡ ಕನಸುಗಳಂ ಪ್ರಭಾತಸಮಯದೊಳ್ ಪುರೋಹಿತಂಗಱಿಪಿದೊಡೆ**

**ಅರ್ಥ:** ಅಲ್ಲದೆ ಈ ಕಡೆ, ವೃಷಭನಾಥನು ಗಣಧರದೇವರುಗಳು, ಸಕಳಪೂರ್ವಧರರು, ಶಿಕ್ಷಕರು, ಅವಧಿಜ್ಞಾನಿಗಳು, ಕೇವಳಜ್ಞಾನಿಗಳು, ವಿಕ್ರಿಯಋದ್ಧಿಪ್ರಾಪ್ತರು, ಮನಃಪರ್ಯಯಜ್ಞಾನಿಗಳು, ವಾದಿಗಳು ಮುಂತಾದ ಮುನಿಪತಿಗಳೂ, ಆರ್ಯಿಕಾಸಮುದಾಯವೂ, ಶ್ರಾವಕರೂ, ಶ್ರಾವಕಿಯರೂ, ಭವನಾಮರರು ಮುಂತಾದ ನಾಲ್ಕು ಬಗೆಯ ದೇವಸಮೂಹವೂ, ಪಕ್ಷಿಗಳು ಚತುಷ್ಪದಿಗಳು ಉರಗಗಳು ಮುಂತಾದ ಪ್ರಾಣಿಜಾತಿಗಳೂ ಸೇರಿದಂತೆ ತನ್ನ ಧರ್ಮಾಮೃತದ ಮಳೆಯಿಂದ ಧರ್ಮಕ್ಷೇತ್ರಗಗಳಲ್ಲಿ ಭವ್ಯರೆಂಬ ಗಿಡಗಳು ಅನೇಕವ್ರತಗಳೆಂಬ ಹಣ್ಣುಗಳಿಂದ ಕೂಡಿರುವಂತೆ ಮಾಡಿ, ಕೇವಲ ಹದಿನಾಲ್ಕು ದಿವಸಗಳಷ್ಟು ಆಯುಸ್ಸು ಇದೆ ಎನ್ನುವಾಗ ಕೈಲಾಸಪರ್ವತದ ಸಿದ್ಧಕೂಟದಲ್ಲಿ ಪುಷ್ಯಮಾಸದ ಹುಣ್ಣಿಮೆಯಂದು ಯೋಗಪಲ್ಯಂಕಾಸನದಿಂದ ಯೋಗನಿರೋಧ ಪೂರ್ವಕವಾಗಿ ಪೂರ್ವಕ್ಕೆ ಎದುರಾಗಿ ಕುಳಿತ.

ಅಷ್ಟರಲ್ಲಿ ಈ ಕಡೆ, ಭರತ ಯುವರಾಜಂ ಗೃಹಪತಿ ಭರತನ ಮಂತ್ರಿಮುಖ್ಯ ಸೇನಾಪತಿ ಜಯಪ್ರಿಯನ ಮಗನಾದ ಅನಂತವೀರ್ಯಂ ಸುಭದ್ರೆಯರು ವಿವಿಧ ಕನಸುಗಳಂ ಕಂಡರು. ಭರತಾದಿಗಳೆಲ್ಲರೂ ತಾವು ಕಂಡ ಕನಸುಗಳನ್ನು ಬೆಳಿಗ್ಗೆ ಪುರೋಹಿತನಿಗೆ ತಿಳಿಸಿದರು.

**ಕನಸುಗಳವು ಪೆಱಪೆಱತೇ**
**ನನಂತಗುಣನಿಳಯನಾದಿದೇವಂ ಪಲಬರ್**
**ಮುನಿಪತಿಗಳ್ ವೆರಸಡರ್ದಪ**
**ನನಶ್ವರಾಸ್ಪದಮನೆಂಬುದಂ ಸೂಚಿಸುಗುಂ** ೧೪೫

**ಪದವಿಭಾಗ-ಅನ್ವಯ-ಅರ್ಥ:** ಕನಸುಗಳ್ + ಅವು ಪೆಱಪೆಱತೇನ್ = ಕನಸುಗಳು ಬೇರೇನು, ಅನಂತಗುಣನಿಳಯನ್ + ಆದಿದೇವಂ = ಎಣೆಯಿಲ್ಲದ ಗುಣಗಳ ನೆಲೆವನೆಯಾದ ಆದಿದೇವನು, ಪಲಬರ್ ಮುನಿಪತಿಗಳ್ ವೆರಸು = ಹಲವರು ಮುನಿಶ್ರೇಷ್ಠರೊಡನೆ, ಅನಶ್ವರಾಸ್ಪದಮನ್ ಅಡರ್ದಪನ್ ಎಂಬುದಂ ಸೂಚಿಸುಗುಂ = ಶಾಶ್ವತನೆಲೆಯನ್ನು ಸೇರುವನೆಂಬುದನ್ನು ಸೂಚಿಸುತ್ತದೆ.

**ಗದ್ಯಾನುಸರಣ:** ಕನಸುಗಳು ಎಣೆಯಿಲ್ಲದ ಗುಣಗಳ ನೆಲೆವನೆಯಾದ ಆದಿದೇವನು ಹಲವರು ಮುನಿಶ್ರೇಷ್ಠರೊಡನೆ ಶಾಶ್ವತನೆಲೆಯನ್ನು ಸೇರುವನೆಂಬುದನ್ನು ಸೂಚಿಸುತ್ತದೆ.

**ವ॥ ಎಂಬುದುಮಾ ಪ್ರಸ್ತಾವದೊಳ್ ಆದಿಭಟ್ಟಾರಕವ್ಯತಿಕರಸ್ಥಿತಿಯನಾನಂದನೆಂಬಂ ಧರ್ಮಕಾರ್ಯನಿಮಿತ್ತಂ ಬಂದಱಿಪಿದೊಡೆ ಭರತೇಶ್ವರಚಕ್ರವರ್ತಿಯುಂ ವಿನೇಯಜನಸಮೇತಂ ಬಂದು ಭಟ್ಟಾರಕರಂ ಮೂಱು ಸೂಟ್ ಬಲವಂದು ಕೃತಾಭೀಷ್ಟಸ್ತವನಪರಂ ಮಹಾಮಹಮೆಂಬ**

ಮಹಾಪೂಜೆಯಂ ಮಹಾವಿಭೂತಿಯಿಂ ಪದಿನಾಲ್ಕು ದಿವಸಂಬರಂ ನಿರಂತರಂ ಮಾಡೆ ವೃಷಭನಾಥಂ

**ಪದವಿಭಾಗ–ಅನ್ವಯ–ಅರ್ಥ:** ಎಂಬುದುಂ = ಎಂದು ಹೇಳಲು, ಆ ಪ್ರಸ್ತಾವದೊಳ್ = ಆ ಸಮಯದಲ್ಲಿ, ಆದಿಭಟ್ಟಾರಕವ್ಯತಿಕರಸ್ಥಿತಿಯನ್ = ಆದಿದೇವನ ಸ್ಥಿತಿಯನ್ನು, ಆನಂದನೆಂಬಂ ಧರ್ಮಕಾರ್ಯನಿಮಿತ್ತಂ ಬಂದು + ಅಱಿಪಿದೊಡೆ = ಆನಂದನೆಂಬುವವನು ಧರ್ಮಕಾರ್ಯನಿಮಿತ್ತವಾಗಿ ಬಂದು ತಿಳಿಸಲು, ಭರತೇಶ್ವರಚಕ್ರವರ್ತಿಯುಂ ವಿನೇಯಜನಸಮೇತಂ ಬಂದು = ಭರತಚಕ್ರವರ್ತಿಯು ಶಿಷ್ಯಸಮೂಹದೊಡನೆ ಬಂದು, ಭಟ್ಟಾರಕರಂ ಮೂಱು ಸೂಟ್ ಬಲವಂದು = ಆದಿದೇವನನ್ನು ಮೂರು ಸಲ ಪ್ರದಕ್ಷಿಣೆ ಮಾಡಿ, ಕೃತ + ಅಭೀಷ್ಟಸ್ತವನಪರಂ = ಇಷ್ಟಾರ್ಥವನ್ನು ನೆರವೇರಿಸುವ ಸ್ತೋತ್ರದಿಂದ ಕೂಡಿ, ಮಹಾಮಹಂ + ಎಂಬ ಮಹಾಪೂಜೆಯಂ = ಮಹಾಮಹ ಎಂಬ ಮಹಾಪೂಜೆಯನ್ನು, ಮಹಾವಿಭೂತಿಯಿಂ ಪದಿನಾಲ್ಕು ದಿವಸಂಬರಂ ನಿರಂತರಂ ಮಾಡೆ = ಮಹಾ ವೈಭವದಿಂದ ಹದಿನಾಲ್ಕು ದಿವಸಗಳ ಕಾಲ ನಿರಂತರವಾಗಿ ನೆರವೇರಿಸಲು, ವೃಷಭನಾಥಂ ಸ್ವಸ್ಥನ್ = ವೃಷಭದೇವನು

**ಗದ್ಯಾನುಸರಣ:** ಎಂದು ಹೇಳಿದ; ಆ ಸಮಯದಲ್ಲಿ ಆದಿದೇವನ ಸ್ಥಿತಿಯನ್ನು ಆನಂದನೆಂಬುವವನು ಧರ್ಮಕಾರ್ಯನಿಮಿತ್ತವಾಗಿ ಬಂದು ತಿಳಿಸಿದ: ಆಗ ಭರತಚಕ್ರವರ್ತಿಯು ಶಿಷ್ಯಸಮೂಹದೊಡನೆ ಬಂದು ಆದಿದೇವನನ್ನು ಮೂರು ಸಲ ಪ್ರದಕ್ಷಿಣೆ ಮಾಡಿ, ಇಷ್ಟಾರ್ಥವನ್ನು ನೆರವೇರಿಸುವ ಸ್ತೋತ್ರದಿಂದ ಕೂಡಿದ ಮಹಾಮಹ ಎಂಬ ಮಹಾಪೂಜೆಯನ್ನು ಮಹಾ ವೈಭವದಿಂದ ಹದಿನಾಲ್ಕು ದಿವಸಗಳ ಕಾಲ ನಿರಂತರವಾಗಿ ನೆರವೇರಿಸಿದ; ವೃಷಭದೇವನು

**ಗುಣಮೆಂಟುಂ ಬಂದು ತನ್ನೊಳ್ ಪೆಣೆದಿರೆ ಸುಖಸೋದ್ಭೂತನುಂ ಲೋಕಚೂಡಾ**
**ಮಣಿಯುಂ ಶಶ್ವತ್ತ್ರಿಲೋಕೀಪ್ರಣುತನುಮತಿವಿಖ್ಯಾತನುಂ ಭವ್ಯಚಿಂತಾ**
**ಮಣಿಯುಂ ತಾನಾಗಿ ತನ್ನೊಳ್ ನೆಱೆಯೆ ಪಡೆದು ತನ್ನಂದಮಂ ತಾನೆ ತನ್ನ**
**ತ್ತಣಿನಾದಿಬ್ರಹ್ಮನೇಕಕ್ಷಣದೊಳೆ ಪರಮಬ್ರಹ್ಮಸದ್ಮಕ್ಕೆ ಸಂದಂ** ೧೪೬

**ಪದವಿಭಾಗ–ಅನ್ವಯ–ಅರ್ಥ:** ಗುಣಂ + ಎಂಟುಂ ಬಂದು ತನ್ನೊಳ್ ಪೆಣೆದಿರೆ = ಈ ಎಂಟು ಗುಣಗಳು ತನ್ನಲ್ಲಿ ಬಂದು ಸೇರಿರಲು, ಸುಖಸಾ + ಉದ್ಭೂತನುಂ ಲೋಕಚೂಡಾಮಣಿಯುಂ = ಸುಖಸ್ವರೂಪನೂ ಜಗತ್ತಿನ ತಲೆವಣಿಯೂ, ಶಶ್ವತ್ + ತ್ರಿಲೋಕೀಪ್ರಣುತನುಂ = ಮೂರೂ ಲೋಕಗಳ ಜನರಿಂದ ಸ್ತುತಿಸಲ್ಪಟ್ಟವನೂ, ಅತಿವಿಖ್ಯಾತನುಂ ಭವ್ಯಚಿಂತಾಮಣಿಯುಂ = ಮಹಾ ಕೀರ್ತಿವಂತನೂ ಭವ್ಯರಿಗೆ ಚಿಂತಾಮಣಿಯಂತಿರುವವನೂ, ತಾನಾಗಿ ತನ್ನೊಳ್ ತನ್ನಂದಮಂ ತಾನೆ ತನ್ನತ್ತಣಿನ್ ನೆಱೆಯೆ ಪಡೆದು = ತನ್ನಲ್ಲಿ ತಾನಾಗಿ ತನ್ನ ಸ್ವರೂಪವನ್ನು ಕಂಡುಕೊಂಡು, ಆದಿಬ್ರಹ್ಮನ್ + ಏಕಕ್ಷಣದೊಳೆ ಪರಮಬ್ರಹ್ಮಸದ್ಮಕ್ಕೆ ಸಂದಂ = ಆದಿಬ್ರಹ್ಮನು ಒಂದು ಕ್ಷಣದಲ್ಲಿ ಪರಬ್ರಹ್ಮಸ್ಥಾನವನ್ನು ಸೇರಿದ.

**ಗದ್ಯಾನುಸರಣ:** ಈ ಎಂಟು ಗುಣಗಳು ಆತನಲ್ಲಿ ಬಂದು ಸೇರಿದುವು; ಸುಖಸ್ವರೂಪನೂ, ಜಗತ್ತಿನ ತಲೆವಣಿಯೂ, ಮೂರೂ ಲೋಕಗಳ ಜನರಿಂದ ಸ್ತುತಿಸಲ್ಪಪಟ್ಟವನೂ, ಮಹಾ ಕೀರ್ತಿವಂತನೂ, ಭವ್ಯರಿಗೆ ಚಿಂತಾಮಣಿ ಯಂತಿರುವವನೂ ಆದ ಆತನು ತನ್ನಲ್ಲಿ ತಾನಾಗಿ ತನ್ನ ಸ್ವರೂಪವನ್ನು ಕಂಡುಕೊಂಡ; ಆದಿಬ್ರಹ್ಮನು ಒಂದು ಕ್ಷಣದಲ್ಲಿ ಪರಬ್ರಹ್ಮಸ್ಥಾನವನ್ನು ಸೇರಿದ.

**ದೊರೆಕೊಂಡ ಮಾಘಮಾಸಂ**
**ಬರೆ ಕೃಷ್ಣಚತುರ್ದಶೀದಿನಂ ಸಮನಿಸೆ ತ**
**ತ್ಪುರುದೇವಂ ಮುಕ್ತಿವಧೂ**
**ವರತೆಯನಭಿಜಿನ್ಮುಹೂರ್ತದೊಳ್ ಕೈಕೊಂಡಂ** ೧೪೭

**ಪದವಿಭಾಗ–ಅನ್ವಯ–ಅರ್ಥ:** ದೊರೆಕೊಂಡ ಮಾಘಮಾಸಂ ಬರೆ = ಮಾಘಮಾಸವು ನಡೆಯುತ್ತಿರಲು, ಕೃಷ್ಣಚತುರ್ದಶೀದಿನಂ ಸಮನಿಸೆ = ಕೃಷ್ಣಪಕ್ಷದ ಚತುರ್ದಶಿಯು ಬರಲು, ತತ್ + ಪುರುದೇವಂ = ಆ ಪುರುದೇವನು, ಅಭಿಜಿನ್ಮುಹೂರ್ತದೊಳ್ = ಕುತುಪಕಾಲ (ದಿನದ ಎಂಟನೆಯ ಮುಹೂರ್ತ)ದಲ್ಲಿ, ಮುಕ್ತಿವಧೂವರತೆಯನ್ ಕೈಕೊಂಡಂ = ಮುಕ್ತಿವಧುವಿನ ಕೈಹಿಡಿಯಲು ಪಾತ್ರತ್ವವನ್ನು ಪಡೆದ.

**ಗದ್ಯಾನುಸರಣ:** ಮಾಘಮಾಸದ ಕೃಷ್ಣಪಕ್ಷದ ಚತುರ್ದಶಿಯಂದು ಕುತುಪಕಾಲ (ದಿನದ ಎಂಟನೆಯ ಮುಹೂರ್ತ)ದಲ್ಲಿ ಪುರುದೇವನು ಮುಕ್ತಿವಧುವಿನ ಸ್ವೀಕಾರಕ್ಕೆ ಪಾತ್ರನಾದ.

**ವ। ಅಂತು ವೃಷಭೇಶ್ವರಂ ತ್ರಿಲೋಕಶಿಖರಿಶೇಖರಾಯಮಾನಮುಂ ಕ್ರಮೋನ್ನತಮುಮಾಗಿ ಮಧ್ಯಪ್ರದೇಶದೊಳಷ್ಟಯೋಜನ ಬಾಹುಲ್ಯಮಂ ಧವಳಚ್ಛತ್ರಾಕಾರಮುಂ ನಾಲ್ವತ್ತೈದು ಲಕ್ಷಯೋಜನದಗಲಮುಂ ಸಮವೃತ್ತಮುಂ ಎನಿಸಿದೀಷತ್ಪ್ರಾಗ್ಭಾರದ ಮೇಗಣ ಘನೋದಧಿಘನಾನಿಳತನುವ್ರಾತತ್ರಿತಯಭಾಗದೊಳ್ ಅವ್ಯಾಬಾಧನುಮನಂತಸುಖಾಂಬುಧಿ ನಿಳಯನುಮಾಗಿ ನೆಲಸಿರ್ದಂ ಇತ್ತ ಚತುರ್ವಿಧದೇವನಿಕಾಯಮುಂ ಪುರುದೇವಪರಿನಿರ್ವಾಣ ಮಹಾಕಲ್ಯಾಣಪೂಜಾನಿರ್ವರ್ತನಾಭಿಲಾಷೆಯಾಗಿ ನಿರ್ವಾಣಭೂಮಿಯನನೇಕಸುರಭಿಸುರತರು ಕುಸುಮಗಂಧಾಕ್ಷತಂಗಳಿದಮರ್ಚಿಸಿ,**

**ಪದವಿಭಾಗ–ಅನ್ವಯ–ಅರ್ಥ:** ಅಂತು ವೃಷಭೇಶ್ವರಂ = ಹೀಗೆ ವೃಷಭನಾಥನು, ತ್ರಿಲೋಕಶಿಖರಿಶೇಖರಾಯಮಾನಮುಂ = ಮೂಲೋಕವೆಂಬ ಪರ್ವತದ ಶಿಖರರೂಪದ, ಕ್ರಮೋನ್ನತಮುಂ + ಆಗಿ = ಕ್ರಮೋನ್ನತವೂ ಆದ, ಮಧ್ಯಪ್ರದೇಶದೊಳ್ = ಮಧ್ಯಪ್ರದೇಶದಲ್ಲಿ, ಅಷ್ಟಯೋಜನಬಾಹುಲ್ಯಮಂ = ಎಂಟು ಯೋಜನ ವಿಸ್ತಾರದ್ದೂ, ಧವಳಚ್ಛತ್ರ + ಆಕಾರಮುಂ = ಬೆಳ್ಗೊಡೆಯ ಆಕಾರವುಳ್ಳುದೂ, ನಾಲ್ವತ್ತೈದುಲಕ್ಷಯೋಜನದ + ಅಗಲಮುಂ = ನಲವತ್ತೈದು ಯೋಜನಗಳಷ್ಟು ಅಗಲವಾದುದೂ, ಸಮವೃತ್ತಮುಂ ಎನಿಸಿದ = ಸಮವೃತ್ತವೂ ಆದ, ಈಷತ್ + ಪ್ರಾಗ್ಭಾರದ ಮೇಗಣ = ಸಿದ್ಧಕ್ಷೇತ್ರದ ಮೇಲುಗಡೆಯ, ಘನೋದದಿ ಘನಾನಿಳ ತನುವ್ರಾತ ತ್ರಿತಯಭಾಗದೊಳ್ = ಘನೋದದಿ ಘನಾನಿಳ ಮತ್ತು

ತನುವ್ರಾತ ಎಂಬ ಮೂರು ವಲಯಗಳಲ್ಲಿನ ಮೂರನೆಯದರಲ್ಲಿ, ಅವ್ಯಾಬಾಧನುಂ + ಅನಂತಸುಖಾಂಬುಧಿನಿಳಯನುಂ + ಆಗಿ ನೆಲಸಿರ್ದಂ = ಅವ್ಯಾಬಾಧನಾಗಿ ಕೊನೆಯಿಲ್ಲದ ಸುಖಸಮುದ್ರದಲ್ಲಿ ನೆಲಸಿದ್ದ; ಇತ್ತ = ಈ ಕಡೆ, ಚತುರ್ವಿಧದೇವನಿಕಾಯಮುಂ = ನಾಲ್ಕು ಬಗೆಯ ದೇವತಾಸಮೂಹವೂ, ಪುರುದೇವಪರಿನಿರ್ವಾಣ = ಪುರುದೇವನು ಪರಿನಿರ್ವಾಣ ಹೊಂದಿದ, ಮಹಾಕಲ್ಯಾಣಪೂಜಾನಿರ್ವರ್ತನ + ಅಭಿಲಾಷೆಯಾಗಿ = ಮಹಾಕಲ್ಯಾಣವನ್ನು ನೆರವೇರಿಸುವ ಇಚ್ಛೆಯಿಂದ, ನಿರ್ವಾಣಭೂಮಿಯನ್ = ನಿರ್ವಾಣಭೂಮಿಯನ್ನು, ಅನೇಕಸುರಭಿಸುರತರುಕುಸುಮಗಂಧ + ಅಕ್ಷತಂಗಳಿದಂ + ಅರ್ಚಿಸಿ = ಕಲ್ಪವೃಕ್ಷದ ನಾನಾ ಬಗೆಯ ಪರಿಮಳಭರಿತವಾದ ಹೂಗಳಿಂದಲೂ ಸುಗಂಧದ್ರವ್ಯ ಮತ್ತು ಅಕ್ಷತೆಗಳಿಂದಲೂ ಪೂಜಿಸಿ,

**ಗದ್ಯಾನುಸರಣ:** ಹೀಗೆ ವೃಷಭನಾಥನು ಮೂಲೋಕವೆಂಬ ಪರ್ವತದ ಶಿಖರರೂಪದ ಹಾಗೂ ಕ್ರಮೋನ್ನತವಾದ ಮಧ್ಯಪ್ರದೇಶದಲ್ಲಿ, ಎಂಟು ಯೋಜನ ವಿಸ್ತಾರದ್ದೂ, ಬೆಳ್ಗೊಡೆಯ ಆಕಾರವುಳ್ಳುದೂ, ನಲವತ್ತೈದು ಯೋಜನಗಳಷ್ಟು ಅಗಲವಾದುದೂ, ಸಮವೃತ್ತವೂ ಆದ ಸಿದ್ಧಕ್ಷೇತ್ರದ ಮೇಲುಗಡೆಯ ಘನೋದದಿ ಘನಾನಿಳ ಮತ್ತು ತನುವ್ರಾತ ಎಂಬ ಮೂರು ವಲಯಗಳಲ್ಲಿನ ಮೂರನೆಯದರಲ್ಲಿ ಅವ್ಯಾಬಾಧನಾಗಿ ಕೊನೆಯಿಲ್ಲದ ಸುಖಸಮುದ್ರದಲ್ಲಿ ನೆಲಸಿದ; ಈ ಕಡೆ, ನಾಲ್ಕು ಬಗೆಯ ದೇವತಾಸಮೂಹವೂ ಪುರುದೇವನು ಪರಿನಿರ್ವಾಣ ಮಹಾಕಲ್ಯಾಣವನ್ನು ನೆರವೇರಿಸುವ ಇಚ್ಛೆಯಿಂದ ನಿರ್ವಾಣಭೂಮಿಯನ್ನು ಕಲ್ಪವೃಕ್ಷದ ಬಗೆಬಗೆಯ ಪರಿಮಳಭರಿತವಾದ ಹೂಗಳಿಂದಲೂ ಸುಗಂಧದ್ರವ್ಯ ಮತ್ತು ಅಕ್ಷತೆಗಳಿಂದಲೂ ಪೂಜಿಸಿದ.

**ಸ್ಫುರಿತಾಗ್ನೀಂದ್ರಕಿರೀಟಕೋಟಿಮಣಿಸಂಭೂತಾಗ್ನಿಯಿಂ ಚಂದನಾ**
**ಗರುಕರ್ಪೂರಲವಂಗಕುಂಕುಮಘೃತಕ್ಷೀರಾನಲದ್ರವ್ಯಸಂ**
**ಕರಸಂಪರ್ಕದೊಳೆಯ್ದೆ ಪೆರ್ಚಿದುದಜೆಂ ರೂಪಾಂತರಕ್ಕೊಯ್ದು ಭಾ**
**ಸುರದಿಂ ತತ್ಸುರರಾಜನಂದಂ ಪಿರಿದೊಂದುತ್ಸಾಹಮಂ ಮಾಡಿದಂ** ೧೪೪

**ಪದವಿಭಾಗ–ಅನ್ವಯ–ಅರ್ಥ:** ಸ್ಫುರಿತ + ಅಗ್ನೀಂದ್ರ = ಪ್ರಜ್ವಲಿಸುವ ಅಗ್ನಿಶ್ರೇಷ್ಠನ, ಕಿರೀಟಕೋಟಿಮಣಿಸಂಭೂತ + ಅಗ್ನಿಯಿಂ = ಕಿರೀಟದ ಅಸಂಖ್ಯಾತ ಮಣಿಗಳಿಂದ ಹುಟ್ಟಿದ ಬೆಂಕಿಯು, ಚಂದನ + ಅಗರು ಕರ್ಪೂರ ಲವಂಗ ಕುಂಕುಮ ಘೃತ ಕ್ಷೀರ ಅನಲದ್ರವ್ಯ ಸಂಕರಸಂಪರ್ಕದೊಳ್ = ಶ್ರೀಗಂಧ ಅಗರು ಕರ್ಪೂರ ಲವಂಗ ಕುಂಕುಮ ತುಪ್ಪ ಹಾಲು ಮುಂತಾದ ಬೆಂಕಿಗನುಕೂಲಕರವಾದ ವಸ್ತುಗಳ ಸಂಪರ್ಕದಿಂದ, ಎಯ್ದೆ ಪೆರ್ಚಿದುದಜೆಂ = ಜೋರಾಗಿ ವರ್ಧಿಸಿದ್ದರಿಂದ, ಭಾಸುರದಿಂ ರೂಪಾಂತರಕ್ಕೆ + ಒಯ್ದು = ಜಾಜ್ವಲ್ಯಮಾನವಾಗಿ (ಪುರುದೇವನ ದೇಹವನ್ನು) ರೂಪಾಂತರಿಸಿ, ತತ್ + ಸುರರಾಜನಂದಂ = ಆ ದೇವೇಂದ್ರನು, ಪಿರಿದೊಂದು + ಉತ್ಸಾಹಮಂ ಮಾಡಿದಂ = ಹಿರಿದಾದ ಉತ್ಸಾಹವನ್ನು ತಳೆದ.

**ಗದ್ಯಾನುಸರಣ:** ಪ್ರಜ್ವಲಿಸುವ ಅಗ್ನಿಶ್ರೇಷ್ಠನ ಕಿರೀಟದ ಅಸಂಖ್ಯಾತ ಮಣಿಗಳಿಂದ ಹುಟ್ಟಿದ ಬೆಂಕಿಯು ಶ್ರೀಗಂಧ ಅಗರು ಕರ್ಪೂರ ಲವಂಗ ಕುಂಕುಮ ತುಪ್ಪ ಹಾಲು ಮುಂತಾದ ಬೆಂಕಿಗನುಕೂಲಕರವಾದ ವಸ್ತುಗಳ ಸಂಪರ್ಕದಿಂದ ಜೋರಾಗಿ ವರ್ಧಿಸಿ ಪುರುದೇವನ ದೇಹವನ್ನು ಬೂದಿಯಾಗಿ ರೂಪಾಂತರಗೊಂಡಿತು; ಇದರಿಂದ ದೇವೇಂದ್ರನು ಹಿರಿದಾದ ಉತ್ಸಾಹವನ್ನು ತಳೆದ.

**ಭೂತಿಗಳೊಳ್ ಕಲ್ಯಾಣವಿ**
**ಭೂತಿಗಳೆಮಗಕ್ಕೆ ಬೇಗಮಿನ್ನೆಂದು ಮನೋ**
**ಜಾತಮಹೋತ್ಸಾಹರ್ ತ**
**ದ್ಭೂತಿಯಿನಿಟ್ಟರ್ ತ್ರಿಪುಂಡ್ರಮಂ ದಿವಿಜೇಂದ್ರರ್** ೧೯೯

**ಪದವಿಭಾಗ–ಅನ್ವಯ–ಅರ್ಥ:** ಭೂತಿಗಳೊಳ್ = ಭಸ್ಮಗಳಿಂದ, ಇನ್ನು ಎಮಗೆ ಬೇಗಂ = ನಮಗಿನ್ನು ಬೇಗ, ಕಲ್ಯಾಣವಿಭೂತಿಗಳ್ ಅಕ್ಕೆ ಎಂದು = ಮಂಗಳಗಳು ಉಂಟಾಗಲಿ ಎಂದು, ಮನೋಜಾತಮಹಾ + ಉತ್ಸಾಹರ್ ದಿವಿಜೇಂದ್ರರ್ = ಮನಸ್ಸಿನಲ್ಲುಂಟಾದ ಸಂಭ್ರಮದಿಂದ ದೇವೇಂದ್ರರು, ತತ್ + ಭೂತಿಯಿನ್ ತ್ರಿಪುಂಡ್ರಮಂ ಇಟ್ಟರ್ = ಆ ಭಸ್ಮದಿಂದ ಮೂರು ಪಟ್ಟೆಗಳನ್ನು ಇಟ್ಟುಕೊಂಡರು.

**ಗದ್ಯಾನುಸರಣ:** ಈ ಭಸ್ಮಗಳಿಂದ ನಮಗೆ ಮಂಗಳಗಳು ಉಂಟಾಗಲಿ ಎಂದು ದೇವೇಂದ್ರರು ಸಂಭ್ರಮದಿಂದ ಆ ಭಸ್ಮದ ಮೂರು ಪಟ್ಟೆಗಳನ್ನು ಧರಿಸಿಕೊಂಡರು.

**ವ॥ ಅಂತು ತ್ರಿಪುಂಡ್ರಗಳನಿಟ್ಟೊಸಗೆಯಿಂದೊಸಗೆಮರುಳ್ಗೊಂಡು,**

**ಅರ್ಥ:** ಅಂತು ತ್ರಿಪುಂಡ್ರಗಳನ್ + ಇಟ್ಟು + ಒಸಗೆಯಿಂದೆ + ಒಸಗೆಮರುಳ್ಗೊಂಡು = ಹೀಗೆ ಮೂರು ಪಟ್ಟೆಗಳನ್ನಿಟ್ಟುಕೊಂಡು ಅಧಿಕ ಸಂತೋಷವನ್ನು ಹೊಂದಿದರು.

**ಆನಂದನಾಟಕಂ ಪರ**
**ಮಾನಂದಮನಂದು ಮಾಡೆ ದಿವಿಜಾಧೀಶರ್**
**ನಾನಾಪ್ರಕಾರದಿಂದಮ**
**ದೇನೆಂಬುತ್ಸವಮನಟ್ಟೆಯಿಂ ಮಾಡಿದರೋ** ೧೫೦

**ಪದವಿಭಾಗ–ಅನ್ವಯ–ಅರ್ಥ:** ಅಂದು ಆನಂದನಾಟಕಂ ಪರಮಾನಂದಮನ್ ಮಾಡೆ = ಆಗ ಆನಂದನಾಟಕವು ಮಹಾ ಸಂತಸವನ್ನುಂಟುಮಾಡಲು, ದಿವಿಜ + ಅಧೀಶರ್ = ದೇವೇಂದ್ರರು, ನಾನಾಪ್ರಕಾರದಿಂದಂ = ನಾನಾ ಬಗೆಯಲ್ಲಿ, ಅದೇನ್ + ಎಂಬುತ್ಸವಮನ್ + ಅಟ್ಟೆಯಿಂ ಮಾಡಿದರೋ = ಅದೆಂಥ ಉತ್ಸವವನ್ನು ಭಕ್ತಿಯಿಂದ ನೆರವೇರಿಸಿದರು!

**ಗದ್ಯಾನುಸರಣ:** ಆಗ ನಡೆದ ಆನಂದನಾಟಕವು ಮಹಾ ಸಂತಸವನ್ನುಂಟು ಮಾಡಿತು; ದೇವೇಂದ್ರರು ನಾನಾ ಬಗೆಯಲ್ಲಿ ಉತ್ಸವವನ್ನು ಭಕ್ತಿಯಿಂದ ನೆರವೇರಿಸಿದರು.

ವ। ಆಗಳಾತ್ಮೀಯಗುರುವಿಯೋಗಶೋಕಾನಳದಹ್ಯಮಾನಮಾನಸನಾಗಿರ್ದ ಭರತಪತಿಯ ಶೋಕಾವೇಗಮಂ ವೃಷಭಸೇನಗಣಾಗ್ರಣಿಗಳಿಂತೆಂದಾಜೆಸಿದರ್: ಜೀವಂಗಳ್ ಶುಭಾಶುಭ ಕರ್ಮಶೈಲೂಷಪ್ರೇರಿತಂಗಳಾಗಿ ಚತುರ್ಗತಿಸಂಸಾರಂಗಳೊಳನೇಕ ರಸಪರಿಣತಂಗಳ್ ನಾನಾಶರೀರೋಪಾದಾನಪರಿತ್ಯಜನಪುರಸ್ಸರಂ ಪರಿಭ್ರಮಿಸುಗುಂ ಅದು ನಮ್ಮಿನಿಬರ ಭವಾವಳಿಯಿಂದೆ ನಮಗನುಭೂತಪೂರ್ವಮದೆಂತೆಂದೊಡೆ ಭವದೀಯಜನಕಂ ಪುರುಪರಮೇಶ್ವರಂ,

**ಅನ್ವಯ–ಅರ್ಥ:** ಆಗಳ್ + ಆತ್ಮೀಯಗುರುವಿಯೋಗಶೋಕ + ಅನಳದಹ್ಯಮಾನಮಾನಸನ್ + ಆಗಿರ್ದ ಭರತಪತಿಯ ಶೋಕ + ಆವೇಗಮಂ ವೃಷಭಸೇನಗಣಾಗ್ರಣಿಗಳ್ + ಇಂತೆಂದು + ಆಜೆಸಿದರ್ = ತನ್ನ ತಂದೆಯ ಸಾವಿನ ಶೋಕದ ಬೆಂಕಿಯಿಂದ ಬೇಯುತ್ತಿದ್ದ ಮನಸ್ಸಿನಿಂದ ಕೂಡಿದ ಭರತಚಕ್ರವರ್ತಿಯ ದುಃಖಾಗ್ನಿಯ ತೀವ್ರತೆಯನ್ನು ವೃಷಭಸೇನಗಣಧರರು ಹೀಗೆಂದು ಹೋಗಲಾಡಿಸಿದರು: ಜೀವಂಗಳ್ ಶುಭ–ಅಶುಭಕರ್ಮಶೈಲೂಷಪ್ರೇರಿತಂಗಳಾಗಿ = ಜೀವಗಳು ಒಳ್ಳೆಯ ಕೆಟ್ಟ ಕೆಲಸಗಳೆಂಬ ನಟರಿಂದ ಪ್ರೇರಿತರಾಗಿ, ಚತುರ್ಗತಿಸಂಸಾರಂಗಳೊಳ್ = ನಾಲ್ಕು ಬಗೆಯ ಜನ್ಮಗಳಲ್ಲಿ, ಅನೇಕರಸಪರಿಣತಂಗಳ್ = ನಾನಾ ಬಗೆಯ ಅನುಭವಗಳನ್ನು ಹೊಂದಿ, ನಾನಾಶರೀರ + ಉಪಾದಾನಪರಿತ್ಯಜನಪುರಸ್ಸರಂ = ನಾನಾ ಬಗೆಯ ದೇಹಗಳನ್ನು ಪಡೆಯುವ ತೊರೆಯುವ ಮೂಲಕವಾಗಿ, ಪರಿಭ್ರಮಿಸುಗುಂ = ತೊಳಲಾಡುತ್ತದೆ, ಅದು ನಮ್ಮ + ಇನಿಬರ ಭವಾವಳಿಯಿಂದೆ ನಮಗೆ + ಅನುಭೂತಪೂರ್ವಂ = ಅದು ನಮ್ಮೆಲ್ಲರ ಹಿಂದಿನ ಜನ್ಮಗಳಿಂದಾಗಿ ನಮಗೆ ಅನುಭವವೇದ್ಯವಾಗಿದೆ, ಅದೆಂತು + ಎಂದೊಡೆ ಭವದೀಯಜನಕಂ ಪುರುಪರಮೇಶ್ವರಂ = ಅದು ಹೇಗೆಂದರೆ, ನಿನ್ನ ತಂದೆ ಪುರುಪರಮೇಶ್ವರನು,

**ಗದ್ಯಾನುಸರಣ:** ತನ್ನ ತಂದೆಯ ಸಾವಿನ ಶೋಕದ ಬೆಂಕಿಯಿಂದ ಬೇಯುತ್ತಿದ್ದ ಮನಸ್ಸಿನಿಂದ ಕೂಡಿದ ಭರತಚಕ್ರವರ್ತಿಯ ದುಃಖಾಗ್ನಿಯ ತೀವ್ರತೆಯನ್ನು ವೃಷಭಸೇನಗಣಧರರು ಹೀಗೆಂದು ಹೋಗಲಾಡಿಸಿದರು: ಜೀವಗಳು ಒಳ್ಳೆಯ ಕೆಟ್ಟ ಕೆಲಸಗಳೆಂಬ ನಟರಿಂದ ಪ್ರೇರಿತರಾಗಿ ನಾಲ್ಕು ಬಗೆಯ ಜನ್ಮಗಳಲ್ಲಿ ಹುಟ್ಟಿ, ನಾನಾ ಬಗೆಯ ಅನುಭವಗಳನ್ನು ಹೊಂದಿ, ನಾನಾ ಬಗೆಯ ದೇಹಗಳನ್ನು ಪಡೆಯುವ ತೊರೆಯುವ ಮೂಲಕವಾಗಿ ತೊಳಲಾಡುತ್ತದೆ; ಅದು ನಮ್ಮೆಲ್ಲರ ಹಿಂದಿನ ಜನ್ಮಗಳಿಂದಾಗಿ ನಮಗೆ ಅನುಭವವೇದ್ಯವಾಗಿದೆ; ಅದು ಹೇಗೆಂದರೆ, ನಿನ್ನ ತಂದೆ ಪುರುಪರಮೇಶ್ವರನು,

ಭೋಗಾಕಾಂಕ್ಷೆಯೊಳ್ ಜಯವರ್ಮಂ ಬಟಿಕೆ ಮಹಾಬಳಂ ಲಲಿತಾಂಗಂ ವಜ್ರಜಂಘಂ
ಭೋಗಭೂಮಿಜಂ ಶ್ರೀಧರದೇವಂ ಸುವಿಧಿನರಾಧಿಪನಚ್ಯುತೇಂದ್ರಂ
ಸಾಗರಾಂತಂ ನೆಲನೆನಿತನಿತುಮಂ ಚಕ್ರದಿಂ ಬೆಸಕೈಸಿ ವಜ್ರನಾಭಿ
ಯಾಗಿ ಸರ್ವಾರ್ಥಸಿದ್ಧಿಯೊಳ್ ಪುಟ್ಟಿ ಬಂದಿಲ್ಲಿ ತಾನಾದಿದೇವನಾದಂ ॥೫೪॥

**ಪದವಿಭಾಗ-ಅನ್ವಯ-ಅರ್ಥ:** ಭೋಗಾಕಾಂಕ್ಷೆಯೊಳ್ ಜಯವರ್ಮಂ = ಭೋಗದಾಸೆಯಿಂದ ಕೂಡಿದ ಜಯವರ್ಮ, ಬಟಿಕೆ ಮಹಾಬಳಂ = ಆನಂತರ ಮಹಾಬಲ, ಲಲಿತಾಂಗಂ ವಜ್ರಜಂಘಂ = ಲಲಿತಾಂಗ ವಜ್ರಜಂಘ, ಭೋಗಭೂಮಿಜಂ ಶ್ರೀಧರದೇವಂ = ಭೋಗಭೂಮಿಜ ಶ್ರೀಧರದೇವ, ಸುವಿಧಿನರಾಧಿಪನ್ = ಸುವಿಧಿ ಮಹಾರಾಜ, ಅಚ್ಯುತೇಂದ್ರಂ = ಅಚ್ಯುತೇಂದ್ರ, ಸಾಗರ + ಅಂತಂ ನೆಲನ್ + ಎನಿತು + ಅನಿತುಮಂ ಚಕ್ರದಿಂ ಬೆಸಕೈಸಿ ವಜ್ರನಾಭಿಯಾಗಿ = ಸಮುದ್ರದವರೆಗೂ ಭೂಮಿಯೆಷ್ಟಿದೆಯೋ ಅಷ್ಟನ್ನೂ ಕೈವಶಮಾಡಿಕೊಂಡ ವಜ್ರನಾಭಿಯಾಗಿ, ಸರ್ವಾರ್ಥಸಿದ್ಧಿಯೊಳ್ ಪುಟ್ಟಿ ಬಂದು = ಸರ್ವಾರ್ಥಸಿದ್ಧಿಯಲ್ಲಿ ಹುಟ್ಟಿ, ಇಲ್ಲಿ ತಾನ್ ಆದಿದೇವನಾದಂ = ಈಗಿಲ್ಲಿ ಆದಿದೇವನಾದ.

**ಗದ್ಯಾನುಸರಣ:** ಭೋಗದಾಸೆಯಿಂದ ಕೂಡಿದ ಜಯವರ್ಮ, ಆನಂತರ ಮಹಾಬಲ, ಲಲಿತಾಂಗ, ವಜ್ರಜಂಘ, ಭೋಗಭೂಮಿಜ, ಶ್ರೀಧರದೇವ, ಸುವಿಧಿ ಮಹಾರಾಜ, ಅಚ್ಯುತೇಂದ್ರ, ಸಮುದ್ರದವರೆಗೂ ಭೂಮಿಯೆಷ್ಟಿದೆಯೋ ಅಷ್ಟನ್ನೂ ಕೈವಶಮಾಡಿಕೊಂಡ ವಜ್ರನಾಭಿಯಾಗಿ, ಸರ್ವಾರ್ಥಸಿದ್ಧಿಯಲ್ಲಿ ಹುಟ್ಟಿ ಈಗಿಲ್ಲಿ ಆದಿದೇವನಾದ.

**ವ। ಮುನಿವಿನುತ ಗಣಾಧಿನಾಥವಚನಾಮೃತದಿಂ ಭರತನಪಗತಗುರುಶೋಕಾವೇಗನಾಗಿ ಗಣಧರಚರಣಸರಸಿಜಂಗಳ್ಗೆಱಗಿ ತನ್ನ ಭೋಗತೃಷ್ಣೆಯಂ ತಾನೆ ಮನದೊಳ್ ನಿಂದಿಸುತ್ತುಂ ಮುಕ್ತ್ಯಂಗನಾನುರಕ್ತಚಿತ್ತನಾಗುತ್ತುಂ ಬಂದಯೋಧ್ಯಾಪುರಮಂ ಪೊಕ್ಕು ಕೆಲವುದಿವಸಮಿರ್ದು ಒಂದು ದಿವಸಂ, ತಳದಳಿಸಿ ಪೊಳೆವ ಮಣಿದರ್ಪಣದೊಳ್ ಪುರುಪರಮೇಶ್ವರನ ದೂತನಂ ಕಾಣ್ಬವೊಲ್ ಕೆನ್ನೆಯ ನರೆಯಂ ಕಂಡು, ಭಗವದಾದಿಭಟ್ಟಾರಕರ ನಿರ್ವಾಣಭೂಮಿಸಮೀಪಸ್ಥಿತ ವಿಶಾಲಸ್ಫಟಿಕ ಶಿಲಾತಳಾರೂಢನುತ್ತರಾಭಿಮುಖನಾಗಿ ಸಿದ್ಧಭಕ್ತಿಪೂರ್ವಕಂ ತ್ರಿಜಗದ್ಗುರುವೇ ಗುರುವೆಂದು ತತ್ವದಸರಸಿಜಧ್ಯಾನಪರಾಯಣನಾಗಿ,**

**ಪದವಿಭಾಗ-ಅನ್ವಯ-ಅರ್ಥ:** ಮುನಿವಿನುತ ಗಣಾಧಿನಾಥವಚನ + ಅಮೃತದಿಂ = ಮುನಿ ಹಾಗೂ ಗಣಧರರ ಶ್ರೇಷ್ಠ ಮಾತುಗಳಿಂದ, ಭರತಂ + ಅಪಗತಗುರುಶೋಕ + ಆವೇಗನಾಗಿ = ಭರತನು ತನ್ನ ಹೆಚ್ಚಿನ ದುಃಖಭಾರದಿಂದ ಬಿಡುಗಡೆ ಹೊಂದಿ, ಗಣಧರಚರಣಸರಸಿಜಂಗಳ್ಗೆ + ಎಱಗಿ = ಗಣಧರರ ಅಡಿದಾವರೆಗಳಿಗೆ ನಮಿಸಿ, ತನ್ನ ಭೋಗತೃಷ್ಣೆಯಂ ತಾನೆ ಮನದೊಳ್ ನಿಂದಿಸುತ್ತುಂ = ತನ್ನ ಐಹಿಕತೃಷೆಯನ್ನು ಮನಸ್ಸಿನಲ್ಲಿಯೇ ಬೈದುಕೊಳ್ಳುತ್ತ, ಮುಕ್ತಿ + ಅಂಗನಾ + ಅನುರಕ್ತಚಿತ್ತನ್ + ಆಗುತ್ತುಂ ಬಂದು = ಮುಕ್ತಿವನಿತೆಯಲ್ಲಿ ಪ್ರೀತಿ ತುಂಬಿದ ಮನಸ್ಸುಳ್ಳವನಾಗಿ ಬಂದು, ಅಯೋಧ್ಯಾಪುರಮಂ ಪೊಕ್ಕು = ಅಯೋಧ್ಯಾನಗರವನ್ನು ಸೇರಿ, ಕೆಲವುದಿವಸಂ + ಇರ್ದು + ಒಂದು ದಿವಸಂ = ಕೆಲವು ದಿವಸಗಳಿದ್ದು ಒಂದು ದಿನ, ಪುರುಪರಮೇಶ್ವರನ ದೂತನಂ ಕಾಣ್ಬವೊಲ್ = ಪುರುಪರಮೇಶ್ವರನ ದೂತನನ್ನು ಕಣುವ ಹಾಗೆ, ತಳದಳಿಸಿ ಪೊಳೆವ ಮಣಿದರ್ಪಣದೊಳ್ = ತಳತಳ ಹೊಳೆಯುವ ರನ್ನಗನ್ನಡಿಯಲ್ಲಿ, ಭರತಂ

ಕೆನ್ನೆಯ ನರೆಯಂ ಕಂಡಂ = ಭರತನು ತನ್ನ ಕೆನ್ನೆಯ ಮೇಲಣ ನರೆಗೂದಲನ್ನು ಕಂಡ. ಭಗವತ್ + ಆದಿಭಟ್ಟಾರಕರ ನಿರ್ವಾಣಭೂಮಿಸಮೀಪಸ್ಥಿತ = ಬಳಿಕ ಭಗವಂತನಾದ ಆದಿದೇವನ ನಿರ್ವಾಣಭೂಮಿಯ ಹತ್ತಿರದ, ವಿಶಾಲಸ್ಫಟಿಕ ಶಿಲಾತಳಾರೂಢನ್+ಉತ್ತರ+ಅಭಿಮುಖನಾಗಿ = ವಿಶಾಲವಾದ ಸ್ಫಟಿಕಶಿಲೆಯ ಮೇಲೆ ಉತ್ತರಕ್ಕೆ ಮುಖಮಾಡಿ ಕುಳಿತುಕೊಂಡು, ಸಿದ್ಧಭಕ್ತಿಪೂರ್ವಕಂ ತ್ರಿಜಗದ್ಗುರುವೇ ಗುರುವೆಂದು = ಸಿದ್ಧಭಕ್ತಿಯಿಂದ ಕೂಡಿ ಮೂಲೋಕದ ಗುರುವೇ ತನ್ನ ಗುರುವೆಂದು, ತತ್+ಪದಸರಸಿಜಧ್ಯಾನಪರಾಯಣನಾಗಿ = ಆತನ ಅಡಿದಾವರೆಗಳನ್ನು ಧ್ಯಾನಿಸತೊಡಗಿ,

**ಗದ್ಯಾನುಸರಣ:** ಮುನಿಗಳು ಹಾಗೂ ಗಣಧರರ ಮಾತುಗಳಿಂದ ಭರತನು ತನ್ನ ಹೆಚ್ಚಿನ ದುಃಖಭಾರದಿಂದ ಬಿಡುಗಡೆ ಹೊಂದಿದ ಭರತನು ಗಣಧರರ ಅಡಿದಾವರೆಗಳಿಗೆ ನಮಿಸಿದ; ತನ್ನ ಐಹಿಕತೃಷೆಯನ್ನು ಮನಸ್ಸಿನಲ್ಲಿಯೇ ಬೈದುಕೊಳ್ಳುತ್ತ ಅವನ ಮನಸ್ಸು ಮುಕ್ತಿವನಿತೆಯಲ್ಲಿ ಅನುರಕ್ತವಾಯಿತು; ಹಾಗೆ ಅಯೋಧ್ಯಾನಗರವನ್ನು ಸೇರಿ ಕೆಲವು ದಿವಸಗಳಿದ್ದ; ಮುಂದೆ ಒಂದು ದಿನ, ಪುರುಪರಮೇಶ್ವರನ ದೂತನನ್ನು ಕಣುವ ಹಾಗೆ, ತಳತಳ ಹೊಳೆಯುವ ರನ್ನಗನ್ನಡಿಯಲ್ಲಿ ಭರತನ ಕೆನ್ನೆಯ ಮೇಲೆ ನರೆಗೂದಲು ಕಾಣಿಸಿತು. ಬಳಿಕ ಭಗವಂತನಾದ ಆದಿದೇವನ ನಿರ್ವಾಣಭೂಮಿಯ ಹತ್ತಿರದ ವಿಶಾಲವಾದ ಸ್ಫಟಿಕಶಿಲೆಯ ಮೇಲೆ ಉತ್ತರಕ್ಕೆ ಮುಖಮಾಡಿ ಕುಳಿತುಕೊಂಡು, ಸಿದ್ಧಭಕ್ತಿಯಿಂದ ಕೂಡಿ ಮೂಲೋಕದ ಗುರುವೇ ತನ್ನ ಗುರುವೆಂದು ದೃಢವಾಗಿ ನಂಬಿ ಆತನ ಅಡಿದಾವರೆಗಳನ್ನು ಧ್ಯಾನಿಸತೊಡಗಿದ.

**ಶ್ರೀನಾರೀಪತಿ ದೀಕ್ಷೆಯಂ ಕೊಳಲೊಡಂ ಬೋಂಕಲ್ ಮನಃಪರ್ಯಾಯ**
**ಜ್ಞಾನಂ ಪುಟ್ಟಿದುದಂತು ಪುಟ್ಟಿದ ಬಟಿಕ್ಕಂತರ್ಮುಹೂರ್ತಕ್ಕೆ ಭ**
**ವ್ಯಾನಂದಪ್ರದಮಿಂದ್ರವೃಂದಕೃತಕಲ್ಯಾಣಾಸ್ಪದಂ ಕೇವಲ**
**ಜ್ಞಾನಂ ಪುಟ್ಟಿದುದಿಂತು ಭವ್ಯತೆ ಜಗಕ್ಕಾಶ್ಚರ್ಯಮಾಯ್ತೀತನಾ** ೧೫೨

**ಪದವಿಭಾಗ–ಅನ್ವಯ–ಅರ್ಥ:** ಶ್ರೀನಾರೀಪತಿ ದೀಕ್ಷೆಯಂ ಕೊಳಲೊಡಂ = ಮೋಕ್ಷವನಿತೆಯ ದೀಕ್ಷೆಯನ್ನು ಸ್ವೀಕರಿಸಿದಾಗ, ಬೋಂಕಲ್ ಮನಃಪರ್ಯಾಯಜ್ಞಾನಂ ಪುಟ್ಟಿದುದು = ತಕ್ಷಣವೇ ಭರತನಿಗೆ ಮನಃಪರ್ಯಾಯಜ್ಞಾನವು ಹುಟ್ಟಿತು, ಅಂತು ಪುಟ್ಟಿದ ಬಟಿಕ್ಕೆ + ಅಂತರ್ಮುಹೂರ್ತಕ್ಕೆ = ಹಾಗೆ ಹುಟ್ಟಿದ ನಂತರ ಅಂತರ್ಮುಹೂರ್ತದಲ್ಲಿಯೇ, ಭವ್ಯಾನಂದಪ್ರದಂ + ಇಂದ್ರವೃಂದಕೃತಕಲ್ಯಾಣ + ಆಸ್ಪದಂ ಕೇವಲಜ್ಞಾನಂ ಪುಟ್ಟಿದದು = ಮಹಾ ಆನಂದದಾಯಕವೂ ಇಂದ್ರನು ಮಾಡುವ ಕಲ್ಯಾಣಕ್ಕೆ ಆಸ್ಪವೂ ಆದ ಕೇವಲಜ್ಞಾನವು ಹುಟ್ಟಿತು; ಇಂತು ಈತನ ಆ ಭವ್ಯತೆ ಜಗಕ್ಕಾಶ್ಚರ್ಯಂ + ಆಯ್ತು = ಹೀಗೆ ಭರತನ ಆ ಭವ್ಯತೆಯು ಜಗತ್ತಿಗೆ ಅಚ್ಚರಿಯನ್ನು ಹುಟ್ಟಿಸಿತು.

**ಗದ್ಯಾನುಸರಣ:** ಮೋಕ್ಷವನಿತೆಯ ದೀಕ್ಷೆಯನ್ನು ಸ್ವೀಕರಿಸಿದ ತಕ್ಷಣವೇ ಭರತನಿಗೆ ಮನಃಪರ್ಯಾಯಜ್ಞಾನವು ಹುಟ್ಟಿತು; ಹಾಗೆ ಹುಟ್ಟಿದ ನಂತರ ಅಂತರ್ಮುಹೂರ್ತ

ದಲ್ಲಿಯೇ ಮಹಾ ಆನಂದದಾಯಕವೂ ಇಂದ್ರನು ಮಾಡುವ ಕಲ್ಯಾಣಕ್ಕೆ ಆಸ್ಪದವೂ ಆದ ಕೇವಲಜ್ಞಾನವು ಹುಟ್ಟಿತು; ಹೀಗೆ ಭರತನ ಆ ಭವ್ಯತೆಯು ಜಗತ್ತಿಗೆ ಅಚ್ಚರಿಯನ್ನು ಹುಟ್ಟಿಸಿತು.

**ನರಲೋಕಮೊಂದೆ ಮುಂ ನಿಜ**
**ಚರಣಾಬ್ಜಕ್ಕೆಱಗೆ ನೆಗಟ್ದ ಕೇವಳಬೋಧಂ**
**ದೊರೆಕೊಳೆ ಸುರನರಲೋಕಂ**
**ಚರಣಾಬ್ಜಕ್ಕೆಱಗೆ ಭರತಯತಿಪತಿ ನೆಗಟ್ದಂ** ೧೫೩

**ಪದವಿಭಾಗ–ಅನ್ವಯ–ಅರ್ಥ:** ಮುಂ ನರಲೋಕಂ + ಒಂದೆ = ಹಿಂದೆ ಮನುಷ್ಯಲೋಕವು ಮಾತ್ರವೇ, ನಿಜಚರಣ + ಅಬ್ಜಕ್ಕೆಱಗೆ ನೆಗಟ್ದ ಭರತಯತಿಪತಿ = ತನ್ನ ಅಡಿದಾವರೆಗಳಿಗೆಗೆರಗುತ್ತಿದ್ದ ಭರತಯಿತಿಶ್ರೇಷ್ಠನು, ಕೇವಳಬೋಧಂ ದೊರೆಕೊಳೆ = ಕೇವಲಜ್ಞಾನ ಉಂಟಾದ ಮೇಲೆ, ಸುರನರಲೋಕಂ ಚರಣಾಬ್ಜಕ್ಕೆ+ಎಱಗೆ ನೆಗಟ್ದಂ = ದೇವಲೋಕವೂ ನರಲೋಕದೊಡನೆ ನಮಸ್ಕರಿಸುವಂತಹ ಮಹಿಮೆಗೊಳಗಾದ.

**ಗದ್ಯಾನುಸರಣ:** ಹಿಂದಾದರೆ ಮನುಷ್ಯಲೋಕವು ಮಾತ್ರ ಭರತನ ಅಡಿದಾವರೆಗಳಿಗೆ ಎರಗುತ್ತಿತ್ತು; ಆದರೆ ಕೇವಲಜ್ಞಾನ ಉಂಟಾಗಿ ಯತಿಪತಿಯಾದ ಮೇಲೆ ನರಲೋಕದೊಡನೆ ದೇವಲೋಕವೂ ನಮಸ್ಕರಿಸುವಂತಹ ಮಹಿಮೆಯು ಆತನಿಗುಂಟಾಯಿತು.

**ವ। ಅಂತು ದೇವಮಾನವಪರಿಷತ್ಪರಿವೃತನಾಗಿ ನಾನಾವಿಧಧರ್ಮಕ್ಷೇತ್ರಂಗಳೊಳೊಂದೊಂದು ಲಕ್ಕೆ ಪೂರ್ವಂಬರಂ ಧರ್ಮಾಮೃತಾಂಬುಸೇಕದಿಂ ವಿನೇಯಜನ ಸಸ್ಯಸಂಪತ್ಪರಂಪರೆಯಂ ಮಾಡಿ ಕೈಳಾಸಶೈಲಶಿಖರಾಲಂಕಾರನಿರುದ್ಧಯೋಗನುಂ ಅಪಗತಯೋಗಗುಣಸ್ಥಾನನುಂ ಚತುರ್ಥ ಧ್ಯಾನಾನಳ ದಗ್ಧಶೇಷಾಶೇಷಕರ್ಮೇಂಧನನುಮಾಗಿ,**

**ಪದವಿಭಾಗ–ಅನ್ವಯ–ಅರ್ಥ:** ಅಂತು + ದೇವಮಾನವಪರಿಷತ್ + ಪರಿವೃತನುಂ = ಹೀಗೆ ದೇವತೆಗಳ ಹಾಗೂ ಮಾನವರ ಗುಂಪಿನಿಂದ ಸುತ್ತುವರಿಯಲ್ಪಟ್ಟವನೂ, ನಾನಾವಿಧಧರ್ಮಕ್ಷೇತ್ರಂಗಳೊಳ್ + ಒಂದೊಂದು ಲಕ್ಕೆ ಪೂರ್ವಂಬರಂ = ಅನೇಕ ಧರ್ಮಕ್ಷೇತ್ರಗಳಲ್ಲಿ ಒಂದೊಂದರಲ್ಲಿಯೂ ಒಂದು ಲಕ್ಷ ಪೂರ್ವಗಳಷ್ಟು ಕಾಲ, ಧರ್ಮ + ಅಮೃತ + ಅಂಬುಸೇಕದಿಂ = ತನ್ನ ಧರ್ಮಬೋಧೆಯೆಂಬ ಅಮೃತದ ನೀರನ್ನು ಎರಚುತ್ತ, ವಿನೇಯಜನ ಸಸ್ಯಸಂಪತ್ಪರಂಪರೆಯಂ ಮಾಡಿ = ಭಕ್ತಜನರೆಂಬ ಸಸ್ಯಗಳ ಪರಂಪರೆಯನ್ನೇ ವೃದ್ಧಿಗೊಳಿಸಿ, ಕೈಳಾಸಶೈಲಶಿಖರ + ಅಲಂಕಾರನಿರುದ್ಧಯೋಗನುಂ = ಕೈಲಾಸಪರ್ವತದ ಶಿಖರದ ಅಲಂಕಾರವೆಂಬಂತೆ ನಿರುದ್ಧಯೋಗನಾಗಿ, ಅಪಗತಯೋಗಗುಣಸ್ಥಾನನುಂ = ಯೋಗಗುಣಸ್ಥಾನವನ್ನು ಕಳಚಿಕೊಂಡು, ಚತುರ್ಥಧ್ಯಾನ + ಅನಳ = ಚತುರ್ಥಧ್ಯಾನವೆಂಬ ಬೆಂಕಿಯಲ್ಲಿ, ದಗ್ಧಶೇಷ + ಅಶೇಷಕರ್ಮ + ಈಂಧನನುಂ + ಆಗಿ = ಅಳಿದುಳಿದ ಕರ್ಮವೆಂಬ ಉರುವಲನ್ನು ಸುಟ್ಟು,

**ಗದ್ಯಾನುಸರಣ:** ಹೀಗೆ ದೇವತೆಗಳ ಹಾಗೂ ಮಾನವರ ಗುಂಪಿನಿಂದ ಸುತ್ತುವರಿಯಲ್ಪಟ್ಟು, ಅನೇಕ ಧರ್ಮಕ್ಷೇತ್ರಗಳಲ್ಲಿ ಒಂದೊಂದರಲ್ಲಿಯೂ ಒಂದು ಲಕ್ಷ ಪೂರ್ವಗಳಷ್ಟು ಕಾಲ ತನ್ನ ಧರ್ಮಬೋಧೆಯೆಂಬ ಅಮೃತದ ನೀರನ್ನು ಎರಚುತ್ತ ಭಕ್ತಜನರೆಂಬ ಸಸ್ಯಗಳ ಪರಂಪರೆಯನ್ನೇ ವೃದ್ಧಿಗೊಳಿಸಿದ; ಕೊನೆಗೆ, ಕೈಲಾಸಪರ್ವತದ ಶಿಖರದ ಅಲಂಕಾರವೆಂಬಂತೆ ನಿರುದ್ಧಯೋಗನಾಗಿ, ಯೋಗಗುಣಸ್ಥಾನವನ್ನು ಕಳಚಿಕೊಂಡು, ಚತುರ್ಥಧ್ಯಾನವೆಂಬ ಬೆಂಕಿಯಲ್ಲಿ ಅಳಿದುಳಿದ ಕರ್ಮವೆಂಬ ಉರುವಲನ್ನೆಲ್ಲ ಸುಟ್ಟು,

**ಪರಮಶ್ರೀಸಂತತಾವಾಸದೊಳಖಿಳಸುಖಸ್ವಚ್ಛಸಂಪನ್ನತೋಯಾ**
**ಕರದೊಳ್ ಶಶ್ವದ್ಗುಣಾಂಭೋರುಹವಿಳಸನವಿಭ್ರಾಜಿಯೊಳ್ ಸಿದ್ಧಹಂಸೋ**
**ತ್ಕರಲೀಲಾರಮ್ಯದೊಳ್ ಸಂದಮೃತನಿಳಯನೀರೇಜಿನೀಷಂಡದೊಳ್ ಸೌಂ**
**ದರಕೇಳೀಹಂಸನಾದಂ ಸುಕವಿಜನಮನೋಮಾನಸೋತ್ತಂಸಹಂಸಂ** ೧೩೪

**ಪದವಿಭಾಗ-ಅನ್ವಯ-ಅರ್ಥ:** ಪರಮಶ್ರೀಸಂತತ + ಆವಾಸದೊಳ್ = ಶ್ರೇಷ್ಠಳಾದ ಮೋಕ್ಷಲಕ್ಷ್ಮಿಯ ಮನೆಯೂ, ಅಖಿಳಸುಖಸ್ವಚ್ಛಸಂಪನ್ನತೋಯ + ಆಕರದೊಳ್ = ಎಲ್ಲ ಸುಖವೆಂಬ ತಿಳಿನೀರಿನಿಂದ ತುಂಬಿದ ಕೊಳವೂ, ಶಶ್ವತ್ + ಗುಣ + ಅಂಭೋರುಹವಿಳಸನವಿಭ್ರಾಜಿಯೊಳ್ = ಶಾಶ್ವತಗುಣಗಳೆನ್ನುವ ತಾವರೆಗಳ ಸೊಬಗಿನ ನಡುವೆ, ಸಿದ್ಧಹಂಸ + ಉತ್ಕರಲೀಲಾರಮ್ಯದೊಳ್ = ಸಿದ್ಧರ ಸಮೂಹವೆಂಬ ಹಂಸಗಳ ವಿಹಾರ ತಾಣವಾದ ಸರೋವರದಲ್ಲಿ, ಸಂದ + ಅಮೃತನಿಳಯನೀರೇಜಿನೀಷಂಡದೊಳ್ = ತುಂಬಿದ ಅಮೃತಕ್ಕೆ ನೆಲೆವನೆಯಾದ ತಾವರೆಗಳಿಂದ ತುಂಬಿದುದೂ ಆದ ಸರೋವರದಲ್ಲಿ, ಸುಕವಿಜನಮನೋಮಾನ ಸೋತ್ತಂಸಹಂಸಂ = ಸುಕವಿ ಮನೋಭಾವದವರ ಮನಸ್ಸುಗಳೆಂಬ ಸರೋವರದಲ್ಲಿ ವಿಹರಿಸುವ ಹಂಸನಾದ ಭರತನು, ಸೌಂದರಕೇಳೀಹಂಸನಾದಂ = ಸುಂದರವಾಗಿ ವಿಹರಿಸುವ ಹಂಸನಾದ.

**ಗದ್ಯಾನುಸರಣ:** ಶ್ರೇಷ್ಠಳಾದ ಮೋಕ್ಷಲಕ್ಷ್ಮಿಯ ಮನೆ, ಎಲ್ಲ ಸುಖವೆಂಬ ತಿಳಿನೀರಿನಿಂದ ತುಂಬಿದ ಕೊಳ, ಶಾಶ್ವತಗುಣಗಳೆನ್ನುವ ತಾವರೆಗಳ ಸೊಬಗನ್ನು ಹೊಂದಿದ ಸಿದ್ಧರ ಸಮೂಹವೆಂಬ ಹಂಸಗಳ ವಿಹಾರ ತಾಣ, ಅಮೃತಕ್ಕೆ ನೆಲೆವನೆಯಾದ ತಾವರೆಗಳಿಂದ ತುಂಬಿದ ಸರೋವರದಲ್ಲಿ ಸುಕವಿ ಮನೋಭಾವದವರ ಮನಸ್ಸುಗಳೆಂಬ ಸರೋವರದಲ್ಲಿ ವಿಹರಿಸುವ ಹಂಸನಾದ ಭರತನು, ಸುಂದರವಾಗಿ ವಿಹರಿಸುವ ಹಂಸನಾದ.

**ಶಕವರ್ಷಮೆಂಟುನೂಱ**
**ಕ್ಕೆ ಕಡೆಯೊಳಱುವತ್ತಮೂಱು ಸಂದಂದು ಜಗ**
**ತ್ಪ್ರಕಟಪ್ಲವಸಂವತ್ಸರ**
**ದ ಕಾರ್ತಿಕಂ ಮುದಮನೀಯೆ ನಂದೀಶ್ವರದೊಳ್** ೧೩೫

**ಪದವಿಭಾಗ-ಅನ್ವಯ-ಅರ್ಥ:** ಶಕವರ್ಷಮೆಂಟುನೂಱಕ್ಕೆ ಕಡೆಯೊಳ್ = ಶಕವರ್ಷ ಎಂಟುನೂರಕ್ಕೆ ಕೊನೆಯಲ್ಲಿ, ಅಱುವತ್ತಮೂಱು ಸಂದಂದು =

ಅರುವತ್ತುಮೂರು ವರ್ಷ ಸಂದಿರುವಾಗ, ಜಗತ್ಪ್ರಕಟಪ್ಲವಸಂವತ್ಸರದ ಕಾರ್ತಿಕಂ ಮುದಮನ್ + ಈಯೆ = ಜಗತ್ತನ್ನು ಬೆಳಗಿಸುತ್ತ ಸಂತಸಗೊಳಿಸುವ ಕಾರ್ತಿಕ ಮಾಸದ, ನಂದೀಶ್ವರದೊಳ್ = ನಂದೀಶ್ವರದಂದು,

**ಗದ್ಯಾನುಸರಣ:** ಶಕವರ್ಷ ಎಂಟುನೂರ ಅರುವತ್ತುಮೂರನೇ ವರ್ಷದಲ್ಲಿ ಜಗತ್ತನ್ನು ಬೆಳಗಿಸುತ್ತ ಸಂತಸಗೊಳಿಸುವ ಕಾರ್ತಿಕ ಮಾಸದ, ನಂದೀಶ್ವರ ಹಬ್ಬದಂದು,

**ಸಿತಪಕ್ಷದ ಪಂಚಮಿ ದಿನ**
**ಪತಿವಾರಂ ಶುಭದ ಮೂಲನಕ್ಷತ್ರದೊಳ**
**ನ್ವಿತಮಾಗೆ ನೆಗಳ್ದುದೀ ಮ**
**ತ್ಕೃತಿ ಜಗದೊಳ್ ಪುದಿದು ಸಾಗರಾಂತಕ್ಷಿತಿಯಂ** ೧೫೬

**ಪದವಿಭಾಗ–ಅನ್ವಯ–ಅರ್ಥ:** ಸಿತಪಕ್ಷದ ಪಂಚಮಿ ದಿನಪತಿವಾರಂ = ಶುಕ್ಲಪಕ್ಷದ ಪಂಚಮಿ ಭಾನುವಾರ, ಶುಭದ ಮೂಲನಕ್ಷತ್ರದೊಳ್ + ಅನ್ವಿತಂ + ಆಗೆ = ಮಂಗಳಕರವಾಧ ಮೂಲನಕ್ಷತ್ರವು ಸೇರಿರಲು, ಈ ಮತ್ + ಕೃತಿ ಜಗದೊಳ್ ಪುದಿದು = ಈ ನನ್ನ ಕಾವ್ಯವು ಪೂರ್ಣಗೊಂಡು, ಸಾಗರ + ಅಂತಕ್ಷಿತಿಯಂ ನೆಗಳ್ದುದು = ಸಾಗರದ ಅಂಚಿನವರೆಗಿರುವ ಜಗತ್ತಿನಲ್ಲಿ ಪ್ರಸಿದ್ಧಿಗೊಳ್ಳಲು ತಕ್ಕುದಾಗಿ ರಚಿತವಾಯಿತು.

**ಗದ್ಯಾನುಸರಣ:** ಶುಕ್ಲಪಕ್ಷದ ಪಂಚಮಿ ಭಾನುವಾರ ಮಂಗಳಕರವಾದ ಮೂಲನಕ್ಷತ್ರವು ಸೇರಿರಲು ಈ ನನ್ನ ಕಾವ್ಯವು ಸಾಗರದ ಅಂಚಿನವರೆಗಿರುವ ಜಗತ್ತಿನಲ್ಲಿ ಪ್ರಸಿದ್ಧಿಗೊಳ್ಳಲು ತಕ್ಕುದಾಗಿ ರಚಿತವಾಯಿತು.

[**ವಿಶೇಷ ವಿಚಾರ:** ಈ ಕನ್ನಡದ ಕಾವ್ಯವು ಸಾಗರದಂಚಿನವರೆಗಿನ ಜಗತ್ತಿನಲ್ಲಿ ಪ್ರಸಿದ್ಧಿಗೊಳ್ಳಲು ತಕ್ಕುದಾಗಿ ರಚಿತವಾಯಿತು ಎಂಬುದನ್ನು ನಾವು ಸರಿಯಾಗಿ ಅರ್ಥಮಾಡಿಕೊಳ್ಳಬೇಕು: ಅದಕ್ಕೆ ಎರಡು ಅರ್ಥಗಳನ್ನು ಊಹಿಸಬಹುದು: ಒಂದು, ಅದು ಕನ್ನಡ ಜಗತ್ತು; ಎರಡನೆಯದಾಗಿ, ಆ ಕಾಲದ ಕನ್ನಡನಾಡು ಸ್ಥೂಲವಾಗಿ ಭರತಖಂಡದ ದಕ್ಷಿಣದ ಮೂರು ಸಾಗರಗಳ ಅಂಚಿನವರೆಗೂ ಹಬ್ಬಿರುವಂಥದು ಎಂಬ ಕಲ್ಪನೆ ಈ ಮಾತಿನಲ್ಲಿದೆ.]

**ತ್ರಿದಶಸ್ತುತ್ಯಮಿದಾದಿದೇವಚರಿತಂ ಕರ್ಣಾಮೃತಸ್ಯಂದಿಯ**
**ಕ್ಕಿದು ಭವ್ಯಾವಳಿಗೆಂದು ಪೇಟಿಸೆ ಬುಧರ್ ಸ್ವರ್ಗಾಪವರ್ಗಕ್ಕಮಾ**
**ಸ್ಪದಮಪ್ಪಾದಿಪುರಾಣವಸ್ತುಕೃತಿಯಂ ಪೇಟ್ದಿಂ ಬೆಡಂಗಪ್ಪ ಮಾ**
**ರ್ಗದೊಳಂ ದೇಸಿಯೊಳಂ ಪೊದಳ್ದೆಸೆವಿನೆಗಂ ಸಂಸಾರಸಾರೋದಯಂ** ೧೫೭

**ಪದವಿಭಾಗ–ಅನ್ವಯ–ಅರ್ಥ:** ಇದು ತ್ರಿದಶಸ್ತುತ್ಯಂ ಆದಿದೇವಚರಿತಂ = ಇದು ದೇವತೆಗಳಿಂದ ಸ್ತುತ್ಯನಾದ ಆದಿದೇವನ ಚರಿತೆ, ಇದು ಭವ್ಯಾವಳಿಗೆ ಕರ್ಣ + ಅಮೃತಸ್ಯಂದಿಯಕ್ಕೆ = ಇದು ಭವ್ಯಜನಸಮೂಹದ ಕಿವಿಗಳಿಗೆ ಅಮೃತವನ್ನು ಸುರಿಯಲಿ, ಎಂದು ಬುಧರ್ ಪೇಟಿಸೆ = ಎಂದು ಪಂಡಿತರು ಹೇಳಿಸಲು, ಸ್ವರ್ಗ + ಅಪವರ್ಗಕ್ಕಂ + ಆಸ್ಪದಂ + ಅಪ್ಪ + ಆದಿಪುರಾಣವಸ್ತುಕೃತಿಯಂ = ಸ್ವರ್ಗ

ಮತ್ತು ಮೋಕ್ಷಗಳಿಗೆ ಕಾರಣವಾಗುವಂತಹ ಆದಿಪುರಾಣ ಎಂಬ ವಸ್ತುಕಕೃತಿಯನ್ನು, ಬೆಡಂಗಪ್ಪ ಮಾರ್ಗದೊಳಂ ದೇಸಿಯೊಳಂ ಪೊದಳ್ದು = ಸೊಗಸಾದ ಮಾರ್ಗ ಮತ್ತು ದೇಸಿಯಿಂದೊಡಗೂಡಿ, ಎಸೆವಿನೆಗಂ ಸಂಸಾರಸಾರೋದಯಂ ಪೇೞ್ದಂ = ಶೋಭಿಸುವಂತೆ ಸಂಸಾರಸಾರೋದಯನಾದ ಪಂಪನು ಹೇಳಿದ.

**ಗದ್ಯಾನುಸರಣ:** ಇದು ದೇವತೆಗಳಿಂದ ಸ್ತುತ್ಯನಾದ ಆದಿದೇವನ ಚರಿತೆ, ಭವ್ಯಜನಸಮೂಹದ ಕಿವಿಗಳಿಗೆ ಅಮೃತವನ್ನು ಸುರಿಯಲಿ ಎಂದು ಪಂಡಿತರು ಹೇಳಿಸಲು, ಸ್ವರ್ಗ ಮತ್ತು ಮೋಕ್ಷಗಳಿಗೆ ಕಾರಣವಾಗುವಂತಹ ಆದಿಪುರಾಣ ಎಂಬ ವಸ್ತುಕೃತಿಯನ್ನು ಸೊಗಸಾದ ಮಾರ್ಗ ಮತ್ತು ದೇಸಿಯಿಂದೊಡಗೂಡಿ ಶೋಭಿಸುವಂತೆ ಸಂಸಾರಸಾರೋದಯನಾದ ಪಂಪನು ಹೇಳಿದ.

[**ವಿಶೇಷ ವಿಚಾರ:** ತನ್ನ ಕಾವ್ಯವನ್ನು ಪಂಪನು 'ವಸ್ತುಕೃತಿ' ಎಂದು ಕರೆದುಕೊಳ್ಳುತ್ತಿದ್ದಾನೆ. ಇದು ವಸ್ತುಕಕಾವ್ಯ ಎಂಬುದು ಮೇಲುನೋಟಕ್ಕೇ ಹೊಳೆಯುವಥದು; ಆದರೆ ಎಲ್. ಬಸವರಾಜು ಅವರು ಈ ಶಬ್ದಕ್ಕೆ 'ತಾತ್ವಿಕ ಗ್ರಂಥ' ಎಂಬ ಅರ್ಥವನ್ನು ನೀಡುತ್ತಾರೆ. ಮತ್ತೊಂದು ಅಂಶ: ತನ್ನ ಆದಿಪುರಾಣದಲ್ಲಿ ಮಾರ್ಗ ಮತ್ತು ದೇಸಿಗಳೆರಡು 'ಪೊಗಳ್ದು ಎಸೆವಿನೆಗಂ' ಇದೆ ಎನ್ನುತ್ತಿದ್ದಾನೆ ಕವಿ. ಇದು ಮಾರ್ಗಕಾವ್ಯವೇನೋ ಸರಿ, ಆದರೆ ದೇಸಿ ಹೇಗೆ? ಪ್ರಾಯಶಃ (ಭವ್ಯ)ಜನರೆಲ್ಲರ ಜೀವಿತಧ್ಯೇಯವನ್ನಿದು ಬಿಂಬಿಸುತ್ತಿದೆ, ಆದ್ದರಿಂದ ದೇಸಿ ಎನ್ನುತ್ತಿರಬಹುದೇ?]

**ರಸಭಾವೋಪೇತಧರ್ಮಾಮೃತರಸಮಯದೊಳ್ ಘೋರಸಂಸಾರನಾನಾ**
**ವ್ಯಸನವ್ಯುಚ್ಛಿತ್ತಿಯೊಳ್ ಧಾರ್ಮಿಕಜನಜನಿತಾನಂದಸಂದೋಹವಿದ್ಯಾ**
**ರಸದೊಳ್ ಸಂಸಾರಸಾರೋದಯವಿರಚಿತದೊಳ್ ವಾಗ್ವಧೂಮುದ್ರೆಯೊಳ್ ಮು**
**ದ್ರಿಸಿ ನಿಂದತ್ತಾದಿತೀರ್ಥೇಶ್ವರನ ಚರಿತದೊಳ್ ವಾಕ್ಯಮಾಣಿಕ್ಯಕೋಶಂ** ೧೫೮

**ಪದವಿಭಾಗ–ಅನ್ವಯ–ಅರ್ಥ:** ರಸಭಾವ + ಉಪೇತ = ರಸಭಾವಗಳಿಂದ ಕೂಡಿ, ಧರ್ಮ + ಅಮೃತರಸಮಯದೊಳ್ = ಧರ್ಮವೆಂಬ ಅಮೃತರಸವನ್ನೊಳಗೊಂಡು, ಘೋರಸಂಸಾರ ನಾನಾ ವ್ಯಸನವ್ಯುಚ್ಛಿತ್ತಿಯೊಳ್ = ಭೀಕರವಾದ ಐಹಿಕತೆಯನ್ನು ನಾಶಪಡಿಸುತ್ತ, ಧಾರ್ಮಿಕಜನಜನಿತ + ಆನಂದಸಂದೋಹವಿದ್ಯಾ ರಸದೊಳ್ = ಧರ್ಮಭಾವನೆಯ ಜನರಲ್ಲಿ ಹುಟ್ಟಿದ ಆನಂದಾಧಿಕ್ಯದ ವಿದ್ಯಾರಸದಿಂದ ಕೂಡಿ, ಸಂಸಾರಸಾರೋದಯವಿರಚಿತದೊಳ್ = ಸಂಸಾರಸಾರೋದಯನಾದ ಪಂಪನಿಂದ ರಚಿತವಾದ, ಆದಿತೀರ್ಥೇಶ್ವರನ ಚರಿತದೊಳ್ = ಮೊದಲ ತೀರ್ಥಂಕರನ ಈ ಚರಿತೆಯಲ್ಲಿ, ವಾಗ್ವಧೂಮುದ್ರೆಯೊಳ್ = ವಾಗ್ದೇವಿಯ ಒಪ್ಪಿಗೆಯ ಮುದ್ರೆಯಿಂದ, ವಾಕ್ಯಮಾಣಿಕ್ಯಕೋಶಂ ಮುದ್ರಿಸಿ ನಿಂದತ್ತು = ವಾಕ್ಯಗಳೆಂಬ ಮಾಣಿಕ್ಯಗಳ ಕೋಶವು ಮುದ್ರೆಯನ್ನು ಪಡೆದು ನಿಂತಿದೆ.

**ಗದ್ಯಾನುಸರಣ:** ರಸಭಾವಗಳಿಂದ ಕೂಡಿ, ಧರ್ಮವೆಂಬ ಅಮೃತರಸವನ್ನೊಳಗೊಂಡು, ಭೀಕರವಾದ ಐಹಿಕತೆಯನ್ನು ನಾಶಪಡಿಸಿ, ಧರ್ಮಭಾವನೆಯ ಜನರಲ್ಲಿ

ಹುಟ್ಟಿದ ಆನಂದಾಧಿಕ್ಯದ ವಿದ್ಯಾರಸದಿಂದ ಕೂಡಿ, ಸಂಸಾರಸಾರೋದಯನಾದ ಪಂಪನಿಂದ ರಚಿತವಾದ ಮೊದಲ ತೀರ್ಥಂಕರನ ಈ ಚರಿತೆಯಲ್ಲಿ ವಾಕ್ಯಗಳೆಂಬ ಮಾಣಿಕ್ಯಗಳ ಕೋಶವು ವಾಗ್ದೇವಿಯ ಒಪ್ಪಿಗೆಯ ಮುದ್ರೆಯನ್ನು ಪಡೆದು ನಿಂತಿದೆ.

**ಇದು ದೇವೇಂದ್ರಮುನೀಂದ್ರವಂದ್ಯಪರಮಜಿನೇಂದ್ರಮುಖಚಂದ್ರ ವಾಕ್ಚಂದ್ರಿಕಾಪ್ರಸರ ಪ್ರಸಾದೋದೀರ್ಣ ಸೂಕ್ತಿಕಲ್ಲೋಲಮಾಲಾಕೀರ್ಣ ಕವಿತಾಗುಣಾರ್ಣವ ಪ್ರಣೀತಮಪ್ಪಾದಿ ಪುರಾಣಂ**

**ಪದವಿಭಾಗ–ಅನ್ವಯ–ಅರ್ಥ:** ಇದು ದೇವೇಂದ್ರಮುನೀಂದ್ರವಂದ್ಯ = ಇದು ಇಂದ್ರರಿಂದಲೂ ಮುನಿಶ್ರೇಷ್ಠರಿದಲೂ ವಂದಿತನಾದ, ಪರಮಜಿನೇಂದ್ರ = ಆದಿ ತೀರ್ಥಂಕರನ, ಮುಖಚಂದ್ರ = ಮುಖಚಂದ್ರದ, ವಾಕ್ ಚಂದ್ರಿಕಾ = ಮಾತುಗಳೆಂಬ ಬೆಳುದಿಂಗಳ, ಪ್ರಸರ = ಧಾರೆಯ, ಪ್ರಸಾದ = ಕೃಪೆಯಿಂದ, ಉದೀರ್ಣ = ಹೆಚ್ಚಳವಾದ, ಸೂಕ್ತಿಕಲ್ಲೋಲಮಾಲಾ = ಸುಂದರ ಮಾತುಗಳೆಂಬ ಅಲೆಗಳಿಂದ, ಆಕೀರ್ಣ = ತುಂಬಿದ, ಕವಿತಾ ಗುಣಾರ್ಣವ = ಕಾವ್ಯಸಾಗರನೆನಿಸಿದ ಪಂಪನಿಂದ, ಪ್ರಣೀತಂ ಅಪ್ಪ ಆದಿಪುರಾಣಂ = ರಚಿತವಾದ ಆದಿಪುರಾಣವೆಂಬ ಹೆಸರಿನ ಕಾವ್ಯ

**ಗದ್ಯಾನುಸರಣ:** ಇದು ದೇವೇಂದ್ರಮುನಿಂದ್ರರಿಂದ ವಂದಿತನಾದ ಆದಿಜಿನನ ಮುಖಚಂದ್ರವು ಸೂಸುವ ಉಪದೇಶದ ಮಾತುಗಳೆಂಬ ಬೆಳುದಿಂಗಳ ಧಾರೆಯಿಂದ ಉಬ್ಬುವ ಅಲೆಗಳಿಂದ ತುಂಬಿದ ಕವಿತಾಸಾಗರನಾದ ಪಂಪನಿಂದ ರಚಿತವಾದ ಆದಿಪುರಾಣ ಕಾವ್ಯ.

*

# ಅನುಬಂಧ-೧
# ಜೈನ ಪರಿಭಾಷೆ

**ಅಂಗ** – ಜೈನಾಗಮದ ಒಂದು ವಿಭಾಗ

**ಅಂತರಕರಣ** – ಕೆಡಿಸಿಕೊಳ್ಳುವುದು

**ಅಂತರಾಯ** – ಮೋಕ್ಷಸಂಪಾದನೆಗೆ ಬರುವ ಅಡ್ಡಿ

**ಅಂತರಾಯಪಂಚಕ** – ಐದು ಬಗೆಯ ಅಂತರಾಯಗಳು; ದಾನ ಲಾಭ ಭೋಗ ಉಪಭೋಗ ಮತ್ತು ವೀರ್ಯ

**ಅಂತರ್ದ್ವೀಪ** – ಲವಣೋದಧಿ ಮತ್ತು ಕಾಲೋದಧಿಗಳಲ್ಲಿನ ದ್ವೀಪಗಳು; ಅಲ್ಲಿ ಕುಮಾನುಷರು ಅಥವಾ ಕುಭೋಗ ಭೂಮಿಜರು ಇರುತ್ತಾರೆ

**ಅಂತರ್ಮುಹೂರ್ತ** – ಒಂದು ಮುಹೂರ್ತಕ್ಕಿಂತ ಕಡಿಮೆಯ ಕಾಲ [ನಿಮಿಷ]

**ಅಕ್ಷಯ ತೃತೀಯೆ** – ಅಕ್ಕ ತದಿಗೆ, ಶ್ರೇಯಾಂಸನು ಆದಿಜಿನನಿಗೆ ಕಬ್ಬಿನ ಹಾಲನ್ನೆರೆದು ಭಿಕ್ಷೆ ನೀಡಿದ ದಿನಕ್ಕೆ ಬಂದ ಹೆಸರು

**ಅಕ್ಷಯ ದಾನ** – ಭಿಕ್ಷೆಯಿಟ್ಟವರಿಗೆ ಯತಿಗಳು ಮಾಡುವ ಆಶೀರ್ವಾದ

**ಅಕ್ಷೀಣಾಭಿಧಾನ** – ಇದು ಪ್ರಾಪ್ತವಾಗಿರುವ ಮುನಿಗಳು ಆಹಾರ ಸ್ವೀಕರಿಸಿದ ಶ್ರಾವಕರ ಮನೆಯ ಆಹಾರವು ತೀರದಷ್ಟು ಹೆಚ್ಚುತ್ತದೆ

**ಅಖಿಳಾಗಮವಿತ್ತ್ವ** – ಎಲ್ಲ ಶಾಸ್ತ್ರಗಳ ಪರಿಣತೆ

**ಅಗುರುಲಘುತ್ವ** – ಸಿದ್ಧಪರಮೇಷ್ಠಿಗಳ ಅಷ್ಟಗುಣಗಳಲ್ಲಿ ಒಂದು. [ಮನಸ್ಸು] ಹಗುರ ಅಥವಾ ಭಾರವಾಗದ ಸಮಸ್ಥಿತಿ

**ಅಗ್ರನಿರ್ವೃತಿ** – ಒಂದು ಗರ್ಭಾನ್ವಯಕ್ರಿಯೆ, ಕೈವಲ್ಯವನ್ನು ಪಡೆದಾಗ ಸ್ವಭಾವದಿಂದುಂಟಾಗುವ ಊರ್ಧ್ವಗಮನ

**ಅಘಾತಿತ್ರಯ** – ನಾಮಕರ್ಮ ಗೋತ್ರಕರ್ಮ ವೇದನೀಯ ಕರ್ಮಗಳು

**ಅಘಾತಿಚತುಷ್ಕ** – ನಾಮ, ಗೋತ್ರ, ಆಯು, ವೇದನೀಯ ಎಂಬ ಕರ್ಮಗಳು

**ಅಚ್ಯುತ** – ಹದಿನಾರನೆಯ ಕಲ್ಪ

**ಅಜೀವತತ್ವ** – ಅಜೀವ, ಚೇತನರಹಿತವಾದದ್ದು. ಅವುಗಳಲ್ಲಿ ಐದು ಬಗೆ

**ಅಚ್ಯುತೇಂದ್ರ** – ಅಚ್ಯುತಕಲ್ಪದ ಇಂದ್ರ

**ಅಜಿತಂಜಯ** – ಭರತನ ರತ್ನಖಚಿತ ರಥ

**ಅಣಿಮಾದ್ಯಷ್ಟಗುಣ** – ಅಣಿಮಾ ಮಹಿಮಾ ಗರಿಮಾ ಲಘಿಮಾ ಪ್ರಾಪ್ತಿ ಪ್ರಾಕಾಮ್ಯಗಳೆಂಬ ಎಂಟು ಸಿದ್ಧಿಗಳು

**ಅತಿಶಯಂಗಳ್** – ಜಿನನ ಹತ್ತು ವಿಶೇಷತೆಗಳು ('ಮಿತನಖಕೇಶಶೋಭಿತತನುತ್ವಂ ಅಭುಕ್ತಿ ಉಪಸರ್ಗಭಾವಂ ಅನ್ವಿತಚತುರಾನನತ್ವಂ ಅಖಿಳಾಗಮವಿತ್ತ್ವಂ ಅಪಕ್ಷ್ಮತಾಸಂ ಆಯತಗಗನಪ್ರಚಾರಂ ಅಪಜೀವವಧಂ ಪರಿವೀತದೇಹಬಿಂಬತೆವೆರಸು ಇಂತು ಪತ್ತಿತಿಶಯಂಗಳ್ ಇವೇಂ ಜಿನನೊಳ್ ಪೊದಳ್ದುವೋ', [ಇವುಗಳೊಡನೆ 'ಸುಭಕ್ಷೆ' ಸೇರಿ ಒಟ್ಟು ಹತ್ತು ಅತಿಶಯಗಳು]; ಜಿನನ ಎಂಟು ವಿಶೇಷತೆಗಳು (ಕರ್ಮಾರಿ ವಿಜಯ, ಅನಂತಚತುಷ್ಟಯಪ್ರಾಪ್ತಿ, ವಾಕ್,

ಪೂಜಾ, ಆಸ್ಥಾಯಿಕಾ, ವಿಹಾರ, ಶರೀರ, ಪ್ರಕೃತಿಗಳೆಂಬ ಎಂಟುಂ ಅತಿಶಯಂಗಳಂ ಅತಿಶಯಭಕ್ತಿಯಿಂ ಸ್ತುತಿಯಿಸಿ)

**ಅಧಃಪ್ರವೃತ್ತಿ** – ಅಧಃಪ್ರವತ್ತಿಕರಣ: ಕರಣಲಬ್ಧಿಗಳಲ್ಲಿ – ಅಧಃಪ್ರವೃತ್ತಿಕರಣ, ಅಪೂರ್ವಕರಣ, ಅನಿವೃತ್ತಿಕರಣ

**ಅಧರ್ಮ** – ಆರು ದ್ರವ್ಯಗಳಲ್ಲಿ ಒಂದು, ಜೀವ ಮತ್ತು ಪುದ್ಗಲಗಳ ಸ್ಥಿತಿಗೆ ಸಹಾಯ ಮಾಡುವಂಥದು

**ಅಧಿಕಾರ** – ಜೈನನಾದವನಿಗೆ ಲಭಿಸುವ ವಿಶೇಷಗಳು (ಅತಿಬಾಲವಿದ್ಯಾ, ಕುಲಾವಧಿ, ವರ್ಣೋತ್ತಮತ್ವ, ಪಾತ್ರತ್ವ, ಸೃಷ್ಟ್ಯಧಿಕಾರ, ವ್ಯವಹಾರೇಶಿತ್ವ, ಅವಧ್ಯತ್ವ, ಅದಂಡತ್ವ, ಮಾನಾರ್ಹತ್ವ, ಪ್ರಜಾ ಸಂಬಂಧಾಕರ ಎಂಬ ಹತ್ತು ಅಧಿಕಾರಂಗಳು

**ಅಧಿರೋಹಣ** – ಮೇಲೆ ಹತ್ತುವುದು

**ಅಧೋಗ್ರೈವೇಯಕ** – ಒಂಬತ್ತು ಗ್ರೈವೇಯಕಗಳೆಂಬ ಕಲ್ಪಾತೀತ ಸ್ವರ್ಗಗಳಲ್ಲಿ ಕೆಳಗಿನದು; ನೋಡಿ, 'ಗ್ರೈವೇಯಕ'

**ಅಧೋಗ್ರೈವೇಯಕದಿವಿಜ** – ಅಹಮಿಂದ್ರ

**ಅಧ್ಯಯನ** – ವಿದ್ಯಾಭ್ಯಾಸ, ಧಾರ್ಮಿಕ ಅಧ್ಯಯನ

**ಅಧ್ಯಯನಾಂತರಾಯ** – ಶಾಸ್ತ್ರವ್ಯಾಸಂಗಕ್ಕೆ ಆಗುವ ಅಡ್ಡಿ

**ಅಧ್ರುವ** – ದ್ವಾದಾಶಾನುಪ್ರೇಕ್ಷೆಯಲ್ಲಿನ ಅನಿತ್ಯ

**ಅನಂತಜ್ಞಾನ** – ಅನಂತಚತುಷ್ಟಯದಲ್ಲಿ ಒಂದು

**ಅನಂತಚತುಷ್ಟಯ** – ಅನಂತಜ್ಞಾನ ಅನಂತದರ್ಶನ ಅನಂತಸುಖ ಮತ್ತು ಅನಂತವೀರ್ಯಗಳೆಂಬ ನಾಲ್ಕು

**ಅನಂತವೀರ್ಯ** – ಸಿದ್ಧಪರಮೇಷ್ಠಿಗಳ ಅಷ್ಟಗುಣಗಳಲ್ಲಿ ಒಂದು, ಅಪರಿಮಿತ ಶಕ್ತಿ

**ಅನಗಾರಕೇವಳಿ** – ಮನೆಯಲ್ಲಿ ವಾಸಿಸದ ಮುನಿ. ತೀರ್ಥಂಕರರೂ ಗಣಧರರೂ ಅಲ್ಲದ ಕೇವಲಿ

**ಅನಧ್ಯವಸಾಯ** – ನಿಶ್ಚಿತಜ್ಞಾನರಾಹಿತ್ಯ

**ಅನಶನ** – ನಾಲ್ಕು ಬಗೆಯ ಆಹಾರವಿಸರ್ಜಿಸಿ ಮಾಡುವ ತಪಸ್ಸು; ಸಾಕಾರ ನಿರಾಕಾರಗತವಾದ ಮೊದಲ ತಪಸ್ಸು

**ಅನಾದ್ಯನಿಧನಸ್ವಭಾವ** – ಆತ್ಮ ಪುದ್ಗಲ ಧರ್ಮ ಇವುಗಳು ಮೊದಲು–ಕೊನೆ ಇಲ್ಲದವು, ಆದರೆ ವುಗಳ ಹೊರರೂಪಬ ಬದಲಾಗುತ್ತವೆ

**ಅನಿತ್ಯಾನುಪ್ರೇಕ್ಷೆ** – ದೇಹ ಇಂದ್ರಿಯಗಳು ವೈಭವ – ಇವುಗಳು ನಶ್ವರ ಎಂಬ ಭಾವನೆ

**ಅನಿವೃತ್ತಿಕರಣ** – ಮೂರು ಬಗೆಯ ಕರಣಲಬ್ಧಿಗಳಲ್ಲಿ – ಅಧಃಪ್ರವೃತ್ತಿಕರಣ, ಅಪೂರ್ವಕರಣ, ಅನಿವೃತ್ತಿಕರಣ – ಒಂದು; ಒಂಬತ್ತನೆಯ ಗುಣಸ್ಥಾನದಲ್ಲಿ ಜೀವನಿಗೆ ಧ್ಯಾನದಿಂದ ಉಂಟಾಗುವ ಪರಿಶುದ್ಧ ಭಾವಗಳು

**ಅನುತ್ತರೆ** – ಭರತನ ಸಿಂಹಾಸನ

**ಅನುಪ್ರೇಕ್ಷೆ** – ಯತಿಗಳು ಧ್ಯಾನಮಾಡಬೇಕಾದ ಅನಿತ್ಯತ್ವ, ಅಶರಣತ್ವ, ಸಂಸಾರ, ಏಕತ್ವ, ಅನ್ಯತ್ವ, ಅಶುಚಿ, ಆಸ್ರವ, ಸಂವರ, ನಿರ್ಜರೆ, ಲೋಕ, ಬೋಧಿದುರ್ಲಭತ್ವ, ಧರ್ಮ ಎಂಬ ಹನ್ನೆರಡು ತತ್ವಗಳ ಚಿಂತನೆ

**ಅನುಭಾಗ** – ಕರ್ಮಪುದ್ಗಲಗಳಿಗಿರುವ ಸ್ವಗತ ಸಾಮರ್ಥ್ಯವಿಶೇಷ; ಆತ್ಮನಿಗೆ ಕರ್ಮಗಳ ಫಲಕೊಡುವ ಶಕ್ತಿ

**ಅನುಯೋಗ**– ತೀರ್ಥಂಕರರು ಉಪದೇಶಿಸಿದ ಶಾಸ್ತ್ರ ಸಮೂಹ; ನಾಲ್ಕು: ಪ್ರಥಮ, ಕರಣ, ಚರಣ, ದ್ರವ್ಯ ಎಂಬ ಅನುಯೋಗಗಳು

**ಅನ್ನಪ್ರಾಶನ** – ಮಗುವಿಗೆ ಅನ್ನ ತಿನ್ನಿಸುವುದು, ಒಂದು ಗರ್ಭಾನ್ವಯಕ್ರಿಯೆ

**ಅಪಕ್ಷ್ಮತಾಸ** – ರೆಪ್ಪೆ ಬಡಿಯದಿರುವುದು

**ಅಪಚಯ** – ಆಯುಷ್ಯ, ಬಲ, ಶರೀರ, ವೈಭವ ಮುಂತಾದವು ಕುಂದುವುದು

**ಅಪಜೀವವಧ** – ಪ್ರಾಣಿಹಿಂಸೆಯಿಲ್ಲದಿರುವುದು

**ಅಪರಾಜಿತೆ** – ದಿಗ್ವನಿತೆಯರಲ್ಲಿ ಒಬ್ಬಳು

**ಅಪಾತ್ರ** – ದಾನಕ್ಕೆ ಯೋಗ್ಯನಲ್ಲದವನು

**ಅಪಾಯವಿಚಯ** – ನಾಲ್ಕು ಬಗೆಯ ಧರ್ಮಧ್ಯಾನಗಳಲ್ಲಿ ಎರಡನೆಯದು; ಲೋಕದ ಅಜ್ಞಾನ-ದುಃಖಗಳನ್ನು ಹೋಗಲಾಡಿಸುವ ಚಿಂತನೆ

**ಅಪೂರ್ವ** – ಅಪೂರ್ವಕರಣ, ಮೂರು ಬಗೆಯ – ಅಧಃಪ್ರವೃತ್ತಿಕರಣ, ಅಪೂರ್ವಕರಣ, ಅನಿವೃತ್ತಿಕರಣ – ಕರಣಲಬ್ಧಿಗಳಲ್ಲಿ ಒಂದು

**ಅಪ್ರತ್ಯಾಖ್ಯಾನಕ್ರೋಧ** – ಭೂಮಿಯಲ್ಲಿ ಕೊರೆದ ರೇಖೆಯಂತೆ ಇರುವ ತೀವ್ರತರವಾದ ಕ್ರೋಧ

**ಅಪ್ರತ್ಯಾಖ್ಯಾನಮಾನ** – ಮಾನಕಷಾಯ, ಅಹಿಂಸೆ ಮುಂತಾದ ವ್ರತಗಳ ಆಚರಣೆಯಲ್ಲಿ ಅಡ್ಡಿಯಾಗುವ ಒಂದು ಕರ್ಮಾವರಣ; ಮೋಹನೀಯ ಕರ್ಮಗಳಲ್ಲಿ ಒಂದು

**ಅಪ್ರತ್ಯಾಖ್ಯಾನಮಾಯೆ** – ಅಹಿಂಸೆ ಮುಂತಾದ ವ್ರತಗಳ ಆಚರಣೆಯಲ್ಲಿ ಅಡ್ಡಿಯಾಗುವ ಒಂದು ಕರ್ಮಾವರಣ; ಮೋಹನೀಯ ಕರ್ಮಗಳಲ್ಲಿ ಒಂದು

**ಅಪ್ರತ್ಯಖ್ಯಾನಲೋಭ** – ಮಾನಕಷಾಯ, ಅಹಿಂಸೆ ಮುಂತಾದ ವ್ರತಗಳ ಆಚರಣೆಯಲ್ಲಿ ಅಡ್ಡಿಯಾಗುವ ಒಂದು ಕರ್ಮಾವರಣ; ಮೋಹನೀಯ ಕರ್ಮಗಳಲ್ಲಿ ಒಂದು

**ಅಪ್ರಮತ್ತ** – ಆತ್ಮನ ಎರಡು ಅವಸ್ಥೆಗಳಲ್ಲಿ ಒಂದು. ಹದಿನಾಲ್ಕು ಗುಣಸ್ಥಾನಗಳಲ್ಲಿ ಏಳನೆಯದರಿಂದ ಮೇಲಿನವುಗಳಲ್ಲಿರುವ ಆತ್ಮ

**ಅಪ್ರಮತ್ತಗುಣಸ್ಥಾನ** – ಜೀವಾತ್ಮನ ಆಧ್ಯಾತ್ಮಿಕ ಉನ್ನತಿಯನ್ನು ಸೂಚಿಸುವ ಹದಿನಾಲ್ಕು ಗುಣಸ್ಥಾನಗಳಲ್ಲಿ ಏಳನೆಯದು: ಕಷಾಯಗಳ ತೀವ್ರತೆಯು ಕಡಿಮೆಯಾಗಿ ಪ್ರಮಾದವು ದೂರವಾಗುತ್ತದೆ ಮತ್ತು ಧರ್ಮಧ್ಯಾನವು ಪ್ರಾಪ್ತವಾಗುತ್ತದೆ

**ಅಪ್ರಾಸುಕ** – ಜೀವಂತ ವಸ್ತುಗಳಿಂದ ಕೂಡಿರುವ

**ಅಭವ್ಯ** – ಮುಕ್ತಿ ಪೊಂದಲಾರದ ಜೀವ

**ಅಭಿಷೇಕ** – ಒಂದು ಗರ್ಭಾನ್ವಯಕ್ರಿಯೆ, ತಪಶ್ಚರಣದಿಂದ ಹೊಂದುವ ಅಭಿಷೇಕಪ್ರಾಪ್ತಿ

**ಅಭುಕ್ತಿ** – ಭೋಜನಾಭಾವ

**ಅಭ್ಯಂತರತಪಸ್** – ಪ್ರಾಯಶ್ಚಿತ್ತ, ವಿನಯ, ವೈಯಾಪೃತ್ಯ, ಸ್ವಾಧ್ಯಾಯ, ವ್ಯುತ್ಸರ್ಗ, ಧ್ಯಾನ ಎಂಬ ಆರು ಬಗೆಯ ಅಂತರಂಗ ತಪಸ್ಸು

**ಅಯನ** – ಮೂರು ಋತುಗಳು ಅಥವಾ ಆರು ಮಾಸಗಳ ಅವಧಿ

**ಅಯಶಸ್ಕೀರ್ತಿ** – ಎಪ್ಪತ್ತೆರಡು ಪ್ರಕೃತಿಗಳಲ್ಲಿ ಅಪಕೀರ್ತಿ ಎಂಬ ಪ್ರಕೃತಿ ಅಥವಾ ಕರ್ಮ

**ಅಯೋಗಕೇವಳಿ** – ಮನೋವಾಕ್ಕಾಯಗಳ ಚಾಂಚಲ್ಯವಿಲ್ಲದವನು, ಹದಿನಾಲ್ಕನೆಯ ಗುಣಸ್ಥಾನವನ್ನು ಸೇರಿದವನು

**ಅಯೋಗಗುಣಸ್ಥಾನ** – ಹದಿನಾಲ್ಕನೆಯ ಗುಣಸ್ಥಾನ

**ಅಯೋಧ್ಯ** – ಭರತ ಚಕ್ರವರ್ತಿಯ ಏಳು ಜೀವರತ್ನಗಳಲ್ಲೊಂದಾದ ಸೇನಾನಿರತ್ನದ ಹೆಸರು

**ಅಯ್ದರಲಂಬು** – ಕಾಮನ ಐದು ಬಾಣಗಳು: ಮನೋಮಥನ ಮದನ ಮೋಹನ ಸಂತಾಪನ ವಶೀಕರಣ

**ಅಯ್ದುಸಮಿತಿ** – ಮುನಿಗಳು ಆಚರಿಸಬೇಕಾದ ಈರ್ಯಾ, ಭಾಷಾ, ಏಷಣಾ, ಆದಾನನಿಕ್ಷೇಪಣ, ಉತ್ಸರ್ಗ ಎಂಬ ಐದು ವ್ರತರೂಪದ ಪ್ರತಿಜ್ಞೆ

**ಅರ್ಕಪೂಜೆ** – ಸೂರ್ಯಪೂಜೆ

**ಅರ್ಚಿಸು** – ವೀರಶಯ್ಯೆಯ ಮೇಲೆ ಏಕಪಾರ್ಶ್ವದಲ್ಲಿ ಮಲಗಿ ಆಹಾರಬಿಟ್ಟು ಮರಣವನ್ನು ಸಾಧಿಸುವ ಕ್ರಮ

**ಅರ್ಹತ್** – ಅರಹಂತ, ಪಂಚಪರಮೇಷ್ಠಿಗಳಲ್ಲಿ ಒಬ್ಬ, ಸಯೋಗಕೇವಲಿ, ಘಾತಿಕರ್ಮಗಳನ್ನು ನಾಶಪಡಿಸಿಕೊಂಡವನು

**ಅರ್ಹತ್ಪ್ರತಿಮೆ** – ಜಿನಪ್ರತಿಮೆ

**ಅರ್ಹದ್ರೂಪ** – [ಅರ್ಹತ್ + ರೂಪ] ಜಿನನ ರೂಪ

**ಅವತಂಸಿಕೆ** – ಭರತನ ರತ್ನಮಾಲೆ

**ಅವತಾರ** – ಗರ್ಭಾನ್ವಯ ಕ್ರಿಯೆಗಳಲ್ಲಿ ಒಂದು. ಜಿನನಾಗುವವನು ಮಾತೃಗರ್ಭಕ್ಕವತರಿಸುವುದು, ನಲವತ್ತೆಂಟು ದೀಕ್ಷಾನ್ವಯಕ್ರಿಯೆಗಳಲ್ಲಿ ಒಂದು

**ಅವಧಿ** – ಕಾಲದೇಶಗಳು ಎಷ್ಟೇ ದೂರವಾಗಿದ್ದರೂ ಅಲ್ಲಿನ ವಿಷಯಗಳನ್ನು ತಿಳಿಯಬಹುದಾದ ಅವಧಿಜ್ಞಾನ: ಕುಮತಿ ಕುಶ್ರುತ ವಿಭಂಗ ಮತಿ ಶ್ರುತ ಅವಧಿ ಮನಃಪರ್ಯಾಯ ಮತ್ತು ಕೇವಲ ಎಂಬ ಎಂಟು ಬಗೆಯ ಜ್ಞಾನಗಳಲ್ಲಿ ಒಂದು

**ಅವಮೋದರ್ಯ** – ಒಂದು ಬಗೆಯ ತಪಸ್ಸು; ಆಹಾರದಲ್ಲಿ ಒಂದೊಂದು ತುತ್ತು ಕಡಿಮೆ ಮಾಡುತ್ತ, ಕೊನೆಗೆ ಒಂದು ಅಗುಳಿಗೆ ಸೀಮಿತಗೊಳಿಸುವ ಕ್ರಮ

**ಅವಸರ್ಪಿಣಿ** – ಧರ್ಮ, ಸತ್ಯ, ನ್ಯಾಯ, ಆಯುಸ್ಸು, ಬಲ, ಸುಖ ಮುಂತಾದುವು ಕ್ರಮವಾಗಿ ಕಡಿಮೆಯಾಗುತ್ತ ಅಧರ್ಮ ಅನ್ಯಾಯಾದಿಗಗಳೇ ತುಂಬಿಕೊಳ್ಳುವ ಕಾಲ

**ಅವಿಪಾಕ[ನಿರ್ಜರೆ]** – ನಿರ್ಜರೆಯ ಎರಡು ರೂಪಗಳಲ್ಲಿ ಒಂದು: ಕರ್ಮವು ಉದಯವಾಗಿ ಫಲ ಕೊಡುತ್ತಿದ್ದರೂ ರಾಗದ್ವೇಷರಹಿತವಾದ ಆತ್ಮನಿಗೆ ಹೊಸ ಕರ್ಮಗಳ ಬಂಧವಾಗುವುದಿಲ್ಲ, ಮತ್ತು ಪೂರ್ವಬದ್ಧ ಕರ್ಮಗಳು ಉದುರಿ ಹೋಗುತ್ತವೆ

**ಅವ್ಯಾಬಾಧ** – ಸಿದ್ಧಪರಮೇಷ್ಠಿಗಳ ಅಷ್ಟಗುಣಗಳಲ್ಲಿ ಒಂದು, ಯಾವುದರಿಂದಲೂ ಕುಂದದ ಅಥವಾ ಹೆಚ್ಚದ ಅನಂತಸುಖತ್ವ

**ಅಶುಭ** – ಕುರೂಪವುಂಟುಮಾಡುವ ಕರ್ಮ

**ಅಶ್ವರತ್ನ** – ಚಕ್ರವರ್ತಿಯ ಹದಿನಾಲ್ಕು ರತ್ನಗಳಲ್ಲೊಂದು, ವಿಜಯಾರ್ಧಪರ್ವತದಲ್ಲಿ ಹುಟ್ಟಿದ್ದು

**ಅಷ್ಟಗುಣ** – ಸಿದ್ಧಪರಮೇಷ್ಠಿಗಳು ಗಳಿಸಿಕೊಳ್ಳುವ ಎಂಟು ಗುಣಗಳು: ಸಮ್ಯಕ್‌ಜ್ಞಾನ ದರ್ಶನ ಅನಂತವೀರ್ಯ ಸೂಕ್ಷ್ಮತ್ವ ಅಗುರುಲಘುತ್ವ ಅವಗಾಹ ಅವ್ಯಾಬಾಧಗಳೆಂಬ ಅಷ್ಟಗುಣಗಳು

**ಅಷ್ಟಮಂಗಳ** – ಛತ್ರ ಧ್ವಜ ಚಾಮರ ಕಲಶ ಸುಪ್ರತೀಕ ಭೃಂಗಾರ ತಾಲ ದರ್ಪಣ – ಇವುಗಳು

**ಅಷ್ಟಮಹಾಪ್ರಾತಿಹಾರ್ಯ** – ಜಿನನಿಗೆ ಒದಗುವ ಅಶೋಕ ವೃಕ್ಷ, ಸುರಪುಷ್ಪವೃಷ್ಟಿ, ದಿವ್ಯಧ್ವನಿ, ಚತುಃಷಷ್ಟಿ [ಚಾಮರ], ರತ್ನಜಡಿತ, ಸುವರ್ಣಪೀಠ [ಸಿಂಹಾಸನ], ಪ್ರಭಾವಲಯ, ದೇವದುಂದುಭಿ, ಛತ್ರತ್ರಯ ಎಂಬ ಎಂಟು ಮಂಗಳ ಲಾಂಛನಗಳು

**ಅಷ್ಟಾವಿಂಶತಿಮೋಹನೀಯಕಳಂಕ** – ಇಪ್ಪತ್ತೆಂಟು ಮೋಹನೀಯ ಕರ್ಮಗಳು: ಸಾತವೇದನೀಯ ಅಸಾತವೇದನೀಯ ಮೋಹನೀಯವೆಂಬ ವೇದನೀಯ ಕರ್ಮಪ್ರಕೃತಿಗಳು; ಸಮ್ಯಕ್ತ್ವ ಪ್ರಕೃತಿ ಮಿಥ್ಯಾತ್ವ ಸಮ್ಯಙ್ಮಿಥ್ಯಾತ್ವ ಎಂಬ ದರ್ಶನ ಮೋಹನೀಯಗಳು: ಹಾಸ್ಯ ರತಿ ಅರತಿ ಶೋಕ ಭಯ ಜುಗುಪ್ಸೆ ಸ್ತ್ರೀವೇದ ಪುಂವೇದ ನಪುಂಸಕವೇದಗಳೆಂಬ ಅಕಷಾಯವೇದನೀಯಗಳು; ಅನಂತಾನುಬಂಧಿ ಕ್ರೋಧ ಮಾನ ಮಾಯಾ ಲೋಭಗಳು, ಹಾಗೂ ಅಪ್ರತ್ಯಾಖ್ಯಾನಕ್ರೋಧ, ಮಾನ ಮಾಯಾ ಲೋಭಗಳು, ಸಂಜ್ವಲನ ಕ್ರೋಧ ಮಾನ ಮಾಯಾ ಲೋಭಗಳೆಂಬ ಎಂಬ ಕಷಾಯವೇದನೀಯಗಳು

**ಅಷ್ಟಾಹ್ನಿಕ** – ಆಷಾಢ ಕಾರ್ತಿಕ ಫಾಲ್ಗುಣ ಮಾಸಗಳಲ್ಲಿ ಶುಕ್ಲಪಕ್ಷದ ಅಷ್ಟಮಿಯಿಂದ ಪೂರ್ಣಮಿಯವರೆಗೆ ಮಾಡುವ ನಂದೀಶ್ವರ ಪೂಜೆ

**ಅಸಂಜ್ಞಿ** – ಪಂಚೇಂದ್ರಿಯ ಜೀವಿಗಳಲ್ಲಿ ಒಂದು ಬಗೆ; ಆಹಾರ ಮೈಥುನ ಭಯ ಪರಿಗ್ರಹ ಎಂಬ ನಾಲ್ಕು ಸಂಜ್ಞೆಗಳಿಲ್ಲದ ಜೀವಿ

**ಅಸಂಯುತ** – ಇಂದ್ರಿಯನಿಗ್ರಹಿಯಲ್ಲದವನು

**ಅಹಮಿಂದ್ರ** – ಹದಿನಾರು ಸ್ವರ್ಗಗಳೂ ಅಣೂತ್ತರಗಳು ಆದ ಮೇಲಿನ ಗ್ರೈವೇಯಕದಲ್ಲಿ ಹುಟ್ಟುವ ಜೀವ

**ಆಕಾಶ** – ಜೀವಪುದ್ಗಲಗಳಿಗೆ ಆಶ್ರಯ ನೀಡುವ ದ್ರವ್ಯ

**ಆಕಿಂಚನ್ಯ** – ಶರೀರಾದಿಗಳ ಮೇಲಿನ ಮಮತೆ ಬಿಡುವುದು

**ಆಗಮ** – ಜಿನನು ಹೇಳಿದ ತತ್ವಗಳನ್ನು ಘಣಧರರು ವರ್ಣಿಸಿರುವ ದ್ವಾದಶಾಂಗಗಳು

**ಆಚಾಮ್ಲವರ್ಧನತಪ** – ಒಂದು ಉಪವಾಸ ವ್ರತ: ಒಂದು ದಿನ ಆಚಾಮ್ಲ [ಗಂಜಿ] ಸೇವನೆ ಒಂದು ಪಾರಣೆ, ಎರಡು ಆಚಾಮ್ಲ ಸೇವನೆ ಒಂದು ಪಾರಣೆ, ಮೂರು ಆಚಾಮ್ಲ ಸೇವನೆ ಒಂದು ಪಾರಣೆ – ಈ ಕ್ರಮದಲ್ಲಿ ಹತ್ತು ಆಚಾಮ್ಲಗಳವರೆಗೆ ಸಾಗಿ ಆನಂತರ ಒಂಬತ್ತು ಆಚಾಮ್ಲ, ಎಂಟು ಆಚಾಮ್ಲ ಹೀಗೆ ಒಂದರವರೆಗೆ ಇಳಿಸುತ್ತ ಬರುವ ವ್ರತ; ಇದರಲ್ಲಿ ಒಟ್ಟು ನೂರು ಆಚಾಮ್ಲಗಳೂ ಹತ್ತೊಂಬತ್ತು ಪಾರಣೆಗಳೂ ಆಗುತ್ತವೆ

**ಆಚಾರ್ಯ** – ಪಂಚಾಚಾರವನ್ನು ಆಚರಿಸಿ ಶಿಷ್ಯರಿಗೆ ಆಚರಿಸು ಹೇಳುವವನು

**ಅಜ್ಞಾವಿಚಯ** – ನಾಲ್ಕು ಬಗೆಯ ಧರ್ಮಧ್ಯಾನಗಳಲ್ಲಿ ಒಂದು; ಆಗಮ ಗುಣಗಳ ಕುರಿತಾದ ಚಿಂತನೆ

**ಆತಪವಾರಣತ್ರಿತಯ** – ಮುಕ್ಕೊಡೆ

**ಆತ್ಮರಕ್ಷ** – ಒಂದು ದೇವತಾವರ್ಗ

**ಆತ್ಮೋಪಾತ್ತಶರೀರಪ್ರಮಾಣ** – ಆತ್ಮನು ವ್ಯಾಪಕನೂ ಅಲ್ಲ, ಸೂಕ್ಷ್ಮನೂ ಅಲ್ಲ; ಶರೀರಕ್ಕನುಗುಣವಾಗಿ ಗಾತ್ರ ಹಿರಿದು ಕಿರಿದಾಗುತ್ತದೆಂಬ ಆಶಯ

**ಆದಿಜಿನ** – ಮೊದಲ ತೀರ್ಥಂಕರ, ವೃಷಭನಾಥ

**ಆದಿತ್ಯ** – ಎಂಟು ಮಂದಿ ಲೋಕಾಂತಿಕ ದೇವರಲ್ಲಿ ಒಬ್ಬ (ಸಾರಸ್ವತ ಆದಿತ್ಯ ವಹ್ನಿ ಅರುಣ ಗರ್ಭತೋಯ ತುಷಿತ ಅವ್ಯಾಬಾಧ ಅರಿಷ್ಟ

**ಆದಿಪೂರುಷ** – [ನಾ] ಆದಿಜಿನ

**ಆದಿಬ್ರಹ್ಮ** – [ನಾ] ಆದಿಜಿನ, ಕೃತಯುಗವನ್ನು ಆರಂಭಿಸಿದ್ದರಿಂದಾಗಿ ಆದಿಜಿನನಿಗೆ ಈ ಹೆಸರು

**ಆದಿಭಟ್ಟಾರಕ** – [ನಾ] ಆದಿತೀರ್ಥಂಕರ

**ಆನತ** – ಹದಿನಾರು ಕಲ್ಪಗಳಲ್ಲಿ ಒಂದು, ಹದಿಮೂರನೆಯ ಸ್ವರ್ಗ

**ಆಪ್ತ** – ಹಸಿವು ದಾಹ ಮುಂತಾದ ಹದಿನೆಂಟು ದೋಷಗಳಿಂದ ಮುಕ್ತವಾಗಿ ಸರ್ವಜ್ಞತ್ವವನ್ನು ಪಡೆದು ಆಗಮಗಳನ್ನು ರಚಿಸಿದ ಜಿನನ ಆಪ್ತ

**ಆಮ್ನಾಯ** – ಆತ್ಮಹಿತಕ್ಕಾಗಿ ಮಾಡುವ ಸ್ವಾಧ್ಯಾಯ, ಗುರುಪರಂಪರೆಗನುಗುಣವಾಗಿ ಆಗಮಗಳ ಅರ್ಥೈಸುವಿಕೆ

**ಆಯುಧಾಗಾರ** – ಚಕ್ರವರ್ತಿ ತನ್ನ ಶಸ್ತ್ರಗಳನ್ನಿಡುವ ಜಾಗ

**ಆರಂಭ** – ಹಿಂಸೆಗೆ ಕಾರಣವಾಗುವ ಕಾರ್ಯ

**ಆರಾಧನೆ** – ಸಮ್ಯಕ್‌ಜ್ಞಾನ ದರ್ಶನ, ಚಾರಿತ್ರ, ತಪಸ್ಸುಗಳ ಸಾಧನೆ: ನಾಲ್ಕುವಿಧವಾದ ಜ್ಞಾನಾರಾಧನೆ, ದರ್ಶನಾರಾಧನೆ, ಚಾರಿತ್ರಾರಾಧನೆ ಮತ್ತು ತಪಾರಾಧನೆ ಎಂಬವು

**ಆರ್ಜವ** – ನಿಷ್ಕಪಟಪ್ರವೃತ್ತಿ

**ಆರ್ತಧ್ಯಾನ** – ಇಷ್ಟವಾದದ್ದು ದೂರವಾದೀತೆಂಬ ಮತ್ತು ಅದರ ಬಗೆಗಿನ ಆಕಾಂಕ್ಷೆಯಿಂದ ಕೂಡಿದ ಚಿಂತೆ

**ಆರ್ಯಷಟ್ಕರ್ಮ** – ಮೊದಲನೆಯ ಚಕ್ರವರ್ತಿಯಾದ ಭರತನು ತಾನು ಹೊಸದಾಗಿ ಸೃಷ್ಟಿಸಿದ ಬ್ರಾಹ್ಮಣವರ್ಗದವರಿಗೆ [ವೈದಿಕ ಬ್ರಾಹ್ಮಣರ ಷಟ್ಕರ್ಮಗಳಾದ ಅಧ್ಯಯನ, ಅಧ್ಯಾಪನ, ಯಜನ, ಯಾಜನ, ದಾನ ಮತ್ತು ಪ್ರತಿಗ್ರಹಗಳಿಗೆ ಪರ್ಯಾಯವಾಗಿ] ಅನುಸರಿಸಬೇಕೆಂದು ನಿಯೋಜಿಸಿದ ಆರು ಕರ್ಮಗಳು: ಪೂಜೆ [ಇಜ್ಯಾ], ವಾರ್ತೆ, ದತ್ತಿ, ಸ್ವಾಧ್ಯಾಯ, ಸ್ವಭಾವ ಸಂಯಮ, ತಪೋನುಷ್ಠಾನ

**ಆರ್ಯಿಕಾ** – ಕಂತಿ

**ಆರ್ಹಂತ್ಯ** – ಒಂದು ಗರ್ಭಾನ್ವಯಕ್ರಿಯೆ, ಅರ್ಹಂತನಾಗುವ ಸ್ಥಿತಿ

**ಆವಳಿಕ** – ಆವಲಿ, ಒಂದು ಕಾಲಪ್ರಮಾಣ, ಅಸಂಖ್ಯಾತ ಸಮಯಗಳು ಸೇರಿ ಒಂದು ಅವಲಿ (ಅದು ಸಮಯ ಆವಳಿಕ ಉಚ್ಛ್ವಾಸ ಸ್ತೋಕ ನಿಮೇಷ ನಾಳಿಕಾ ಮುಹೂರ್ತ ದಿವಸ ಪಕ್ಷ ಮಾಸ ಋತು ಅಯನ ಸಂವತ್ಸರಾದಿ ಗಣನಾನುಕ್ರಮದಿಂ)

**ಆಶಾವಧು** – ರುಚಕಾಚಳದ ಪಶ್ಚಿಮದಿಕ್ಕಿನ ಎಂಟು ಕೂಟಗಳ ದೇವಿಯರು (ದ್ವಿಗುಣ ಚತುಃಕೂಟಂಗಳೊಳಂ ಸಂಚರಿಸುವ ಇಳಾದೇವಿ ಸುರಾದೇವಿ ಪೃಥ್ವಿ ಪದ್ಮಾವತಿ ಕಾಂಚನೆ ನವಮಿಕೆ ಸೀತೆ ಭದ್ರೆ ಎಂಬ ಎಣ್ಬರುಂ ಆಶಾವಧೂವರರಂ)

**ಆಸನಕಂಪ** – ತೀರ್ಥಂಕರನ ಜೀವಿತದ ವಿಶೇಷ ಪ್ರಸಂಗಗಳಲ್ಲಿ ಆಗುವ ದೇವೇಂದ್ರನ ಪೀಠದ ಅಲುಗಾಟ

**ಆಸನ್ನಭವ್ಯ** – ಶೀಘ್ರದಲ್ಲಿಯೇ ಮನಃಪರಿಪಾಕವನ್ನು ಹೊಂದುವವನು

**ಆಸ್ರವ** – ಸಪ್ತತತ್ವಗಳಲ್ಲಿ ಒಂದು: ಪುಣ್ಯ ಪಾಪರೂಪವಾದ ಕರ್ಮವು ಜೀವದೊಳಕ್ಕೆ ಹರಿಯುವುದು

**ಆಹಾರದಾನ** – ರತ್ನತ್ರಯದ ಬೆಳವಣಿಗೆ ಆಗಲೆಂದು ನೀಡುವ ಅನ್ನದಾನ

**ಆಹಾರಪರ್ಯಾಪ್ತಿ** – ಹಳೆಯ ಶರೀರಗಳನ್ನು ತೊರೆದು ಹೊಸವನ್ನು ಧರಿಸಲು ಕಾರಣವಾಗುವ ನೋಕರ್ಮಗಳಿಗೆ ಕಾರಣವಾಗುವ ಜೀವನಶಕ್ತಿ

**ಇಂದ್ರಕ** – ನರಕಬಿಲಗಳಲ್ಲಿ ಒಂದು ಬಗೆ (ಆ ಬಿಲಂಗಳುಂ ಇಂದ್ರಕ ಶ್ರೇಢೀಬದ್ಧ ಪ್ರಕೀರ್ಣಕಂಗಳೆಂದು ಮೂಱು ತೆಱನಕ್ಕುಂ)

**ಇಂದ್ರತ್ಯಾಗ** – ಐವತ್ತಮೂರು ಗರ್ಭಾನ್ವಯ ಕ್ರಿಯೆಗಳಲ್ಲಿ ಒಂದು, ಪದವಿತ್ಯಾಗ

**ಇಂದ್ರಧ್ವಜ** – ಇಂದ್ರಾದಿಗಳು ಮಾಡುವ ಜಿನಪೂಜೆ

**ಇಂದ್ರಾಂಗನೆ** – ಶಚೀದೇವಿ

**ಇಂದ್ರಾಭಿಷೇಕ** – ಐವತ್ತಮೂರು ಗರ್ಭಾನ್ವಯ ಕ್ರಿಯೆಗಳಲ್ಲಿ ಒಂದು, ಇಂದ್ರಪದವಿಯನ್ನು ಬಿಡುವುದು

**ಇಂದ್ರೋಪಪಾದ** – ಒಂದು ಗರ್ಭಾನ್ವಯ ಕ್ರಿಯೆ, ಅವಧಿಜ್ಞಾನವನ್ನು ಹೊಂದಿ ತಾನೇ ಇಂದ್ರನೆಂಬ ಭಾವನೆಯನ್ನು ತಾಳುವುದು

**ಇಚ್ಛಾಗತ** – ಇಷ್ಟದಂತೆ ನಡೆಯುವವನು, ಹಿಮ್ಮಡಿಯ ಬದಿ ನಾಲ್ಕು ಬೆರಳಷ್ಟು ಮತ್ತು ಉಂಗುಷ್ಠದ ಬದಿ ಒಂದು ಗೇಣಿನಷ್ಟೂ ಎರಡು ಕಾಲುಗಳ ನಡುವೆ ಅವಕಾಶ ವಿರುವ ಹಾಗೆ ನಿಲ್ಲುವ ಒಂದು ಭಂಗಿ

**ಈಶಾನಕಲ್ಪ** – ಹದಿನಾರು ಸ್ವರ್ಗಗಳಲ್ಲಿ ಎರಡನೆಯದು

**ಈಶಾನೇಂದ್ರ** – ಈಶಾನಕಲ್ಪದ ದೇವೇಂದ್ರ

**ಈಷತ್ಪ್ರಾಗ್ಭಾರ** – ಸಿದ್ಧಕ್ಷೇತ್ರ

**ಉಚ್ಛ್ವಾಸ** – ಕಾಲವನ್ನು ಅಳೆಯುವ ಒಂದು ಪ್ರಮಾಣ, ಸಂಖ್ಯಾತ ಆವಲಿ ಒಂದು

ಉಚ್ಛ್ವಾಸ (ಅದು ಸಮಯ ಆವಳಿಕ ಉಚ್ಛ್ವಾಸ ಸ್ತೋಕ ನಿಮೇಷ ನಾಳಿಕಾ ಮುಹೂರ್ತ ದಿವಸ ಪಕ್ಷ ಮಾಸ ಋತು ಅಯನ ಸಂವತ್ಸರಾದಿ ಗಣನಾನು ಕ್ರಮದಿಂ)

**ಉತ್ತಮತಪ** – ಐಹಿಕ ಕಾಮನೆಗಳನ್ನು ಬಯಸದೆ ಮಾಡುವ ತಪಸ್ಸು

**ಉತ್ತರಕುರು** – ವಿದೇಹಕ್ಷೇತ್ರದಲ್ಲಿ ಮೇರು ಪರ್ವತದ ಉತ್ತರದ ಭೋಗಭೂಮಿ

**ಉತ್ತರಾರ್ಧ** – ಒಂದು ಪರ್ವತದ ಹೆಸರು

**ಉತ್ತಾನಶಯ್ಯೆ** – ಅಂಗಾತ ಮಲಗುವುದು

**ಉತ್ಸರ್ಪಿಣಿ** – ಭೋಗ, ಆಯುಸ್ಸು ಮುಂತಾದವು ಬೆಳೆಯುತ್ತ ಹೋಗುವ ಕಾಲ

**ಉಪಗೂಹನ** – ತನ್ನಲ್ಲಿ ಸದ್ಗುಣಗಳನ್ನು ಬೆಳೆಸಿ ಸಧರ್ಮಿಗಳ ದೋಷವನ್ನು ಮುಚ್ಚುವುದು

**ಉಪಚಯ** – ಆಯುಸ್ಸು, ಬಲ, ವೈಭವಗಳ ಬೆಳವಣಿಗೆ

**ಉಪನಯನ** – ಒಂದು ಗರ್ಭಾನ್ವಯಕ್ರಿಯೆ, ಬ್ರಹ್ಮಚರ್ಯವ್ರತಕ್ಕೆ ಅಣಿಗೊಳಿಸುವ ಕ್ರಿಯೆ

**ಉಪಪಾತಶಯನ** – ದೇವದೇವಿಯರು ಹುಟ್ಟುವ ಶಯ್ಯೆ

**ಉಪಯೋಗತ್ವ** – ನಲವತ್ತೆಂಟು ದೀಕ್ಷಾನ್ವಯ ಕ್ರಿಯೆಗಳಲ್ಲಿ ಒಂದು

**ಉಪಶಮ** – ಕರ್ಮದ ಸ್ಥಗಿತತೆ

**ಉಪಶಮಭಾವ** – ದಾನವಿಧಿಯನ ದರ್ಶನ ದಿಂದ ಕ್ರೂರಭಾವ ಕಡಿಮೆಯಾಗುವುದು

**ಉಪಶಮಶ್ರೇಣಿ** – ಚಾರಿತ್ರಮೋಹದ ಇಪ್ಪತ್ತೊಂದು ಪ್ರಕೃತಿಗಳನ್ನು ಉಪಶಮನ ಗೊಳಿಸುವುದು

**ಉಪಶಾಂತಗುಣಸ್ಥಾನ** – ಕರ್ಮಗಳ ಉದಯಾದಿ ಅವಸ್ಥೆಗಳಲ್ಲುಂಟಾಗುವ ಆತ್ಮಪರಿಣಾಮವೇ ಗುಣಸ್ಥಾನ, ಇವುಗಳಲ್ಲಿನ ಹದಿನಾಲ್ಕು ನೆಲೆಗಳಲ್ಲಿ ಇದು ಹನ್ನೊಂದನೆಯದು

**ಉಪಸ್ಥಾಪನೆ** – ಐದು ಬಗೆಯ ನಡವಳಿಕೆಗಳಲ್ಲಿ ಒಂದು, ಹತ್ತಿರದಲ್ಲಿ ಇರಿಸುವುದು (ಸಮ್ಯಕ್ಚಾರಿತ್ರಮೆಂಬುದು ಅದು ಸಾಮಾಯಿಕಚ್ಛೇದ ಉಪಸ್ಥಾಪನಾ ಪರಿಹಾರಶುದ್ಧಿ ಸೂಕ್ಷ್ಮಸಂಪರಾಯ ಯಥಾಖ್ಯಾತಚಾರಿತ್ರಭೇದದಿಂ ಪಂಚವಿಧಂ)

**ಉಪಾದೇಯ** – ತತ್ತ್ವದ ಎರಡು ಬಗೆಗಳಲ್ಲಿ ಒಂದು, ಮುಕ್ತಿಕಾರಣವಾದುದು

**ಉಪಾಧ್ಯಾಯ** – ಭವ್ಯರಿಗೆ ಶಾಸ್ತ್ರಾಧ್ಯಯನ ಮಾಡಿಸುವವರು; ಮಹಾವ್ರತಗಳನ್ನು ಆಚರಿಸುವವರು

**ಉಪಾಸಕ** – ಶ್ರಾವಕ

**ಉಪಾಸಕವ್ರತ** – ಜೈನ ಗೃಹಸ್ಥನ ಹನ್ನೆರಡು ವ್ರತಗಳು: ಐದು ಅಣುವ್ರತಗಳೊಡನೆ ದಿಗ್ವ್ರತ, ದೇಶವ್ರತ, ದಂಡವಿರತಿವ್ರತ. ಎಂಬ ಮೂರು ಸಾಮಯಿಕ ವ್ರತಗಳು ಹಾಗೂ ಸಾಮಾಯಿಕವ್ರತ, ಪ್ರೋಷಧವ್ರತ, ಅತಿಥಿಸಂಗ್ರಹ, ಸಲ್ಲೇಖನಾ, ಎಂಬ ನಾಲ್ಕು ಶಿಕ್ಷಾವ್ರತಗಳು

**ಉಪಾಸಕಾಧ್ಯಯನ** – ಶ್ರಾವಕರ ಕರ್ತವ್ಯ ತಿಳಿಸುವ ಶಾಸ್ತ್ರ

**ಊರ್ಧ್ವಲೋಕ** – ಮೇರುಪರ್ವತದ ಮೇಲಿನ ಸೌಧರ್ಮಕಲ್ಪದ ಋತುವೆಂಬ ವಿಮಾನದ ನಂತರದ ಲೋಕ

**ಋತು** – ಎರಡು ಮಾಸಗಳ ಅವಧಿ (ಅದು ಸಮಯ ಆವಳಿಕ ಉಚ್ಛ್ವಾಸ ಸ್ತೋಕ ನಿಮೇಷ ನಾಳಿಕಾ ಮುಹೂರ್ತ ದಿವಸ ಪಕ್ಷ ಮಾಸ ಋತು ಅಯನ ಸಂವತ್ಸರಾದಿ ಗಣನಾಕ್ರಮದಿಂದಂ ಪೆರ್ಚಿದೇಶಿಕೆಯೊಳ್ ಕೂಡಿದುದು)

**ಋದ್ಧಿ** – ತಪಸ್ಸಿದ್ಧಿ ಹೊಂದಿದವರಿಗೆ ಉಂಟಾಗುವ [ಏಳು] ಮಹಿಮೆಗಳು (ಬುದ್ಧಿ ತಪೋ ವಿಕ್ರಿಯ ಔಷಧಿ ರಸ ಬಲ ಅಕ್ಷೀಣಾಭಿಧಾನ ಸಪ್ತರ್ಧಿಗಳೊಳಂ ನೆಜೆದು

**ಎಂಟುಕಷಾಯ** – ಅಪ್ರತ್ಯಾಖ್ಯಾನಕ್ರೋಧ ಮಾನ ಮಾಯಾ ಲೋಭ ಮತ್ತು ಪ್ರತ್ಯಾಖ್ಯಾನಕ್ರೋಧ ಮಾನ ಮಾಯಾ ಲೋಭ

**ಎಂಟುಂ ಕೂಟಂಗಳ್** – ರುಚಕಾಚಳದ ಉತ್ತರ ದಿಕ್ಕಿನ ಎಂಟು ಶಿಖರಗಳು (ತದ್ಗಿರೀಂದ್ರೋತ್ತರ ಕಕುದ್ದೇಶದ ಸ್ಫಟಿಕ ಅಂಜನ ಕಾಂಚನ ರಜತ ರುಚಕ ಕುಂಡಳ ರುಚಿರ ಸುದರ್ಶನಂಗಳೆಂಬ ಎಂಟು ಕೂಟಂಗಳೊಳ್)

**ಎಂಟು ಕಿಲ್ಬಿಷ** – ಆತ್ಮನ ಜ್ಞಾನಾವರಣಾದಿ ಕರ್ಮಗಳು, ಜ್ಞಾನ ದರ್ಶನ ಸುಖ ವೀರ್ಯಗಳನ್ನು ನಾಶಮಾಡುವ ಪಾಪಗಳು

**ಎಂಟುಂ ತೆಱದ ಪೂಜೆ** – ಇಜ್ಯೆಗಳು, ಕಲ್ಪದ್ರುಮ, ಚತುರ್ಮುಖ, ಸರ್ವತೋಭದ್ರ, ಐಂದ್ರಧ್ವಜ, ಅಷ್ಟಾಹ್ನಿಕ, ಬಲಿ, ಸವನ, ತ್ರಿಸಂಧ್ಯಾಸೇವೆ ಎಂಬ ಎಂಟು ಬಗೆಯ ಪೂಜೆಗಳು

**ಎಂಟು ಗುಣ** – ಸಂವೇಗ ನಿರ್ವೇಗ ನಿಂದಾ ಗರ್ಹಾ ಉಪಶಮ ಭಕ್ತಿ ಅನುಕಂಪೆ ವಾತ್ಸಲ್ಯಗಳೆಂಬ ಸಿದ್ಧರ ಎಂಟು ಗುಣಗಳು

**ಏಕತ್ವವಿತರ್ಕವಿಚಾರ** – ಎರಡನೆಯ ಶುಕ್ಲಧ್ಯಾನ, ಮೋಹಕರ್ಮಸಹಿತವಾಗಿ ಜ್ಞಾನಾವರಣೀಯ, ದರ್ಶನಾವರಣೀಯ ಮತ್ತು ಅಂತರಾಯ ಎಂಬ ಮೂರು ಕರ್ಮಗಳ ನಾಶವಾಗಿ ಕೇವಲಜ್ಞಾನಪ್ರಾಪ್ತಿಗೆ ಎಡೆಮಾಡಿಕೊಡುವಂಥದು

**ಏಕವಿಹಾರಿ** – ಒಂಟಿಯಾಗಿ ಸಂಚರಿಸುವುದು

**ಏಕಾದಶನಿಳಯ** – ಶ್ರಾವಕರ ಹನ್ನೊಂದು ನೆಲೆಗಳು: ಸಮ್ಯಗ್ದರ್ಶನ, ಅಣುವ್ರತ, ಸಮತ್ವೀಭಾವ, ಪ್ರೋಷಧೋಪವಾಸ, ಹಸಿಯ ಹಣ್ಣು ಹೂ ಮುಂತಾದವನ್ನು ಸ್ವೀಕರಿಸದಿರುವುದು [ಸಚಿತ್ತವಸ್ತುತ್ಯಾಗ], ಹಗಲು ಸ್ತ್ರೀಸಂಗವರ್ಜನೆ, ಬ್ರಹ್ಮಚರ್ಯ, ಆರಂಭತ್ಯಾಗ, ಪರಿಗ್ರಹತ್ಯಾಗ, ಅನುಮತಿ ತ್ಯಾಗ ಮತ್ತು ಉದಯತ್ಯಾಗ [ಉದ್ದಿಷ್ಟತ್ಯಾಗ]

**ಐದು ಸಮಿತಿ** – ಈರ್ಯಾ ಭಾಷಾ ಏಷಣಾ ಆದಾನನಿಕ್ಷೇಪಣ ಪ್ರತಿಷ್ಠಾಪನಾ ಎಂಬ ಐದು ಬಗೆಯ ನಡಾವಳಿ

**ಔಷಧರ್ಧಿ** – ಋದ್ಧಿಗಳಲ್ಲಿ ಒಂದು. ಇದನ್ನು ಹೊಂದಿದ ಮುನಿಗಳ ಮೇಲೆ ಬೀಸುವ ಗಾಳಿಗೆ ರೋಗಗಳನ್ನು ವಾಸಿಮಾಡುವ ಸಾಮರ್ಥ್ಯವಿರುತ್ತದೆ

**ಕನಕಗಿರಿ** – ಪೂರ್ವವಿದೇಹದ ಸೀತೋದಾ ನದಿಯ ದಡದ ಊದು ಸರೋವರಗಳ ದಂಡೆಯ ಮೇಲಿನ ಸುವರ್ಣಗಿರಿಗಳು

**ಕನಕಾವಳಿತಪ** – ಐದು ವರ್ಷಗಳವರೆಗಿನ ತಪಸ್ಸು; ಪ್ರತಿ ತಿಂಗಳ ಶುಕ್ಲಪಕ್ಷದ ಪಾಡ್ಯ ಪಂಚಮಿ ದಶಮಿಗಳಂದೂ, ಕೃಷ್ಣಪಕ್ಷದ ಬಿದಿಗೆ ಷಷ್ಠಿ ದ್ವಾದಶಿಗಳಂದು ಉಪವಾಸ ಮಾಡುವ ವ್ರತ

**ಕಪೋತಲೇಶ್ಯೆ** – ಜೀವದ ಮೇಲಾಗುವ ಒಂದು ಅಶುಭ ಪರಿಣಾಮ (ಕೃಷ್ಣ ನೀಲ ಕಪೋತ ಲೇಶ್ಯಾ ಬಹ್ವಾರಂಭ ಪರಿಗ್ರಹತ್ವ ಆದಿ ಅಶುಭ ಪರಿಣಾಮಂಗಳಿಂ ಜೀವಂ ನೆಲಸಿ)

**ಕರಣಗಣ** – ಇಂದ್ರಿಯಸಮೂಹ

**ಕರ್ಮಾಷ್ಟಕ** – ಜ್ಞಾನಾವರಣೀಯ, ದರ್ಶನಾವರಣೀಯ, ಅಂತರಾಯ, ಮೋಹನೀಯ, ಆಯುಃಕರ್ಮ, ನಾಮಕರ್ಮ, ಗೋತ್ರಕರ್ಮ, ವೇದನೀಯ ಕರ್ಮ ಎಂಬ ಜೀವದ ಎಂಟು ಕಿಲ್ಬಿಷಗಳು

**ಕರ್ತ್ರನ್ವಯಕ್ರಿಯೆ** – ಭವ್ಯಜೀವನಿಗೆ ಪ್ರಾಪ್ತವಾಗುವ ಏಳು ಕ್ರಿಯೆಗಳು (ಸಜ್ಜಾತಿ, ಸದ್ಗೃಹತ್ವ, ಪಾರಿವ್ರಾಜ್ಯ, ಸುರೇಂದ್ರತ್ವ, ಸಾಮ್ರಾಜ್ಯ, ಪರಮಾರ್ಹಂತ್ಯ, ಪರಿನಿರ್ವಾಣಮೆಂಬೇೞುಂ ಪರಮಸ್ಥಾನ ನಾಮ ಕರ್ತ್ರನ್ವಯ ಕ್ರಿಯೆಗಳಂ

**ಕರ್ಮ** – ಜೀವನನ್ನು ಪರತಂತ್ರಗೊಳಿಸುವ ಪಾಪಪುಣ್ಯಗಳು; ಕರ್ಮಾಷ್ಟಕ: ಜ್ಞಾನಾವರಣೀಯ, ದರ್ಶನಾವರಣೀಯ, ಅಂತರಾಯ, ಮೋಹನೀಯ, ಆಯುಃಕರ್ಮ, ಗೋತ್ರಕರ್ಮ, ವೇದನೀಯ ಕರ್ಮ ಎಂಬ ಎಂಟು ಕರ್ಮಗಳು

**ಕರ್ಮನಿರ್ಜರೆ** – ಕರ್ಮಕ್ಷಯ

**ಕರ್ಮಪಾಕ** – ಪೂರ್ವಜನ್ಮದ ಕರ್ಮಗಳ ಫಲ

**ಕರ್ಮಭೂಮಿ** – ಅವಸರ್ಪಿಣಿ ಕಾಲದ ಐದು–ಆರನೆಯ ವಿಭಾಗಗಳಿಗೆ ಸಂಬಂಧಿಸಿದ ಭೂಮಿ, ಭಾರತ ಮತ್ತು ಐರಾವತ ಕ್ಷೇತ್ರಗಳೊಳಗಿನ ಆರ್ಯಖಂಡ

**ಕರ್ಮಭೂಮಿಸ್ಥಿತಿ** – ಅಸಿ ಮಸಿ ಕೃಷಿ ವಾಣಿಜ್ಯ ಮುಂತಾದ ಕರ್ಮಗಳಿಂದ ಜೀವನ ನಿರ್ವಹಣೆ ಮಾಡಬೇಕಾದ ಸ್ಥಿತಿ

**ಕಲ್ಪ** – ಹದಿನಾರು ಬಗೆಯ ಸ್ವರ್ಗಗಳು

**ಕಲ್ಪವೃಕ್ಷ** – ಇದರಲ್ಲಿ ಹತ್ತು ವಿಧ: ಮದ್ಯಾಂಗ, ಭೂಷಣ, ವಸ್ತ್ರ, ತೂರ್ಯ, ಮಾಲ್ಯ, ಗೃಹ, ಭಾಜನ, ಭೋಜನ, ಜ್ಯೋತಿರ್, ದೀಪ; ಚಕ್ರವರ್ತಿಗಳು ಮಾಡುವ ಒಂದು ಪೂಜೆ

**ಕಲ್ಪಾಮರ** – ಸೌಧರ್ಮದಿಂದ ಅಚ್ಯುತದ ವರೆಗಿನ ಹದಿನಾರು ಸ್ವರ್ಗಗಳಲ್ಲಿನ ದೇವತೆ

**ಕವಾಟಕ್ರಿಯೆ** – ಕೇವಲಿಯ ಆತ್ಮವು ಮೂಲ ಶರೀರದಿಂದ ಮೂರರಷ್ಟು ದಪ್ಪವೂ ಏಳು ರಜ್ಜು ಅಗಲವಾಗಿಯೂ ವ್ಯಾಪಿಸುವುದು. ಇದೊಂದು ಸಮುದ್ಘಾತಕ್ರಿಯೆ

**ಕಷಾಯ** – ಸುಖದುಃಖವನ್ನುಂಟು ಮಾಡುವ ಎಂಟು ದೋಷಗಳು: ಪ್ರತ್ಯಾಖ್ಯಾನ ಪೂರ್ವಕ ಮತ್ತು ಅಪ್ರತ್ಯಾಖ್ಯಾನಪೂರ್ವಕ ವಾದ ಕ್ರೋಧ ಮಾನ ಮಾಯಾ ಲೋಭ ಎಂಬವು

**ಕಾಂತಾರಚರ್ಯಾ** – ಕಾಡಿನಲ್ಲಿ ಸಿಕ್ಕಿದುದನ್ನು ಮಾತ್ರ ತಿನ್ನುವ ವ್ರತವುಳ್ಳ ಯತಿಗಳು

**ಕಾಕಿಣೀರತ್ನ** – ಭರತ ಚಕ್ರವರ್ತಿಯ ಏಳು ಅಜೀವರತ್ನಗಳಲ್ಲೊಂದಾದ ರತ್ನ, ಶ್ರೀಗೃಹದಲ್ಲಿ ಹುಟ್ಟಿದ್ದು

**ಕಾಮವೃಷ್ಟಿ** – ಭರತ ಚಕ್ರವರ್ತಿಯ ಏಳು ಜೀವರತ್ನಗಳಲ್ಲೊಂದಾದ ಗೃಹಪತಿರತ್ನದ ಹೆಸರು

**ಕಾಯಕ್ಲೇಶ** – ದೇಹದಂಡನೆಯನ್ನುಳ್ಳ ಬಾಹ್ಯ ತಪಸ್ಸುಗಳಲ್ಲಿ ಆರನೆಯದು

**ಕಾಯಪ್ರವೀಚಾರ** – ಈಶಾನಕಲ್ಪದವರೆಗೆ ಅಮರರು ದೇಹಸಂಬಂಧದಿಂದ ಮೈಥುನ ಸುಖವನ್ನನುಭವಿಸುವರು, ಆ ಮೇಲಣ ಲೋಕಗಳವರು ಮನಃ ಪ್ರವೀಚಾರ – ಮನಸ್ಸಿನಿಂದ ಮೈಥುನ ಸುಖ – ಅನುಭವಿಸುವರು

**ಕಾಯಸ್ಥಿತಿ** – ಶರೀರದ ಸ್ಥಿತಿಯು ಆಹಾರ ದಿಂದ ರೂಪಿತವಾಗುವ ಸ್ಥಿತಿ

**ಕಾಯೋತ್ಸರ್ಗ** – ಕೈ ಇಳಿಬಿಟ್ಟುಕೊಂಡು ನೇರವಾಗಿ ಮತ್ತು ನಿಶ್ಚಲವಾಗಿ ನಿಂತಿರುವುದು

**ಕಾಲಲಬ್ಧಿ** – ಲಬ್ಧಿಪಂಚಕಗಳಲ್ಲಿ ಒಂದು; ಆಧ್ಯಾತ್ಮಿಕ ಜೀವನದ ಆರಂಭಕ್ಕೆ ಪಕ್ವವಾದ ಕಾಲ ಬರುವುದು

**ಕಿಲ್ಬಿಷ** – ಒಂದು ದೇವತಾವರ್ಗ

**ಕುಬೇರಕಾಂತ** – ಚಕ್ರವರ್ತಿಯ ಬಳಿಯ ಅಕ್ಷಯ ಭಂಡಾರ

**ಕುಮಾನುಷ** – ಅಂತರ್ದ್ವೀಪದಲ್ಲು ಹುಟ್ಟುವವನು

**ಕುಮುದಾಂಗ** – ಒಂದು ಕಾಲಗಣನೆ

**ಕುಲಕರ** – ಒಬ್ಬ ಮನುವಿನ ಹೆಸರು

**ಕುಲಚರ್ಯಾ** – ಒಂದು ಗರ್ಭಾನ್ವಯಕ್ರಿಯೆ. ಕುಲಾಚಾರ

**ಕುಲಜಾತಿಸಾಧಿತವಿದ್ಯೆ** – ಕುಲ ಮತ್ತು ಜಾತಿಗಳಿಗೆ ಅನುಗುಣವಾಗಿ ಸಾಧಿಸಿಕೊಳ್ಳಬೇಕಾದ ವಿದ್ಯೆ (ಅವರ್ಗೆ ಪ್ರಜ್ಞಪ್ತಿವಿದ್ಯೆ ಮೊದಲ್ಗಾಗಿ ಕುಲಜಾತಿ ಸಾಧಿತವಿದ್ಯೆಗಳ್ ಪಲವುಂ ಬೆಸಕೆಯ್ವುವು)

**ಕುಲವಿದ್ಯೆ** – ವಂಶಪಾರಂಪರ್ಯವಾಗಿ ಬರುವ ವಿದ್ಯೆ

**ಕುಲಿಂಗಿ** – ಕೆಟ್ಟ ಚಿಹ್ನೆಗಳುಳ್ಳವನು, ಧರ್ಮಕ್ಕೆ ಹೊರಗಿನವನು, ಮಿಥ್ಯಾತ್ವವಾದಿ

**ಕುಳಧರ** – ಕುಲಧರ, ಮನುಗಳು: ಪ್ರತಿಶ್ರುತಿ, ಸನ್ಮತಿ, ಕ್ಷೇಮಂಕರ, ಕ್ಷೇಮಂಧರ, ಸೀಮಂಕರ, ಸೀಮಂಧರ, ವಿಮಲವಾಹನ, ಚಕ್ಷುಷ್ಮಂತ, ಯಶಸ್ವಿ, ಅಭಿಚಂದ್ರ, ಚಂದ್ರಾಭ, ಮರುದ್ದೇವ, ಪ್ರಸೇನಜಿತ್ ಮತ್ತು ನಾಭಿರಾಜ (ಪಶ್ಚಿಮ ಕುಳಧರನೆನೆ ನೆಗಟ್ದ ನಾಭಿಯಲ್ಲಿಗೆ ವಂದರ್)

**ಕೂಟಾಷ್ಟಕ** – ರುಚಿಕಾಚಳದ ದಕ್ಷಿಣಭಾಗದ ಅಮೋಘ ಸುಪ್ರಬುದ್ಧ ಮಂದಿರ ವಿಮಳ ರುಚಕ ರುಚಕೋತ್ತರ ಚಂದ್ರ ಸುಪ್ರತಿಷ್ಠ ಎಂಬ ಶಿಖರಗಳು

**ಕೃಷ್ಟಿ** – ನರಕದುಃಖವನ್ನುಂಟುಮಾಡುವ ಕ್ರಿಯೆ

**ಕೃಷ್ಣ** – ಜೀವದ ಮೇಲಾಗುವ ಒಂದು ಅಶುಭ ಪರಿಣಾಮ

**ಕೃಷ್ಣಲೇಶ್ಯಾ** – ಆರು ವಿಧವಾದ ಲೇಶ್ಯೆಗಳಲ್ಲೊಂದು; ಕ್ರೋಧ, ವೈರ, ಜಗಳ, ಅಧರ್ಮ, ಹಾಗೂ ಕ್ರೌರ್ಯ ಇವುಗಳಿಂದ ಕೂಡಿರುವುದು

**ಕೇವಲಬೋಧ** – ಅನಂತವಸ್ತುಪ್ರಕಾಶಿಯಾದ ಜ್ಞಾನ

**ಕೇವಳಜ್ಞಾನ** – ಲೋಕಾಲೋಕಗಳಲ್ಲಿಯ ಹಾಗೂ ತ್ರಿಕಾಲಗಳಲ್ಲಿಯ ಸರ್ವವಸ್ತುಗಳ ಸಮಗ್ರ ಜ್ಞಾನ

**ಕೇಶಾವಾಪ** – ಐವತ್ಮೂರು ಗರ್ಭಾನ್ವಯ ಕ್ರಿಯೆಗಳಲ್ಲಿ ಒಂದು, ಚೌಲ

**ಕ್ರಿಯಾಮಂತ್ರ** – ಐದು ಬಗೆಯ ಮಂತ್ರಗಳಲ್ಲಿ ಒಂದು

**ಕ್ಷಪಕ** – [ಸಂಸಾರವನ್ನು] ಕ್ಷೀಣಗೊಳಿಸಿಕೊಳ್ಳುವವನು, ನಿವಾರಿಸಿಕೊಳ್ಳುವವನು

**ಕ್ಷಾಯಿಕಸಮ್ಯಗ್ದೃಷ್ಟಿ** – ಕ್ಷಾಯಿಕಸಮ್ಯಕ್ತ್ವ, ದರ್ಶನ ಮೋಹನೀಯಕರ್ಮವು ಕ್ಷೀಣವಾದ ಮೇಲೆ ಉಂಟಾಗುವ ನಿರ್ಮಲಶ್ರದ್ಧೆ

**ಕ್ಷೀರಗೌರಕ್ಷತಜ** – ಹಾಲಿನಂತೆ ಬಿಳುಪಾದ ರಕ್ತವುಳ್ಳವನು

**ಕ್ಷುತವಿಜೃಂಭಣ** – ಸೀನು ಮತ್ತು ಆಕಳಿಕೆಗಳು; ಇವೆರಡು ಮರಣಲಕ್ಷಣಗಳು

**ಖಚರ** – ಆಕಾಶಗಾಮಿನಿ ವಿದ್ಯೆಯ ಸಹಾಯದಿಂದ ಆಕಾಶದಲ್ಲಿ ಸಂಚರಿಸುವ ವಿದ್ಯಾಧರ

**ಖಡ್ಗರತ್ನ** – ಭರತ ಚಕ್ರವರ್ತಿಯ ಏಳು ಅಜೀವರತ್ನಗಳಲ್ಲಿ ಒಂದು

**ಖಳಕರ್ಮಾಷ್ಟಕ** – ಎಂಟು ಬಗೆಯ ದುಷ್ಟಕರ್ಮಗಳಲ್ಲಿ ಒಂದು

**ಗಂಧಕುಟಿ** – ಶ್ರೀಗಂಧದ ಕುಟೀರ, ಸಮವಸರಣದಲ್ಲಿ ಅರ್ಹಂತನು ಕುಳಿತುಕೊಳ್ಳುವ ಮಂಟಪ

**ಗಂಧಿಲವಿಷಯ** – ಪಶ್ಚಿಮ ವಿದೇಹದ ಸೀತೋದಾ ನದಿಯ ಉತ್ತರದ ನಾಡು

**ಗಗನಚಾರಣ** – ಆಕಾಶದಲ್ಲಿ ಸಂಚರಿಸುವ ಋಷಿದ್ವಯ

**ಗಗನಚಾರಣ ಋದ್ಧಿ** – ಆಕಾಶದಲ್ಲಿ ಸಂಚರಿಸುವ ಸಾಮರ್ಥ್ಯ

**ಗಗನಪ್ರಚಾರ** – ಆಕಾಶ ಸಂಚಾರ

**ಗಗನವಲ್ಲಭ** – ವಿಜಯಾರ್ಧಪರ್ವತದ ಉತ್ತರಶ್ರೇಣಿಯ ವಿದ್ಯಾಧರರ ರಾಜಧಾನಿ

**ಗಜರತ್ನ** – ವಿಜಯಾರ್ಧಪರ್ವತದಲ್ಲಿ ಹುಟ್ಟಿದ ವಿಜಯಾರ್ಧಪರ್ವತದಲ್ಲಿ ಹುಟ್ಟಿದ್ದು ಚಕ್ರವರ್ತಿಯ ಹದಿನಾಲ್ಕು ರತ್ನಗಳಲ್ಲಿ ಒಂದು

**ಗಣಗ್ರಹಣ** – ನಲವತ್ತೆಂಟು ದೀಕ್ಷಾನ್ವಯ ಕ್ರಿಯೆಗಳಲ್ಲಿ ಒಂದು

**ಗಣಧರ** – ಶ್ರೇಷ್ಠ ಜ್ಞಾನ ಧರ್ಶನ ಧರ್ಮಗಳನ್ನು ಹೊಂದಿದವನು, ತೀರ್ಥಂಕರನ ಶಿಷ್ಯರ ಗುಂಪಿನ ಮುಂದಾಳು

**ಗಣಧರದೇವ** – ತೀರ್ಥಂಕರನ ಮುಖ್ಯ ಶಿಷ್ಯರಲ್ಲಿ ಒಬ್ಬ

**ಗಣನಾಯಕ** – ಮುನಿ ಆರ್ಯಿಕಾ ಶ್ರಾವಕ ಶ್ರಾವಿಕಾ – ಈ ನಾಲ್ಕು ಸಂಘಗಳ ಅಧಿಪತಿ

**ಗಣಿನಿ** – ಮುಖ್ಯ ಆರ್ಯಿಕೆ

**ಗಣೋಪಗ್ರಹಣ** – ಒಂದು ಗರ್ಭಾನ್ವಯಕ್ರಿಯೆ, ಗಣವನ್ನು ಸೇರುವುದು

**ಗತಿಚತುಷ್ಟಯ** – ಜೀವದ ನಾಲ್ಕು ಸ್ವರೂಪಗಳು: ನಾರಕ, ತಿರ್ಯಕ್, ಮಾನುಷ, ದೇವ

**ಗರ್ಭಶೋಧನ** – ಇಂದ್ರನು ಕಳುಹಿಸುವ ದೇವವನಿತೆಯರು ಹುಟ್ಟಲಿರುವ ತೀರ್ಥಂಕರನಿಗೆ ಕರ್ಮಮಲಗಳ ಲೇಪವಾಗದಂತೆ ಮಾಡುವ ಜಿನಮಾತೆಯ ಗರ್ಭ ಶುದ್ಧೀಕರಣ

**ಗರ್ಭಾನ್ವಯಕ್ರಿಯೆ** – ತೀರ್ಥಂಕರನು ಭೂಮಿಯಲ್ಲಿ ಅವತರಿಸುವುದರಿಂದ ಹಿಡಿದು ನಿರ್ವಾಣಪರ್ಯಂತ ಮಾಡುವ ಐವತ್ಮೂರು ಕ್ರಿಯೆಗಳು: ದಾನ, ಆಧಾನ, ಪ್ರೀತಿ, ಸುಪ್ರೀತಿ, ಧೃತಿ, ಮೋದ, ಪ್ರಿಯೋದ್ಭವ, ನಾಮಕರ್ಮ, ಬಹಿರ್ಯಾನ, ನಿಷದ್ಯಾ, ಅನ್ನಪ್ರಾಶನ, ವ್ಯುಷ್ಟಿ, ಕೇಶವಾಪ, ಲಿಪಿ ಸಂಖ್ಯಾನ ಸಂಗ್ರಹ, ಉಪನಯನ, ವ್ರತಚರ್ಯಾ, ವ್ರತಾವತರಣ, ವಿವಾಹ, ವರ್ಣಲಾಭ, ಕುಲಚರ್ಯಾ, ಗೃಹೀಶಿತ್ವ, ಪ್ರಶಾಂತಿ, ಗೃಹತ್ಯಾಗ, ದೀಕ್ಷಾದ್ಯ, ಜಿನರೂಪತಾ, ಮೌನಾಧ್ಯಯನವೃತ್ತಿ, ತೀರ್ಥಕರತ್ವ ಭಾವನಾ, ಗುರುಸ್ಥಾನಾಭ್ಯುಪಗಮ, ಗಣೋಪಗ್ರಹಣ, ಸ್ವಗುರುಸ್ಥಾನ ಸಂಕ್ರಾಂತಿ, ನಿಸ್ಸಂಗತ್ವಭಾವನಾ, ಯೋಗ ನಿರ್ವಾಣಸಂಪ್ರಾಪ್ತಿ, ಯೋಗನಿರ್ವಾಣ ಸಾಧನ, ಇಂದ್ರೋಪಪಾದ, ಅಭಿಷೇಕ, ವಿಧಿದಾನ, ಸುಖೋದಯ, ಇಂದ್ರತ್ಯಾಗ, ಅವತಾರ, ಹಿರಣ್ಯಗರ್ಭೋತ್ಕೃಷ್ಟಜನ್ಮತಾ, ಮಂದರಾದ್ರೀಂದ್ರಾಭಿಷೇಕ, ಗುರುಪೂಜೋಪಲಂಭನ, ಯೌವರಾಜ್ಯ, ಸ್ವರಾಜ್ಯ, ಚಕ್ರಲಾಭ, ದಿಗ್ವಿಜಯ, ಚಕ್ರಾಭಿಷೇಕ, ಸಾಮ್ರಾಜ್ಯ, ಪರಿನಿಷ್ಕ್ರಮಣ, ಯೋಗಸಮ್ಮಹ, ಆರ್ಹಂತ್ಯ, ವಿಹಾರ ಯೋಗತ್ಯಾಗ, ಅಗ್ರನಿರ್ವೃತಿ ಎಂಬ ಐವತ್ತಮೂರು ಗರ್ಭಾದಿನಿರ್ವಾಣ ಪರ್ಯಂತಂಗಳಾದ ಕ್ರಿಯೆಗಳು

**ಗರ್ಭಾವತರಣ** – ಜಿನಮಾತೆಯ ಗರ್ಭದಲ್ಲಿ ಜಿನನ ಆಗಮನ

**ಗುಣಂಗಳ್** – ಕ್ಷಾಯಿಕ ಸಮ್ಯಕ್ತ್ವ, ಅನಂತಜ್ಞಾನ, ಅನಂತದರ್ಶನ, ಅನಂತವೀರ್ಯ, ಅನಂತಸುಖ, ಸೂಕ್ಷ್ಮತ್ವ, ಅಗುರುಲಘುತ್ವ, ಅವ್ಯಾಬಾಧತ್ವ ಎಂಬ ಸಿದ್ಧರ ಎಂಟು ಗುಣಗಳು

**ಗುಣಮೇೞು** – ದಾತೃವಿನ ಏೞು ಗುಣಗಳು: ಶ್ರದ್ಧೆ ಶಕ್ತಿ ಭಕ್ತಿ ವಿಜ್ಞಾನ ಅಲುಬ್ಧತಾ ಕ್ಷಮಾ ತ್ಯಾಗ

**ಗುಣವ್ರತ** – ಶೀಲವ್ರತ, ಶ್ರಾವಕರು ಆಚರಿಸ ಬೇಕಾದ ಮೂರು ವ್ರತಗಳು: ದಿಗ್ವ್ರತ, ದೇಶವ್ರತ ಮತ್ತು ಅನರ್ಥದಂಡವ್ರತ

**ಗುಣಶ್ರೇಣಿ** – ಗುಣಗಳ ನಿಚ್ಚಣಿಗೆ

**ಗುಣಸಂಕ್ರಮಣ** – ಪ್ರತಿಕ್ಷಣವೂ ಪ್ರಕೃತಿಯ ಪರಮಾಣುಗಳು ಗುಣಿತರೂಪದಿಂದ ಬದಲಾವಣೆಗೊಂಡು ಬೇರೆ ರೂಪವನ್ನು ಧರಿಸುವುದು

**ಗುಪ್ತಿ** – ತ್ರಿವಿಧಗುಪ್ತಿ, ಮನೋವಾಕ್ಕಾಯ ಗಳನ್ನು ನಿಗ್ರಹಿಸುವುದು

**ಗುಪ್ತಿಗುಪ್ತ** – ತ್ರಿವಿಧಗುಪ್ತಿಗಳಿಂದ ರಕ್ಷಿತ ನಾದವನು

**ಗುರುಪಂಚಕ** – ಪಂಚಪರಮೇಷ್ಠಿಗಳು

**ಗುರುಪೂಜೋಪಲಂಭನ** – ಐವತ್ತಮೂರು ಗರ್ಭಾನ್ವಯಕ್ರಿಯೆಗಳಲ್ಲಿ ಒಂದು; ದೇವತೆಗಳಿಂದ ಪೂಜೆಗೊಳ್ಳುವಿಕೆ

**ಗುರುಸ್ಥಾನಾಭ್ಯುಪಗಮ** – ಒಂದು ಗರ್ಭಾನ್ವಯ ಕ್ರಿಯೆ, ಗುರುವಿನ ಬಳಿ ಹೋಗುವುದು

**ಗುರುಪೂಜೋಪಲಂಭನ** – ಒಂದು ಗರ್ಭಾನ್ವಯಕ್ರಿಯೆ, ದೇವತೆಗಳಿಂದ ಪೂಜೆಗೊಳ್ಳುವಿಕೆ

**ಗೃಹಕೂಟ** – ಭರತ ಚಕ್ರವರ್ತಿಯ ಮಳೆಗಾಲದ ವಾಸದ ಮನೆ

**ಗೃಹತ್ಯಾಗ** – ಒಂದು ಗರ್ಭಾನ್ವಯಕ್ರಿಯೆ, ಆತ್ಮಕಲ್ಯಾಣಕ್ಕಾಗಿ ತನ್ನ ಮನೆಯನ್ನು ತೊರೆಯುವುದು

**ಗೃಹಪತಿ** – ಗೃಹಪತಿರತ್ನನಾದ ಕಾಮವೃಷ್ಟಿ

**ಗೃಹಪತಿರತ್ನ** – ಚಕ್ರವರ್ತಿಗೆ ತಾವಾಗಿ ದೊರೆಯುವ ಜೀವರತ್ನಗಳಲ್ಲಿ ಒಂದು

**ಗೃಹಮಹಿಜಾತ** – ಹತ್ತು ಕಲ್ಪಕುಜಗಳಲ್ಲಿ ಒಂದು, ಬೇಕಾದ ಮನೆಯನ್ನು ನೀಡುವ ವೃಕ್ಷ

**ಗೃಹೀಶಿತ್ವ** – ಒಂದು ಗರ್ಭಾನ್ವಯಕ್ರಿಯೆ, ತನ್ನ ಜ್ಞಾನದಿಂದ ಆರ್ಹ ಎನ್ನಿಸಿಕೊಳ್ಳುವುದು

**ಗ್ರೈವೇಯಕ** – ಹದಿನಾರನೆಯ ಸ್ವರ್ಗದ ಮೇಲೆ ಒಂಬತ್ತು ಗ್ರೈವೇಯಕಗಳಿರುತ್ತವೆ

**ಘನಾನಿಲ** – ಇದಕ್ಕೆ ಅಂಬುವಾತ ಜಲವಾತ ಎಂಬ ಹೆಸರುಗಳೂ ಇವೆ; ಇದಕ್ಕೆ ತನುವಾತವು ಆಧರ, ಬಣ್ಣ ಹಸುರು

**ಘನೋದಧಿ** – ಇದಕ್ಕೆ ಘನವಾತವೆಂಬ ಹೆಸರೂ ಇದೆ; ಅಂಬುವಾತ ಇದಕ್ಕೆ ಆಧರ, ಬಣ್ಣ ಗೋಮೂತ್ರದ್ದು

**ಘಾತಿ** – ಜ್ಞಾನ ಮುಂತಾದ ಗುಣಗಳನ್ನು ನಾಶಗೊಳಿಸುವ ಕರ್ಮಗಳು; ಜ್ಞಾನಾವರಣೀಯ ದರ್ಶನಾವರಣೀಯ ಮೋಹನೀಯ ಮತ್ತು ಅಂತರಾಯ ಎಂಬ ನಾಲ್ಕು ವಿಧ

**ಘಾತಿಚತುಷ್ಕ** – ಮೇಲಿನದೇ

**ಘಾತಿಚತುಷ್ಟಯ** – ಮೇಲಿನದೇ

**ಚಂಡವೇಗ** – ಭರತ ಚಕ್ರವರ್ತಿಯ ಏಳು ಅಜೀವರತ್ನಗಳಲ್ಲೊಂದಾದ ದಂಡರತ್ನದ ಹೆಸರು

**ಚಕ್ರರತ್ನ** – ಚಕ್ರವರ್ತಿಯಾಗುವವನ ಆಯುಧಾಗಾರದಲ್ಲಿ ಹುಟ್ಟುವ ಚಕ್ರಾಯುಧ

**ಚಕ್ರಲಾಭ** – ಐವತ್ತಮೂರು ಗರ್ಭಾನ್ವಯ ಕ್ರಿಯೆಗಳಲ್ಲಿ ಒಂದು, ಚಕ್ರರತ್ನವು ದೊರೆಯುವುದು

**ಚಕ್ರಾಭಿಷೇಕ** – ಐವತ್ತಮೂರು ಗರ್ಭಾನ್ವಯ ಕ್ರಿಯೆಗಳಲ್ಲಿ ಒಂದು, ಎಲ್ಲ ರಾಜರಿಂದ ಪೂಜಿತನಾಗಿ ಪುನಃ ಚಕ್ರದ ಅಭಿಷೇಕ ಮಾಡುವುದು

**ಚಕ್ರೇಶ್ವರ** – ಚಕ್ರರತ್ನದ ಒಡೆಯ

**ಚಕ್ರೇಶ್ವರಿ** – ಒಬ್ಬ ಯಕ್ಷಿ, ಆದಿನಾಥನ ಶಾಸನದೇವತೆ

**ಚಕ್ರೋದ್ಭವ** – ಚಕ್ರವರ್ತಿಯ ಆಯುಧಾಗಾರ ದಲ್ಲಿ ಚಕ್ರರತ್ನದ ಉದಯ

**ಚತುರಾನನತ್ವ** – ನಾಲ್ಕು ಮುಖಗಳಿಂದ ಕೂಡಿರುವುದು

**ಚತುರಿಂದ್ರಿಯ** – ಸ್ಪರ್ಶನ, ರಸನ, ಘ್ರಾಣ ಮತ್ತು ಚಕ್ಷುರಿಂದ್ರಿಗಳುಳ್ಳ ಜೀವಗಳು, ನೊಣ ದುಂಬಿ ಇತ್ಯಾದಿ

**ಚತುರ್ಜ್ಞಾನ** – ಪಂಚವಿಧಜ್ಞಾನಗಳಲ್ಲಿ ನಾಲ್ಕನೆಯದು, ಮನಃಪರ್ಯಯಜ್ಞಾನ

**ಚತುರ್ಗತಿ** – ದೇವ, ಮಾನವ, ತಿರ್ಯಕ್, ನಾರಕ ಎಂಬ ನಾಲ್ಕು ವಿಧವಾದ ಜನ್ಮಗಳು

**ಚತುರ್ಥಧ್ಯಾನ** – ಆರ್ತ, ರೌದ್ರ, ಧರ್ಮ, ಶುಕ್ಲ ಎಂಬ ನಾಲ್ಕು ಬಗೆಯ ಧ್ಯಾನಗಳಲ್ಲಿ ಕೊನೆಯದು

**ಚತುರ್ದಶಗುಣಸ್ಥಾನ** – ಮೋಹ ಹಾಗೂ ಯೋಗಗಳ ನಿಮಿತ್ತದಿಂದ ಆತ್ಮನ ದರ್ಶನ ಮತ್ತು ಚಾರಿತ್ರ ರೂಪ ಗುಣಗಳ

ಕ್ರಮವಿಕಾಸ ರೂಪ ಅವಸ್ಥೆಗಳು: ಮಿಥ್ಯಾದೃಷ್ಟಿ, ಸಾಸಾದನ, ಮಿಶ್ರ, ಅಸಂಯತ ಸಮ್ಯಗ್ದೃಷ್ಟಿ, ಸಂಯತಾಸಂಯತ, ಪ್ರಮತ್ತಸಂಯತ, ಅಪ್ರಮತ್ತಸಂಯತ, ಅಪೂರ್ವಕರಣ, ಅನಿವೃತ್ತಿಕರಣ, ಸೂಕ್ಷ್ಮಲೋಭ, ಉಪಶಾಂತಕಷಾಯ, ಕ್ಷೀಣಕಷಾಯ, ಸಯೋಗಕೇವಲಿ, ಅಯೋಗಕೇವಲಿ

**ಚತುರ್ದಶಪೂರ್ವ** – ಶ್ರುತಾಂಗವನ್ನು ವಿವರಿಸುವ ಉತ್ಪಾದ. ಆಗ್ರಾಯಣೀಯ, ವೀರ್ಯಪ್ರವಾದ, ಅಸ್ತಿನಾಸ್ತಿಪ್ರವಾದ, ಜ್ಞಾನಪ್ರವಾದ, ಸತ್ಯಪ್ರವಾದ, ಆತ್ಮಪ್ರವಾದ, ಕರ್ಮಪ್ರವಾದ, ಪ್ರತ್ಯಾಖ್ಯಾನ, ವಿದ್ಯಾನುವಾದ, ಕಲ್ಯಾಣ, ಪ್ರಾಣಾವಾಯ, ಕ್ರಿಯಾವಿಶಾಲ, ಲೋಕಬಿಂದುಸಾರ ಎಂಬ ಹದಿನಾಲ್ಕು ವಿಭಾಗಗಳು

**ಚತುರ್ನಿಕಾಯಾಮರ** – ಭವನವಾಸಿ, ವ್ಯಂತರ, ಜ್ಯೋತಿಷ ಮತ್ತು ಕಲ್ಪವಾಸಿಗಳೆಂಬ ನಾಲ್ಕು ಪ್ರಕಾರದ ದೇವತೆಗಳು

**ಚತುರ್ಮುಖ** – ಮಹಾಸಾಮಂತರು ಮಾಡುವ ಜಿನಪೂಜೆ

**ಚತುರ್ವಿಧ** – [ದಾನದ] ನಾಲ್ಕು ಬಗೆ: ಆಹಾರ, ಅಭಯ, ಔಷಧ ಮತ್ತು ಶಾಸ್ತ್ರ

**ಚತುರ್ವಿಧದೇವನಿಕಾಯ** – ಭವನವಾಸಿ, ವ್ಯಂತರ, ಜ್ಯೋತಿಷ್ಯ ಮತ್ತು ಕಲ್ಪವಾಸಿಗಳೆಂಬ ನಾಲ್ಕು ಪ್ರಕಾರದ ದೇವತೆಗಳ ಸಮೂಹ

**ಚತುರ್ವಿಧಶುಕ್ಲಧ್ಯಾನ** – ಪೃಥಕ್ತ್ವವಿತರ್ಕವಿಚಾರ, ಏಕತ್ವವಿತರ್ಕವಿಚಾರ, ಸೂಕ್ಷ್ಮಕ್ರಿಯಾ ಪ್ರತಿಪಾತಿ, ವ್ಯುಪರತಕ್ರಿಯಾನಿವೃತ್ತಿ ಎಂಬ ನಾಲ್ಕು ಬಗೆಯ ಶುಕ್ಲಧ್ಯಾನಗಳು

**ಚತುರ್ವಿಧಾಹಾರ** – ಲೇಪ್ಯ, ಓಜ, ಕಬಳ, ಮಾನಸ ಎಂಬ ಆಹಾರಗಳು

**ಚತುರ್ವಿಧಾಹಾರಶರೀರಪ್ರತ್ಯಾಖ್ಯಾನ** – ನಾಲ್ಕು ಬಗೆಯ ಆಹಾರಗಳನ್ನೂ ಶರೀರದ ಅಭಿಮಾನವನ್ನೂ ತೊರೆಯುವುದು

**ಚತುಷ್ಷಷ್ಟಿಲಕ್ಷಣ** – ಪುರುಷನ ಅರುವತ್ತನಾಲ್ಕು ಶುಭಚಿಹ್ನಗಳು

**ಚತುಸ್ತ್ರಿಂಶದತಿಶಯ** – ಅರ್ಹಂತನಿಗೆ ಒದಗುವ ಮೂವತ್ತನಾಲ್ಕು ಅತಿಶಯಗಳು ಅಥವಾ ವಿಶೇಷಗಳು: ನಿಸ್ವೇದತೆ, ನಿರ್ಮಲ ಶರೀರ, ಹಾಲಿನಂತೆ ಬಿಳಿರಕ್ತ, ವಜ್ರವೃಷಭ ನಾರಾಚನಸಂಹನನ, ಸಮಚತುರಸ್ರ ಶರೀರಸಂಸ್ಥಾನ, ಅನುಪಮರೂಪ, ಸುಗಂಧದ ಉಸಿರು, ಸಾವಿರದೆಂಟು ಉತ್ತಮ ಲಕ್ಷಣಗಳು, ಅನಂತಬಲ ಹಾಗೂ ಹಿತಮಿತಮಧುರ ಭಾಷಣ ಎಂಬ ಹುಟ್ಟಿನ ಹತ್ತು ವಿಶೇಷಗಳು; ಸುತ್ತ ನೂರು ಯೋಜನ ಸುಭಿಕ್ಷೆ, ಹಿಂಸೆಯ ಅಭಾವ, ಆಕಾಶಗಮನ, ಭೋಜನರಾಹಿತ್ಯ, ಉಪಸರ್ಗರಾಹಿತ್ಯ, ಚತುರ್ದಿಕ್ಕುಗಳಲ್ಲಿ ಅಭಿಮುಖತೆ, ನೆರಳಿಲ್ಲದ ದೇಹ, ರೆಪ್ಪೆ ಮಿಟುಕಿಸದ ಕಣ್ಣು, ಸರ್ವವಿದ್ಯಾ ಪ್ರಭುತ್ವ, ನಖರೋಮಗಳ ಸಮಾನತೆ ಹಾಗೂ ಸರ್ವಭಾಷಾಮಯವಾದ ದಿವ್ಯಧ್ವನಿ ಎಂಬ ಕೇವಲಜ್ಞಾನದಿಂದ ಬರುವ ಹನ್ನೊಂದು ವಿಶೇಷಗಳು; ಸುತ್ತಲೂ ಹೂಹಣ್ಣು ಸಮೃದ್ಧಿ, ಸುಖದಾಯಕವಾದ ಗಾಳಿ, ಪ್ರಾಣಿಗಳ ಮೈತ್ರಿ, ಸ್ವಚ್ಛವಾದ ಕನ್ನಡಿಯಂತಹ ಭೂಮಿ, ಸುಗಂಧ ಜಲವೃಷ್ಟಿ, ಸಮೃದ್ಧ ಸಸ್ಯಗಳ ಸೃಷ್ಟಿ, ಸಕಲಜೀವರ ನಿತ್ಯ ಆನಂದ, ತಂಗಾಳಿ, ಜಲಸಮೃದ್ಧಿ, ನಿರ್ಮಲ ಆಕಾಶ, ಸಮಸ್ತಜೀವರ ರೋಗಮುಕ್ತಿ, ಸಮಸ್ತ ಜೀವ ರೋಗರಾಹಿತ್ಯ ಮತ್ತು ಯಕ್ಷೇಂದ್ರನ ಧರ್ಮಚಕ್ರಗಳು ಎಲ್ಲರಿಗೂ ಕಾಣುವುದು ಎಂಬ ಹದಿಮೂರು ದೇವಕೃತ ವಿಶೇಷಗಳು

**ಚತುಸ್ಸಂಜ್ವಲನ** – ಕ್ರೋಧ, ಮಾನ, ಮಾಯಾ, ಲೋಭಗಳೆಂಬ ನಾಲ್ಕು ಕಷಾಯಗಳಿರುವ ಸ್ಥಿತಿ

**ಚತುರ್ಯೇವತತ್ವಾನಿ** – ಪೃಥ್ವಿ, ಅಪ್, ತೇಜ, ವಾಯು ಎಂಬ ನಾಲ್ಕು ತತ್ವಗಳು

**ಚರಮತನು** – ಮೋಕ್ಷಕ್ಕೆ ಹೋಗುವವನು

**ಚರಮದೇಹಧಾರಿ** – ಚರಮತನು

**ಚರಿಗೆ** – ಮುನಿಗಳ ಭಿಕ್ಷೆ

**ಚರಿಗೆವರ್** – ಮುನಿಗಳು ಭಿಕ್ಷೆಗೆ ಬರುವುದು

**ಚರಿಗೆವೊಗು** – ಮುನಿಗಳು ಭಿಕ್ಷೆಗಾಗಿ ಮನೆಯನ್ನು ಹೊಗು

**ಚರ್ಮರತ್ನ** – ಶ್ರೀಗೃಹದಲ್ಲಿ ಹುಟ್ಟಿದ ಚಕ್ರವರ್ತಿಯ ರತ್ನಗಳಲ್ಲಿ ಒಂದು

**ಚರ್ಯಾಪರ್ಯಟನ** – ಚರ್ಯೆಗಾಗಿ ಮಾಡುವ ತಿರುಗಾಟ

**ಚರ್ಯಾಮಾರ್ಗ** – ಚರಿಗೆಗಾಗಿ ಹೋಗುವ ಉದ್ದೇಶ

**ಚಾರಣಗಣ** – ಗಗನಗಾಮಿ ಸಂಚಾರಿಯಾಗಿ ಧರ್ಮೋಪದೇಶ ಮಾಡುವ ಅವಧಿ ಜ್ಞಾನವುಳ್ಳ ಮುನಿಗಳ ಸಮೂಹ,

**ಚಾರಣಯುಗಳ** – ಗಗನಗಾಮಿ ಮುನಿಗಳ ಜೋಡಿ

**ಚಿಂತಾಜನನಿ** – ಭರತ ಚಕ್ರವರ್ತಿಯ ಏಳು ಅಜೀವರತ್ನಗಳಲ್ಲೊಂದಾದ ಕಾಕಿಣೀ ರತ್ನದ ಹೆಸರು

**ಚಿತ್ತಜ** – ಬಾಹುಬಲಿಯ ಅನೇಕ ಹೆಸರು ಗಳಲ್ಲಿ ಒಂದು

**ಚಿತ್ತಭವ** – ಬಾಹುಬಲಿಯ ಒಂದು ಹೆಸರು

**ಚಿತ್ರೆ** – ಒಬ್ಬ ದೇವತಾಸ್ತ್ರೀ

**ಚೂಡಾಮಣಿ** – ಭರತ ಚಕ್ರವರ್ತಿಯ ಏಳು ಅಜೀವರತ್ನಗಳಲ್ಲೊಂದಾದ ಮಣಿರತ್ನದ ಹೆಸರು

**ಚೂಳಿಕೆ** – ಜಲಗತ, ಸ್ಥಲಗತ, ಮಾಯಾಗತ, ರೂಪಗತ ಮತ್ತು ಗಗನಗತ ಎಂಬ ಐದು ಸೂತ್ರಗಳು

**ಛತ್ರರತ್ನ** – ಭರತ ಚಕ್ರವರ್ತಿಯ ಏಳು ಅಜೀವರತ್ನಗಳಲ್ಲಿ ಒಂದು

**ಛದೋಪಸ್ಥಾಪನಾ** – ಪ್ರಮಾದದಿಂದ ಹಿಂಸೆಯೇ ಮೊದಲಾದ ದೋಷ ಗಳುಂಟಾಗಿದ್ದರೆ ಆಗಮಾನುಸಾರ ಪ್ರಾಯಶ್ಚಿತ್ತ ಮಾಡಿಕೊಂಡು ಮತ್ತೆ ಅಹಿಂಸೆ ಮುಂತಾದ ವ್ರತಗಳನ್ನು ತೊಡುವುದು

**ಛದ್ಮಸ್ಥಗುಣಸ್ಥಾನ** – ಜ್ಞಾನಾವರಣ ಮತ್ತು ದರ್ಶನಾವರಣಗಳು ಛದ್ಮ, ಅದರಲ್ಲಿರು ವವರು ಛದ್ಮಸ್ಥ; ರಿಂದ ಗುಣಸ್ಥಾನದ ವರೆಗಿನವರು ಸರಾಗಛದ್ಮಸ್ಥರು, ರಿಂದ ರವರೆಗಿನವರು ವೀತರಾಗ ಛದ್ಮಸ್ಥರು

**ಜಂಬೂದ್ವೀಪ** – ಜಂಬೂವೃಕ್ಷಗಳಿಂದ ತುಂಬಿದ ದ್ವೀಪ, ಒಂದು ಲಕ್ಷ ಯೋಜನ ವಿಸ್ತಾರವುಳ್ಳುದು

**ಜಗತ್ತಯಗುರು** – ಮೂರುಲೋಕಗಳ ಗುರು, ಆದಿದೇವ

**ಜಗತ್‌ತ್ರಯ** – ಅಧೋಲೋಕ ಮಧ್ಯಲೋಕ ಊರ್ಧ್ವಲೋಕ

**ಜಗದ್ಗುರು** – ಆದಿ ತೀರ್ಥಂಕರ

**ಜಘನ್ಯಪಾತ್ರ** – ದಾನಸ್ವೀಕಾರಕ್ಕೆ ಅರ್ಹ ರಾದವರಲ್ಲಿ ಕನಿಷ್ಠನಾದವನು

**ಜಘನ್ಯಭೋಗಭೂಮಿಸ್ಥಿತಿ** – ಮೂರನೆಯ ಕಾಲದ ಆರಂಭದಲ್ಲಿ ಆರ್ಯಾಖಂಡದಲ್ಲಿ ಇದ್ದ ಸ್ಥಿತಿ; ಆಗ ಅಲ್ಲಿ ಜನರ ಆಯುಸ್ಸು ಒಂದು ಪಲ್ಯ, ಶರೀರದ ಎತ್ತರ ಒಂದು ಕ್ರೋಶ ಮತ್ತು ಎರಡು ದಿನಕ್ಕೊಮ್ಮೆ ಆಹಾರಸೇವನೆ

**ಜನನೀಚರ** – ಹಿಂದಿನ ಜನ್ಮದಲ್ಲಿ ತಾಯಿ ಯಾಗಿದ್ದವನು

**ಜನ್ಮಾಭಿಷವಣ** – ಜಿನನ ಜನ್ಮಾಭಿಷೇಕ ಕಲ್ಯಾಣ

**ಜನ್ಮಾಭಿಷೇಕ** – ಜಿನಶಿಶುವಿಗೆ ಸೌಧರ್ಮೇಂದ್ರನು ಮೇರುಪರ್ವತದ ಮೇಲುಗಡೆಯಲ್ಲಿ ನಡೆಸುವ ಅಭಿಷೇಕ

**ಜನ್ಮಾಭಿಷೇಕ ಸಿಂಹಾಸನ** – ಪಾಂಡುಕವನದ ಈಶಾನ್ಯದಿಕ್ಕಿನಲ್ಲಿರುವ ಅರ್ಧಚಂದ್ರಾಕಾರ ವಾದ ಪಾಂಡುಕಶಿಲೆಯ ಮೇಲಿನ

ಮೂರು ಸಿಂಹಾಸನಗಳಲ್ಲಿ ಮಧ್ಯದ್ದರ ಮೇಲೆ ಜಿನಶಿಶುವನ್ನು ಮಲಗಿಸಿ ಅಭಿಷೇಕ ಮಾಡುವ ಸ್ಥಳ

**ಜಾತರೂಪಧರ** – ದಿಗಂಬರಮುನಿ

**ಜಾತಿವಿದ್ಯೆ** – ತಾಯಿಯಿಂದ ಬಂದ ವಿದ್ಯೆ

**ಜಾತಿಸ್ಮರ** – ಹಿಂದಿನ ಜನ್ಮದ ನೆನಪುಳ್ಳವನು

**ಜಿನಕಲ್ಪಿತ** – ಜಿನನು ಕಲ್ಪಿಸಿಕೊಂಡದ್ದು, ಒಂದು ಆಚರಣೆಯ ಹೆಸರು

**ಜಿನಗುಣಸಂಪತ್ತಿ** – ಭಾವನೆಗಳು, ಕಲ್ಯಾಣಗಳು, ಪ್ರಾತಿಹಾರ್ಯಗಳು, ಹಾಗೂ ಅತಿಶಯಗಳು – ಹೀಗೆ ಗುಣಗಳಿಗೆ ದಿನಗಳು ಮಾಡುವ ಉಪವಾಸವ್ರತ

**ಜಿನನಿಕೇತ** – ಜಿನಾಲಯ

**ಜಿನಭವನ** – ಜಿನಾಲಯ

**ಜಿನಮತ** – ಜೈನಧರ್ಮ

**ಜಿನಮತಾರುಚಿ** – [ಜಿನಮತ + ಅರುಚಿ] ಜೈನಮತದ ಬಗೆಗಿದ ದ್ವೇಷ

**ಜಿನರೂಪತಾ** – ಐವತ್ತಮೂರು ಗರ್ಭಾನ್ವಯ ಕ್ರಿಯೆಗಳಲ್ಲಿ ಒಂದು, ದಿಗಂಬರನಾಗುವುದು

**ಜಿನಸಪರ್ಯೆ** – ಜಿನಪೂಜೆ

**ಜಿನಸವನ** – ಜಿನನ ಅಭಿಷೇಕ

**ಜಿನೇಂದ್ರ** – ದರ್ಶನಮೋಹನೀಯ ಕರ್ಮಗಳನ್ನು ಗೆದ್ದು ಸಮ್ಯಕ್ ದೃಷ್ಟಿಯ ಶ್ರಾವಕ ಮುನಿ ಮತ್ತು ಗಣಧರರು ಜಿನರು, ಅವರಲ್ಲಿ ಶ್ರೇಷ್ಠನಾದ ತೀರ್ಥಂಕರನೇ ಜಿನೇಂದ್ರ

**ಜಿನೇಂದ್ರ ಮಹಿಮೆ** – ಜಿನೇಂದ್ರನ ಪಂಚಕಲ್ಯಾಣಪೂಜೆ

**ಜಿನೇಶ್ವರರೂಪ** – ಜಿನರೂಪ

**ಜೀವತತ್ತ್ವ** – ಏಳು ತತ್ವಗಳಲ್ಲಿ ಮೊದಲನೆಯದು

**ಜೀವಸಿದ್ಧಿ** – ಜೀವನ ಅಸ್ತಿತ್ವವನ್ನು ಸಾಧಾರವಾಗಿ ಪ್ರತಿಪಾದಿಸುವುದು

**ಜೀವಾಜೀವರತ್ನ** – ಅಜೀವರತ್ನಗಳು ಹಾಗೂ ಜೀವರತ್ನಗಳು – ಒಟ್ಟು ರತ್ನಗಳು (ಚಕ್ರ .. .. ಛತ್ರ .. .. ಖಡ್ಗ .. .. ದಂಡ .. .. ಚರ್ಮ .. .. ಮಣಿ .. .. ಕಾಕಿಣೀ .. .. ಗೃಹಪತಿ .. .. ಸೇನಾನಿ .. .. ತಕ್ಷಕ .. .. ಪುರೋಹಿತ .. .. ಯಾಗಹಸ್ತಿ .. .. ತುರಗ .. .. ಸ್ತ್ರೀ .. .. ಎಂದಿಂತು ಜೀವಾಜೀವರತ್ನಂ)

**ಜೀವಾಭಾವ** – ಜೀವವೆಂಬ ದ್ರವ್ಯದ ಅನಸ್ತಿತ್ವ; ಪೃಥ್ವಿ ಅಪ್ ತೇಜ ಮತ್ತು ವಾಯುಗಳ ಸಂಯೋಗದಿಂದ ಉಂಟಾಗುವುದು ಜೀವ ಎಂಬ ತಿಳಿವಳಿಕೆ

**ಜ್ಞಾನ** – ಸಮ್ಯಕ್‌ಜ್ಞಾನ, ಸಿದ್ಧಪರಮೇಷ್ಠಿಗಳ ಎಂಟು ಗುಣಗಳಲ್ಲಿ, ಒಂದು ಜೀವಾದಿಪದಾರ್ಥಗಳ ಸ್ವರೂಪವನ್ನು ಸ್ವಲ್ಪವೂ ಸಂಶಯವುಳಿಯದಂತೆ ತಿಳಿದುಕೊಳ್ಳುವುದು

**ಜ್ಞಾನಚತುಷ್ಟಯ** – ಮತಿ, ಶ್ರುತ, ಅವಧಿ ಮತ್ತು ಅನಃಪರ್ಯಾಯ ಎಂಬ ಜ್ಞಾನಗಳು

**ಜ್ಞಾನಧರ** – ಮತಿ, ಶ್ರುತಿ ಮತ್ತು ಅವಧಿ ಎಂಬ ಜ್ಞಾನತ್ರಯಗಳನ್ನು ಹೊಂದಿದವನು, ಪುರುದೇವ

**ಜ್ಞಾನಭೇದ** – ಐದು ಬಗೆಯ ಜ್ಞಾನಗಳು (ಅದು ಮತಿ ಶ್ರುತ ಅವಧಿ ಮನಃಪರ್ಯಾಯ ಕೇವಲ ಜ್ಞಾನಭೇದದಿಂ ಪಂಚವಿಧಂ)

**ಜ್ಞಾನಾವರಣಪಂಚಕ** – ಮತಿ ಶ್ರುತ ಅವಧಿ ಮನಃಪರ್ಯಾಯ ಮತ್ತ ಕೇವಲ ಎಂಬ ಐದು ಜ್ಞಾನಾವರಣಗಳು

**ಜ್ಯೋತಿರಂಗ** – ದಶವಿಧ ಕಲ್ಪವೃಕ್ಷಗಳಲ್ಲಿ ಒಂದು; ಬೆಳಕನ್ನು ನೀಡುವ ಕಲ್ಪವೃಕ್ಷ

**ಜ್ಯೋತಿರ್ಭೂಜಾತ** – ಜ್ಯೋತಿರ್ವೃಕ್ಷ

**ಜ್ಯೋತಿಶ್ಚೈತ್ಯಗೇಹ** – ಜ್ಯೋತಿಷ್ಕದೇವರ ವಿಮಾನಗಳಲ್ಲಿನ ಜಿನಮಂದಿರಗಳು

**ಜ್ಯೋತಿಷ್ಕ** – ಜ್ಯೋತಿರ್ವಾಸಿ ದೇವರು – ಚಂದ್ರ ಸೂರ್ಯ ಗ್ರಹ ನಕ್ಷತ್ರ ಮತ್ತು ಪ್ರಕೀರ್ಣಕ

**ಜ್ಯೋತಿಷ್ಕದೇವಿ** – ಜ್ಯೋತಿಷ್ಕವರ್ಗಕ್ಕೆ ಸೇರಿದ ದೇವತಾಸ್ತ್ರೀ

**ತಕ್ಷಕರತ್ನ** – ಜೀವರತ್ನಗಳಲ್ಲಿ ಒಂದಾದ ಸ್ಥಪತಿ. ವಾಸ್ತುಶಿಲ್ಪಿ

**ತನುವಾತ** – ಇದಕ್ಕೆ ಆಕಾಶ ಆಧಾರ

**ತಪಷ್ಷಟ್ಕ** – ತನ್ನೊಳಗಿಗೆ ಸಂಬಂಧಿಸಿದ ಆರು ಬಗೆಯ ತಪಸ್ಸುಗಳು

**ತಪೋಶುದ್ಧಿ** – ತಪಸ್ಸಿನ ಕಾಲದಲ್ಲಿ ಉಪಸರ್ಗ ಮತ್ತು ಪರೀಷಹಗಳನ್ನು ಸಹಿಸುವ ಸಾಮರ್ಥ್ಯ

**ತಮಿಸ್ರಗುಹೆ** – ಕತ್ತಲ ಗುಹೆ

**ತಮಃಪ್ರಭಾ** – ಆರನೆಯ ನರಕ

**ತಿರ್ಯಗ್ಜಾತಿ** – ಪ್ರಾಣಿಗಳಲ್ಲಿನ ಜೀವ

**ತಿರ್ಯಗ್ಲೋಕ** – ಸ್ವಯಂಭೂಸಮುದ್ರದ ವರೆಗಿನ ಅಸಂಖ್ಯಾತ ದ್ವೀಪ ಸಮುದ್ರ ಗಳಿಂದ ಕೂಡಿದ ಮಧ್ಯಮಲೋಕ

**ತೀರ್ಥಕರತ್ವ** – ತೀರ್ಥಂಕರನ ಸ್ಥಿತಿ

**ತೀರ್ಥಕರಭಾವನೆ** – ತೀರ್ಥಂಕರನಾಗಲು ಕಾರಣವಾಗುವ ಹದಿನಾರು ಮನೋವೃತ್ತಿಗಳು

**ತೀರ್ಥಕೃದ್ಭಾವನಾ** – ಒಂದು ಗರ್ಭಾನ್ವಯ ಕ್ರಿಯೆ, ತೀರ್ಥಂಕರತ್ವದ ಭಾವನೆಗಳನ್ನು ಅಭ್ಯಾಸ ಮಾಡುವುದು

**ತುಟಿತ** – ಬಹು ದೊಡ್ಡ ಕಾಲಪ್ರಮಾಣ

**ತುರಗರತ್ನ** – ಚಕ್ರವರ್ತಿಯ ಏಳು ಜೀವರತ್ನಗಳಲ್ಲಿ ಒಂದು

**ತುಷಿತ** – ಲೋಕಾಂತಿಕ ದೇವತೆಗಳಲ್ಲಿ ಒಂದು ಗುಂಪು

**ತೂರ್ಯಕ್ಷ್ಮಾಜ** – ದಿವ್ಯವಾದ್ಯಗಳನ್ನು ನೀಡುವ ಕಲ್ಪವೃಕ್ಷ

**ತ್ರಸ** – ಸಂಸಾರಿಜೀವಗಳ ಎರಡು ಬಗೆಗಳಲ್ಲಿ ಒಂದು. ಕರ್ಮದ ಉದಯದಿಂದ ಉಂಟಾಗುವ ಎರಡರಿಂದ ಐದು ಇಂದ್ರಿಯಗಳನ್ನು ಪಡೆದ ಜೀವ

**ತ್ರಸಕಾಯ** – ಚಲಿಸುವ ದೇಹವುಳ್ಳ ದ್ವೀಂದ್ರಿಯ, ತ್ರೀಂದ್ರಿಯ, ಚತುರಿಂದ್ರಿಯ ಮತ್ತು ಪಂಚೇಂದ್ರಿಯ ಪ್ರಾಣಿಗಳು

**ತ್ರಸಜೀವ** – ತ್ರಸಕಾಯ

**ತ್ರಸನಾಮ** – ಹದಿಮೂರು ಪ್ರಕೃತಿಗಳಲ್ಲಿ ಒಂದು, ತ್ರಸಜೀವವನ್ನು ಪಡೆಯುವಂತೆ ಮಾಡುವ ಕರ್ಮ

**ತ್ರಾಯಸ್ತ್ರಿಂಶ** – ಒಂದು ದೇವತಾವರ್ಗ

**ತ್ರಿಕರಣಶುದ್ಧಿ** – ಅಧಃಪ್ರವೃತ್ತಿ, ಅಪೂರ್ವ ಮತ್ತು ಅನಿವೃತ್ತಿಗಳ ಪರಿಶುದ್ಧತೆ

**ತ್ರಿಗುಪ್ತಿ** – ಕರ್ಮನಿರೋಧಕ್ಕೆ ಅಥವಾ ಸಂವರಸಾಧನಕ್ಕೆ ಅಗತ್ಯವಾದ ಆಚರಣೆಗಳು, ಮನವಚನಕಾಯಗಳನ್ನು ಬಾಹ್ಯಪ್ರವರ್ತನಕ್ಕೆ ಬಿಡದೆ ತಡೆಯುವುದು; ಇವು ಕ್ರಮವಾಗಿ ಮನೋಗುಪ್ತಿ, ವಚನಗುಪ್ತಿ ಮತ್ತು ಕಾಯಗುಪ್ತಿ

**ತ್ರಿಜ್ಞಾನಧರ** – ಮತಿ ಶ್ರುತಿ ಮತ್ತು ಅವಧಿಜ್ಞಾನಗಳನ್ನು ಪಡೆದವನು, ಜಿನೇಶ್ವರರಿಗೆ ಇವು ಮೂರೂ ಹುಟ್ಟನಿಂದಲೇ ಲಭ್ಯ

**ತ್ರಿಪಲ್ಯೋಪಮ** – ವ್ಯವಹಾರ, ಉದ್ಧಾರ, ಅದ್ಧಾ ಎಂಬ ಮೂರು ಪಲ್ಯಗಳಷ್ಟು ಅವಧಿ

**ತ್ರಿಮೂಢತಾನಿರಸನ** – ಲೋಕಮೂಢತೆ, ದೇವಮೂಢತೆ, ಪಾಖಂಡಿಮೂಢತೆ ಎಂಬ ಮೂರು ಬಗೆಯ ಮೌಢ್ಯಗಳನ್ನು ತೊರೆಯುವುದು; ಇದು ಸಮ್ಯಗ್ದರ್ಶನದ ಒಂದು ಅಂಗ

**ತ್ರಿವರ್ಗ** – ಧರ್ಮ, ಅರ್ಥ, ಕಾಮ

**ತ್ರಿವಿಧಕರಣ** – ಅಧಃಪ್ರವೃತ್ತಿಕರಣ, ಅಪೂರ್ವ ಕರಣ ಮತ್ತು ಅನಿವೃತ್ತಿಕರಣಗಳು

**ತ್ರಿಷಷ್ಟಿಶಲಾಕಾಪುರುಷರು** – ಅರುವತ್ತು ಮೂವರು ಆರಾಧನೀಯರು; ಇಪ್ಪತ್ತ ನಾಲ್ಕು ಮಂದಿ ತೀರ್ಥಂಕರರು: ವೃಷಭ, ಅಜಿತ, ಸಂಭವ, ಅಭಿನಂದನ, ಸುಮತಿ,

ಪದ್ಮಪ್ರಭ, ಸುಪಾರ್ಶ್ವ, ಚಂದ್ರಪ್ರಭ, ಪುಷ್ಪದಂತ, ಶೀತಲ, ಶ್ರೇಯಾಂಸ, ವಾಸುಪೂಜ್ಯ, ವಿಮಲ, ಅನಂತ, ಧರ್ಮ, ಶಾಂತಿ, ಕುಂಥು, ಅರ, ಮಲ್ಲಿನಾಥ, ಮುನಿಸುವ್ರತ, ನಮಿ, ನೇಮಿ, ಪಾರ್ಶ್ವನಾಥ, ವರ್ಧಮಾನ; ಹನ್ನೆರಡು ಮಂದಿ ಚಕ್ರವರ್ತಿಗಳು: ಭರತ, ಸಗರ, ಮಘವಾ, ಸನತ್ಕುಮಾರ, ಶಾಂತಿ, ಕುಂಥು, ಅರ, ಸುಭೌಮ, ಪದ್ಮ, ಹರಿಷೇಣ, ಜಯಸೇನ, ಬ್ರಹ್ಮದತ್ತ; ಒಂಬತ್ತು ಮಂದಿ ಬಲದೇವರು: ವಿಜಯ, ಅಚಲ, ಸುಧರ್ಮ, ಸುಪ್ರಭ, ಸುದರ್ಶನ, ನಂದಿ, ನಂದಿಮಿತ್ರ, ರಾಮ, ಪದ್ಮ; ಒಂಬತ್ತು ಮಂದಿ ವಾಸುದೇವರು: ತ್ರಿಪೃಷ್ಠ, ದ್ವಿಪೃಷ್ಠ, ಸ್ವಯಂಭೂ, ಪುರುಷೋತ್ತಮ, ಪುರುಷಸಿಂಹ, ಪುಂಡರೀಕ, ದತ್ತ, ಲಕ್ಷ್ಮಣ, ಕೃಷ್ಣ; ಒಂಬತ್ತು ಮಂದಿ ಪ್ರತಿವಾಸುದೇವರು: ಅಶ್ವಗ್ರೀವ, ತಾರಕ, ಮೇರುಕ, ಮಧುಕೈಟಭ, ನಿಸುಂಬ, ಬಲಿ, ಪ್ರಹರಣ, ರಾವಣ, ಜರಾಸಂಧ

**ತ್ರಿಸಂಧ್ಯಾಸೇವೆ** – ಬೆಳಿಗ್ಗೆ, ಮಧ್ಯಾಹ್ನ, ಸಂಜೆಗಳಲ್ಲಿ ಮಾಡುವ ಸೇವೆ

**ತ್ರಿಸಾಕ್ಷಿಕ** – ಆತ್ಮ, ಇಂದ್ರ, ಸಿದ್ಧರೆಂಬ ತ್ರಿಸಾಕ್ಷಿಗಳುಳ್ಳವನು

**ತ್ರೀಂದ್ರಿಯ** – ಸ್ಪರ್ಶನ ರಸನ ಘ್ರಾಣೇಂದ್ರಿಗಳುಳ್ಳ ಜೀವಗಳು, ಇರುವೆ ತಿಗಣೆ ಇತ್ಯಾದಿ

**ದಂಡಕ್ರಿಯಾ** – ಕೇವಲಿಯ ಆತ್ಮವು ಮೂಲಶರೀರದಿಂದ ಮೂರರಷ್ಟು ದಪ್ಪವಾಗಿಯೂ ಲೋಕಾಕಾರದಷ್ಟು ಉದ್ದವಾಗಿಯೂ ವ್ಯಾಪಿಸುವುದು; ದಂಡ, ಕವಾಟ, ಪ್ರತರ, ಲೋಕಪೂರಣ ಎಂಬ ಸಮುದ್ಘಾತಕ್ರಿಯೆಗಳಲ್ಲಿ ಒಂದು

**ದಂಡರತ್ನ** – ಚಕ್ರವರ್ತಿಗಳಿಗೆ ದೊರಕುವ ಹದಿನಾಲ್ಕು ರತ್ನಗಳಲ್ಲಿ ಒಂದು

**ದಕ್ಷಿಣಾಗ್ನಿ** – ಜೈನ ಬ್ರಾಹ್ಮಣರ ಮನೆಗಳಲ್ಲಿ ಅರ್ಹಂತನ ಪೂಜೆಗಾಗಿ ಸ್ಥಾಪಿಸುವ ಮೂರು ಬಗೆಯ ಅಗ್ನಿಗಳಲ್ಲಿ ಒಂದು

**ದನುಜೋದೀರಿತ** – ರಾಕ್ಷಸರಿಂದ ಉಂಟಾದ ದುಃಖ (ಶಾರೀರ ಮಾನಸ ಕ್ಷೇತ್ರಜ ಪರಸ್ಪರೋದೀರಿತ ದನುಜೋದೀರಿತ ಗಳೆಂಬ ಅಯ್ದುಂ ತೆಜದ ದುಃಖಂ ಗಳೊಳಿದು)

**ದಯಾದತ್ತಿ** – ಎಲ್ಲ ಪ್ರಾಣಿಗಳಲ್ಲಿ ದಯೆ ತೋರಿಸುವುದು

**ದರ್ಶನ** – ಸಮ್ಯಕ್‌ದರ್ಶನ, ಜೈನತತ್ವಗಳ ತಿಳಿವಳಿಕೆ ಮತ್ತವುಗಳಲ್ಲಿನ ನಂಬಿಕೆ, ಸಿದ್ಧಪರಮೇಷ್ಠಿಗಳ ಅಷ್ಟಗುಣಗಳಲ್ಲಿ ಒಂದು (ಸಮ್ಯಕ್ ಜ್ಞಾನ ದರ್ಶನ ಅನಂತವೀರ್ಯ ಸೂಕ್ಷ್ಮತ್ವ ಅಗುರುಲಘುತ್ವ ಅವಗಾಹ ಅವ್ಯಾಬಾಧಗಳೆಂಬ ಸಿದ್ಧ ಪರಮೇಷ್ಠಿಗಳ ಅಷ್ಟಗುಣಂಗಳಂ ನೆನೆಯುತ್ತುಂ; ಕನಸು

**ದರ್ಶನಮೋಹನೀಯತ್ರಿಕ** – ಮೋಹನೀಯ ಗಳಲ್ಲಿ ಒಂದು ಆತ್ಮನ ಸಮ್ಯಗ್ದರ್ಶನಕ್ಕೆ ಅಡ್ಡಿಮಾಡುವಂತಹ ಮೂರು

**ದರ್ಶನಾವರಣಚತುಷ್ಕ** – ಚಕ್ಷುದರ್ಶನಾವರಣ ಅಚಕ್ಷುದರ್ಶನಾವರಣ ಅವಧಿದರ್ಶನಾವರಣ ಮತ್ತು ಕೇವಲದರ್ಶನಾವರಣ

**ದಶಾಂಗ** – ಹತ್ತು ಪದಾರ್ಥಗಳು (ಮದ್ಯ ವಿಭೂಷಣ ವಸ್ತ್ರ ಆತೋದ್ಯ ಅಸ್ರಕ್ ಭವನ ಭಾಜನ ಅಶನ ದೀಪ ಪ್ರೋದ್ಯಜ್ಯೋತಿ) ಚಕ್ರವರ್ತಿಯ ಹತ್ತು ಭೋಗಾಂಗಗಳು (ಪುರ ನಿಧಿ ಶಯ್ಯಾ ಆಸನ ರಾಜ್ಯ ರತ್ನ ವಾಹನ ವರೂಥಿನೀ ನಾಟ್ಯಸಭಾ ಪರಿಕರಸಹಿತಂ ಭರತೇಶ್ವರಂಗೆ ಸಮಸಂದುದೀ ದಶಾಂಗಂ ಭೋಗಂ)

**ದಶಾಂಗಕಲ್ಪಕುಜ** – ಭೋಗಭೂಮಿಯ ಮಧ್ಯ, ಭೂಷಣ, ವಸ್ತ್ರ, ಆತೋದ್ಯ, ಸ್ರಗ್ಭವನ, ಭಾಜನ, ಅಶನ, ದೀಪ, ಪ್ರೋದ್ಯತ್, ಜ್ಯೋತಿಸ್ಥಿತಿ ಎಂಬ ಹತ್ತುಕಲ್ಪವೃಕ್ಷಗಳು

**ದಶಾಂಗಕಲ್ಪಕುಜನಿಲಯ** – ಹತ್ತು ಬಗೆಯ ಕಲ್ಪವೃಕ್ಷಗಳಿರುವ ಭೂಮಿ, ಅಂದರೆ ಭೋಗಭೂಮಿ

**ದಶಾಂಗಭೋಗ** – ಚಕ್ರವರ್ತಿಗಳಿಗೆ ದೊರಕುವ ದಿವ್ಯನಗರ, ಚತುರ್ದಶರತ್ನಗಳು, ನವನಿಧಿ, ಸೈನ್ಯ, ಭೋಜನ, ಭಾಜನ, ಶಯ್ಯಾ, ಆಸನ, ವಾಹನ, ನಾಟ್ಯ ಎಂಬ ಹತ್ತು ಭೋಗಗಳು

**ದಶಾವತಾರ** – ಆದಿಜಿನನ ಹತ್ತು ಅವತಾರಗಳು: ಮಹಾಬಲ, ಲಲಿತಾಂಗ, ವಜ್ರಜಂಘ, ವಜ್ರಜಂಘಾರ್ಯ, ಶ್ರೀಧರದೇವ, ಸುವಿಧಿ, ಅಚ್ಯುತೇಂದ್ರ, ವಜ್ರನಾಭಿ, ಅಹಮಿಂದ್ರ ಮತ್ತು ಆದಿನಾಥ

**ದಾನ** – ಕೊಡುವುದು, ಇದರಲ್ಲಿ ಕೊಡುವವನು, ಕೊಡುವ ವಸ್ತು, ದಾನ ಸ್ವೀಕರಿಸುವವನು ಮತ್ತು ದಾನದ ಫಲ ಎಂಬ ನಾಲ್ಕು ಭಾಗಗಳು

**ದಾನಾನುಮೋದ** – ದಾನ ನೀಡಲು ಒಪ್ಪಿಗೆ

**ದಿಕ್ಕನ್ಯೆ** – ರುಚಕಾಚಳದ ಉತ್ತರದ ಶಿಖರಗಳ ದೇವಿಯರು

**ದಿಕ್ಕುಮಾರಿಕಾ ಮಹತ್ತರಿಕೆ** – ಜಿನಜನನಿಯ ಗರ್ಭಶೋಧನಕ್ಕೆ ನಿಯೋಜಿತರಾದ ದೇವತೆಯರು

**ದಿಕ್‌ಸ್ವಸ್ತಿಕ** – ಭರತನ ಸಭಾಸ್ಥಾನದ ಹೆಸರು

**ದಿಗಂಗನೆ** – ಕೂಟಾಷ್ಟಕದಲ್ಲಿ ರಮಿಸುವ ಎಂಟು ಮಂದಿ ದೇವಿಯರು (ಕೂಟಾಷ್ಟಕಂಗಳೊಳ್ ರಮಿಯಿಸುವ ಸುಪ್ರತಿಷ್ಠಿತೆ ಸುಪ್ರಣಿಧಿ ಸುಪ್ರಬುದ್ಧೆ ಯಶೋಧರೆ ಲಕ್ಷ್ಮೀಮತಿ ಕೀರ್ತಿಮತಿ ವಸುಂಧರೆ ಚಿತ್ರ ಎಂಬ ಎಣ್ಬರುಂ ದಿಗಂಗನೆಯರಂ)

**ದಿಗ್ವನಿತೆ** – ದಿಗಂಗನೆಯರು, ಎಂಟು ಮಂದಿ: ವಿಜಯೆ ವೈಜಯಂತೆ ಜಯಂತೆ ಅಪರಾಜಿತೆ ನಂದೆ ನಂದೋತ್ತರೆ ಆನಂದೆ ನಂದಿವರ್ಧನೆ

**ದಿಗ್ವಾಸ** – [ದಿಕ್ + ವಾಸ] ದಿಕ್ಕನ್ನೇ ಬಟ್ಟೆಯಾಗುಳ್ಳವನು, ದಿಗಂಬರ

**ದಿಗ್ವಿಜಯ** – ಒಂದು ಗರ್ಭಾನ್ವಯಕ್ರಿಯೆ, ಎಲ್ಲ ದಿಕ್ಕುಗಳ ರಾಜರುಗಳನ್ನೂ ಗೆಲ್ಲುವುದು

**ದಿವಸ** – ಒಂದು ಹಗಲು ಮತ್ತು ಒಂದು ರಾತ್ರಿಯಷ್ಟು ಅವಧಿಯ ಕಾಲಪರಿಮಾಣ. ಮೂವತ್ತು ಮುಹೂರ್ತಗಳು ಸೇರಿದರೆ ಒಂದು ದಿವಸ (ಅದು ಸಮಯ ಆವಳಿಕ ಉಚ್ಛ್ವಾಸ ಸ್ತೋಕ ನಿಮೇಷ ನಾಳಿಕಾ ಮುಹೂರ್ತ ದಿವಸ ಪಕ್ಷ ಮಾಸ ಋತು ಅಯನ ಸಂವತ್ಸರಾದಿ ಗಣನಾಕ್ರಮದಿಂದಂ ಪೆರ್ಚಿದೆಣಿಕೆಯೊಳ್ ಕೂಡಿದುದು

**ದಿವ್ಯಧ್ವನಿ** – ಸಮವಸರಣಸಮಯದಲ್ಲಿ ಅರ್ಹಂತನಿಗೆ ಪ್ರಾಪ್ತವಾಗುವ ಅಸಾಧಾರಣ ಶಕ್ತಿಯ ಧ್ವನಿ

**ದೀಕ್ಷಾದ್ಯ** – ಒಂದು ಗರ್ಭಾನ್ವಯಕ್ರಿಯೆ, ಸನ್ಯಾಸ ಸ್ವೀಕಾರ

**ದೀಕ್ಷಾನ್ವಯ ಕ್ರಿಯೆ** – ಜೈನ ದೀಕ್ಷೆ ಕೊಡುವ ಕ್ರಿಯೆ; ನಲವತ್ತೆಂಟು ದೀಕ್ಷಾನ್ವಯ ಕ್ರಿಯೆಗಳಲ್ಲಿ ಒಂದು

**ದೀಪಾಂಗ** – ದೀಪಗಳನ್ನು ನೀಡುವ ಒಂದು ಕಲ್ಪವೃಕ್ಷ

**ದುಃಖ** – ಐದು ಬಗೆಯ ಕ್ಲೇಶಗಳು: ದೇಹ, ಮನಸ್ಸು, ಸ್ಥಲಗಳಿಂದಾಗುವ, ಪರಸ್ಪರರಿಂದ ಉಂಟಾಗುವ ಹಾಗೂ ರಾಕ್ಷಸರಿಂದಾಗುವಂಥವು

**ದುರ್ಭಗ** – ಇತರರ ಮನಸ್ಸಿನಲ್ಲಿ ಅಸಹ್ಯವನ್ನು ಉಂಟುಮಾಡುವ ಸ್ಥಿತಿ, ಒಂದು ಬಗೆಯ ನಾಮಪ್ರಕೃತಿ (ಸ್ಥಿರಾಸ್ಥಿರ ಶುಭಾಶುಭ ಸುಸ್ವರ ದುಸ್ವರ ಸುಭಗ ದುರ್ಭಗ ಪ್ರತ್ಯೇಕಶರೀರ ಅಯಶಸ್ಕೀರ್ತಿರನಾದೇಯ ನಿರ್ಮಾಣ ಪರ್ಯಾಪ್ತನೀಚೈಗೋತ್ರಂಗಳೆಂಬ ದ್ವಿಸಪ್ತತಿ ಪ್ರಕೃತಿಗಳಂ)

**ದುಷ್ಷಮಕಾಲ** – ಕೆಟ್ಟ ಕಾಲ

**ದುಷ್ಷಮಯತಿ** – ದುಷ್ಷಮವೆಂಬ ಐದನೆಯ ಕಾಲದಲ್ಲಿ ಅಥವಾ ಕೆಟ್ಟ ಕಾಲದಲ್ಲಿ ಹುಟ್ಟಿದ ಯತಿಗಳು

**ದುಷ್ಷಮಸುಷಮ** – ಅವಸರ್ಪಿಣಿಯ ನಾಲ್ಕನೆಯ ಕಾಲ

**ದುಸ್ವರ** – ದುಷ್ಷ್ಸರಕ್ಕೆ ಕಾರಣವಾದ [ಎಪ್ಪತ್ತೆರಡು ಬಗೆಯ] ನಾಮಕರ್ಮಪ್ರಕೃತಿಗಳಲ್ಲಿ ಒಂದು

**ದೃಢಚರ್ಯ** – ನಲವತ್ತೆಂಟು ದೀಕ್ಷಾನ್ವಯಕ್ರಿಯೆಗಳಲ್ಲಿ ಒಂದು:

**ದೃಷ್ಟಿಮೋಹ** – ಸಮ್ಯಗ್ದರ್ಶನವನ್ನು ಹಾಳು ಮಾಡುವ ಕರ್ಮ

**ದೇವಗತಿ** – ಈ ಕರ್ಮದ ಉದಯದಿಂದ ದೇವತ್ವ ಪ್ರಾಪ್ತವಾಗುತ್ತದೆ

**ದೇವರಮ್ಯ** – ಭರತನ ಡೇರೆ

**ದೇವೋತ್ತರಕುರು** – ವಿದೇಹಕ್ಷೇತ್ರದಲ್ಲಿ ಮೇರುಪರ್ವತಕ್ಕೆ ದಕ್ಷಿಣದಲ್ಲಿ ಮತ್ತು ನಿಷಧಕ್ಕೆ ಉತ್ತರದಲ್ಲಿ ಇರುವ ಭೋಗಭೂಮಿ

**ದೇಶನಿವೇಶೋಪದೇಶ** – ಜೈನಪುರಾಣಗಳ ಎಂಟು ಅಂಗಗಳಲ್ಲಿ ಒಂದು, ದೇಶದ ವಿನ್ಯಾಸ, ವಿಸ್ತೀರ್ಣ, ರೀತಿ ಮುಂತಾದವನ್ನು ತಿಳಿಸುವುದು (ಆ ಪುರಾಣಕ್ಕಂ ಲೋಕಾಕಾರಕಥನಮುಂ ದೇಶನಿವೇಶೋಪದೇಶಮುಂ ನಗರ ಸಂತ್ಸರಿವರ್ಣನಮುಂ ರಾಜ್ಯರಾಮಣಿ ಕಾಖ್ಯಾನಮುಂ ತೀರ್ಥಮಹಿಮಾ ಸಮರ್ಥನಮುಂ ಚತುರ್ಗತಿಸ್ವರೂಪ ನಿರೂಪಣಮುಂ ತಪೋದಾನ ವ್ಯಾವರ್ಣನಮುಂ ತತ್ಫಲಪ್ರಾಪ್ತಿ ಪ್ರಕಟಮುಂ ಎಂದಿಂತು ಅವಯವಂಗಳ್ ಎಂಟಕ್ಕುಂ)

**ದ್ರವ್ಯ** – ಐದು ಬಗೆಯ ಸಂಸಾರಗಳಲ್ಲಿ ಒಂದು (ದ್ರವ್ಯ ಕ್ಷೇತ್ರ ಕಾಲ ಭವ ಭಾವ ಭೇದದಿಂ ಪಂಚವಿಧಂ ಸಂಸಾರಂ)

**ದ್ವಾದಶಾಂಗ** – ಆಚಾರಾಂಗ, ಸೂತ್ರಕೃತಾಂಗ, ಸ್ಥಾನಾಂಗ, ಸಮವಾಯಾಂಗ, ವ್ಯಾಖ್ಯಾಪ್ರಜ್ಞಪ್ತಿ, ಜ್ಞಾತೃಕ ಧರ್ಮಕಥಾಂಗ, ಉಪಾಸಕಾಧ್ಯಯನಾಂಗ, ಅಂತಕೃದ್ದಶಾಂಗ, ಅನುತ್ತರೋಪಪಾದಿಕ ದಶಾಂಗ, ಪ್ರಶ್ನವ್ಯಾಕರಣಾಂಗ, ವಿಪಾಕ ಸೂತ್ರಾಂಗ ಮತ್ತು ದೃಷ್ಟಿವಾದಾಂಗ

**ದ್ವಾದಶಾನುಪ್ರೇಕ್ಷೆ** – ಮುನಿಗಳು ಧ್ಯಾನ ಮಾಡಬೇಕಾದ ಅನಿತ್ಯ, ಅಶರಣ, ಸಂಸಾರ, ಏಕತಾ, ಅಶುಚಿತ್ವ, ಆಸ್ರವ, ಸಂವರ, ನಿರ್ಜರಾ, ಲೋಕ, ಬೋಧಿದುರ್ಲಭ ಮತ್ತು ಧರ್ಮ ಎಂಬ ಹನ್ನೆರಡು ತತ್ವಗಳು

**ದ್ವಿಗುಣ ಚತುಃಕೂಟ** – ರುಚಕಾಚಳದ ಪಶ್ಚಿಮದಿಕ್ಕಿನ ಎಂಟು ಶಿಖರಗಳು

**ದ್ವಿಸಪ್ತತಿಪ್ರಕೃತಿ** – ಅನುದಯವೆಂಬ ಅಸಾತಾವೇದನೀಯ, ದೇವಗತಿ, ದೇವಗತಿಪ್ರಯೋಗ್ಯಾನುಪೂರ್ವ್ಯ, ಐದು ಶರೀರ, ಐದು ಬಂಧನ, ಐದು ಸಂಘಾತ, ಐದು ವರ್ಣ, ಐದು ರಸ, ಆರು ಸಂಸ್ಥಾನ, ಆರು ಸಂಹನನ, ಮೂರು ಅಂಗೋಪಾಂಗ, ಎರಡು ಗಂಧ, ಎಂಟು ಸ್ಪರ್ಶ, ಅಗುರುಲಘುತ್ವ, ಎರಡು ವಿಹಾಯೋಗತಿ [ಪ್ರಶಸ್ತ + ಅಪ್ರಶಸ್ತ], ಸ್ಥಿರ, ಅಸ್ಥಿರ, ಶುಭ, ಅಶುಭ, ಸುಸ್ವರ, ದುಸ್ವರ, ಸುಭಗ, ದುರ್ಭಗ, ಪ್ರತ್ಯೇಕಶರೀರ, ಅಯಸ್ಕೀರ್ತಿ, ಅನಾದೇಯ, ನಿರ್ಮಾಣ, ಅಪರ್ಯಾಪ್ತ, ನೀಚೈರ್ಗೋತ್ರ ಎಂಬ ಎಪ್ಪತ್ತೆರಡು ಪ್ರಕೃತಿಗಳು

**ದ್ವೀಂದ್ರಿಯ** – ಚರ್ಮ, ನಾಲಗೆ ಎಂಬ ಎರಡು ಇಂದ್ರಿಯಗಳು ಮಾತ್ರ ಇರುವ ಜಂತು

**ಧನು** – ಬಿಲ್ಲು, ಎತ್ತರದ ಒಂದು ಅಳತೆ (ನಾಲ್ಕು ಮೊಳ)

**ಧರಣೇಂದ್ರ** – ಪಾರ್ಶ್ವನಾಥ ತೀರ್ಥಂಕರನ ಯಕ್ಷ; ಭವನವಾಸಿ ದೇವನಾದ ನಾಗೇಂದ್ರ

**ಧರ್ಮಧ್ಯಾನ** – ಧರ್ಮದ ವಿಷಯಗಳನ್ನು ಕುರಿತು ಸದಾ ಚಿಂತಿಸುವುದು; ಧ್ಯಾನಚತುಷ್ಟಯಗಳಲ್ಲಿ ಒಂದು, (ಆಜ್ಞಾವಿಚಯಂ ಅಪಾಯವಿಚಯ ವಿಪಾಕವಿಚಯ ಸಂಸ್ಥಾನವಿಚಯಮೆಂಬ ನಾಲ್ಕುಂ ಧರ್ಮ್ಯಧ್ಯಾನಮಂ ಧ್ಯಾನಿಸುತ್ತುಂ)

**ಧಾತುಮಳ** – ಇಂದ್ರಿಯಗಳಿಂದ ಹುಟ್ಟುವ ಕೊಳೆ, ಬೆವರು ಮುಂತಾದವು

**ಧೂಳೀಶಾಲ(ಳ)** – ಸಮವಸರಣ ಮಂಟಪದ ಮೊದಲನೆಯ ಪ್ರಾಕಾರ

**ಧೃತಿ** – ಒಂದು ಗರ್ಭಾನ್ವಯಕ್ರಿಯೆ ಗರ್ಭದ ಏಳೀಗೆಗಾಗಿ ಏಳನೇ ತಿಂಗಳಲ್ಲಿಮಾಡುವ ಕ್ರಿಯೆ

**ಧ್ಯಾನಚಕ್ರ** – ಚಿಂತನೆಯಿಂದ ಹುಟ್ಟುವ ಚಕ್ರ

**ನಂದನವನ** – ಮೇರುಪರ್ವತದ ಮೇಲಿರುವ ನಾಲ್ಕು ವನಗಳಲ್ಲಿ ಒಂದು, ಉಳಿದ ಮೂರು: ಭದ್ರಶಾಲ, ಸೌಮನಸ ಮತ್ತು ಪಾಂಡುಕ

**ನಂದೀಶ್ವರದ್ವೀಪ** – ಎಂಟನೆಯ ದ್ವೀಪ, ಇದರ ಮಧ್ಯೇ ನಾಲ್ಕು ಅಚಿಜನಪರ್ವತ ಗಳಿರುತ್ತವೆ

**ನಂದೀಶ್ವರಮಹಾಮಹಿಮೆ** – ನಂದೀಶ್ವರದಲ್ಲಿ ಸೌಧರ್ಮಾದಿ ಇಂದ್ರರ ಸಾನ್ನಿಧ್ಯದಲ್ಲಿ ಮಾಡುವ ಪೂಜೆ

**ನಂದ್ಯಾವರ್ತ** – ಒಂದು ಸ್ವರ್ಗದ ಹೆಸರು

**ನದೀನಾಥ** – ಸಾಗರ, ಒಂದು ದೀರ್ಘಾವಧಿ

**ನಪುಂಸಕವೇದ** – ಒಂದು ಬಗೆಯ ನೋಕಷಾಯ; ಇದರಿಂದ ಗಂಡುಹೆಣ್ಣು ಗಳೆರಡರಲ್ಲೂ ಕಾಮವುಂಟಾಗುತ್ತದೆ

**ನಮಸ್ಸಿದ್ಧೇಭ್ಯಃ** – ಸಿದ್ಧರಿಗೆ ನಮಸ್ಕಾರ

**ನಯ** – ತಿಳಿಯುವವನ ಅಭಿಪ್ರಾಯಕ್ಕೆ ವಿಷಯವಾದ ಏಕದೇಶಜ್ಞಾನ (ಪ್ರಮಾಣ ನಯ ನಿಕ್ಷೇಪ ಅನುಯೋಗ ಸದಾದಿಗಳಿಂ ನಿಶ್ಚಯಿಸಿದ ಸಪ್ತತತ್ತ್ವಂಗಳೊಳಗೆ ಚೇತನಾ ಲಕ್ಷಣಮಪ್ಪುದು ಜೀವತತ್ತ್ವಂ

**ನರಕಗತಿ** – ಹದಿನಾರು ಕರ್ಮಪ್ರಕೃತಿಗಳಲ್ಲಿ ಒಂದು, ಇದರಿಂದ ನಾರಕೀಯ ಅವಸ್ಥೆ ಉಂಟಾಗುತ್ತದೆ

**ನರಕಾಯುಷ್ಯ** – ಇದರಿಂದ ಜೀವನು ದೀರ್ಘಕಾಲ ನರಕವಲ್ಲಿರಬೇಕಾಗುತ್ತದೆ

**ನವಗ್ರೈವೇಯಕ** – ಹದಿನಾರು ಸ್ವರ್ಗಗಳ ಮೇಲೆ ಇರುವ ಕಲ್ಪಾತೀತವಾದ ಒಂಬತ್ತು ಸ್ವರ್ಗಗಳು

**ನವನಿಧಿ** – ಮಹಾಪದ್ಮ, ಪದ್ಮ, ಶಂಖ, ಮಕರ, ಕಚ್ಛಪ, ಮುಕುಂದ, ಕುಂದ ನೀಲ, ವರ ಎಂಬ ಕುಬೇರನ ಒಂಬತ್ತು ನಿಧಿಗಳು, ಚಕ್ರವರ್ತಿಯ ಒಂಬತ್ತು ರತ್ನಗಳು: ಶ್ರೀಗೃಹದಲ್ಲಿ ಹುಟ್ಟಿದ ಕಾಳ, ಮಹಾಕಾಳ, ನೈಸರ್ಪ, ಪಾಂಡುಕ, ಪದ್ಮ, ಪಿಂಗಳ, ಮಾಣವಕ, ಶಂಖ, ಸರ್ವರತ್ನ

**ನವನೋಕಷಾಯ** – ಮೋಹನೀಯ ಕರ್ಮಭೇದ, ಕಿಂಚಿತ್ ಕಷಾಯ, ಇದು ಹಾಸ, ರತಿ, ಅರತಿ, ಶೋಕ, ಭಯ, ಜುಗುಪ್ಸೆ, ಸ್ತ್ರೀವೇದ, ಪುಂವೇದ ಮತ್ತು ನಪುಂಸಕವೇದವೆಂದು ಒಂಬತ್ತು ಬಗೆ

**ನವಪದಾರ್ಥ** – ಜೀವ ಅಜೀವ ಆಸ್ರವ ಬಂಧ ಸಂವರ ನಿರ್ಜರ ಮೋಕ್ಷ ಪುಣ್ಯ ಪಾಪ ಎಂಬ ಒಂಬತ್ತು ತತ್ವಗಳು

**ನವಬಂಧ** – ನವನೋಕಷಾಯಗಳು

**ನವವಿಧಪುಣ್ಯ** – ಚರಿಗೆ ನೀಡುವಾಗ ಅನುಸರಿಸಬೇಕಾದ ಒಂಬತ್ತು ಕ್ರಮಗಳು: ತ್ರಿಪ್ರದಕ್ಷಿಣೆ, ಉಚ್ಚಾಸನ ಸಮರ್ಪಣೆ, ಪಾದಪೂಜೆ, ಅರ್ಚನೆ, ಪ್ರಣಾಮ, ವಚನಶುದ್ಧಿ, ಕಾಯಶುದ್ಧಿ, ಮನಶ್ಶುದ್ಧಿ, ಏಷಣಾಶುದ್ಧಿ

**ನಾಕಲೋಕಚ್ಯುತಿ** – ಆಯುಸು ತೀರದ ದೇವನು ಭೂಲೋಕದಲ್ಲಿ ಹುಟ್ಟಲು ಅವನ ಶರೀರವು ಮೋಡಗಳಂತೆ ಕರಗಿ ಹೋಗುವುದು

**ನಾಡಿಕಾ** – ಮೂವತ್ತೆಂಟು ನಿಮೇಷಗಳ ಅವಧಿ

**ನಾಭಿನಗ** – ಮೇರುಪರ್ವತ

**ನಾಲ್ಕು ಉಪಧೆ** – ದೇಶ ಜನ್ಮ ಆಚಾರ ಮತ್ತು ಕುಲ

**ನಾಳಿಕಾ** – ನಾಡಿ, ಮೂವತ್ತೆಂಟೂವರೆ ಲವಗಳು ಅಥವಾ ನಿಮೇಷಗಳು, ಇಪ್ಪತ್ತನಾಲ್ಕು ನಿಮಿಷಗಳ ಕಾಲ, ಒಂದು ಗಳಿಗೆ

**ನಿಕ್ಷೇಪ** – ಅಪ್ರಕೃತವಾದುದನ್ನು ನಿರಾಕರಿಸುವುದರ ಮೂಲಕ ಪ್ರಕೃತವಾದುದನ್ನು ನಿರೂಪಿಸುವುದು

**ನಿತ್ಯಮಹ** – ಪ್ರತಿದಿನದ ಪೂಜೆ (ಜಿನಗೃಹಜನಸತತ ಉಪನೀಯಮಾನ ಪಾದ್ಯ ಗಂಧ ಅಕ್ಷತ ಕುಸುಮ ಚರು ಧೂಪ ದೀಪ ಫಲ ಆದಿ ಅರ್ಚನಾತ್ಮಕಮಪ್ಪ ನಿತ್ಯಮಹಮುಂ)

**ನಿಧೀಶ** – ನವನಿಧಿಗಳ ಒಡೆಯ, ಚಕ್ರವರ್ತಿ

**ನಿಮೇಷ** – ಒಂದು ಕಾಲ ಪರಿಮಾಣ. ಇದಕ್ಕೆ ಲವ ಎಂತಲೂ ಹೆಸರಿದೆ. ಏಳು ಸ್ತೋಕಗಳಷ್ಟು ಕಾಲ

**ನಿರ್ಜರಕರಣ** – ಕರ್ಮಗಳು ನಿಧಾನವಾಗಿ ನಾಶವಾಗುವುದು

**ನಿರ್ಜರೆ** – ಕಾಲಾನುಗುಣವಾಗಿ ಅನುಭವಿಸುವುದಕ್ಕೂ ತಪೋನಿಮಿತ್ತಕ್ಕೂ ಸವಿಪಾಕ ಅವಿಪಾಕರೂಪದಿಂದ ಪೂರ್ವಾರ್ಜಿತ ಕರ್ಮವನ್ನು ತೊಡೆದುಹಾಕುವಂಥದು

**ನಿರ್ಮಾಣ** – ಇದರಿಂದ ಶರೀರದ ಅವಯವಗಳು ಯೋಗ್ಯ ಸ್ಥಳ ಮತ್ತು ಪ್ರಮಾಣಗಳಲ್ಲಿರುತ್ತವೆ

**ನಿರ್ಯಾಪಕಾಚಾರ್ಯ** – ಸಲ್ಲೇಖನ ವ್ರತವನ್ನು ಉಪದೇಶಿಸುವ ಗುರು

**ನಿರ್ವೃತಿ** – ಯೋಗನಿರೋಧ ಮಾಡಿದ ಜಿನನಿಗೆ ಅಘಾತಿಕರ್ಮಗಳೆಲ್ಲ ನಾಶವಾಗಿ ಪರಮನಿರ್ವಾಣ ಪ್ರಾಪ್ತವಾಗುವುದು

**ನಿಷದ್ಯಾ** – ಐವತ್ಮೂರು ಗರ್ಭಾನ್ವಯ ಕ್ರಿಯೆಗಳಲ್ಲಿ ಒಂದು; ತೀರ್ಥಂಕರ ಶಿಶುವಿಗೆ ವಿವಿಧ ಬಗೆಯ ಅರ್ಚನೆಗಳನ್ನು ಮಾಡುವುದು

**ನಿಷಧಪರ್ವತ** – ಹರಿಕ್ಷೇತ್ರ ಮತ್ತು ವಿದೇಹ ಕ್ಷೇತ್ರಗಳ ಸನಿಹದ ಈ ಪರ್ವತದ ಬಣ್ಣ ಕಾಸಿದ ಬಂಗಾರದ್ದು

**ನಿಸ್ವೇದ** – ಬೆವರು ಉಂಟಾಗದವನು

**ನಿಸ್ಸಂಗತ್ವಾತ್ಮಭಾವನೆ** – ಒಂದು ಗರ್ಭಾನ್ವಯ ಕ್ರಿಯೆ; ಎಲ್ಲ ಸಂಗದಿಂದ ತಾನು ಬಿಡುಗಡೆಗೊಂಡಿದ್ದೇನೆಂಬ ಭಾವನೆ ತಳೆಯುವುದು

**ನೀಚೈರ್ಗೋತ್ರ** – ಇದರಿಂದ ಕೆಟ್ಟ ಕುಲದಲ್ಲಿ ಹುಟ್ಟುವಂತಾಗುತ್ತದೆ

**ನೀಲ** – ಜೀವದ ಮೇಲಾಗುವ ಒಂದು ಅಶುಭ ಪರಿಣಾಮ

**ನೀಲಪರ್ವತ** – ವಿದೇಹ ರಮ್ಯಕ ಕ್ಷೇತ್ರಗಳ ಬಳಿಯ ಈ ಪರ್ವತದ ಬಣ್ಣ ವೈಡೂರ್ಯದ್ದು

**ನೀಲಲೇಶ್ಯೆ** – ಆರು ಬಗೆಯ ಲೇಶ್ಯೆಗಳಲ್ಲಿ ಒಂದು; ಆಲಸ್ಯಕ್ಕೆ ಕಾರಣವಾದ ಕರ್ಮ

**ನಿಃಪ್ರವೀಚಾರ** – ಮೈಥುನೇಚ್ಛೆ ಇಲ್ಲದಿರುವುದು

**ನೆಲೆ** – ಗುಣನಿಲಯ, ಗೃಹಸ್ಥ ಶ್ರಾವಕರ ದಾರ್ಶನಿಕ, ವ್ರತಿಕ, ಸಾಮಯಿಕ, ಪ್ರೋಷಧೋಪವಾಸ, ಸಚ್ಚಿತ್ತವಿರತ, ರಾತ್ರಿಭಕ್ತ, ಬ್ರಹ್ಮಚಾರಿ, ಆರಂಭನಿವೃತ್ತ, ಪರಿಗ್ರಹವಿರತ, ಅನುಮತಿವಿರತ ಮತ್ತು ಉದ್ದಿಷ್ಟವಿರತ ಎಂಬ ಹನ್ನೊಂದು ನೆಲೆಗಳು

**ನೋಕಷಾಯ** – ಚಾರಿತ್ರಮೋಹನೀಯದಲ್ಲಿ ಒಂದು ಬಗೆ, ಕಿಂಚಿತ್ ಕಷಾಯ; ಇದು ಒಂಬತ್ತು ವಿಧ – ಹಾಸ್ಯ, ರತಿ, ಅರತಿ, ಶೋಕ, ಭಯ, ಜುಗುಪ್ಸೆ, ಸ್ತ್ರೀವೇದ, ಪುಂವೇದ ಮತ್ತು ನಪುಂಸಕವೇದ

**ಪಂಕಪ್ರಭೆ** – ಏಳು ನರಕಗಳಲ್ಲಿ ನಾಲ್ಕನೆಯದು

**ಪಂಚದಶಪ್ರಮಾದ** – ಕ್ರೋಧ ಮಾನ ಮಾಯ ಲೋಭಗಳೆಂಬ ನಾಲ್ಕು ಕಷಾಯಗಳು, ಸ್ತ್ರೀಕಥಾ ಭೋಜನಕಥಾ ರಾಷ್ಟ್ರಕಥಾ ಮತ್ತು ರಾಜಕಥಾ ಎಂಬ ನಾಲ್ಕು ವಿಕಥೆಗಳು, ಸ್ಪರ್ಶನ ಕರಣ ರಸನ ಚಕ್ಷು ಮತ್ತು ಘ್ರಾಣ ಎಂಬ ಐದು ಇಂದ್ರಿಯಗಳು, ನಿದ್ರೆ ಮತ್ತು ಸ್ನೇಹ – ಇವುಗಳಿಂದ ದರ್ಮಕ್ರಿಯೆಯಲ್ಲಿ ಅನಾದರವುಂಟಾಗುತ್ತದೆ

**ಪಂಚಧನುಶ್ಶತ** – ಐನೂರು ಧನುಸ್ಸು

**ಪಂಚನಮಸ್ಕೃತಿ** – ಪಂಚನಮಸ್ಕಾರಗಳು: ಣಮೋ ಅರಹಂತಾಣಂ, ಣಮೋ ಸಿದ್ಧಾಣಂ, ಣಮೋ ಅಯಾರಿಯಾಣಂ, ಣಮೋ ಉವಜ್ಝಾಯಾಣಂ, ಣಮೋ ಲೋಏ ಸಬ್ಬಸಾಹೂಣಂ ಎಂಬ ಐದು ಮಂತ್ರಗಳು

**ಪಂಚಪದಂಗಳ್** – ಪಂಚನಮಸ್ಕಾರ

**ಪಂಚಮಕಾಲ** – ಅವಸರ್ಪಿಣಿಯ ಐದು ಕಾಲಭೇದಗಳಲ್ಲಿ ಐದನೆಯದು

**ಪಂಚಮಹಾಕಲ್ಯಾಣ** – ಜಿನನಿಗೆ ನಡೆಯುವ ಗರ್ಭಾವತರಣ. ಜನ್ಮ, ಪರಿನಿಷ್ಕ್ರಮಣ, ಕೇವಲಜ್ಞಾನ ಮತ್ತು ಪರಿನಿರ್ವಾಣ ಗಳೆಂಬ ಐದು ಕಲ್ಯಾಣಗಳು

**ಪಂಚಾಚಾರ** – ಜ್ಞಾನಾಚಾರ ದರ್ಶನಾಚಾರ ಚಾರಿತ್ರಾಚಾರ ತಪಾಚಾರ ಮತ್ತು ವೀರ್ಯಾಚಾರಗಳು

**ಪಂಚಾಣುವ್ರತ** – ಗೃಹಸ್ಥರು ಅನುಸರಿಸ ಬೇಕಾದ ಅಹಿಂಸೆ ಸತ್ಯ ಅಸ್ತೇಯ ಬ್ರಹ್ಮಚರ್ಯ ಮತ್ತು ಅಪರಿಗ್ರಹವೆಂಬ ಐದು ವ್ರತಗಳು

**ಪಂಚಾಶ್ಚರ್ಯ** – ಆಹಾರದಾನ ಸಮಯದಲ್ಲಿ ಆಗುವ ಐದು ಅತಿಮಾನುಷ ಸೋಜಿಗ ಗಳು: ದೇವದುಂದುಭಿ ಸ್ವನ, ಪುಷ್ಪವೃಷ್ಟಿ, ಸುವರ್ಣವೃಷ್ಟಿ, ಮೆಲುಗಾಳಿ, ದೇವ ಪ್ರಶಂಸೆ

**ಪಕ್ಷ** – ಹದಿನೈದು ಅಹೋರಾತ್ರಿಗಳು ಅಥವಾ ದಿವಸಗಳು

**ಪತ್ತತಿಶಯ** – ಕೇವಲಜ್ಞಾನಪ್ರಾಪ್ತಿಯಿಂದ ಜಿನನಿಗೆ ಒದಗುವ ಹತ್ತು ಅತಿಶಯಗಳು: ನಾಲ್ಕು ದಿಕ್ಕಿಗೆ ನೂರು ಯೋಜನ ಸೀಮೆಯಲ್ಲಿ ಸುಭಿಕ್ಷತೆ, ಪರಿಮಿತ ಪ್ರಮಾಣದ ಉಗುರು ಮತ್ತು ಕೂದಲು ಗಳಿರುವ ದೇಹ, ಭೋಜನಾಭಾವ, ದೇಹಕ್ಕೆ ಯಾವುದೇ ಬಾಧೆಯಿಲ್ಲ ದಿರುವುದು, ನಾಲ್ಕು ಮುಖಗಳಿಂದ ಕೂಡಿರುವುದು, ಸರ್ವಶಾಸ್ತ್ರಜ್ಞತೆ, ರೆಪ್ಪೆಯಾಡದಿರುವುದು. ಆಕಾಶಗಮನ ಸಾಮರ್ಥ್ಯ, ಪ್ರಾಣಿಹಿಂಸೆಯಿಲ್ಲದಿರುವುದು, ದೇಹಕ್ಕೆ ನೆರಳಿಲ್ಲದರುವುದು

**ಪದಾರ್ಥ** – ಆಗಮದ ಅರ್ಥ (ಆಗಮದ ಅರ್ಥವಾವುದು ಅದುವೆ ಪದಾರ್ಥಂ)

**ಪದಿನಾಱನೆಯ ನೆಲೆ** – ಹದಿನಾರನೆಯ ಸ್ವರ್ಗ, ಅಚ್ಯುತಸ್ವರ್ಗ

**ಪದಿನಾಲ್ಕು ರತ್ನಂಗಳ್** – ಚಕ್ರವರ್ತಿಯ ಚಕ್ರ. ಛತ್ರ, ಖಡ್ಗ, ದಂಡ, ಧರ್ಮ, ಮಣಿ. ಕಾಕಿಣಿ, ಗೃಹಪತಿ, ಸೇನಾಪತಿ, ತಕ್ಷಕ, ಪುರೋಹಿತರತ್ನ, ಹಸ್ತಿರತ್ನ, ತುರಗರತ್ನ, ಸ್ತ್ರೀ ಎಂಬ ಹದಿನಾಲ್ಕು ರತ್ನಗಳು

**ಪದಿಮೂಱುಂ ಪ್ರಕೃತಿ** – ಅನ್ಯತರವೇದನೀಯ, ಮನುಷ್ಯಾಯುಷ್ಯ, ಮನುಷ್ಯಗತಿ, ಮನುಷ್ಯಗತಿ ಪ್ರಯೋಗ್ಯಾನುಪೂರ್ವ್ಯ, ಪಂಚೇಂದ್ರಿಯಜಾತಿ. ತ್ರಸನಾಮ. ಸುಭಗ, ಆದೇಯ, ಪರ್ಯಾಪ್ತ, ಬಾದರ, ಯಶಸ್ಕೀರ್ತಿ, ಉಚ್ಚೈರ್ಗೋತ್ರ, ತೀರ್ಥಂಕರನಾಮ ಎಂಬ ಹದಿಮೂರು ಪ್ರಕೃತಿಗಳು

**ಪನ್ನಗವಿದ್ಯೆ** – ಹಾವು ಮುಂತಾದವು ಕಚ್ಚಿದರೆ ಮದ್ದು ಮಾಡುವ ವಿದ್ಯೆ

**ಪನ್ನೆರಡು ತಪ** – ತಪಸ್ವಿಗಳು ಕೈಗೊಳ್ಳಬೇಕಾದ ಅನಶನ, ಅವಮೋದರ್ಯ, ವೃತ್ತಿಪರಿ ಸಂಖ್ಯಾನ, ರಸಪರಿತ್ಯಾಗ, ವಿವಿಕ್ತಾವಾಸ ಎಂಬ ಆರು ಆಂತರಿಕ ತಪಸ್ಸುಗಳು ಹಾಗೂ ಕಾಯಕ್ಲೇಶ. ಪ್ರಾಯಶ್ಚಿತ್ತ ವಿನಯ, ವೈಯಾವೃತ್ಯ, ಸ್ವಾಧ್ಯಾಯ, ವ್ಯುತ್ಸರ್ಗ, ಧ್ಯಾನ ಎಂಬ ಆರು ಆಂತರಿಕ ತಪಸ್ಸುಗಳು

**ಪರಮಸುಖಾಸ್ಪದ** – ಜೈನಸಂನ್ಯಾಸ

**ಪರಮಾನಂದಚತುಷ್ಟಯ** – ಅನಂತಜ್ಞಾನ ಅನಂತದರ್ಶನ ಅನಂತಸುಖ ಹಾಗೂ ಅನಂತವೀರ್ಯಗಳು

**ಪರಮಾಯು** – ಒಂದು ಪೂರ್ವಕೋಟಿ ಪ್ರಮಾಣದ ಜೀವಿತಾವಧಿ

**ಪರಮೇಶ್ವರದೀಕ್ಷೆ** – ದಿಗಂಬರಸನ್ಯಾಸ

**ಪರಸ್ಪರೋದೀರಿತ** – ನಾರಕರು ಒಬ್ಬರಿಗೊಬ್ಬರು ನೀಡುವ ದುಃಖ

**ಪರಿಗ್ರಹ** – ಧನಧಾನ್ಯ ಮುಂತಾದವು ಬಾಹ್ಯಪರಿಗ್ರಹ, ಮಿಥ್ಯಾತ್ವ ಕ್ರೋಧ ಮುಂತಾದ ಕಷಾಯಗಳೂ ಹಾಗೂ ಹಾಸ್ಯ ಮುಂತಾದ ನೋಕಷಾಯಗಳು ಅಭ್ಯಂತರ ಪರಿಗ್ರಹ

**ಪರಾಮರ್ಶನ** – ಅಶುಭ ನಾಮಪ್ರಕೃತಿಗಳಲ್ಲಿ ಒಂದು

**ಪರಿಣಾಮಶುದ್ಧಿ** – ಮನಃಪರಿಪಾಕ

**ಪರಿನಿರ್ವಾಣ** – ಸಂಸಾರಬಂಧನದಿಂದ ಸಂಪೂರ್ಣ ಮುಕ್ತತೆ. ಇದು ಏಳನೆಯ ಪರಮಸ್ಥಾನ

**ಪರಿನಿರ್ವಾಣಪೂಜೆ** – ತೀರ್ಥಂಕರನ ಪರಿನಿರ್ವಾಣದ ನಂತರ ಚಿತೆಯಿಂದ ಉಳಿಯುವ ಬೂದಿಯನ್ನು ದೇವತೆಗಳು ಧರಿಸುವುದು

**ಪರಿನಿಷ್ಕ್ರಮಣ** – ಒಂದು ಗರ್ಭಾನ್ವಯಕ್ರಿಯೆ, ಐಹಿಕವನ್ನು ತೊರೆಯುವುದು

**ಪರಿನಿಷ್ಕ್ರಮಣಕಲ್ಯಾಣ** – ತೀರ್ಥಂಕರನ ಪಂಚಕಲ್ಯಾಣಗಳಲ್ಲಿ ಮೂರನೆಯದು; ವೈರಾಗ್ಯದಿಂದ ಐಹಿಕತೆಯ ತೊರೆಯುವಿಕೆ

**ಪರಿವಾರದಪ್ಸರೋಗಣ** – ಅಚ್ಯುತೇಂದ್ರನ ಒಬ್ಬೊಬ್ಬ ಮಾದೇವಿಗೂ ಇರುವ ಮಂದಿ ಪರಿವಾರದೇವಿಯರು; ಎಲ್ಲ ಸೇರಿ ಅಚ್ಯುತೇಂದ್ರನಿಗೆ ಒಟ್ಟು ಮಂದಿ ದೇವಿಯರು

**ಪರಿವೀತದೇಹಬಿಂಬತೆ** – ದೇಹಕ್ಕೆ ನೆರಳು ಇಲ್ಲದಿರುವುದು

**ಪರಿಹಾರಶುದ್ಧಿ** – ಐದು ಬಗೆಯ ನಡವಳಿಕೆಗಳಲ್ಲಿ ಒಂದು. ಚಾರಿತ್ರಶುದ್ಧಿ

**ಪರೀಷಹ** – ತಪಶ್ಚರಣಕ್ಕೆ ಇರುವ ಇಪ್ಪತ್ತೆರಡು ಬಗೆಯ ಅಡ್ಡಿಗಳು: ಹಸಿವು, ಬಾಯಾರಿಕೆ, ಚಳಿ, ಉಷ್ಣ, ಸೊಳ್ಳೆ ಮುಂತಾದವುಗಳ ಕಚ್ಚುವಿಕೆ, ಬತ್ತಲೆಯಿರುವುದರಿಂದಾಗುವ ತೊಂದರೆಗಳು, ಅರತಿ, ಸ್ತ್ರೀವಿರಹ, ಸಂಚಾರಬಾಧೆ, ಶಯ್ಯಾಬಾಧೆ, ಆಸನಬಾಧೆ, ಬೈಗುಳ, ಯಾಚನೆಯಿಂದಾಗುವ ತೊಂದರೆಗಳು, ಹೊಡೆತ, ಭಿಕ್ಷೆ ದೊರೆಯದ ಖೇದ, ತಪಸ್ಸಿಗೆ ತಕ್ಕ ಫಲ ಸಿಕ್ಕದಿರುವುದು, ರೋಗ, ಮುಳ್ಳು ಕಲ್ಲುಗಳಿಂದ ತೊಂದರೆ, ಅಹಂಕಾರ, ಅಜ್ಞಾನದ ಕೊರಗು, ಸ್ನಾನವಿರದ್ದರಿಂದಾಗುವ ಬಾಧೆ, ಜನರಿಂದ ಪುರಸ್ಕಾರ ದೊರೆಯದಿರುವುದು

**ಪರ್ಯಾಪ್ತಿ** – ನಾಮಪ್ರಕೃತಿಗಳಲ್ಲಿ ಒಂದು; ಶರೀರದ ಪುದ್ಗಲರಚನೆ ಪೂರ್ಣಗೊಂಡಿರುವುದು; ಇದರಲ್ಲಿ ಆರು ಬಗೆ: ಆಹಾರ, ಶರೀರ, ಇಂದ್ರಿಯ, ಶ್ವಾಸೋಚ್ಛ್ವಾಸ, ಭಾಷಾ, ಮನಸ್

**ಪಲ್ಯ** – ಬಹು ದೊಡ್ಡ ಸಂಖ್ಯೆಯ ಎಣಿಕೆಯ ಕಾಲಾವಧಿ; ಇದರಲ್ಲಿ ಮೂರು ಬಗೆ: ವ್ಯವಹಾರಪಲ್ಯ, ಉದ್ಧಾರಪಲ್ಯ ಹಾಗೂ ಅದ್ಧಾಪಲ್ಯ

**ಪಲ್ಯಂಕಾಸನ** – ಒಂದು ಬಗೆಯ ಯೋಗಾಸನ. ಎಡಪಾದವನ್ನು ಬಲತೊಡೆಯ ಮೇಲೂ ಬಲಪಾದವನ್ನು ಎಡತೊಡೆಯ ಮೇಲೂ ಇರಿಸಿ ಧ್ಯಾನಕ್ಕೆ ಕುಳಿತುಕೊಳ್ಳುವ ಭಂಗಿ

**ಪವನಂಜಯ** – ಭರತ ಚಕ್ರವರ್ತಿಯ ಏಳು ಜೀವರತ್ನಗಳಲ್ಲಿ ಒಂದಾದ ತುರಗರತ್ನದ ಹೆಸರು

**ಪಾಂಡುಕ** – ಮೇರುಪರ್ವತದ ಮೇಲಿರುವ ನಾಲ್ಕು ವನಗಳಲ್ಲಿ ಒಂದು. ಉಳಿದ ಮೂರು: ಭದ್ರಶಾಲ, ನಂದನವನ ಮತ್ತು ಸೌಮನಸ; ಪಾಂಡುಕ ಎಂಬುದು ನವನಿಧಿಗಳಲ್ಲಿ ಒಂದು [ಹದಿನೆಂಟು

ಪ್ರಕಾರದ ಧಾನ್ಯಗಳನ್ನು ಒದಗಿಸುವ ನಿಧಿ] (ಶ್ರೀಗೃಹದೊಳ್ ಪುಟ್ಟದ ಕಾಳ ಮಹಾಕಾಳ ನೈಸರ್ಪ ಪಾಂಡುಕ ಪದ್ಮ ಪಿಂಗಳ ಮಾಣವಕ ಶಂಖ ಸರ್ವರತ್ನಂ ಗಳೆಂಬ ನವನಿಧಿಗಳುಂ)

**ಪಾತ್ರ** – ದಾನಸ್ವೀಕಾರಕ್ಕೆ ಯೋಗ್ಯ; ದಾನಕ್ಕೆ ಪಾತ್ರರಾಗುವವರಲ್ಲಿನ ಮೂರು ಭೇದಗಳು: ಉತ್ತಮ, ಮಧ್ಯಮ, ಕನಿಷ್ಠ

**ಪಾತ್ರತ್ವ** – ಜೈನನಾದವನಿಗೆ ಲಭಿಸುವ ವಿಶೇಷಗಳಲ್ಲಿ ಒಂದು, ಅರ್ಹತೆ (ಅತಿಬಾಲವಿದ್ಯಾ, ಕುಲಾವಧಿ, ವರ್ಣೋತ್ತಮತ್ವ, ಪಾತ್ರತ್ವ, ಸೃಷ್ಟ್ಯಧಿಕಾರ, ವ್ಯವಹಾರೇಶಿತ್ವ, ಅವಧ್ಯತ್ವ, ಅದಂಡತ್ವ, ಮಾನಾರ್ಹತ್ವ, ಪ್ರಜಾಸಂಬಂಧಾಕರ ಮೆಂಬ ಪತ್ತುಂ ಅಧಿಕಾರಂಗಳನಜಿಪಿ)

**ಪಾತ್ರದತ್ತಿ** – ತಪಸ್ವಿಗಳಿಗೆ ನೀಡುವ ಆಹಾರ ಮೊದಲಾದವುಗಳ ದಾನ

**ಪಾತ್ರದಾನ** – ಪಾತ್ರದತ್ತಿ, ಯೋಗ್ಯರಿಗೆ ಕೊಟ್ಟ ದಾನ

**ಪಾರಾವಾರ** – ಸಾಗರ, ಒಂದು ದೀರ್ಘ ಅವಧಿ

**ಪಾರಿಷದ** – ಒಂದು ದೇವತಾವರ್ಗ

**ಪುಂಡರೀಕಿಣೀ** – ವಜ್ರದಂತನ ರಾಜಧಾನಿ

**ಪುಂವೇದ** – ಒಂದು ಬಗೆಯ ನೋಕಷಾಯ; ಗಂಡುಜೀವಕ್ಕೆ ಹೆಣ್ಣಿನ ಮೋಹವುಂಟು ಮಾಡುವ ಕರ್ಮ

**ಪುಣ್ಯಯಜ್ಞ**– ದೀಕ್ಷೆ ಪಡೆದವನು ಮಾಡುವ ಚತುರ್ದಶಪೂರ್ವಗಳ ಓದುವಿಕೆ ಮತ್ತು ಕೇಳುವಿಕೆ, ಆರನೆಯ ದೀಕ್ಷಾನ್ವಯಕ್ರಿಯೆ

**ಪುದ್ಗಲ** – ಪರಮಾಣುಗಳ ಸಂಯೋಗದಿಂದ ಉಂಟಾದ ಹಾಗೂ ಸ್ಪರ್ಶ, ಗಂಧ, ಬಣ್ಣಗಳನ್ನು ಹೊಂದಿದ ಅಜೀವಸತ್ವ

**ಪುಬ್ಬ** – [ಪೂರ್ವ] ದೀರ್ಘ ಕಾಲಾವಧಿ, ಎಪ್ಪತ್ತುಲಕ್ಷ ಮೂವತ್ತು ಸಾವಿರ ಕೋಟಿ ವರ್ಷಗಳು

**ಪುರೋಹಿತರತ್ನ** – ಚಕ್ರವರ್ತಿಗೆ ದೊರಕುವ ಏಳು ಜೀವರತ್ನಗಳಲ್ಲಿ ಒಂದು, ಸಾಕೇತ ನಗರದಲ್ಲಿ ಹುಟ್ಟಿದ್ದು

**ಪುಷ್ಕಲಾವತಿ** – ಭರತನ ಮಲಗುವ ಮನೆ

**ಪೂಜಾರಾಧ್ಯ** – ನಲವತ್ತೆಂಟು ದೀಕ್ಷಾನ್ವಯ ಕ್ರಿಯೆಗಳಲ್ಲಿ ಒಂದು

**ಪೂಜೋಪಲಂಭನ** – ಗರ್ಭಾನ್ವಯಕ್ರಿಯೆ ಗಳಲ್ಲಿ ಒಂದು, ಗುರುವಿನ ಮೂಲಕ ಧರ್ಮವನ್ನು ತಿಳಿಯುವುದು

**ಪೂರ್ವ** – ಶ್ರುತಾಂಗವನ್ನು ವಿವರಿಸುವ ಉತ್ಪಾದ, ಅಗ್ರಾಯಣೀಯ, ವೀರ್ಯ ಪ್ರವಾದ, ಅಸ್ತಿನಾಸ್ತಿಪ್ರವಾದ, ಜ್ಞಾನ ಪ್ರವಾದ, ಸತ್ಯಪ್ರವಾದ, ಆತ್ಮಪ್ರವಾದ, ಕರ್ಮಪ್ರವಾದ, ಪ್ರತ್ಯಾಖ್ಯಾನ, ವಿದ್ಯಾನುವಾದ, ಕಲ್ಯಾಣ, ಪ್ರಾಣಾವಾಯು, ಕ್ರಿಯಾವಿಶಾಲ ಮತ್ತು ಲೋಕಬಿಂದುಸಾರ ಎಂಬ ಹದಿನಾಲ್ಕು ಭಾಗಗಳಲ್ಲಿ ಒಂದು

**ಪೃಥಕ್ತ್ವವಿತರ್ಕವಿಚಾರ** – ಎಂಟನೆಯ ಗುಣಸ್ಥಾನದಿಂದ ಹನ್ನೆರಡನೆಯ ಗುಣಸ್ಥಾನದ ಕೆಲವು ಭಾಗಗಳವರೆಗೆ ನಡೆಯುವ ಶುಕ್ಲಧ್ಯಾನ; ಪ್ರಥಮಶುಕ್ಲಧ್ಯಾನ

**ಪ್ರಕೀರ್ಣಕ** – ಒಂದು ನರಕದ ಹೆಸರು

**ಪ್ರಕೃತಿ** – ಹದಿನಾರು ಕರ್ಮಪ್ರಕೃತಿಗಳು: ನಿದ್ರಾನಿದ್ರಾ, ಪ್ರಚಲಾಪ್ರಚಲಾ, ಸ್ತ್ಯಾನಗೃದ್ಧಿ, ನರಕಗತಿ, ತಿರ್ಯಗ್ಗತಿ, ಏಕೇಂದ್ರಿಯಜಾತಿ, ದ್ವೀಂದ್ರಿಯಜಾತಿ, ತ್ರೀಂದ್ರಿಯಜಾತಿ, ಚತುರಿಂದ್ರಿಯಜಾತಿ, ನರಕಗತಿ ಪ್ರಾಯೋಗಾನುಪೂರ್ವಿ, ತಿರ್ಯಗ್ಗತಿ ಪ್ರಾಯೋಗಾನುಪೂರ್ವಿ, ಆತಪ, ಉದ್ಯೋತ, ಸ್ಥಾವರ, ಸೂಕ್ಷ್ಮ, ಸಾಧಾರಣ

**ಪ್ರಜಾಸಂಬಂಧಾಂತರ** – ಅತಿಬಾಲವಿದ್ಯಾ, ಕುಲಾವಧಿ, ವರ್ಣೋತ್ತಮತ್ವ, ಪಾತ್ರತ್ವ, ಸೃಷ್ಟ್ಯಧಿಕಾರ, ವ್ಯವಹಾರೇಶಿತ್ವ, ಅವಧ್ಯತ್ವ, ಅದಂಡ್ಯತ್ವ, ಮಾನಾರ್ಹತ್ವ, ಪ್ರಜಾ ಸಂಬಂಧಾಂತರ ಎಂಬ ಜೈನಬ್ರಾಹ್ಮಣನ ಹತ್ತು ಅಧಿಕಾರಗಳು

**ಪ್ರಜ್ಞಪ್ತಿವಿದ್ಯೆ** – ಒಂದು ಬಗೆಯ ವಿದ್ಯೆ

**ಪ್ರತರಕ್ರಿಯಾ** – ಪರಿನಿರ್ವಾಣ ಸಮಯದಲ್ಲಿ ಆತ್ಮನು ವಿಸ್ತಾರಗೊಳ್ಳುವ ಸ್ಥಿತಿ

**ಪ್ರತಿಗ್ರಹ** – ದಾನಸ್ವೀಕಾರ; ಮುನಿಗಳು ಚರಿಗೆಗೆ ಬಂದಾಗ ಮನೆಯೊಳಕ್ಕೆ ಕರೆದೊಯ್ಯುವುದು

**ಪ್ರತಿಮಾಯೋಗ** – ಒಂದೇ ಸ್ಥಳದಲ್ಲಿದ್ದು ತಪಸ್ಸನ್ನಾಚರಿಸುವುದು

**ಪ್ರತೀಂದ್ರ** – ಇಂದ್ರನಂತೆಯೇ ಆಯುಷ್ಯ, ಐಶ್ವರ್ಯ, ಪರಿವಾರ, ಆಜ್ಞೆ ಮುಂತಾದವುಗಳಿರುವ ದೇವರು

**ಪ್ರಥಮ ಕಲ್ಪೇಶ್ವರ** – ಮೊದಲನೆಯ ಕಲ್ಪದ ಇಂದ್ರ, ಸೌಧರ್ಮೇಂದ್ರ

**ಪ್ರಥಮಕಲ್ಯಾಣ** – ತೀರ್ಥಂಕರನಿಗೆ ಮಾಡುವ ಪಂಚಕಲ್ಯಾಣಗಳಲ್ಲಿ ಮೊದಲನೆಯದು

**ಪ್ರಥಮಾನುಯೋಗ** – ತೀರ್ಥಂಕರರು ಉಪದೇಶಿಸಿದ ಶಾಸ್ತ್ರಸಮುದಾಯದಲ್ಲಿ ಮೊದಲನೆಯದು

**ಪ್ರಭಾವನೆ** – ಸಮ್ಯಗ್ದರ್ಶನದ ಎಂಟು ಅಂಗಗಳಲ್ಲಿ ಕೊನೆಯದು, ಜೈನಧರ್ಮದ ಹಿರಿಮೆಯನ್ನು ತಿಳಿಸುವುದು

**ಪ್ರಮತ್ತ** – ಆತ್ಮನ ಎರಡು ಅವಸ್ಥೆಗಳಲ್ಲಿ ಒಂದು, ಅಶುದ್ಧಾತ್ಮನಲ್ಲಿ ಕೆಳತರಗತಿಯ ಆರು ಗುಣಸ್ಥಾನಗಳಲ್ಲಿ ಕಾಣಬರುವ ಪರಿಣಾಮ, ಇನ್ನೊಂದು 'ಅಪ್ರಮತ್ತ'

**ಪ್ರಮಾದ** – ಹದಿನೈದು ಬಗೆಯ ದೋಷಗಳು: ಸ್ತ್ರೀಕಥೆ, ಭೋಜನಕಥೆ, ರಾಷ್ಟ್ರಕಥೆ, ಅವನೀಪಾಲಕಥೆ ಎಂಬ ನಾಲ್ಕು ವಿಕಥೆಗಳು; ಕ್ರೋಧ, ಮಾನ, ಮಾಯೆ, ಲೋಭ ಎಂಬ ನಾಲ್ಕು ಬಗೆಯ ಕಷಾಯಗಳು: ಸ್ಪರ್ಶನೇಂದ್ರಿಯ, ರಸನೇಂದ್ರಿಯ, ಘ್ರಾಣೇಂದ್ರಿಯ, ಚಕ್ಷುರಿಂದ್ರಿಯ, ಕರ್ಣೇಂದ್ರಿಯ ಎಂಬ ಐದು ಇಂದ್ರಿಯಗಳು, ನಿದ್ರೆ ಮತ್ತು ಸ್ನೇಹ

**ಪ್ರವ್ರಜ್ಯ** – [ಸಂಚಾರ ಮಾಡುವ] ಸನ್ಯಾಸದೀಕ್ಷೆ.

**ಪ್ರಶಾಂತಿ** – ಐವತ್ತಮೂರು ಗರ್ಭಾನ್ವಯ ಕ್ರಿಯೆಗಳಲ್ಲಿ ಒಂದು, ವೈರಾಗ್ಯ ವೃತ್ತಿ

**ಪ್ರಾಗ್ಭಾರಭೂತಳ** – ಸಿದ್ಧಕ್ಷೇತ್ರ

**ಪ್ರಾಣತ** – ಹದಿನಾರು ಸ್ವರ್ಗಗಳಲ್ಲಿ ಹದಿನಾಲ್ಕನೆಯದು

**ಪ್ರಾತಿಹಾರ್ಯ** – ಕೇವಲಜ್ಞಾನ ಪಡೆದ ತೀರ್ಥಂಕರನಿಗೆ ಒದಗುವ ಅಶೋಕವೃಕ್ಷ, ದಿವ್ಯಪುಷ್ಪ ವೃಷ್ಟಿ, ದಿವ್ಯಧ್ವನಿ, ಚಾಮರ, ಆಸನ, ಭಾಮಂಡಲ, ದೇವದುಂದುಭಿ, ಛತ್ರಗಳೆಂಬ ಎಂಟು ಸವಲತ್ತುಗಳು

**ಪ್ರಾಯಶ್ಚಿತ್ತ** – ಅಭ್ಯಂತರತಪಗಳಲ್ಲಿ ಒಂದು; ತಿಳಿಯದೆ ನಡೆದಿರಬಹುದಾದ ತಪ್ಪಿನ ಪರಿಹಾರಕ್ಕೆ ನಡೆಸುವ ಚಿತ್ತಶೋಧನೆ. ನೋಡಿ, 'ಅಭ್ಯಂತರತಪಸ್ಸು'

**ಪ್ರಾಯೋಗ್ಯ** – ಕರ್ಮವು ಕಡಿಮೆಯಾಗುವುದು.

**ಪ್ರಾಯೋಪಗಮನ** – ರೋಗವಿದ್ದರೂ ಚಿಕಿತ್ಸೆಗೆ ಅವಕಾಶವೀಯದೆ, ನಿರಾಹಾರಿಯಾಗಿ ಮರಣವನ್ನು ಹೊಂದುವ ವ್ರತ

**ಪ್ರಿಯೋದ್ಭವ** – ಒಂದು ಗರ್ಭಾನ್ವಯಕ್ರಿಯೆ, ಜಾತಕರ್ಮ

**ಪ್ರೀತಿ** – ಒಂದು ಗರ್ಭಾನ್ವಯಕ್ರಿಯೆ, ಗರ್ಭವತಿಯು ಮೂರನೇ ತಿಂಗಳಲ್ಲಿ ಮಾಡುವ ಜಿನಪೂಜೆ

**ಬಂಧ** – ಹಾಲು ನೀರು ಬೆರೆತ ರೀತಿಯ ಕರ್ಮದ ಜೀವನ

**ಬಂಧನ** – ಶರೀರ ನಾಮಕರ್ಮದ ಉದಯದಿಂದ ಪುದ್ಗಲಪ್ರದೇಶಗಳು ಬೆರೆಯುವುದು

**ಬಲಋದ್ಧಿ** – ಮುನಿಗಳು ಒಂದು ಅಂತ ರ್ಮುಹೂರ್ತದಲ್ಲಿ ದ್ವಾದಶಾಂಗಗಳನ್ನು ಪಠಿಸಲು, ಹಾಗೂ ಕಿರು ಬೆರಳಿನಿಂದ ಮೂರು ಲೋಕಗಳನ್ನೆತ್ತಲು ಸಮರ್ಥ ರಾಗುತ್ತಾರೆ

**ಬಲದೇವ** – ಅರವತ್ತು ಮೂವರು ಶಲಾಕಾ ಪುರುಷರಲ್ಲಿನ ಒಂಬತ್ತು ಮಂದಿಯಲ್ಲಿನ

ಬಲದೇವರ ಗುಂಪು; ವಿಜಯ, ಅಚಲ, ಸುಧರ್ಮ, ಸುಪ್ರಭ, ಸುದರ್ಶನ, ನಂದಿ, ನಂದಿಮಿತ್ರ, ರಾಮ, ಪದ್ಮ ಎಂಬುವವರು

**ಬಲಿ** – ಶಾಂತಿಕಪೌಷ್ಟಿಕಾದಿ ಕರ್ಮಗಳನ್ನೊಳಗೊಂಡ ಪೂಜೆ

**ಬಹಿರ್ಯಾನ** – ಒಂದು ಗರ್ಭಾನ್ವಯಕ್ರಿಯೆ, ಮಗುವನ್ನು ಬಾಣಂತಿಮನೆಯಿಂದ ಹೊರಗೆ ಒಯ್ಯುವುದು

**ಬಹ್ವಾರಂಭಪರಿಗ್ರಹ** – ಪಂಚಮಹಾಪಾತಕಗಳಲ್ಲಿ ಒಂದು, ತುಂಬ ಪ್ರಯತ್ನದಿಂದ ಹಣ ಸಂಪಾದಿಸುವುದು

**ಬಹ್ವಾರಂಭಪರಿಗ್ರಹತ್ವ** – ಜೀವದ ಮೇಲಾಗುವ ಒಂದು ಅಶುಭ ಪರಿಣಾಮ

**ಬಾದರ** – ಜೀವಗಳ ಹದಿಮೂರು ಪ್ರಕೃತಿಗಳಲ್ಲಿ ಒಂದು

**ಬಾದರನಾಮಕರ್ಮ** – ಇದರಿಂದ ಇತರರಿಗೆ ತೊಂದರೆ ಕೊಡುವ ಶರೀರವು ಪ್ರಾಪ್ತವಾಗುತ್ತದೆ

**ಬಾದರರೂಪ** – ಸ್ಥೂಲ ರೂಪ, ಏಕಜೀವಿಗಳಾದ ವನಸ್ಪತಿ ಮುಂತಾದವುಗಳದ್ದು ಸೂಕ್ಷ್ಮ ರೂಪ; ಕ್ರಿಮಿ ಮೊದಲಾದ ದ್ವೀಂದ್ರಿಯಾದಿ ಜೀವಗಳದ್ದು ಸ್ಥೂಲ ರೂಪ

**ಬಾಹ್ಯಾಭ್ಯಂತರಪರಿಗ್ರಹ** – ನೋಡಿ, ಪರಿಗ್ರಹ

**ಬಿಜ್ಜೆ** – ದೇಹವನ್ನು ಬದಲುಮಾಡುವ ಶಕ್ತಿ, ವೈಕುರ್ವಣಶಕ್ತಿ

**ಬುದ್ಧಿ** – ಏಳು ಬಗೆಯ ಋದ್ಧಿಗಳಲ್ಲಿ ಒಂದು

**ಬುದ್ಧಿಸಾಗರ** – ಭರತ ಚಕ್ರವರ್ತಿಯ ಏಳು ಜೀವರತ್ನಗಳಲ್ಲಿ ಒಂದಾದ ಪುರೋಹಿತ ರತ್ನದ ಹೆಸರು

**ಬೆಳ್ಳವಾಸ** – ಚಳಿಗಾಲದಲ್ಲಿ ಪ್ರವಾಹದಲ್ಲಿ ನಿಂತು ಮಾಡುವ ತಪಸ್ಸು

**ಬ್ರಹ್ಮಕಲ್ಪ** – ಹದಿನಾರುಕಲ್ಪಗಳಲ್ಲಿ ಒಂದು, ಬ್ರಹ್ಮ ಎಂಬ ಹೆಸರಿನ ಕಲ್ಪ

**ಬ್ರಹ್ಮಸೂತ್ರ** – ಯಜ್ಞೋಪವೀತ

**ಬ್ರಹ್ಮೇಂದ್ರತೆ** – ಬ್ರಹ್ಮಕಲ್ಪದ ಒಡೆತನ

**ಭಗವತ್ಕೃತ** – ತೀರ್ಥಂಕರನಿಂದ ಆದ (ವಿತತಾಷಾಢದ ಬಹುಳ ಪ್ರತಿಪದ್ದಿನದಂದು ಕೀರ್ತಿ ನೆಗಟ್ಟಿರೆ ಭಗವತ್ಕೃತಯುಗಮಾದುದರಿಂದಂ ಕೃತಯುಗಮೆಂಬರ್ ಪುರಾಣವಿದರಿದನೀಗಳ್)

**ಭಗವದ್ರೂಪ** – ಗಣಧರರೂಪ

**ಭದ್ರಮುಖ** – ಭರತ ಚಕ್ರವರ್ತಿಯ ಏಳು ಜೀವರತ್ನಗಳಲ್ಲೊಂದಾದ ತಕ್ಷಕರತ್ನದ ಹೆಸರು

**ಭದ್ರಶಾಲ** – ಮೇರುಪರ್ವತದ ಮೇಲಿರುವ ನಾಲ್ಕು ವನಗಳಲ್ಲಿ ಒಂದು, ಉಳಿದ ಮೂರು: ನಂದನ ಸೌಮನಸ ಮತ್ತು ಪಾಂಡುಕ

**ಭವನವನಜ್ಯೋತಿಃಕಲ್ಪಾವಾಸ** – ಭವನವಾಸಿ, ವ್ಯಂತರ, ಜ್ಯೋತಿಷ ಮತ್ತು ಕಲ್ಪವಾಸಿಗಳೆಂಬ ನಾಲ್ಕು ಪ್ರಕಾರದ ದೇವತೆಗಳ ನಿವಾಸಗಳು

**ಭವಪ್ರತ್ಯಯಜ್ಞಾನ** – ನಾರಕಿಗಳಿಗೂ ದೇವತೆಗಳಿಗೂ ಆಯಾ ಭವಗಳು ಕಾರಣವಾಗಿ ಉಂಟಾಗುವ ಜ್ಞಾನ

**ಭವಾವಳಿ** – ಪೂರ್ವಜನ್ಮಗಳ ಕಥನ

**ಭವ್ಯ** – ಜಿನಧರ್ಮದಲ್ಲಿ ನಂಬಿಕೆಯಿಟ್ಟವನು; ಮೋಕ್ಷಕ್ಕೆ ಅರ್ಹನಾದ ಜೀವ

**ಭವ್ಯತೆ** – ಮೋಕ್ಷಾರ್ಹತೆ, ರತ್ನತ್ರಯ ಪ್ರಾಪ್ತವಾಗುವಿಕೆ

**ಭವ್ಯಮಾಲೆ** – ರತ್ನತ್ರಯ ಪ್ರಾಪ್ತವಾಗುವ ಯೋಗ್ಯತೆಯುಳ್ಳ ಜೀವಸಮೂಹ

**ಭಾಜನಾಂಗ** – ಕಲ್ಪಾಂಗಕುಜಗಳಲ್ಲಿ ಒಂದು, ಕೇಳಿದ ಪಾತ್ರೆಗಳನ್ನು ನೀಡುವಂಥದು

**ಭಾಜನಾಂಗತರು** – ಪಾತ್ರೆ ಪಡುಗಗಳನ್ನು ಕೊಡುವ ಕಲ್ಪವೃಕ್ಷ

**ಭಾಮಂಡಲ[ಳ]** – ಪ್ರಭಾವಲಯ, ಅರ್ಹಂತನಿಗಿರುವ ಎಂಟು ಪ್ರಾತಿಹಾರ್ಯಗಳಲ್ಲಿ ಒಂದು

**ಭಾವನ** – ನಾಲ್ಕು ಬಗೆಯ ದೇವತೆಗಳಲ್ಲಿ ಒಂದು ಬಗೆ, ಭವನವಾಸಿ

**ಭುಜಬಲಿ** – ಆದಿತೀರ್ಥಂಕರನ ಮಗನಾದ ಬಾಹುಬಲಿ

**ಭೂಷಣಾಂಗ** – ಒಂದು ಕಲ್ಪವೃಕ್ಷ, ಆಭರಣಗಳನ್ನು ನೀಡುವಂಥದು

**ಭೈಷಜ್ಯ[ದಾನ]** – ಔಷಧಿ. ದಾನದ ನಾಲ್ಕು ಬಗೆಗಳಲ್ಲಿ ಒಂದು

**ಭೋಗಭೂಮಿ** – ಭೂಮಿಯ ಮೇಲೆಯೇ ಇರುವುದುದೆಂದು ಹೇಳಲಾದ, ಪುಣ್ಯವಂತರು ಹುಟ್ಟುವ ಸ್ಥಳ, ಇಲ್ಲಿ ರೋಗರುಜಿನಾದಿಗಳಿರುವುದಿಲ್ಲ

**ಭೋಜನಾಂಗ** – ಬಯಸಿದ ಆಹಾರ ನೀಡುವ ಕಲ್ಪವೃಕ್ಷ, ನೋಡಿ

**ಮಂದರ** – ಮೇರುಪರ್ವತ

**ಮಂದರಾದ್ರೀಂದ್ರಾಭಿಷೇಕ** – ಒಂದು ಗರ್ಭಾನ್ವಯಕ್ರಿಯೆ, ಮಂದರಪರ್ವತದಲ್ಲಿ ಮಾಡುವ ಜಿನಶಿಶುವಿನ ಅಭಿಷೇಕ

**ಮಣಿರತ್ನ** – ಭರತ ಚಕ್ರವರ್ತಿಯ ಏಳು ಅಜೀವರತ್ನಗಳಲ್ಲೊಂದು, ಶ್ರೀಗೃಹದಲ್ಲಿ ಹುಟ್ಟಿದ್ದು

**ಮತಿಜ್ಞಾನ** – ಎಂಟು ವಿಧವಾದ ಜ್ಞಾನಗಳಲ್ಲಿ ಒಂದು, ಪಂಚೇಂದ್ರಿಗಳಿಂದಲೂ ಮನಸ್ಸಿನಿಂದಲೂ ಉಂಟಾಗುವ ಜ್ಞಾನ

**ಮದ್ಯಾಂಗ** – ಹತ್ತು ಕಲ್ಪಕುಜಗಳಲ್ಲಿ ಒಂದು, ಮದ್ಯ ನೀಡುವಂಥದು

**ಮಧ್ಯಮಪಾತ್ರ** – ದಾನಸ್ವೀಕರಿಸುವವರಲ್ಲಿನ ಒಂದು ಬಗೆ, ಸಮ್ಯಗ್ದರ್ಶನಶುದ್ಧನೂ ಅಣುವ್ರತಧಾರಿಯೂ ಆದವನು

**ಮನಃಪರ್ಯಯ** – ಮನಃಪರ್ಯಯಜ್ಞಾನ. ಮತಿ ಶ್ರುತ ಅವಧಿ ಮನಃಪರ್ಯಯ ಮತ್ತು ಕೇವಲ ಎಂಬ ಪಂಚವಿಧಜ್ಞಾನದಲ್ಲಿ ನಾಲ್ಕನೆಯದು, ಬೇರೆಯವರ ಮನಸ್ಸಿನಲ್ಲಿರುವುದನ್ನು ತಿಳಿದುಕೊಳ್ಳುವ ಜ್ಞಾನ

**ಮನಃಪರ್ಯಯಜ್ಞಾನಿ** – ಮನಃಪರ್ಯಯ ಜ್ಞಾನವುಳ್ಳವನು

**ಮನಃಪ್ರವೀಚಾರ** – ಮನಃಪ್ರವೀಚರಣ, ಮನಸ್ಸಿನಲ್ಲಿಯೇ ಮೈಥುನಸುಖವನ್ನನುಭವಿಸುವುದು

**ಮನಸಿಜ** – ಬಾಹುಬಲಿಯ ಹೆಸರುಗಳಲ್ಲಿ ಒಂದು

**ಮನು** – ಮನುಷ್ಯಕುಲ ಮಾರ್ಗದರ್ಶಕರಾದ ಹದಿನಾಲ್ಕು ಮಂದಿ: ಕುಲಧರ, ಮನುಗಳು ಪ್ರತಿಶ್ರುತಿ, ಸನ್ಮತಿ, ಕ್ಷೇಮಂಕರ, ಕ್ಷೇಮಂಧರ, ಸೀಮಂಕರ, ಸೀಮಂಧರ, ವಿಮಲವಾಹನ, ಚಕ್ಷುಷ್ಮಂತ, ಯಶಸ್ವಿ, ಅಭಿಚಂದ್ರ, ಚಂದ್ರಾಭ, ಮರುದ್ದೇವ, ಪ್ರಸೇನಜಿತ್ ಮತ್ತು ನಾಭಿರಾಜ

**ಮರುತ್ತ್ರಿಕ** – ಮೂರು ಬಗೆಯ ವಾಯುಗಳು: ಘನೋದಧಿ, ಘನವಾತ ಮತ್ತು ತನುವಾತಗಳು

**ಮಲಧಾರಿ** – ಸನ್ಯಾಸಿ

**ಮಹತ್ತರದೇವಿ** – ಜನಸಾಮಾನಿಕ ದೇವತೆ

**ಮಹಾಕಚ್ಛ** – ಪಶ್ಚಿಮ ವಿದೇಹದ ಒಂದು ನಾಡು

**ಮಹಾತಮಃಪ್ರಭಾ** – ಏಳನೆಯ ನರಕ

**ಮಹಾಪ್ರಾತಿಹಾರ್ಯ** – ಜಿನನಿಗೆ ಒದಗುವ ಅಶೋಕ ವೃಕ್ಷ, ಸುರಪುಷ್ಪವೃಷ್ಟಿ, ದಿವ್ಯಧ್ವನಿ, ಚತುಃಷಷ್ಟಿ, ರತ್ನಜಡಿತ ಸುವರ್ಣಪೀಠ, ಪ್ರಭಾವಲಯ, ದೇವದುಂದುಭಿ, ಛತ್ರತ್ರಯ ಎಂಬ ಎಂಟು ಮಂಗಳ ಲಾಂಛನಗಳು

**ಮಹಾಮಹ** – ಮಹಾರಾಜನು ಚತುರ್ಮುಖ ಮಂಟಪದಲ್ಲಿ ಮಾಡುವ ಜಿನಪೂಜೆ: ಕಲ್ಪದ್ರುಮ. ಚತುರ್ಮುಖ. ಸರ್ವತೋಭದ್ರ. ಐಂದ್ರಧ್ವಜ. ಅಷ್ಟಾಹ್ನಿಕ. ಬಲಿ.

ಸವನ, ತ್ರಿಸಂಧ್ಯಾಸೇವೆ ಎಂಬ ಎಂಟು ಬಗೆಯ ಪೂಜೆಗಳು ಸೇರಿದ ಪೂಜೆ

**ಮಹಾಮಹಿಮೆ** – ರಾಜರು ಮಾಡುವ ಮಹಾ ಜಿನಪೂಜೆ

**ಮಹಾವ್ರತ** – ಶ್ರಾವಕನು ಆಚರಿಸುವ ಪಂಚಾಣುವ್ರತಗಳನ್ನು ಸೂಕ್ಷ್ಮರೂಪದಲ್ಲಿ ಪರಿಪೂರ್ಣವಾಗಿ ಮುನಿಗಳು ಆಚರಿಸುವುವೇ ಮಹಾವ್ರತಗಳು

**ಮಹಿಮೆ** – ಪೂಜೆ

**ಮಾದೇವಿ** – ಅಚ್ಯುತೇಂದ್ರನ ಎಂಟು ಮಂದಿ ಪ್ರಧಾನದೇವಿಯರು

**ಮಾಧ್ಯಸ್ಥವೃತ್ತಿ** – ದುಷ್ಟರ ಬಗ್ಗೆ ವ್ರತಸ್ಥರು ಇರಿಸಿಕೊಳ್ಳಬೇಕಾದ ತಟಸ್ಥ ಭಾವನೆ

**ಮಾನಕಷಾಯ** – ನಾಲ್ಕು ಮಾನಸಿಕ ದೋಷಗಳಲ್ಲಿ ಒಂದು

**ಮಾನಸೋದೀರಿತ** – ಮಾತು ಮತ್ತು ವಿಚಾರಗಳಿಂದಾಗಿ ಮನಸ್ಸಿನಲ್ಲಾಗುವ ದುಃಖ

**ಮಾನಸ್ತಂಭ** – ಸಮವಸರಣಮಂಟಪದ ನಡುವಣ ಕಂಬ

**ಮಾನುಷೋತ್ತರಪರ್ವತ** – ಮಧ್ಯಮಲೋಕದ ಒಂದು ಪರ್ವತ, ಇದು ಪುಷ್ಕರದ್ವೀಪದ ನಟ್ಟನಡುವೆ ಗೋಲಾಕಾರವಾಗಿರುತ್ತದೆ; ಈ ಪರ್ವತವನ್ನು ದಾಟ ವಿದ್ಯಾಧರರು ಮತ್ತು ಋದ್ಧಿಮುನಿಪ್ರಾಪ್ತ ಮುನಿಗಳು ಹೋಗಲಾರರು; ಆದ್ದರಿಂದ ಇದಕ್ಕೆ ಮಾನುಷೋತ್ತರ ಎಂಬ ಹೆಸರು

**ಮಾರ್ಗಪ್ರಭಾವನೆ** – ಜಿನಧರ್ಮವನ್ನು ಹೊಳಪುಗೊಳಿಸುವುದು

**ಮಾಲ್ಯಮಹೀಜ** – ಹತ್ತು ಕಲ್ಪಕುಜಗಳಲ್ಲಿ ಒಂದು, ಬೇಕಾದ ಹೂಮಾಲೆಯನ್ನು ನೀಡುವ ಕಲ್ಪವೃಕ್ಷ

**ಮಾಸ** – ಎರಡು ಪಕ್ಷಗಳು ಅಥವಾ ಮೂವತ್ತು ದಿವಸಗಳು

**ಮಿಥ್ಯಾತ್ವ** – ದರ್ಶನಮೋಹನೀಯದಲ್ಲಿ ಒಂದು, ನಿಜವಾದ ತತ್ವಜ್ಞಾನವನ್ನು ನಂಬದಿರುವುದು, ಇದರಲ್ಲಿ ವಿಪರೀತ, ಏಕಾಂತ, ವಿನಯ, ಸಂಶಯ, ಅಜ್ಞಾನ ಎಂಬ ಐದು ಬಗೆ

**ಮಿಥ್ಯಾದೃಷ್ಟಿ** – ದೇವ, ಗುರು, ಶಾಸ್ತ್ರಗಳಲ್ಲಿ ನಂಬಿಕೆಯಿರದ ಮನೋಭಾವ

**ಮುಕ್ತಜೀವ** – ಜೀವತತ್ವಮುಕ್ತ ಹಾಗೂ ಸಂಸಾರಿ ಮುಕ್ತ ಎಂಬ ಎರಡು ಬಗೆಗಳಲ್ಲಿ ಒಂದು

**ಮುಕ್ತಾವಳಿತಪ** – ಒಂದು ಉಪವಾಸ ಒಂದು ಪಾರಣೆ, ಎರಡು ಉಪವಾಸ ಒಂದು ಪಾರಣೆ, ಮೂರು ಉಪವಾಸ ಒಂದು ಪಾರಣೆ, ನಾಲ್ಕು ಉಪವಾಸ ಒಂದು ಪಾರಣೆ, ಐದು ಉಪವಾಸ ಒಂದು ಪಾರಣೆ, ನಾಲ್ಕು ಉಪವಾಸ ಒಂದು ಪಾರಣೆ, ಮೂರು ಉಪವಾಸ ಒಂದು ಪಾರಣೆ, ಎರಡು ಉಪವಾಸ ಒಂದು ಪಾರಣೆ, ಒಂದು ಉಪವಾಸ ಒಂದು ಪಾರಣೆ – ಹೀಗೆ ಉಪವಾಸ ಹಾಗೂ ಪಾರಣೆ ಮಾಡುವ ವ್ರತ

**ಮುಖ್ಯ ಕಾಲ** – ಮಧ್ಯಮಖಂಡದಲ್ಲಿನ ಎರಡು ಕಾಲಗಳ ಪೈಕಿ ಒಂದು: ಆದಿಮಧ್ಯಾಂತಗಳಿಲ್ಲದ, ಒಂದು ಅವಸ್ಥೆಯಿಂದ ಮತ್ತೊಂದಕ್ಕೆ ಹೊಂದಿಕೆಯಾಗಬಲ್ಲ ವರ್ತನಾಸ್ವರೂಪವುಳ್ಳ ಹಾಗೂ ತನ್ನ ಯೋಗ್ಯತಾನುಗುಣವಾಗಿ ಗುಣ ಪರ್ಯಾಯಗಳಿಂದ ಪರಿವರ್ತನೆಯನ್ನು ಹೊಂದುವ ಪದಾರ್ಥಗಳನ್ನು ಪರಿವರ್ತನಗೊಳಿಸಲು ಸಹಾಯಕವೂ ಲೋಕಾಕಾರ ಪ್ರದೇಶ ಪರಿಮಾಣವೂ ಆದ ನಮ್ಮಂಥವರಿಗೆ ಕಲ್ಪನಾಮಾತ್ರವಾದರೂ ಸರ್ವಜ್ಞರಿಗೆ ಪ್ರತ್ಯಕ್ಷಗೋಚರವಾದುದು ಮುಖ್ಯಕಾಲ

**ಮುಡಿಪು** – ವ್ರತದ ಮೂಲಕ ಮರಣಿಸು

**ಮುಹೂರ್ತ** – ಎರಡು ನಾಳಿಕೆಗಳ ಅವಧಿ

**ಮೂಢತ್ರಯ** – ಮೂರು ಬಗೆಯ ತಪ್ಪು ಜ್ಞಾನಗಳು: ದೇವತಾಮೂಢ ಲೋಕ ಮೂಢ ಮತ್ತು ಮಿಥ್ಯಾಮೂಢ

**ಮೂಲಗುಣ** – ಮುನಿಗಳಿಗೆ ಬೇಕಾದ ಇಪ್ಪತ್ತೆಂಟು ಆವಶ್ಯಕ ಗುಣಗಳು: ಪಂಚ ಮಹಾವ್ರತ, ಪಂಚ ಸಮಿತಿ, ಪಂಚೇಂದ್ರಿಯನಿಗ್ರಹ, ದಿಗಂಬರತ್ವ, ಕೇಶಲುಂಚನ ಪ್ರತಿಜ್ಞೆ, ಷಡಾವಶ್ಯಕಗಳು, ನಿರ್ಜಾಧಕತ್ವ, ಸ್ನಾನರಾಹಿತ್ಯ, ದಂತಧಾವನ ರಾಹಿತ್ಯ, ನಿಂತು ಮಾಡುವ ಊಟ, ಒಂದೇ ಹೊತ್ತಿನ ಊಟ

**ಮೂವತ್ತೆರಡು ನಾಡು** – ವಿದೇಹಕ್ಷೇತ್ರದ ನಾಡುಗಳು

**ಮೂಱುರತ್ನಂಗಳ್** – ಸಮ್ಯಗ್ದರ್ಶನ, ಸಮ್ಯಗ್ಜ್ಞಾನ, ಸಮ್ಯಕ್ಚಾರಿತ್ರಗಳೆಂಬ ರತ್ನತ್ರಯಗಳು

**ಮೋಕ್ಷ** – 'ಸಪ್ತತತ್ವ'ಗಳಲ್ಲಿ ಒಂದು, ಎಲ್ಲದರಿಂದ ಬಿಡುಗಡೆ ಹೊಂದಿ ಆತ್ಮ ಪರಿಶುದ್ಧಗೊಳ್ಳುವುದು

**ಮೋಕ್ಷಪ್ರಾಸಾದ** – ಮುಕ್ತಿಯ ಸ್ಥಿತಿ

**ಮೋದ** – ಐವತ್ತಮೂರು ಗರ್ಭಾನ್ವಯ ಕ್ರಿಯೆಗಳಲ್ಲಿ ಒಂದು, ಗರ್ಭಪುಷ್ಟಿಗಾಗಿ ಒಂಬತ್ತನೇ ತಿಂಗಳಲ್ಲಿ ಮಾಡುವ ಕ್ರಿಯೆ

**ಮೋಹನೀಯಕರ್ಮ** – ಆತ್ಮನನ್ನು ಬಂಧಿಸುವ ಎಂಟು ಮೂಲಕರ್ಮಗಳಲ್ಲಿ ಒಂದು, ನೋಡಿ, 'ಕರ್ಮ'

**ಮೌನಾಧ್ಯಯನವೃತ್ತತ್ವ** – ಗರ್ಭಾನ್ವಯಕ್ರಿಯೆ ಗಳಲ್ಲಿ ಒಂದು, ಮೌನ ಶಾಸ್ತ್ರಾಭ್ಯಾಸ

**ಯಥಾಖ್ಯಾತಚಾರಿತ್ರ** – ಮೋಹನೀಯ ಕರ್ಮಗಳನ್ನೆಲ್ಲ ಕಳೆದುಕೊಂಡ ಆತ್ಮನ ಸ್ಥಿತಿ, ಸಪ್ತಸಂಯಮಗಳಲ್ಲಿ ಒಂದು

**ಯುಗಂಧರ** – ತೀರ್ಥಂಕರರ ಸಮವಸರಣ ಎಂಬ ತೀರ್ಥ

**ಯೋಗತ್ಯಾಗಾಗ್ರನಿರ್ವೃತಿ** – ಒಂದು ಗರ್ಭಾನ್ವಯ ಕ್ರಿಯೆ, ಸಮವಸರಣವನ್ನು ವಿಸರ್ಜಿಸಿ ವಿಹಾರಾದಿಗಳನ್ನು ಮಾಡುವುದು

**ಯೋಗನಿರೋಧ** – ಮನೋವಾಕ್ಕಾಯಗಳ ಚಂಚಲತೆಯನ್ನು ನಿಗ್ರಹಿಸುವುದು.

**ಯೋಗನಿರ್ವಾಣಸಾಧನ** – ಒಂದು ಗರ್ಭಾನ್ವಯ ಕ್ರಿಯೆ, ನಾಲ್ಕೂ ಬಗೆಯ ಆಹಾರವನ್ನು ತ್ಯಜಿಸಿ ಮಾಡುವ ಧ್ಯಾನ

**ಯೋಗನಿರ್ವಾಣಸಂಪ್ರಾಪ್ತಿ** – ಒಂದು ಗರ್ಭಾನ್ವಯ ಕ್ರಿಯೆ, ಸಲ್ಲೇಖನದಲ್ಲಿ ಪ್ರಯತ್ನಪರನಾಗಿ ಮಾಡುವ ತಪಸ್ಸು

**ಯೋಗಪಲ್ಯಂಕಾಸನ** – ಯೋಗದಲ್ಲಿನ ಅರ್ಧಪದ್ಮಾಸನ

**ಯೋಗಸಮ್ಮಹ** – ಒಂದು ಗರ್ಭಾನ್ವಯ ಕ್ರಿಯೆ; ಕೇವಲಜ್ಞಾನ ಪಡೆದನಂತರ ಹೊಂದುವ ಪೂಜೆ

**ಯೌವರಾಜ್ಯ** – ಒಂದು ಗರ್ಭಾನ್ವಯ ಕ್ರಿಯೆ, ಯುವರಾಜಪದವಿಯನ್ನು ಹೊಂದುವುದು

**ರಜ್ಜು** – ಒಂದು ಉದ್ದಳತೆ, ಎಂಟು ಹಸ್ತಗಳು

**ರತ್ನತ್ರಿತಯ** – ರತ್ನತ್ರಯ, ಸಮ್ಯಕ್‌ಜ್ಞಾನ, ಸಮ್ಯಕ್‌ದರ್ಶನ ಮತ್ತು ಸಮ್ಯಕ್ ಚಾರಿತ್ರಗಳು

**ರತ್ನಪುಷ್ಪಧಾರಾಸಾರ** – ರತ್ನ ಪುಷ್ಪ ಗಂಧೋದಕಗಳ ಮಳೆ ಮತ್ತು ಮಂದಮಾರುತ ಬೀಸುವುದು

**ರತ್ನಪ್ರಭಾ** – ಮೊದಲನೆಯ ನರಕ

**ರತ್ನಾಕರ** – ಸಾಗರ, ಒಂದು ನೀಳ ಅವಧಿ

**ರತ್ನಾವಳಿತಪ** – ಒಂದು ಉಪವಾಸ ಎರಡು ಪಾರಣೆ, ಒಂದು ಉಪವಾಸ ಮೂರು ಪಾರಣೆ, ಒಂದು ಉಪವಾಸ ನಾಲ್ಕು ಪಾರಣೆ, ಒಂದು ಉಪವಾಸ ಐದು ಪಾರಣೆ, ಐದು ಉಪವಾಸ ಒಂದು ಪಾರಣೆ, ನಾಲ್ಕು ಉಪವಾಸ ಒಂದು

ಪಾರಣೆ, ಮೂರು ಉಪವಾಸ ಒಂದು ಪಾರಣೆ, ಎರಡು ಉಪವಾಸ ಒಂದು ಪಾರಣೆ, ಒಂದು ಉಪವಾಸ ಒಂದು ಪಾರಣೆ – ಹೀಗೆ ಉಪವಾಸ ಹಾಗೂ ಪಾರಣೆ ಮಾಡುವ ವ್ರತ

**ರಮ್ಯಕ** – ನೀಲ ಮತ್ತು ರುಕ್ಮಿ ಪರ್ವತಗಳ ಹಾಗೂ ಪೂರ್ವಪಶ್ಚಿಮ ಸಮುದ್ರಗಳ ನಡುವಣ ಮಧ್ಯಮಭೋಗಭೂಂಇ

**ರಸಪಂಚಕ** – ಸಿಹಿ, ಹುಳಿ, ಕಟು, ಕಷಾಯ, ತಿಕ್ತ ಎಂಬ ಐದು ರುಚಿಗಳು

**ರಸಪರಿತ್ಯಾಗ** – ರಸಪದಾರ್ಥಗಳನ್ನು ತ್ಯಜಿಸುವುದು

**ರಸರ್ಧಿ** – ರಸ ಋದ್ಧಿ, ಇದರಿಂದ ಮುನಿಗಳ ಕೈಯ ನೀರಸ ಆಹಾರ ಪಧಾರ್ಥ ರುಚಿಕರವಾಗುತ್ತದೆ

**ರಸಪರಿತ್ಯಾಗ** – ಹಾಲು ಮೊಸರು ತುಪ್ಪ ಉಪ್ಪು ಎಣ್ಣೆ ಮುಂತಾದವುಗಳ ರುಚಿಗಳನ್ನು ತ್ಯಜಿಸುವ ನಾಲ್ಕನೆಯ ತಪಸ್ಸು

**ರೈವೃಷ್ಟಿ** – ರತ್ನಗಳ ಸುರಿಮಳೆ

**ರೌದ್ರಧ್ಯಾನ** – ಕೆಟ್ಟುದರಲ್ಲಿ ಕಾಣುವ ಸಂತೋಷ; ಇದರಲ್ಲಿ ಹಿಂಸಾನಂದ, ಮೃಷಾನಂದ, ಸ್ತೇಯಾನಂದ, ಪರಿಗ್ರಹಾನಂದ ಎಂಬ ನಾಲ್ಕು ಬಗೆ

**ಲಬ್ಧಿತ್ರಯ** – ಕಾಯ, ಕರಣ, ಉಪಶಮ ಎಂಬ ಮೂರು ಲಬ್ಧಿಗಳು

**ಲವಣಜಲಧಿ** – ಜಂಬೂದ್ವೀಪವನ್ನು ಆವರಿಸಿರುವ ಎರಡು ಲಕ್ಷ ಯೋಜನ ವಿಸ್ತಾರದ ಉಪ್ಪು ಸಮುದ್ರ

**ಲಿಪಿಸಂಖ್ಯಾನಸಂಗ್ರಹ** – ಒಂದು ಗರ್ಭಾನ್ವಯ ಕ್ರಿಯೆ. ಅಕ್ಷರಾಭ್ಯಾಸ

**ಲೇಶ್ಯಾ** – ಆತ್ಮನನ್ನು ಪಾಪ–ಪುಣ್ಯಗಳಿಗೆ ಅಧೀನಗೊಳಿಸುವಂಥವು; ಇವು ಆರು ಬಗೆ – ಕೃಷ್ಣ ನೀಲ ಕಪೋತ ಪೀತ ಪದ್ಮ ಮತ್ತು ಶುಕ್ಲ

**ಲೇಶ್ಯಾವಿಶುದ್ಧಿ** – ಲೇಶ್ಯೆಯು ಮಂದವಾಗುತ್ತ ನಡೆದು ಇಲ್ಲವಾಗುವುದು

**ಲೋಕಪಾಲ** – ಪ್ರತಿಯೊಬ್ಬ ಇಂದ್ರನಿಗೂ ಪೂರ್ವಾದಿ ದಿಕ್ಕುಗಳ ರಕ್ಷಕರಾಗಿರುವ ದಿಕ್ಪಾಲರು; ಒಂದು ದೇವತಾವರ್ಗ

**ಲೋಕಾಂತಿಕದೇವ** – ಬ್ರಹ್ಮಸ್ವರ್ಗದ ಅಂತ್ಯ ಪಟಲದಲ್ಲಿನ ಅಷ್ಟವಿಧ ದೇವತೆಗಳು; ಇವರು ವಿಷಯವಿರಕ್ತರು, ಇವರು ಚತುರ್ದಶಪೂರ್ವಧರರು, ತೀರ್ಥಂಕರರಿಗೆ ವೈರಾಗ್ಯವುಂಟಾದಾಗ ಅವರ ಪ್ರಶಂಸೆಗಾಗಿ ಭೂಲೋಕಕ್ಕೆ ಬರುವರು

**ಲೋಕಾಂತಿಕಾಮರ** – ಲೋಕಾಂತಿಕದೇವ

**ಲೋಕಾಕಾರ** – ಲೋಕದ ಆಕಾರವು ಸೊಂಟದ ಮೇಲೆ ಎರಡೂ ಕೈಗಳನ್ನಿಟ್ಟು ಕಿಸುಗಾಲಿನಲ್ಲಿ ನಿಂತ ವ್ಯಕ್ತಿಯನ್ನು ಹೋಲುವಂಥದು

**ಲೋಕಾಕಾಶ** – 'ಷಡ್ದ್ರವ್ಯ'ಗಳನ್ನು ಹೊಂದಿರುವ ಆಕಾಶಪ್ರದೇಶ

**ಲೋಕವಾಹಿನಿ** – ಭರತನ ಬಾಗು ಕತ್ತಿ

**ವಜ್ರತುಂಡ** – ಭರತನ ಶಕ್ತ್ಯಾಯುಧ

**ವಜ್ರಮಯ** – ಭರತ ಚಕ್ರವರ್ತಿಯ ಏಳು ಅಜೀವರತ್ನಗಳಲ್ಲೊಂದಾದ ಚರ್ಮರತ್ನದ ಹೆಸರು

**ವಜ್ರವೃಷಭನಾರಾಚಸಂಹನನ** – ವಜ್ರಕ್ಕೆ ಸಮಾನವಾದ ಅಸ್ಥಿಪಂಜರವು ನಿರ್ಮಾಣವಾದ ಹಾಗೂ ವಜ್ರಸಮಾನವಾದ ಕೀಲುಗಳಿಂದ ಕೀಲಿತವಾದ ದೇಹ

**ವತ್ಸಕಾವತಿ** – ವಿದೇಹದ ಸೀತಾನದಿಯ ದಂಡೆಯ ಒಂದು ನಾಡು

**ವನನಿಧಿ** – ಸಾಗರದಷ್ಟು ಅವಧಿ

**ವನವಧು** – ವ್ಯಂತರ ದೇವತೆ

**ವರ್ಣತ್ರಯ** – ಆದಿದೇವನು ಸ್ಥಾಪಿಸಿದ ಕ್ಷತ್ರಿಯ, ವೈಶ್ಯ ಮತ್ತು ಶೂದ್ರರೆಂಬ ಮೂರು ವರ್ಣಗಳು

**ವರ್ಣಲಾಭ** – ಗರ್ಭಾನ್ವಯಕ್ರಿಯೆಗಳಲ್ಲಿ ಒಂದು. ಬ್ರಾಹ್ಮಣತ್ವವನ್ನು ಪಡೆಯುವುದು

**ವರ್ಧಮಾನ** – ಭರತನಿಗಾಗಿ ಕಟ್ಟಿದ ನಾಟ್ಯಗೃಹ

**ವರ್ಷಧರ** – ಭರತ ಮುಂತಾದ ಕ್ಷೇತ್ರಗಳು ವರ್ಷಗಳು. ಅವುಗಳನ್ನು ವಿಭಾಗಿಸುವ ಪರ್ವತಗಳು ವರ್ಷಧರಪರ್ವತಗಳು

**ವಸನಾಂಗಕುಜ** – ಬೇಕಾದ ಬಟ್ಟೆಯನ್ನು ನೀಡುವ ಕಲ್ಪಕುಜ

**ವಸ್ತ್ರಾಂಗ** – ಕಲ್ಪಕುಜಗಳಲ್ಲಿ ಒಂದು. ಬೇಕಾದ ಬಟ್ಟೆಯನ್ನು ನೀಡುವಂಥದು

**ವಾತವಲಯ** – ಅನಂತವಾದ ಲೋಕವನ್ನು ಆವರಿಸಿರುವ ವಾಯುಸಮೂಹ

**ವಾನವ್ಯಂತರ** – ಕಿನ್ನರಕಿಂಪುರುಷ ಮುಂತಾದ ದೇವರುವಾರ್ತೆ – ಅಸಿ ಮಷಿ ಕೃಷಿ ವಾಣಿಜ್ಯ ಶಿಲ್ಪಕಾರ್ಯಗಳೆಂಬ ಶುದ್ಧವೃತ್ತಿಗಳಿಂದ ಸಂಪಾದಿಸುವುದು

**ವಾಲುಕಾಪ್ರಭೆ** – ಮೂರನೆಯ ನರಕ

**ವಾಸವ** – ಸೌಧರ್ಮೇಂದ್ರ

**ವಾಸುದೇವ** – ಒಬ್ಬ ಅರ್ಧಚಕ್ರವರ್ತಿ

**ವಿಕಿರಣಸಂಭವದೇವಿ** – ಅಚ್ಯುತೇಂದ್ರನ ಪ್ರತಿದೇವಿಯೂ ವಿಕ್ರಿಯಾಸಾಮರ್ಥ್ಯದಿಂದ ದಿವ್ಯರೂಪಗಳನ್ನು ಧರಿಸುತ್ತಾಳೆ

**ವಿಕ್ರಿಯರ್ಧಿ** – ವಿಕ್ರಿಯಾಋದ್ಧಿ. ಅಣಿಮಾದಿಗಳಿಂದ ಇಷ್ಟಬಂದಂತೆ ದೇಹರೂಪವನ್ನು ಬದಲಾವಣೆ ಮಾಡುವ ಶಕ್ತಿ

**ವಿಕ್ರಿಯಾಬಲ** – ಮಾಯಾಶಕ್ತಿ, ಇಂದ್ರಜಾಲ

**ವಿಕ್ರಿಯೆ** – ಶರೀರವನ್ನು ಜಡ–ಸೂಕ್ಷ್ಮ ಮೊದಲಾಗಿ ಮಾಡಲು ಸಾಧ್ಯವಾದ ಶಕ್ತಿ

**ವಿಜಯಪರ್ವತ** – ಭರತ ಚಕ್ರವರ್ತಿಯ ಏಳು ಜೀವರತ್ನಗಳಲ್ಲಿ ಒಂದಾದ ಗಜರತ್ನದ ಹೆಸರು

**ವಿಜಯಾರ್ಧ** – ಪೂರ್ವಪಶ್ಚಿಮವಾಗಿ ಹಬ್ಬಿರುವ ಒಂದು ಪರ್ವತ

**ವಿದ್ಯಾಧರಶ್ರೇಣಿ** – ವಿಜಯಾರ್ಧಪರ್ವತದ ಮೇಲೆ ಹತ್ತು ಯೋಜನಗಳ ಬಳಿಕ ಇರುವ ಉತ್ತರ ದಕ್ಷಿಣ ಎಂಬ ಎರಡು ಶ್ರೇಣಿಗಳು

**ವಿದ್ಯುತ್ಕುಮಾರಿ** – ಜಿನಜನನಿಗೆ ಮಣಿದರ್ಪಣ ಹಿಡಿಯಲು ನಿಯೋಜಿತರಾದ ದೇವಿ

**ವಿದ್ಯುತ್ಕುಮಾರೀ ಪುರಂಧ್ರಿ** – ಜಿನಜನನಿಯ ಗರ್ಭಶೋಧನ ಸಂದರ್ಭದಲ್ಲಿ ವನಿತಾಗೂಢ ವ್ಯಾಪಾರಕ್ಕೆಂದು ನಿಯೋಜಿತರಾದ ನಾಲ್ವರು ದೇವತೆಯರು (ವಿಜಯೆ ವೈಜಯಂತೆ ಜಯಂತೆ ಅಪರಾಜಿತೆಯೆಂಬ ವಿದ್ಯುತ್ಕುಮಾರೀ ಪುರಂಧ್ರಿಯರಂವ)

**ವಿದ್ಯುತ್‌ಪ್ರಭ** – ಭರತನ ಕರ್ಣಕುಂಡಲಗಳು

**ವಿಧಿ** – ಕರ್ಮಗಳನ್ನು ನಾಶಪಡಿಸುವ ವಿಧಾನ

**ವಿಧಿದಾನ** – ಒಂದು ಗರ್ಭಾನ್ವಯ ಕ್ರಿಯೆ. ತನ್ನನ್ನು ಪೂಜಿಸಿದ ದೇವತೆಗಳನ್ನು ಸನ್ಮಾನಿಸುವುದು

**ವಿನೇಯ** – ಧರ್ಮದಲ್ಲಿ ಶ್ರದ್ಧೆಯುಳ್ಳವನು

**ವಿಪರ್ಯಯ** – ಮಿಥ್ಯಾಜ್ಞಾನ

**ವಿಪಾಕವಿಚಯ** – ಒಂದು ಬಗೆಯ ಧರ್ಮಧ್ಯಾನ. ಕರ್ಮಫಲದ ಚಿಂತನೆ

**ವಿಪುಳಫಲ** – [ದಾನದಿಂದ] ಕೊಡುವವನು ಪಡೆಯುವ ಫಲ

**ವಿಭಂಗಜ್ಞಾನ** – ಆತ್ಮನಿಗೆ ಅಹಿತವನ್ನುಂಟು ಮಾಡುವ ಪದಾರ್ಥಗಳನ್ನು ತಿಳಿಯುವ ಮಿಥ್ಯಾಜ್ಞಾನ. ಇದರಲ್ಲಿ ಮೂರು ವಿಧ: ಕುಮತಿ, ಕುಶ್ರುತ ಕುಅವಧಿ

**ವಿಮಾನ** – ದೇವರು ವಾಸವಾಗಿರುವ ಅರಮನೆ

**ವಿವಾಹ** – ಒಂದು ಗರ್ಭಾನ್ವಯಕ್ರಿಯೆ. ಮದುವೆ

**ವಿವಿಕ್ತಾವಾಸ** – ಗಂಡಸರು ಹೆಂಗಸರು ನಪುಂಸಕರು ಮೃಗಪಶುಗಳು ಇಲ್ಲದ

ಸ್ಥಳದಲ್ಲಿ ವಾಸಿಸುವ ಪ್ರತಿಜ್ಞೆಯ ಐದನೆಯ ತಪಸ್ಸು

**ವಿಷಮೋಚಿಕೆ** – ಭರತನ ಹಾವುಗೆಗಳು. ಇತರರ ಪಾದಸ್ಪರ್ಶದಿಂದ ವಿಷಜ್ವಾಲೆಗಳು ಹೊಮ್ಮುತ್ತವೆ

**ವಿಹಾಯೋಗತಿ** – ಆಕಾಶಗಮನ ಸಾಮರ್ಥ್ಯ

**ವಿಹಾರ** – ಒಂದು ಗರ್ಭಾನ್ವಯಕ್ರಿಯೆ, ಧರ್ಮಚಕ್ರವನ್ನು ಹಿಂಬಾಲಿಸುತ್ತ ವಿಹರಿಸುವುದು; ಇದಕ್ಕೆ 'ವಿಹರಣ' ಎಂದೂ ಕರೆಯುತ್ತಾರೆ

**ವೀತರಾಗಛದ್ಮಸ್ಥ** – ಎಲ್ಲ ಮೋಹಕರ್ಮಗಳಿಂದ ಬಿಡುಗಡೆಗೊಂಡ ಯಥಾಖ್ಯಾತ ಚಾರಿತ್ರಧಾರಕರಾದ ಆದರೆ ಕೇವಲಜ್ಞಾನವುಂಟಾಗದಿರುವ ಮುನಿ

**ವೀರಶಯ್ಯಾ[ಯ್ಯೆ]** – ಸಲ್ಲೇಖನ ವ್ರತಧಾರಿಗಳು ಮಲಗುವ ಜಾಗ

**ವೀರಸಂಸ್ತರಾರೂಢ** – ಸಲ್ಲೇಖನ ವ್ರತಧಾರಿಯಾಗಿ ಮಲಗಿದವನು

**ವೀರ್ಯ** – 'ಅಷ್ಟಗುಣ'ಗಳಲ್ಲಿ ಒಂದು, ಸಿದ್ಧಿ (ಬಟಿಯಂ ಕ್ಷಾಯಿಕ ಸಮ್ಯಕ್ತ್ವಾನಂತಜ್ಞಾನ ದರ್ಶನ ವೀರ್ಯ ಸೂಕ್ಷ್ಮಾವಗಾಹ ಅಗುರುಲಘುತಾ ವ್ಯಾಬಾಧಂಗಳೆಂಬ ಗುಣಮೆಂಟು ಬಂದು ತನ್ನೊಳ್ ಪೆಣೆದಿರೆ)

**ವೀರ್ಯಾಂತರಾಯ** – ಅಂತರಾಯ ಕರ್ಮಗಳಲ್ಲಿ ಒಂದು, ಒಂದು ವಿಘ್ನ

**ವೃತ್ತಿಪರಿಸಂಖ್ಯಾನ** – ಇಂತಹ ಕಡೆ ಇಂತಹವರನ್ನು ನಿಲ್ಲಿಸಿದರೆ ಮಾತ್ರ ನಿಲ್ಲುವೆನೆಂಬ ನಿಯಮದ ಮೂರನೆಯ ತಪಸ್ಸು

**ವೃತ್ತಿಲಾಭ** – ನಲವತ್ತೆಂಟು ದೀಕ್ಷಾನ್ವಯ ಕ್ರಿಯೆಗಳಲ್ಲಿ ಒಂದು

**ವೃಷಧ್ವಜ** – ಆದಿ ತೀರ್ಥಂಕರ

**ವೃಷಭನಾಥ** – ಆದಿ ತೀರ್ಥಂಕರ

**ವೃಷಭಯಕ್ಷ** – ಆದಿನಾಥನ ಶಾಸನದೇವ, ಇವನಿಗೆ ಗೋಮುಖನೆಂದು ಹೆಸರು

**ವೃಷಭಯೋಗೀಂದ್ರ** – ಆದಿ ತೀರ್ಥಂಕರ

**ವೃಷಭಾದ್ರಿ** – ವಿಜಯಾರ್ಧಪರ್ವತಗಗಳು, ಚಕ್ರವರ್ತಿಗಳು ಇಲ್ಲಿ ತಮ್ಮ ಷಟ್‌ಖಂಡ ವಿಜಯ ಪ್ರಶಸ್ತಿಯನ್ನು ಬರೆಸುತ್ತಾರೆ

**ವೃಷಮುಖ** – ಒಬ್ಬ ಯಕ್ಷ

**ವೃಷವಾಹನ** – ವೃಷಭವಾಹನ

**ವೇದನೀಯ** – ಸುಖದುಃಖಕಾರಕ ಕರ್ಮ

**ವೈಕ್ರಿಯಕ**– ಜೀವರುಗಳ ಒಂದು ಶರೀರಭೇದ. ತಪಶ್ಚರ್ಯೆಯ ಪ್ರಭಾವದಿಂದ ಲಭಿಸುವ ಅಣಿಮಾ. ಲಘಿಮಾ, ಗರಿಮಾ. ಮಹಿಮಾ, ಪ್ರಾಪ್ತಿ. ಪ್ರಾಕಾಮ್ಯ. ಈಶಿತ್ವ, ವಶಿತ್ವ. ಅಪ್ರತಿಘಾತ. ಅಂತರ್ಧಾನ. ಕಾಮರೂಪ ಮುಂತಾದ ಸಾಮರ್ಥ್ಯಗಳಿಂ ಸ್ಥೂಲ ಶರೀರದಲ್ಲಿ ಬದಲಾವಣೆ ಮಾಡುವ ಸೂಕ್ಷ್ಮಶರೀರ

**ವೈಜಯಂತಿ** – ಭರತನ ಅರಮನೆಯ ಹೆಸರು

**ವೈಡೂರ್ಯ** – ಒಂದು ಪರ್ವತದ ಹೆಸರು

**ವೈತರಣಿ** – ನರಕದ ನದಿ

**ವೈಯಾವೃತ್ಯ** – ಮುನಿಗಳ ಸಂಕಟ ನಿವಾರಣೆಗಾಗಿ ಮಾಡುವ ಅವರ ಸೇವೆ

**ವ್ಯಯ** – ಪೂರ್ವಾವಸ್ಥೆಯ ತ್ಯಾಗ

**ವ್ಯವಹಾರಕಾಲ** – ಕಾಲದ ಒಂದು ಬಗೆ: ಮುಖ್ಯಕಾಲದಿಂದ ಪರಿವರ್ತನೆಗೊಂಡ ಕ್ರಿಯೆಯುಳ್ಳದ್ದು, ಸಮಯ, ಆವಲಿಕಾ ಉಚ್ಛ್ವಾಸ, ಸ್ತೋಕ. ನಿಮೇಷ, ನಾಡಿಕಾ, ಮುಹೂರ್ತ, ದಿವಸ, ಪಕ್ಷ, ಮಾಸ. ಋತು. ಅಯನ, ಸಂವತ್ಸರಗಳೇ ಮೊದಲಾದ ಏರಿಕೆಯ ಎಣಿಕೆಯಿಂದ ಕೂಡಿರುವುದು

**ವ್ಯುತ್ಸರ್ಗ** – ಬಾಹ್ಯಾಭ್ಯಂತರಪರಿಗ್ರಹತ್ಯಾಗ

**ವ್ಯುಷ್ಟಿ** – ಒಂದು ಗರ್ಭಾನ್ವಯಕ್ರಿಯೆ. ಮೊದಲ ವರ್ಷದ ಹುಟ್ಟುಹಬ್ಬ

**ವ್ರತಚರ್ಯೆ** – ಒಂದು ಗರ್ಭಾನ್ವಯಕ್ರಿಯೆ, ಹಿಂಸಾಚಾರ ವರ್ಜಿಸಿ ಅಧ್ಯಯನ ಕೈಗೊಳ್ಳುವುದು

**ವ್ರತಾವರಣ** – ಒಂದು ಗರ್ಭಾನ್ವಯಕ್ರಿಯೆ, ಬ್ರಹ್ಮಚರ್ಯವ್ರತತ್ಯಾಗ

**ಶಂಕಾಪನಯನ** – ಸಂದೇಹವಿಲ್ಲದಿರುವುದು

**ಶಂಖ** – ಶಂಖದ ಹುಳು, ಚರ್ಮ, ನಾಲಗೆಗಳನ್ನುಳ್ಳ ದ್ವೀಂದ್ರಿಯ ಜೀವಿ

**ಶಕ್ರನೃತ್ಯ** – ಜಿನ ಜನ್ಮಾಭಿಷೇಕಕಾಲದಲ್ಲಿ ಸೌಧರ್ಮೇಂದ್ರನು ಮಾಡುವ ಆನಂದನೃತ್ಯ

**ಶಚೀ** – ಸೌಧರ್ಮೇಂದ್ರನ ಅಗ್ರದೇವಿ

**ಶರೀರತ್ರಿಗುಣಬಹುಳತೆ** – ಪೂರ್ವಶರೀರವನ್ನು ಬಿಡದೆ ತೈಜಸ, ಕಾರ್ಮಣ ಶರೀರಗಳನ್ನು ಹಿಗ್ಗಿಸುವುದು

**ಶರೀರಪರ್ಯಾಪ್ತಿ** – ಶರೀರಕ್ಕೆ ರಕ್ತ ಮಾಂಸ ಮೂಳೆ ಮುಂತಾದವು ಸೇರಿ ಜೀವಶಕ್ತಿಯು ಪೂರ್ಣವಾಗುವುದು

**ಶರ್ಕರಪ್ರಭಾ** – ಎರಡನೆಯ ನರಕ

**ಶಾರೀರೋದೀರಿತ** – ಶರೀರದ ರೋಗಗಳು ಹಾಗೂ ನಾರಕರಿಂದ ಉಂಟಾಗುವ ದುಃಖ

**ಶಾಸ್ತ್ರದಾನ** – ನಾಲ್ಕು ದಾನಪ್ರಕಾರಗಳಲ್ಲಿ ಒಂದು, ಜೈನ ಧಾರ್ಮಿಕಗ್ರಂಥಗಳ ಪುಸ್ತಕಗಳನ್ನು ಶ್ರಾವಕರಿಗೆ ಹಂಚುವುದು

**ಶಿಕ್ಷಾವ್ರತ** – ಶ್ರಾವಕರು ಅನುಸರಿಸಬೇಕಾದ ನಾಲ್ಕು ವ್ರತಗಳು: ಸಮತೆ [ಸಾಮಯಿಕ], ಪ್ರೋಷಧ [ಪ್ರೋಷಧೋಪವಾಸ], ಅತಿಥಿಸಂಗ್ರಹ [ಉಪಭೋಗಾತಿಥಿಸಂವಿಭಾಗ] ಮತ್ತು ಮರಣಕಾಲದಲ್ಲಿ ಸಂನ್ಯಾಸ ಸ್ವೀಕಾರ [ಪಶ್ಚಿಮ ಸಲ್ಲೇಖನ]

**ಶಿಖರಿ** – ಆರನೆಯ ಕುಲಗಿರಿ

**ಶಿವಪದ** – ಮುಕ್ತಜೀವಿಗಳು ನೆಲಸುವ ಸಿದ್ಧಶಿಲೆ

**ಶೀಲವ್ರತ** – ಮುನಿಗಳ ವ್ರತಾಚರಣೆ

**ಶುಕ್ಲಧ್ಯಾನ** – ಪರಿಶುದ್ಧವಾದ ಆತ್ಮಜ್ಞಾನ: ಪೃಥಕ್ತ್ವವಿತರ್ಕವಿಚಾರ, ಏಕತ್ವವಿತರ್ಕವಿಚಾರ, ಸೂಕ್ಷ್ಮಕ್ರಿಯಾ ಪ್ರತಿಪಾತಿ, ವ್ಯುಪರತ ಕ್ರಿಯಾನಿವೃತ್ತಿ ಎಂಬ ನಾಲ್ಕು ಬಗೆಯ ಶುಕ್ಲಧ್ಯಾನಗಳು

**ಶುಕ್ಲಲೇಶ್ಯಾ** – ಕರ್ಮಸಂಬಂಧವಾದ ಬಣ್ಣಗಳಲ್ಲಿ ಒಂದು; ಅತಿನಿದ್ದೆಯ ಸಂಕೇತವಾದ ಬಿಳಿ; ಆರು ಲೇಶ್ಯೆಗಳಲ್ಲಿ ಒಂದು, ಶುಭಭಾವ

**ಶುಭ** – ಈ ಕರ್ಮದಿಂದ ದೇಹದ ಸೌಂದರ್ಯ ಉಳಿಯುತ್ತದೆ

**ಶ್ರಾವಕ** – ಜೈನ ಗೃಹಸ್ಥ

**ಶ್ರಾವಕವ್ರತ** – ಜೈನ ಗೃಹಸ್ಥರು ಅನುಸರಿಸಬೇಕಾದ ಕಟ್ಟಳೆಗಳು: ಪಂಚಾಣುವ್ರತಗಳು, ಮೂರು ಗುಣವ್ರತಗಳು, ನಾಲ್ಕು ಶಿಕ್ಷಾವ್ರತಗಳು

**ಶ್ರಾವಕಾಗ್ರಣಿ** – ಶ್ರೇಷ್ಠ ಜೈನಗೃಹಸ್ಥ

**ಶ್ರಾವಕಿ** – ಜೈನ ಗೃಹಸ್ಥೆ

**ಶ್ರಾವಿಕಾ** – ಶ್ರಾವಕಿ, ಗೃಹಸ್ಥಧರ್ಮಗಳನ್ನು ಪಾಲಿಸುವವಳು

**ಶ್ರೀಪತಿ** – ವೃಷಭಸ್ವಾಮಿ

**ಶ್ರೀಪ್ರಭ** – ಆ ಹೆಸರಿನ ವಿಮಾನ

**ಶ್ರುತಜ್ಞಾನ** – ಓದಿ ಕೇಳಿ ಪಡೆಯುವ ಜ್ಞಾನ

**ಶ್ರುತಸ್ಕಂದ** – ತೀರ್ಥಂಕರರ ಉಪದೇಶದಿಂದ ಗಣಧರರು ಬರೆದ
ದ್ವಾದಶಾಂಗ ಸೂತ್ರಗಳು: ಇವರಲ್ಲಿ ನಾಲ್ಕು ವಿಭಾಗ: ತ್ರಿಷಷ್ಟಿಶಲಾಕಾಪುರುಷರ ಚರಿತ್ರೆಗಳನ್ನೊಳಗೊಂಡ ಮೊದಲ ವಿಭಾಗ [ಪ್ರಥಮಾನುಯೋಗ], ಮೂರುಲೋಕಗಳ ಪ್ರಮಾಣ ಮೊದಲಾದ ವಿವರಗಳಿರುವ ಎರಡನೆಯ ವಿಭಾಗ [ಕರಣಾನುಯೋಗ], ಜೈನಮುನಿಗಳೂ ಶ್ರಾವಕರೂ ಅನುಸರಿಸಬೇಕಾದ ಆಚಾರಗಳ

ವಿವರವಿರುವ ಮೂರನೆಯ ವಿಭಾಗ [ಚರಣಾನುಯೋಗ] ಮತ್ತು ಜೀವಾದಿ ದ್ರವ್ಯಗಳ ವಿವರಣೆಯಿರುವ ನಾಲ್ಕನೆಯ ವಿಭಾಗ [ದ್ರವ್ಯಾನುಯೋಗ]

**ಶ್ರೇಢೀಬದ್ಧ** – ನರಕಬಿಲಗಳಲ್ಲಿ ಒಂದು ಬಗೆ

**ಷಟ್ಕರ್ಮ** – ಪ್ರಜೆಗಳು ಅನುಸರಿಸಬಹುದಾದ ಆರು ವರ್ಗಗಳ ವೃತ್ತಿಗಳು: ಅಸಿ, ಮಷಿ, ಕೃಷಿ, ವಾಣಿಜ್ಯ, ವಿದ್ಯೆ ಮತ್ತು ಶಿಲ್ಪ (ಪೂರ್ವಾಪರವಿದೇಹಸ್ಥಿತಿ ಸಮಾನ ಮಾಗೆ ಷಟ್ಕರ್ಮಂಗಳುಮಂ ವರ್ಣಾಶ್ರಮ ವಿಭಾಗಂಗಳುಮಂ ಗ್ರಾಮಗೃಹಾದಿ ಭೇದಂಗಳುಮಂ; ಹೊಸತಾಗಿ ತಾನು ಸೃಷ್ಟಿಸಿದ ಬ್ರಾಹ್ಮಣರಿಗೆ ಭರತನು ವೈದಿಕ ಬ್ರಾಹ್ಮಣನ ಆರು ಕರ್ತವ್ಯಗಳಾದ ಅಧ್ಯಯನ, ಅಧ್ಯಾಪನ, ಯಜನ, ಯಾಜನ, ದಾನ, ಪ್ರತಿಗ್ರಹಗಳಿಗೆ ಪರ್ಯಾಯವಾಗಿ ನಿಗದಿಗೊಳಿಸಿದ ಆರು ಕರ್ಮಗಳು: ಪೂಜೆ, ವಾರ್ತೆ, ದತ್ತಿ, ಸ್ವಾಧ್ಯಾಯ, ಸಂಯಮ, ತಪಸ್ಸುಗಳು

**ಷಟ್ಖಂಡ** – ಆರು ಭೂಭಾಗಗಳು, ಹಿಮವತ್ಪರ್ವತದ ದಕ್ಷಿಣದಲ್ಲಿ ಲವಣ ಸಮುದ್ರದವರೆಗೂ ವ್ಯಾಪಿಸಿರುವುದು ಭರತಕ್ಷೇತ್ರ. ಇದರ ನಡುವೆ ವಿಜಯಾರ್ಧಪರ್ವತದ ಪೂರ್ವ ಪಶ್ಚಿಮವಾಗಿ ಹಬ್ಬಿ ಈ ಕ್ಷೇತ್ರವನ್ನು ಉತ್ತರ ಭರತ, ದಕ್ಷಿಣ ಭರತ ಎಂದು ಎರಡಾಗಿ ಒಡೆಯುತ್ತದೆ. ಹಿಮವತ್ಪರ್ವತದಲ್ಲಿ ಹುಟ್ಟಿದ ಮಹಾಸಿಂಧು ಮಹಾಗಂಗಾ ಎಂಬೆರಡು ನದಿಗಳು ಉತ್ತರದಿಂದ ದಕ್ಷಿಣಕ್ಕೆ ಹರಿದು ಲವಣ ಸಮುದ್ರವನ್ನು ಸೇರುತ್ತವೆ, ವಿಜಯಾರ್ಧಪರ್ವತ ಮತ್ತು ಗಂಗಾಸಿಂಧೂ ನದಿಗಳಿಂದ ಭರತಕ್ಷೇತ್ರ ಆರು ಖಂಡಗಳಾಗಿ ಭಾಗವಾಗಿದೆ. ಉತ್ತರ ಭರತಕ್ಷೇತ್ರದ ಮೂರು ಖಂಡಗಳ ನಡುವೆ ಆರ್ಯಖಂಡವಿವೆ. ಈ ಎರಡೂ ಕ್ಷೇತ್ರದ ಖಂಡಗಳು ಕೂಡಿ ಷಟ್ಖಂಡ ವೆನಿಸಿವೆ

**ಷೋಡಶತೀರ್ಥಕರಭಾವನೆ** – ತೀರ್ಥಂಕರ ನಾಗಲು ಕಾರಣವಾಗುವ ಹದಿನಾರು ಮನೋವೃತ್ತಿಗಳು ನೋಡಿ. 'ಷೋಡಶ ಭಾವನೆ'

**ಷೋಡಶಭಾವನೆ** – ತೀರ್ಥಂಕರನಾಗಲು ಕಾರಣವಾಗುವ ದರ್ಶನವಿಶುದ್ಧಿ, ವಿನಯಸಂಪನ್ನತೆ, ಅನತಿಚಾರ, ಅಭೀಕ್ಷ್ಣಜ್ಞಾನೋಪಯೋಗ, ಸಂವೇಗ, ಶಕ್ತಿತಸ್ತ್ಯಾಗ, ಶಕ್ತಿತಸ್ತಪ, ಸಾಧುಸಮಾಧಿ, ವೈಯಾವೃತ್ಯ, ಅರ್ಹದ್ಭಕ್ತಿ, ಆಚಾರ್ಯಭಕ್ತಿ, ಉಪಾಧ್ಯಾಯಭಕ್ತಿ, ಪ್ರವಚನಭಕ್ತಿ, ಅವಶ್ಯಕಾಪರಿಹಾರಿಣಿ, ಮಾರ್ಗಪ್ರಭಾವನೆ, ಪ್ರವಚನವತ್ಸಲತ್ವ – ಎಂಬ ಹದಿನಾರು ಮನೋವೃತ್ತಿಗಳು

**ಸಂಜ್ವಲನ** – ಚಾರಿತ್ರ್ಯದ ಪರಿಪೂರ್ಣತೆಗೆ ಪೂರಕವಾದ ಕರ್ಮ

**ಸಂತಾನರೂಪ** – ಅನುಭವಕ್ಕೆ ಬಾರದ ಕ್ಷಣಗಳ ಸಮೂಹ

**ಸಂಯುತ** – ಇಂದ್ರಿಯನಿಗ್ರಹಿಯಾದವನು

**ಸಂವತ್ಸರ** – ಎರಡು ಅಯನ ಅಥವಾ ಆರು ಋತುಗಳು ಅಥವಾ ಹನ್ನೆರಡು ಮಾಸಗಳ ಅವಧಿ

**ಸಂವರೆ** – ಒಳಿತು ಕೆಟ್ಟುದೆಂಬ ಪರಿಣಾಮ ರೂಪವಾಗಿ ಬರವ ಕರ್ಮಗಳಿಗೆ ಗುಪ್ತಿ ಮುಂತಾದುವುಗಳಿಂದ ತಡೆಯೊಡ್ಡುವುದು

**ಸಂಶಯ** – ಜೈನತತ್ವಗಳ ಬಗೆಗಿನ ಶಂಕೆ

**ಸಂಸಾರ** – ಐದು ವಿಧವಾದ ಸಂಸಾರ (ಅವಱೊಳ್ ದ್ರವ್ಯ ಕ್ಷೇತ್ರ ಕಾಲ ಭವ ಭಾವ ಭೇದದಿಂ ಪಂಚವಿಧಂ ಸಂಸಾರಂ)

**ಸಂಸಾರಿಜೀವ** – ಜೀವತತ್ವದ ಸಂಸಾರಿ ಮುಕ್ತ ಎಂಬ ಎರಡು ಬಗೆಗಳಲ್ಲಿ ಒಂದು

**ಸಂಸ್ಥಾನವಿಚಯ** – ಧರ್ಮಧ್ಯಾನಗಳಲ್ಲಿ ಮೂರನೆಯದು,

**ಸಂಹರಣವಿಸರಣಸ್ವರೂಪ** – ಆತ್ಮನನ್ನು ಬಂಧಿಸಿದ ಶರೀರನಾಮಕರ್ಮದ

ಉದಯವಾದಾಗ ಆತನ ಪ್ರದೇಶವು ಸಣ್ಣದೂ ದೊಡ್ಡದೂ ಆಗಬಲ್ಲುದು

**ಸಕಳದತ್ತಿ** – ವಂಶದ ಎಲ್ಲವನ್ನೂ ಮಗನಿಗೆ ಕೊಡುವುದು

**ಸಜ್ಜಾತಿ** – ಸತ್ಕುಲದಲ್ಲಿ ಹುಟ್ಟುವ ಪರಿಶುದ್ಧ ಜನ್ಮ

**ಸದಾದಿ** – ಸ್ಯಾದ್ವಾದ, ಪದಾರ್ಥದ ಪೂರ್ಣ ಜ್ಞಾನವನ್ನು ತಿಳಿಯಲೋಸುಗ ಒಂದು ಗುಣವನ್ನು ಪ್ರಧಾನವಾಗಿರಿಸಿಕೊಂಡು ಇತರ ಗುಣಗಳನ್ನು ಗೌಣವಾಗಿಸಿ ಪರೀಕ್ಷಿಸುವುದು, ಆನಂತರ ಇನ್ನೊಂದು – ಹೀಗೆ ಭಾಗಶಃ ಪರೀಕ್ಷಿಸುತ್ತ ಅದನ್ನು ಸಮಗ್ರವಾಗಿ ತಿಳಿದುಕೊಳ್ಳುವುದು

**ಸದ್ಗೃಹತ್ವ** – ಏಳರಲ್ಲಿ ಒಂದು ಬಗೆಯ ಪರಮಸ್ಥಾನ, ಇಷ್ಟವಾದುದನ್ನು ತೊರೆದು ಆತ್ಮಶುದ್ಧಿಮಾಡಿಕೊಳ್ಳುವುದು

**ಸನತ್ಕುಮಾರ** – ಹದಿನಾರು ಬಗೆಯ ಸ್ವರ್ಗಗಳಲ್ಲಿ ಒಂದು

**ಸಪ್ತಗುಣ** – ಶ್ರದ್ಧೆ, ಶಕ್ತಿ, ಭಕ್ತಿ, ವಿಜ್ಞಾನ ಅಲುಬ್ಧಿತ, ಕ್ಷಮೆ, ತ್ಯಾಗಗಳೆಂಬ ಏಳು ಗುಣಗಳು

**ಸಪ್ತಪರಮಸ್ಥಾನ** – ಸಜ್ಜಾತಿತ್ವ, ಸದ್ಗೃಹತ್ವ, ಪಾರಿವ್ರಾಜ್ಯ, ಸುರೇಂದ್ರತ್ವ, ಸಾಮ್ರಾಜ್ಯ, ಅರ್ಹಂ ನಿರ್ವಾಣ ಎಂಬ ಮೋಕ್ಷಪದವಿಯ ಏಳು ಹಂತಗಳು

**ಸಪ್ತರ್ಧಿ** – ಬುದ್ಧಿ, ತಪ, ವಿಕ್ರಿಯೆ, ಔಷಧಿ, ರಸ, ಬಲ ಮತ್ತು ಅಕ್ಷೀಣಗಳೆಂಬ ಏಳು ಋದ್ಧಿಗಳು

**ಸಮಚತುರಸ್ರಸಂಸ್ಥಾನ** – ಒಂದು ಶರೀರಾಕೃತಿ ವಿಶೇಷ; ಶರೀರವು ಎಲ್ಲ ಕಡೆಗಳಲ್ಲಿಯೂ ಪ್ರಮಾಣಬದ್ಧವಾಗಿರುವುದು

**ಸಮದತ್ತಿ** – ತನಗೆ ಸಮಾನರಾದ ಶ್ರಾವಕ ಶ್ರೇಷ್ಠರಿಗೆ ನೀಡುವ ದಾನ

**ಸಮಯ** – ಒಂದು ಕಾಲಪ್ರಮಾಣ, ಒಂದು ಪರಮಾಣುವು ಮಂದಗತಿಯಿಂದ ಒಂದು ಪ್ರದೇಶಕ್ಕೆ ಸರಿಯುವಷ್ಟು ಕಾಲ

**ಸಮವಸರಣ** – ತೀರ್ಥಂಕರನು ಧರ್ಮೋಪದೇಶ ಮಾಡಲು ಕುಬೇರನು ನಿರ್ಮಿಸಿದ ಮಂಟಪ

**ಸಮವಸೃತಿ** – ಸಮವಸರಣ

**ಸಮಾಧಿ** – ಸಮಾಧಿಮರಣ

**ಸಮಾಧಿವಿಧಿ** – ಅನ್ನ ಕಷಾಯಾದಿಗಳನ್ನು ತ್ಯಜಿಸಿ ರತ್ನತ್ರಯಗಳಲ್ಲಿ ಸ್ಥಿರನಾಗಿ ಪ್ರಾಣತ್ಯಾಗ ಮಾಡುವ ಕ್ರಮ

**ಸಮುಚ್ಛಿನ್ನಕ್ರಿಯಾಪ್ರತಿಪತ್ತಿ** – ಇದು ಸರ್ವೋತ್ಕೃಷ್ಟವಾದ ನಾಲ್ಕನೆಯ ಶುಕ್ಲಧ್ಯಾನ; ಇದಕ್ಕೆ ಸಮಿಚ್ಛಿನ್ನಕ್ರಿಯಾ ನಿವರ್ತಿ ಎಂಬ ಹೆಸರೂ ಇದೆ

**ಸಮ್ಯಕ್ಚರಿತ್ರ** – ರತ್ನತ್ರಯಗಳಲ್ಲಿ ಒಂದು, ಒಳ್ಳೆಯ ನಡತೆ

**ಸಮ್ಯಕ್ಚಾರಿತ್ರ** – ಭವ್ಯಜೀವಿಗೆ ಬಾಹ್ಯಾಭ್ಯಂತರ ನಿವೃತ್ತಿ, ಅದರಲ್ಲಿ ಐದು ವಿಧ (ಸಂಸಾರ ಪರಿತ್ಯಾಗೋದ್ಯುಕ್ತ ಜ್ಞಾನೋಪೇತ ಭವ್ಯಜೀವನ ಬಾಹ್ಯಾಭ್ಯಂತರ ಕ್ರಿಯಾನಿವೃತ್ತಿ ಸಮ್ಯಕ್ಚಾರಿತ್ರಮೆಂಬುದು ಅದು ಸಾಮಾಯಿಕಚ್ಛೇದ ಉಪಸ್ಥಾಪನಾ ಪರಿಹಾರಶುದ್ಧಿ ಸೂಕ್ಷ್ಮಸಂಪರಾಯ ಯಥಾಖ್ಯಾತಚಾರಿತ್ರಭೇದದಿಂ ಪಂಚವಿಧಂ)

**ಸಮ್ಯಕ್‌ಜ್ಞಾನ** – ಜೀವಾದಿ ಪದಾರ್ಥಗಳ ಯಥಾತ್ಮತೆಯನ್ನರಿಯುವುದು

**ಸಮ್ಯಕ್ತ್ವ** – ಧರ್ಮದ ಬಗೆಗಿನ ಅಚಲ ನಂಬಿಕೆ, ಆರು ದ್ರವ್ಯ, ಪಂಚಾಸ್ತಿಕಾಯ ಮತ್ತು ನವಪದಾರ್ಥಗಳ ಬಗ್ಗೆ ಜಿನೇಂದ್ರನ ಉಪದೇಶದಂತೆ ತಿಳಿವಳಿಕೆ ಪಡೆಯುವುದು

**ಸಮ್ಯಕ್ತ್ವಪ್ರಕೃತಿ** – ದರ್ಶನ ಮೋಹನೀಯ ಕರ್ಮದ ಮೂರು ಪ್ರಭೇದಗಳಲ್ಲಿ ಒಂದು

**ಸಮ್ಯಙ್ಮಿಥ್ಯಾತ್ವ** – ದರ್ಶನಮೋಹನೀಯಗಳಲ್ಲಿ ಒಂದು. ರತ್ನತ್ರಯಸಾಧನೆಗೆ ಅಡ್ಡಿ

**ಸಮ್ಯಗ್ದರ್ಶನ** – ರತ್ನತ್ರಯಗಳಲ್ಲಿ ಒಂದು, ತತ್ತ್ವಾರ್ಥ...

**ಸಮ್ಯಗ್ದರ್ಶನಾವಯವ** – [ಸಮ್ಯಗ್ದರ್ಶನ + ಅವಯವ] ಸಮ್ಯಗ್ದರ್ಶನದ ನಿಶ್ಶಂಕೆ ನಿಷ್ಕಾಂಕ್ಷೆ ನಿರ್ವಿಚಿಕಿತ್ಸೆ ಅಮೂಢದೃಷ್ಟಿತ್ವ ಉಪಗೂಹನ ಸ್ಥಿತಿಕರಣ ವಾತ್ಸಲ್ಯ ಧರ್ಮಪ್ರಭಾವನೆ ಎಂಬ ಅಂಗಗಳು

**ಸರೋವರನಿವಾಸಿನಿ** – ಜಿನಜನನಿಯನ್ನಲಂಕರಿಸಲು ನಿಯೋಜಿತರಾದ ಆರು ಮಂದಿ ದೇವತೆಗಳು (ಪದ್ಮಾದಿಸರೋವರ ನಿವಾಸಿನಿಯರಪ್ಪ ಶ್ರೀ ಹ್ರೀ ಧೃತಿ ಕೀರ್ತಿ ಬುದ್ಧಿ ಲಕ್ಷ್ಮಿಗಳೆಂಬ ಅಱುವರುಮಂ)

**ಸರ್ವಜ್ಞಬಿಂಬಾವಳಿ** – ತೀರ್ಥಂಕರ ಮೂರ್ತಿಗಳು

**ಸರ್ವತೋಭದ್ರ** – ಒಂದು ಬಗೆಯ ಉಪವಾಸವ್ರತ . ವ; ಚೌಕಾಕಾರವಾದ ಅರಮನೆ ಅಥವಾ ದೇವಾಲಯ ವ; ರಾಜರು ಮಾಡುವ ಮಹಾ ಜಿನಪೂಜೆ

**ಸರ್ವರತ್ನ** – ನವನಿಧಿಗಳಲ್ಲಿ ಒಂದು

**ಸರ್ವಸಾಧು** – ಎಲ್ಲ ಕರ್ಮಗಳ ನಿರ್ಮೂಲನಕ್ಕಾಗಿ ಧ್ಯಾನಮಗ್ನರಾದ ರತ್ನತ್ರಯಾರಾಧಕರಾದ ಜಿನಮುನಿಗಳು

**ಸರ್ವಾರ್ಥಸಿದ್ಧಿ** – ಪಂಚಾಣುತ್ತರ ವಿಮಾನಗಳಲ್ಲಿ ತುತ್ತತುದಿಯದು

**ಸವನ** – ಜಿನನ ಪಂಚಾಮೃತಾಭಿಷೇಕ

**ಸವಿಪಾಕ[ನಿರ್ಜರೆ]** – ಎರಡು ಬಗೆಯ ನಿರ್ಜರೆಗಳಲ್ಲಿ ಒಂದು, ಕರ್ಮದ ಫಲವು ಕಡಿಮೆಯಾಗುವ ಕಾಲ

**ಸಾಂಪರಾಯ** – ಲೌಕಿಕಜೀವನ, ಗೃಹಸ್ಥ ಜೀವನ

**ಸಾಧಾರಣ** – ಹದಿನಾರು ಬಗೆಯ ಕರ್ಮ ಪ್ರಕೃತಿಗಳಲ್ಲಿ ಒಂದು

**ಸಾಮಾನಿಕದೇವ** – ಆಜ್ಞೆ, ಐಶ್ವರ್ಯಗಳನ್ನು ಹೊರತುಪಡಿಸಿ ಉಳಿದ ಗುಣಗಳಲ್ಲಿ ಇಂದ್ರರಿಗೆ ಸಮಾನರಾಗಿ ಅವರಿಗೆ ತಾಯಿತಂದೆಗಳಂತಿರುವ ಒಂದು ದೇವತಾವರ್ಗ. ಆ ವರ್ಗದ ದೇವತೆ

**ಸಾಮಾಯಿಕಚ್ಛೇದ** – ಐದು ಬಗೆಯ ನಡವಳಿಕೆಗಳಲ್ಲಿ ಒಂದು, ಸಂಸಾರವನ್ನು ದೂರೀಕರಿಸಿ ಆತ್ಮಧ್ಯಾನದಲ್ಲಿರುವುದು

**ಸಾಮ್ರಾಜ್ಯ** – ಒಂದು ಗರ್ಭಾನ್ವಯಕ್ರಿಯೆ, ಧರ್ಮದಿಂದ ರಾಜ್ಯಭಾರ ಮಾಡುವುದು ವ; ಮೋಕ್ಷಕ್ಕೆ ಸಂಬಂಧಿಸಿದ ಏಳು ಉತ್ತಮಸ್ಥಾನಗಳಲ್ಲಿ ಒಂದು (ಸಜ್ಜಾತಿ ಸದ್ಗೃಹಿತ್ವ ಪಾರಿವ್ರಾಜ್ಯಪದ ಸುರೇಂದ್ರತ್ವ ಸಾಮ್ರಾಜ್ಯ ಪರಮಾರ್ಹಂತ್ಯ ಪರಿನಿರ್ವಾಣ ಮೆಂಬ ಏೞುಂ ಪರಮಸ್ಥಾನನಾಮ)

**ಸಾರಸ್ವತ** – ಎಂಟು ಬಗೆಯ ಲೋಕಾಂತಿಕ ದೇವರಲ್ಲಿ ಒಂದು ವರ್ಗ

**ಸಿಂಹವಾಹಿನಿ** – ಭರತ ಚಕ್ರವರ್ತಿಯ ಹಾಸಿಗೆಯ ಹೆಸರು

**ಸಿಂಹವಿಕ್ರೀಡಿತ** – ದೀರ್ಘಕಾಲದ ಉಪವಾಸ ಮತ್ತು ಉಪವಾಸಗಳಿಂದ ಕೂಡಿದ ಒಂದು ವ್ರತ

**ಸಿಂಹಾಟಕ** – ಭರತಚಕ್ರವರ್ತಿಯ ಈಟಿ

**ಸಿದ್ಧ** – ಪಂಚಪರಮೇಷ್ಠಿಗಳಲ್ಲಿ ಒಬ್ಬ, ಸಿದ್ಧಶಿಲೆಯಲ್ಲಿ ಶಾಶ್ವತವಾಗಿ ನೆಲೆಸಿದವನು

**ಸಿದ್ಧಕೂಟ** – ಸಿದ್ಧಕ್ಷೇತ್ರ

**ಸಿದ್ಧಪರಮೇಷ್ಠಿ** – ಪಂಚಪರಮೇಷ್ಠಿಗಳಲ್ಲಿ ಒಬ್ಬ

**ಸಿದ್ಧಶೇಷೆ** – ನಿರ್ಮಾಲ್ಯ ಮುಂತಾದ ಪೂಜಿಸಿದ ವಸ್ತುಗಳು

**ಸಿದ್ಧಾಧಿಷ್ಠಾನಪೀಠ** – [ಸಿದ್ಧ + ಅಧಿಷ್ಠಾನಪೀಠ] ಸಿದ್ಧರು ಮಾತ್ರ ಏರಲು ಸಾಧ್ಯವಾಗುವ ಪೀಠ

**ಸಿದ್ಧಾಯತನ** – ಹಿಮವತ್ ವಿಜಯಾರ್ಧ ಮುಂತಾದ ಪರ್ವತಗಳ ಮೇಲಿನ ಜಿನಾಲಯಗಳು

**ಸುಖೋದಯ** – ಒಂದು ಗರ್ಭಾನ್ವಯಕ್ರಿಯೆ, ದೇವತೆಗಳಿಂದ ಸುತ್ತುವರಿಯಲ್ಪಟ್ಟು ದಿವ್ಯಸುಖವನ್ನು ಅನುಭವಿಸುವುದು

**ಸುದರ್ಶನ** – ಭರತ ಹದಿನಾಲ್ಕು ಅಜೀವರತ್ನಗಳಲ್ಲಿ ಒಂದಾದ ಚಕ್ರರತ್ನದ ಹೆಸರು

**ಸುಪಾತ್ರದಾನ** – ಯೋಗ್ಯನಿಗೆ ನೀಡುವ ದಾನ.

**ಸುಪ್ರತಿಷ್ಠ** – ಅರವತ್ತುಮೂರು ಇಂದ್ರಕ [ವಿಮಾನ]ಗಳಲ್ಲಿ ಒಂದು

**ಸುಪ್ರತಿಷ್ಠಕ** – ಮೂರು ವಸ್ತ್ರಗಳಿಂದ ಸುತ್ತಲ್ಪಟ್ಟ ಮಂಗಳದ್ರವ್ಯಗಳ ಪಾತ್ರೆ

**ಸುಪ್ರಬುದ್ಧ** – ಅರವತ್ತುಮೂರು ಇಂದ್ರಕ [ವಿಮಾನ]ಗಳಲ್ಲಿ ಒಂದು

**ಸುಪ್ರೀತಿ** – ಗರ್ಭಾನ್ವಯಕ್ರಿಯೆಗಳಲ್ಲಿ ಒಂದು, ಗರ್ಭಿಣಿಗೆ ಐದನೆಯ ತಿಂಗಳಲ್ಲಿ ಮಾಡುವ ಒಂದು ಸಂಸ್ಕಾರ

**ಸುರದುಂದುಭಿ** – ಅಷ್ಟಮಹಾಪ್ರತಿಹಾರ್ಯ ಗಳಲ್ಲಿ ಒಂದು, ದೇವದುಂದುಭಿ

**ಸುರೇಂದ್ರಕಾಂತೆ** – ದೇವೇಂದ್ರನ ಮಡದಿ, ಶಚೀದೇವಿ

**ಸುರೇಂದ್ರತ್ವ** – ಸಪ್ತ ಪರಮಸ್ಥಾನಗಳಲ್ಲಿ ಒಂದು, ಇಂದ್ರಪದವಿ

**ಸುಷಮ** – ಹರಿವರ್ಷ, ರಮ್ಯಕ್ಷೇತ್ರಗಳಿಂದ ಕೂಡಿದ ಮಧ್ಯಮಭೋಗಭೂಮಿಯ ಅವಸರ್ಪಿಣಿಯ ಒಂದು ಹಂತ, ಸಮೃದ್ಧಿಯ ಕಾಲ

**ಸುಷಮದುಷ್ಷಮ** – ಹೈಮವತ, ಹೈರಣ್ಯವತ ಪ್ರದೇಶಗಳಿಂದ ಕೂಡಿದ ಜಘನ್ಯಭೋಗ ಭೂಮಿಯ ಅವಸರ್ಪಿಣಿಯ ಒಂದು ಹಂತ, ಕಡಿಮೆ ದುಃಖದ ಕಾಲ

**ಸುಷಮಸುಷಮ** – ದೇವಕುರು, ಉತ್ತರಕುರು ಗಳಿಂದ ಕೂಡಿದ ಉತ್ತಮಭೋಗ ಭೂಮಿಯ ಅವಸರ್ಪಿಣಿಯ ಒಂದು ಹಂತ, ತುಂಬ ಸುಖದ ಕಾಲ

**ಸೂಕ್ಷ್ಮಕ್ರಿಯಾಪ್ರತಿಪತ್ತಿ** – ಹದಿನಾಲ್ಕನೆಯ ಗುಣಸ್ಥಾನದ ಮೂರನೆಯ ಶುಕ್ಲಧ್ಯಾನ

**ಸೂಕ್ಷ್ಮತ್ವ** – ಸಿದ್ಧಪರಮೇಷ್ಠಿಗಳ ಅಷ್ಟಗುಣ ಗಳಲ್ಲಿ ಒಂದು, ಬುದ್ಧಿಯ ಚುರುಕುತನ

**ಸೂಕ್ಷ್ಮಸಾಂಪರಾಯ** – ಐದು ಬಗೆಯ ನಡವಳಿಕೆಗಳಲ್ಲಿ ಒಂದು, ಸೂಕ್ಷ್ಮ ಕಷಾಯನಾಶ

**ಸೂರ್ಯಪ್ರಭ** – ಭರತನ ಹದಿನಾಲ್ಕು ಅಜೀವರತ್ನಗಳಲ್ಲೊಂದಾದ ಛತ್ರರತ್ನದ ಹೆಸರು

**ಸೇನಾನಾಯಕ** – ಚಕ್ರವರ್ತಿಯ ಹದಿನಾಲ್ಕು ರತ್ನಗಳಲ್ಲೊಂದು, ಸಾಕೇತನಗರದಲ್ಲಿ ಹುಟ್ಟಿದ್ದು

**ಸೇನಾನಿರತ್ನ** – ಜೀವರತ್ನಗಳಲ್ಲಿ ಒಂದು, ಚಕ್ರವರ್ತಿಯ ಸೇನಾಧಿಪತಿ

**ಸೌಧರ್ಮಕಲ್ಪ** – ಹದಿನಾರು ಸ್ವರ್ಗಗಳಲ್ಲಿ ಒಂದು, ಮೊದಲನೆಯದು. ವ [ಸೌಧರ್ಮ ಈಶಾನ ಸನತ್ಕುಮಾರ ಮಾಹೇಂದ್ರ ಬ್ರಹ್ಮ ಬ್ರಹ್ಮೋತ್ತರ ಲಾಂತವ ಕಾಪಿಷ್ಠ ಶುಕ್ರ ಮಹಾಶುಕ್ರ ಶತಾರ ಸಹಸ್ರಾರ ಆನತ ಪ್ರಾಣತ ಅರಣ್ಯ ಅಚ್ಯುತ ಎಂಬ ಸ್ವರ್ಗಗಳು]

**ಸೌಧರ್ಮೇಂದ್ರ** – ಸೌಧರ್ಮವೆಂಬ ಸ್ವರ್ಗದ ಅಧಿಪತಿ, ಹದಿನಾರು ಮಂದಿ ಇಂದ್ರರಲ್ಲಿ ಒಬ್ಬ

**ಸೌನಂದಕ** – ಭರತ ಚಕ್ರವರ್ತಿಯ ಏಳು ಅಜೀವರತ್ನಗಳಲ್ಲಿ ಒಂದಾದ ಖಡ್ಗದ ಹೆಸರು

**ಸೌಮನಸ** – ಮೇರುಪರ್ವತದ ಮೇಲಿರುವ ನಾಲ್ಕು ವನಗಳಲ್ಲಿ ಒಂದು, ಉಳಿದ ಮೂರು: ಭದ್ರಶಾಲ, ನಂದನವನ ಮತ್ತು ಪಾಂಡುಕ

**ಸ್ತೋಕ** – ಕಾಲ ಅಳೆಯುವ ಪರಿಮಾಣ, ಏಳು ಉಚ್ಛ್ವಾಸಗಳ ಅವಧಿ

**ಸ್ತ್ಯಾನಗೃದ್ಧಿ** – ದರ್ಶನಾವರಣೀಯ ಕರ್ಮದ ಒಂದು ಪ್ರಕಾರ

**ಸ್ತ್ರೀರತ್ನ** – ಚಕ್ರವರ್ತಿಯ ಹದಿನಾಲ್ಕು ರತ್ನಗಳಲ್ಲೊಂದು, ವಿಜಯಾರ್ಧ ಪರ್ವತದಲ್ಲಿ ಹುಟ್ಟಿದವಳು, ಚಕ್ರವರ್ತಿಯ ಪಟ್ಟದರಸಿಯಾಗುವವಳು

**ಸ್ತ್ರೀವೇದ** – ಒಂದು ಬಗೆಯ ನೋಕಷಾಯ; ಹೆಣ್ಣುಜೀವಕ್ಕೆ ಗಂಡಿನ ಬಗ್ಗೆ ಮೋಹ ವುಂಟುಮಾಡುವ ಕರ್ಮ

**ಸ್ಥಾನಲಾಭ** – ನಲವತ್ತೆಂಟು ದೀಕ್ಷಾನ್ವಯ ಕ್ರಿಯೆಗಳಲ್ಲಿ ಒಂದು

**ಸ್ಥಾವರ** – ಇದ್ದ ಸ್ಥಳವನ್ನು ಬಿಟ್ಟು ಕದಲಲಾರದ ಏಕೇಂದ್ರಿಯ ಜೀವ, ಸ್ಪರ್ಶನೇಂದ್ರಿಯ ಮಾತ್ರವಿರುವ ಪೃಥ್ವೀಕಾಯ, ಅಪ್‌ಕಾಯ, ತೇಜೋಕಾಯ, ವಾಯುಕಾಯ ಮತ್ತು ವನಸ್ಪತಿಕಾಯ ಎಂಬ ಐದು ವಿಧವಾದ ಜೀವಗಳು

**ಸ್ಥಿತಿ** – ಎದ್ದು ನಿಂತ ದೇಹದ ಮೇಲಿನ ಮಮತ್ವವನ್ನು ತೊರೆಯುವುದು

**ಸ್ಥಿರ** – ನಾಮಕರ್ಮಪ್ರಕಾರಗಳಲ್ಲಿ ಒಂದು, ಇದರಿಂದ ರಸಾದಿ ಧಾತುಗಳು ಶರೀರದಲ್ಲಿ ನೆಲೆ ನಿಲ್ಲುತ್ತವೆ

**ಸ್ವಗುರುಸ್ಥಾನಸಂಕ್ರಾಂತಿ** – ಒಂದು ಗರ್ಭಾನ್ವಯ ಕ್ರಿಯೆ, ತನ್ನ ಗುರುವಿನ ಸ್ಥಾನವನ್ನು ಹೊಂದುವುದು

**ಸ್ವರಾಜ್ಯ** – ಒಂದು ಗರ್ಭಾನ್ವಯಕ್ರಿಯೆ, ಜಿನನಾಗುವವನಿಗೆ ಮಾಡುವ ಪಟ್ಟಾಭಿಷೇಕ

**ಸ್ವಸ್ತಿಕ** – ಒಂದು ಮಂಗಳಕರ ಚಿಹ್ನೆ

**ಸ್ವಸ್ಥಾನ** – ಜೀವಿಯ ಮೂರು ಅವಸ್ಥೆಗಳಲ್ಲಿ ಒಂದು

**ಸ್ವಾಧ್ಯಾಯ** – ಶಾಸ್ತ್ರಗಳನ್ನು ತಿಳಿಹೇಳುವುದು

**ಹರಿವರ್ಷ** – ಪೂರ್ವಪಶ್ಚಿಮ ಸಮುದ್ರಗಳ ಹಾಗೂ ಮಹಾಮಹಿವತ್ ಹಾಗೂ ನಿಷಧಪರ್ವತಗಳ ನಡುವೆ ಇರುವ ಮಧ್ಯಮ ಭೋಗಭೂಮಿ

**ಹಸ್ತಿರತ್ನ** – ಚಕ್ರವರ್ತಿಯ ಏಳು ಸಜೀವ ರತ್ನಗಳಲ್ಲಿಒಂದು, ಸಿಂಹಾದಿಗಳಿಗೆ ಹೆದರುವುದಲ್ಲ

**ಹಿರಣ್ಯಗರ್ಭ** – ಆದಿ ತೀರ್ಥಂಕರ

**ಹಿರಣ್ಯೋತ್ಕೃಷ್ಟಜನ್ಮತಾ** – ಒಂದು ಗರ್ಭಾನ್ವಯ ಕ್ರಿಯೆ, ಜಿನಜನನಿಯ ಗರ್ಭದಲ್ಲಿ ಅವತರಿಸುವುದು

**ಹುಂಡಸಂಸ್ಥಾನ** – ದೇಹದ ಅಂಗೋಪಾಂಗ ಗಳನ್ನು ಅತಿ ಕುರೂಪಗೊಳಿಸುವ ಕರ್ಮಗಳ ಉದಯ

**ಹುಂಡಾವಸರ್ಪಿಣಿ** – ಅನೇಕ ಅವಸರ್ಪಿಣಿಗಳ ನಂತರ ಬರುವ ಕಾಲಾವಧಿ

**ಹೃಷೀಕ** – ಏಳು ಬಗೆಯ ನರಕಗಳಲ್ಲಿ ಒಂದು (ಕ್ರಮದೊಳಸಂಜ್ಞೆಯಂ ಸರಿಸೃಪಾವಳಿಯುಂ .. .. ಮನುಷ್ಯದುಸ್ತಿಮಿಕುಳಮುಂ ಹಿಮಾಂಶುನಯನಾಗ್ನಿ ಕಷಾಯಹೃಷೀಕ ಷಣ್ಮುನಿಕ್ರಮ ನರಕಂಗಳೊಳ್ ನೆಲಸುಗುಂ)

**ಹೇಯ** – ತತ್ತ್ವದ ಎರಡು ಬಗೆಗಳಲ್ಲಿ ಒಂದು, ಸಂಸಾರಕಾರಣವಾದುದು

**ಹೈಮವತ** – ಹಿಮವತ್ ಹಾಗೂ ಮಹಾಹಿಮವತ್ ಪರ್ವತಗಳ ಹಾಗೂ ಪೂರ್ವಪಶ್ಚಿಮ ಸಮುದ್ರಗಳ ನಡುವಣ ಜಘನ್ಯಭೋಗಭೂಮಿ

**ಹ್ರೀ** – ಒಬ್ಬ ದೇವತೆ (ಶ್ರೀ ಹ್ರೀ ಧೃತಿ ಕೀರ್ತಿ ಬುದ್ಧಿ ಲಕ್ಷ್ಮಿಗಳೆಂಬ ಅಜುವರುಮಂ)

*

